ಸಂಗ್ರಹವನ್ನೂ ಪ್ರಕಟಿಸುತ್ತದೆ. ಈ ದೃಷ್ಟಿಯಿಂದ ಅಮರಕೋಶದ ಅಧ್ಯಯನ ಬಹಳ ಸಾಂಸ್ಕೃತಿಕ ವೌಲ್ಯವುಳ್ಳದ್ದಾದರೂ ಅದು ಈ ಭೂಮಿಕೆಯ ಪರಿಮಿತಿಗೆ ಮೀರಿರುವುದರಿಂದ ದಿಗ್ದರ್ಶನಕ್ಕಾಗಿ ಕೆಲವು ನಿದರ್ಶನಗಳನ್ನು ಮಾತ್ರವೇ ನೀಡಿದೆ.

ಸ್ವರ್ಗವರ್ಗದಲ್ಲಿ ವಿಷ್ಣುವಿನ ೪೩ ಹೆಸರುಗಳಿವೆ. ಅವುಗಳಲ್ಲಿ ಕೃಷ್ಣನದು ಅನೇಕ ಇವೆ. ತ್ರಿವಿಕ್ರಮನದು ಒಂದು, ವಾಮನನದು ಒಂದು ಇದೆ. ಉಳಿದ ಅವತಾರಗಳದ್ದು ಒಂದೂ ಇಲ್ಲ. " ಗದಾಗ್ರಜೋ . . . ದಶರೂಪಭೃತ್ " ಎಂಬ ಪಂಕ್ತಿ ಎಲ್ಲ ಪಾಠಗಳಲ್ಲಿ ಇಲ್ಲ. ನಾನಾರ್ಥವರ್ಗದಲ್ಲಿ ಒಂದು ಕಡೆ ಮಾತ್ರ "ರಾಮ" ಎನ್ನುವುದು ಬಲರಾಮ, ಪರಶುರಾಮ, ದಾಶರಥಿರಾಮರನ್ನು ಸೂಚಿಸುತ್ತದೆಯೆಂದು ಹೇಳಿದೆ. ಗುಪ್ತರ ಕಾಲದ ಶಿಲ್ಪಗಳಲ್ಲಿ ಪ್ರಚುರವಾಗಿದ್ದ ವರಾಹರೂಪಿಯ ಉಲ್ಲೇಖ ಕೋಶದಲ್ಲಿ ಇಲ್ಲದಿರುವುದು ಆಶ್ಚರ್ಯ. ತದನಂತರದ ಕಾಲದಲ್ಲಿ ಅಷ್ಟು ಪ್ರಾಮುಖ್ಯ ಪಡೆಯದ ಬಲರಾಮನ ಹೆಸರು ೧೭ ಇರುವುದೂ ಗಮನಾರ್ಹ. ದಿಗ್ವರ್ಗದಲ್ಲಿ ಮೋಡಗಳ, ನಕ್ಷತ್ರಗಳ, ಗ್ರಹಗಳ ಹೆಸರುಗಳನ್ನು, ಮತ್ತು ಕಾಲವರ್ಗದಲ್ಲಿ ದಿವಸದಿಂದ ಅಯನದವರೆಗಿನ ಕಾಲಗಣನೆಯ ಹಾಗೂ ವಿಭಾಗದ ಕ್ರಮವನ್ನು ಗಮನಿಸಬೇಕು. ಮೋಕ್ಷವಿಷಯದ ಅರಿವನ್ನು ಜ್ಞಾನ ಎಂದೂ, ಇತರ ಶಿಲ್ಪಶಾಸ್ತ್ರಗಳ ಅರಿವನ್ನು ವಿಜ್ಞಾನ ಎಂದೂ, ಧೀವರ್ಗ (ಪು. ೨೨–ಶ್ಲೋ. ೧೬೧) ನಿರ್ದೇಶಿಸಿದೆ. ಅಜ್ಞಾನ, ಅವಿದ್ಯೆ ಎಂಬ ಪದಗಳಿಗೆ ಪರ್ಯಾಯಪದವಾಗಿ ಅಹಂಮತಿಃ (೨೨–೧೬೨) ಎಂಬುದನ್ನು ಉಲ್ಲೇಖಿಸಿರುವುದು ಭಾರತೀಯ ತತ್ತ್ವಶಾಸ್ತ್ರದ ವಿವರಣೆಯನ್ನು ಸೂಚಿಸುವಂತಿದೆ. ವಾಗ್ವರ್ಗದಲ್ಲಿ ತಿಙ್ಸುಬಂತಚಯೋ ವಾಕ್ಯಂ ಕ್ರಿಯಾ ವಾ ಕಾರಕಾನ್ವಿತಾ (೨೪-೧೭೫) ಎಂದು ವಾಕ್ಯದ ವರ್ಣನಾತ್ಮಕ ಅಥವಾ ಶಬ್ದಾತ್ಮಕ ಲಕ್ಷಣವನ್ನೂ ಅರ್ಥಾತ್ಮಕ ಲಕ್ಷಣವನ್ನೂ ನೀಡಿದೆ. ಹೀಗೆಯೇ ಪುರಾಣವನ್ನು ಪಂಚಲಕ್ಷಣಂ (೨೪–೧೭೮) ಎಂದು ಕರೆದು ಆ ಐದು ಲಕ್ಷಣಗಳನ್ನು ತಿಳಿಸಿದೆ. ಕೆಲವು ಶಾಸ್ತ್ರ ಹಾಗೂ ಸಾಹಿತ್ಯ ಪ್ರಕಾರಗಳನ್ನು ಹೆಸರಿಸಿದ್ದರೂ ನಿಘಂಟು, ಕೋಶ, ನಾಟಕ, ಸಾಹಿತ್ಯ ಮತ್ತು ಸಾಹಿತ್ಯಕಾರ್ಯದಲ್ಲಿ ಕಾವ್ಯ, ಕವಿ ಎಂಬವು ಉಕ್ತವಾಗಿಲ್ಲ. ಮಾತಿನ ಬಗೆಗಳನ್ನು ಮತ್ತು ಉಚ್ಚಾರಣೆಯ ವೈವಿಧ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದೆ. ನಾಟ್ಯವರ್ಗದಲ್ಲಿನ ವಾದ್ಯಗಳ, ವೀಣೆಯ ಭಾಗಗಳ ಮತ್ತು ಜನರ ಹಾವಭಾವಗಳ ಹೆಸರುಗಳು ಅಷ್ಟೇ ಮುಖ್ಯವಾದವು. ರಸಗಳನ್ನು ಹೇಳುವಲ್ಲಿ ಎಂಟನ್ನು ಮಾತ್ರ ಹೇಳಿ ಶಾಂತ ರಸವನ್ನು ಹೇಳದಿರುವುದು ಸಾಹಿತ್ಯ ವಿಮರ್ಶಕರು ಗಮನಿಸಬಹುದಾದ ಅಂಶ. ವಾರಿವರ್ಗದಲ್ಲಿ ಹಡಗಿಗೆ ಸಂಬಂಧಿಸಿದ ಪದಗಳು ಮತ್ತು ಮೀನುಗಳ ಹೆಸರುಗಳು ಅಂದಿನವರ ಕಡಲರಿವನ್ನು ಪ್ರಕಟಿಸಿದರೆ, ಶತದ್ರುವಿನಿಂದ ಕಾವೇರಿವರೆಗಿನ ನದಿಗಳ ಉಲ್ಲೇಖ ಒಂದು ಸ್ಥೂಲ ಭೌಗೋಲಿಕ ಪರಿಚಯವನ್ನು ಒದಗಿಸುತ್ತದೆ.

ದ್ವಿತೀಯಕಾಂಡವಂತೂ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಧ್ಯಯನಕ್ಕೆ ಒಂದು ಅಶೋಧಿತ ನಿಧಿಯೆಂದೇ ಹೇಳಬಹುದು. ಭೂವರ್ಗದಲ್ಲಿ ಭೂಗುಣದ

ಆಧಾರದ ಮೇಲೆ ರಚಿಸಿರುವ ವಿಭಾಗ ಕಂಡುಬರುತ್ತದೆ. ವೈಶ್ಯವರ್ಗದಲ್ಲಿ ಉಳುಮೆಯ ಆಧಾರದ ಮೇಲೆ ರಚಿಸಿರುವ ವಿಭಾಗದೊಂದಿಗೆ ಇದನ್ನು ಹೋಲಿಸಬಹುದು. ಭಾರತ ವನ್ನು ಪ್ರಾಚ್ಯ, ಉದೀಚ್ಯ, ಮಧ್ಯಮ ಮತ್ತು ಆರ್ಯಾವರ್ತ ಎಂದು ನಾಲ್ಕು ಭಾಗ ಗಳಾಗಿ ವಿಂಗಡಿಸಿದೆ. ಶರಾವತಿ ನದಿಯ, ಎಂದರೆ ಈಗಿನ ಸಬರಮತಿನದಿಯ, ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ಇರುವುದು ಪ್ರಾಚ್ಯ, ಪಶ್ಚಿಮಕ್ಕೆ ಮತ್ತು ಉತ್ತರಕ್ಕೆ ಇರುವುದು ಉದೀಚ್ಯ ಎಂದು ನಿರ್ದೇಶಿಸಿದೆ. ಇಂದು ಪ್ರಸಿದ್ಧವಾಗಿರುವ ದಕ್ಷಿಣ ಮತ್ತು ಉತ್ತರ ವಿಭಜನೆ ಕಂಡುಬರುವುದಿಲ್ಲ. ಹೊಳೆಯ ನೀರಿನಿಂದ ಫಸಲು ಬೆಳೆಯುವ ಪ್ರದೇಶ ನದೀಮಾತೃಕ, ಮಳೆಯಿಂದ ಫಸಲಾಗುವುದು ದೇವಮಾತೃಕ (೪೫-೧೩). ಒಳ್ಳೆಯ ರಾಜನಿರುವ ದೇಶ ರಾಜನ್ವಾನ್ ; ಬರಿ ರಾಜನಿರುವ ದೇಶ ರಾಜವಾನ್ (೪೫-೧೪). ಅನೇಕ ಬಗೆಯ ರಸ್ತೆಗಳ ಹೆಸರುಗಳನ್ನು ಗಮನಿಸ ಬಹುದು. ಪುರವರ್ಗದಲ್ಲಿ ವಿವಿಧ ರೀತಿಯ ಮನೆಗಳನ್ನು ಹೇಳಿದೆ. ಉಪನಗರಕ್ಕೆ ಅಂದಿನ ಹೆಸರು ಶಾಖಾನಗರ (೪೬-೨೨). ಕೆಲವು ವ್ಯಾಖ್ಯಾನಗಳ ಪ್ರಕಾರ ಇದು ರಾಜಧಾನಿಯಲ್ಲದ ದೊಡ್ಡ ಊರು. ಎಲುಬುಗಳನ್ನಿಟ್ಟು ಕಟ್ಟಿದ ಗೋಡೆ ಮೇಡೂಕ (೪೬-೨೪). ವನೌಷಧಿವರ್ಗದಲ್ಲಿ ಅನೇಕ ಬಗೆಯ ತೋಟಗಳನ್ನು ಹೆಸರಿಸಿದೆ (೫೧ : ೫೧-೫೩). ಗಿಡಗಳನ್ನು ಹೂವಿಂದ ಫಲ ಬಿಡುವುದು (ವಾನಸ್ಪತ್ಯ), ಹೂವಿಲ್ಲದೆ ಫಲ ಬಿಡುವುದು (ವನಸ್ಪತಿ), ಮತ್ತು ಫಲ ಬಿಟ್ಟ ನಂತರ ಒಣಗಿ ಹೋಗುವುದು (ಓಷಧಿ) ಎಂದು ವಿಂಗಡಿಸಿದೆ (೫೧-೫೬). ವೈಶ್ಯವರ್ಗದಲ್ಲಿ ಧಾನ್ಯ ಗಳನ್ನು ಶಮೀ, ಶೂಕ, ಶಾಲಿ ಎಂದು ವಿಭಾಗಿಸಿದೆ (೧೩೪-೬೧೦). ವನೌಷಧಿ ವರ್ಗದಲ್ಲಿ ಸುಮಾರು ೩೦೦ ಗಿಡಗಳ ಹೆಸರುಗಳನ್ನು ಹೇಳಿದೆ. ತಾಳೆ, ತೆಂಗು, ಅಡಕೆ, ಖರ್ಜೂರ, ಕೇದಗೆ, ಓಲೆ ಮತ್ತು ಈಚಲು ಇವನ್ನು ತೃಣವೃಕ್ಷಗಳೆಂದು ಕರೆದಿದೆ. ಸಿಂಹಾದಿವರ್ಗದಲ್ಲಿ ಸಮಾರು ೩೦ ಪ್ರಾಣಿಗಳ, ೪೦ ಪಕ್ಷಿಗಳ ಹೆಸರು ಗಳನ್ನು ಹೇಳಿದೆ. ಕೆಲವು ಹುಳುಗಳನ್ನೂ ಉಲ್ಲೇಖಿಸಿದೆ. ಇವುಗಳ ಸಂಗಡ ಕ್ಷತ್ರಿಯವರ್ಗದಲ್ಲಿ ಆನೆ, ಕುದುರೆಗಳ ಬಗ್ಗೆ ಮತ್ತು ವೈಶ್ಯವರ್ಗದಲ್ಲಿ ಗೋವಿನ ಬಗ್ಗೆ ನೀಡಿರುವ ವಿವರಗಳನ್ನೂ ಪರಿಶೀಲಿಸಬೇಕು.

ಮನುಷ್ಯವರ್ಗದಲ್ಲಿ ಗಂಡಸರ ಮತ್ತು ಹೆಂಗಸರ ಸಾಮಾನ್ಯನಾಮಗಳನ್ನಷ್ಟೇ ಅಲ್ಲದೆ ಅವರ ಪ್ರಭೇದಗಳು, ವೈಯಕ್ತಿಕ ಸಂಬಂಧಗಳು, ಅಂಗಭಾಗಗಳು, ರೋಗ ಗಳು, ರೋಗಿಗಳು, ಆಭರಣಗಳು, ವಸ್ತ್ರವಿಶೇಷಗಳು, ಅಲಂಕಾರ, ಗಂಧ, ಮಾಲ್ಯ ಇವನ್ನೆಲ್ಲಾ ಹೇಳಿವೆ. ವಯಸ್ಸಿಗೆ ಅನುಗುಣವಾಗಿ ಆಗುವ ವ್ಯತ್ಯಾಸಗಳನ್ನು ಗುರುತಿಸಿದೆ. ಉಪಾಧ್ಯಾಯಾ ಮತ್ತು ಆಚಾರ್ಯಾ (೮೧-೨೪೦) ಎಂಬುವನ್ನು ಸ್ವಲ್ಪ ಗಮನಿಸಬಹುದು. ಉಪಾಧ್ಯಾಯಾ ಎಂದರೆ ವಿದ್ಯೆ ಬೋಧಿಸುವವಳು, ಅಧ್ಯಾಪಕಿ. "ಸ್ವಯಂ ವಿದ್ಯೋಪದೇಶಿನ್ಯಾಃ" ಎಂದು ವ್ಯಾಖ್ಯಾನಭಾಗ ಇದನ್ನು ಅರ್ಥೈಸಿದೆ. ಆಚಾರ್ಯಾ ಎಂದರೆ ಮಂತ್ರಗಳ ಅರ್ಥ ಹೇಳುವವಳು. "ಸ್ವಯಂ

ಮಂತ್ರವ್ಯಾಖ್ಯಾತ್ರ್ಯಃ '' ಎಂದು ಪ್ರಭಾ ವ್ಯಾಖ್ಯಾನ ಮಾಡಿದೆ. ಇದಕ್ಕೆ ಆಧಾರ '' ಮಂತ್ರವ್ಯಾಖ್ಯಾಕೃದಾಚಾರ್ಯಃ '' (೧೦೧–೪೧೨) ಎಂಬ ಅಮರಸಿಂಹನ ಉಕ್ತಿ. ಮುಂದಿನ ನಾಲ್ಕು ವರ್ಗಗಳಂತೂ ಅಂದಿನ ಸಾಮಾಜಿಕ ಜೀವನದ ಅಧ್ಯಯನಕ್ಕೆ ಉತ್ತಮ ಆಧಾರವಾಗಿವೆ. ಸಮಾಜದ ಪ್ರಧಾನ ವಿಭಾಗಗಳಾದ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಗಗಳ ಜೀವನ ಹಾಗೂ ವೃತ್ತಿಗಳಿಗೆ ಸಂಬಂಧಿಸಿದ ಪದಗಳನ್ನು ಆಯಾ ವರ್ಗಗಳಲ್ಲಿ ಜೋಡಿಸಿದೆ. ಈ ವಿಭಾಗ ಎಷ್ಟರ ಮಟ್ಟಿಗೆ ಸಮಕಾಲೀನ ಸಮಾಜದ ಯಥಾರ್ಥ ಚಿತ್ರಣ ಮತ್ತು ಎಷ್ಟರ ಮಟ್ಟಿಗೆ ಶಾಸ್ತ್ರವನ್ನು ಅವಲಂಬಿಸಿ ರಚಿಸಿದ ವರ್ಗೀಕರಣ ಎನ್ನುವುದನ್ನು ನಿರ್ಧರಿಸುವುದು ಕಷ್ಟ. ಬ್ರಹ್ಮವರ್ಗದಲ್ಲಿ ಬ್ರಾಹ್ಮಣ ಜೀವನಕ್ಕೆ ಸಂಬಂಧಿಸಿದ ವೇದಾಧ್ಯಯನ, ಯಜ್ಞಯಾಗಾದಿ ಕರ್ಮಗಳು, ಆಶ್ರಮಗಳು ಉಕ್ತವಾಗಿವೆ. ಕ್ಷತ್ರಿಯ ವರ್ಗದಲ್ಲಿ ಆಡಳಿತ, ಮಂತ್ರಾಲೋಚನೆ, ಚತುರಂಗ, ಯುದ್ಧ ಮತ್ತು ಆಯುಧಗಳನ್ನು ಹೇಳಿದೆ. '' ವಿಷಯಾನಂತರೋ ರಾಜಾ ಶತ್ರುಃ ಮಿತ್ರಮತಃ ಪರಂ '' (೧೧೨-೪೭೩) ಎಂದಿರುವುದು ಅಂದಿನ ರಾಜ ನೀತಿ ದೃಷ್ಟಿಯನ್ನಷ್ಟೇ ಸೂಚಿಸಿರದೆ ಕೌಟಲ್ಯನ ಅರ್ಥಶಾಸ್ತ್ರದ ವಾಕ್ಯವನ್ನೂ ನೆನಪಿಗೆ ತರುತ್ತದೆ. ವೈಶ್ಯವರ್ಗದಲ್ಲಿ ಕೃಷಿ, ವಾಣಿಜ್ಯ, ಧಾನ್ಯಗಳು, ಅಡುಗೆಯ ಪಾತ್ರೆಗಳು, ಸಂಬಾರ, ಭಕ್ಷ್ಯಗಳು, ಅಳತೆತೂಕಗಳು, ಲೋಹಗಳು, ರತ್ನಗಳು, ಮತ್ತು ಪನಸಾರೆ ವಸ್ತುಗಳು ಇವುಗಳ ಹೆಸರುಗಳನ್ನು ಸಂಗ್ರಹಿಸಿದೆ. ಈ ವರ್ಗದ ಮೊದಲಲ್ಲಿ ಬರುವ ಕೆಲವು ಪದಗಳು ಸೂಚಿಸುವ ವೃತ್ತಿಮೌಲ್ಯಗಳು ಬಹಳ ಕುತೂಹಲಕಾರಿಯಾಗಿವೆ. ವೈಶ್ಯವರ್ಣದ ವೃತ್ತಿಗಳು ಮೂರು — ಕೃಷಿ, ಪಾಶುಪಾಲ್ಯ, ಮತ್ತು ವಾಣಿಜ್ಯ (೧೩೦–೫೮೭). ಆದರೆ ಇವು ಮೂರೂ ಒಂದೇ ಮಟ್ಟದವಲ್ಲ. ಹಿಂಸಾದಿದೋಷಗಳು ಪ್ರಧಾನವಾಗಿರುವುದರಿಂದ ಕೃಷಿ ಅನೃತ. ಉದುರಿದ ಕಾಳನ್ನು ಆರಿಸಿಕೊಂಡು ಜೀವಿಸುವುದು ಮೇಲು, ಅದು ಋತ. ಸ್ವತಂತ್ರವಾಗಿ ಜೀವನ ನಡೆಸುವ ಸಂಪ್ರ ದಾಯದಲ್ಲಿ ಬೆಳೆದ ವರ್ತಕನಿಗೆ ಸೇವೆ, ಚಾಕರಿ ಎನ್ನುವುದು ಶ್ವವೃತ್ತಿ, ನಾಯಿಬಾಳು. ಭಿಕ್ಷೆ ಬೇಡುವುದಂತೂ ಮೃತ, ಮರಣ ಅಥವಾ ಸಾವು ; ಬೇಡದಿರುವುದು ಅಮೃತ (೧೩೦–೫೮೮). ಬಡ್ಡಿಯಿಂದ ಜೀವನ ನಡೆಸುವುದು ಸತ್ಯಾನೃತವೇ, ಆದರೆ ಸಾಲ ಕೊಡುವವನು ಉತ್ತಮರ್ಣ, ತೆಗೆದುಕೊಳ್ಳುವವನು ಅಧಮರ್ಣ (೧೩೦-೫೯೦). '' ವ್ಯಾಪಾರದಲ್ಲಿ ಪೂರ್ತಿ ಸತ್ಯವಾಗಿರಲು ಹೇಗೆ ಸಾಧ್ಯ '' ಎಂದು ಪ್ರಾಮಾಣಿಕ ವರ್ತಕರೂ ಹೇಳುವುದನ್ನು ಇಂದೂ ಕೇಳಬಹುದು. ಆದರೆ ಇತರರು ಇದನ್ನು ಸಾಮಾನ್ಯವಾಗಿ ವರ್ತಕರ ಹೇಡಿತನವೆಂದೋ ಅಥವಾ ತಮ್ಮನ್ನು ಸಮರ್ಥಿಸಿಕೊಳ್ಳುವ ಪ್ರಯತ್ನವೆಂದೋ ಭಾವಿಸುತ್ತಾರೆ. ಆದರೆ ಅದು ಇದೇನೂ ಆಗಿರದೆ ವಾಣಿಜ್ಯದ ಅನಿವಾರ್ಯ ಸ್ಥಿತಿ, ಎಂದಿನಿಂದಲೂ ಇರುವ ಸ್ಥಿತಿ ಎನ್ನುವುದು ಬಹಳ ಜನಕ್ಕೆ ಒಪ್ಪಿಗೆಯಾಗಲಾರದು. ಅಂತಹವರಿಗೆ ಅಮರಕೋಶವು '' ಸತ್ಯಾನೃತಂ ವಣಿಗ್ಭಾವಃ '' (೧೩೦-೫೮೮) ಎಂದು ಪ್ರಾಚೀನ ಪದ್ಧತಿಯ ಪ್ರಮಾಣ ನೀಡುತ್ತದೆ. ಶೂದ್ರವರ್ಗ

ದಲ್ಲಿ ಆ ವರ್ಣವವರ ಕಸುಬುಗಳನ್ನೂ ಆಸಕ್ತಿಗಳನ್ನೂ ಹೆಸರಿಸಿದೆ. ಈ ಯಾವ ವರ್ಗದ ಲ್ಲಿಯೂ ಸೇರಿಸಲಾಗದ ಅನೇಕ ಶಬ್ದಗಳನ್ನು ತೃತೀಯಕಾಂಡದಲ್ಲಿ ಹೇಳಿದೆ. ಅವನ್ನೂ ಸಾಂಸ್ಕೃತಿಕ ದೃಷ್ಟಿಯಿಂದ ನೋಡುವುದು ಇಷ್ಟೇ ಪ್ರಯೋಜನವತ್ತಾಗಿರುತ್ತದೆ.

ಕೋಶದಲ್ಲಿ ಉಕ್ತವಾಗಿರುವ ಅನೇಕ ಹೆಸರುಗಳು ಆ ವಸ್ತುಗಳ ಮೂಲವನ್ನೂ ಸೂಚಿಸುತ್ತವೆ. ಉದಾಹರಣೆಗೆ, ಅಂಬಲಿಗೆ ಒಂದು ಪದವಾದ ಅವಂತೀಸೋಮವು (೧೩೬–೬೨೨) ಆ ಸೋಮಲತೆಯ ದೇಶವನ್ನು ನಿರ್ದೇಶಿಸುತ್ತದೆ. ಸುರಾಷ್ಟ್ರಜ (೬೨–೧೮೦) ಒಂದು ತೊಗರಿ. ದ್ರಾವಿಡಕ (೬೮–೧೮೪) ಎಂದರೆ ಕಚೋರ, ಕಾಂಭೋಜಿ (೬೮–೧೮೮) ಒಂದು ಬಗೆಯ ಕಾಡುದ್ದು. ಕಾಶ್ಮೀರ (೬೯–೧೯೫) ನೆಲದಾವರೆ ಗಡ್ಡೆಯಾದರೆ, ಕಾಶ್ಮೀರ ಜನ್ಮ (೯೨–೩೯೦) ಕೇಸರಿಯ ಒಂದು ಹೆಸರು. ವಾರಾಹಿಗಿಡದ ಹೆಸರಾಗಿರುವ ವಿಷ್ವಕ್ಸೇನಪ್ರಿಯಾ (೨೦–೩೦೦) ಯಾವುದೋ ಪುರಾಣಮೂಲವನ್ನು ಸೂಚಿಸಬಹುದು. ಕಂಚಿನ ಹೆಸರುಗಳಲ್ಲಿ ಪ್ರಭಾಸಂ, ಸೌರಾಷ್ಟ್ರಂ ಎಂಬುವು ಕಂಚಿಗೆ ಆ ದೇಶಗಳ ಪ್ರಸಿದ್ಧಿಯನ್ನು ಪ್ರಕಟಿಸುವುದು ಮಾತ್ರವಲ್ಲದೆ, ಆದೂರಾಹ್ವಯಂ (೧೪೫–೬೯೦) ಎನ್ನುವುದು ಅದು ದೂರದೇಶದಿಂದ ಬಂದುದನ್ನೂ ತಿಳಿಸುತ್ತದೆ. ಮಣಿಶಿಲೆಯ ಒಂದು ಹೆಸರು ನೈಪಾಳೀ (೧೪೬–೨೦೧). ತುರುಷ್ಕಃ, ಯಾವನಃ (೯೮–೩೯೪) ಲೋಬಾನದ ಹೆಸರುಗಳು. ಪಾಂಚಾಲಿಕಾ (೧೫೨–೨೩೫) ಎಂದರೆ ಬಟ್ಟೆಯಿಂದ ಮಾಡಿದ ಬೊಂಬೆ.

ಪರಿಸರವನ್ನು ಸೂಕ್ಷ್ಮವಾಗಿ ಗಮನಿಸಿಯೋ ಸ್ವಂತ ಅನುಭವದ ನೆನಪಿಂದಲೋ ಜನಪ್ರಜ್ಞೆ ಮಾಡಿದ ನಾಮಕರಣಗಳು ಅಷ್ಟೇ ವಿಚಿತ್ರವಾಗಿವೆ. ಮುಟ್ಟಿದರೆ ಎಲೆ ಮುದುರಿಕೊಂಡು ಕಾಂಡ ಬಾಗುವ ಗಿಡ ನಮಗೆ ಶೀಘ್ರಕೋಪಿಯಾದ ಮುನಿ ಆದರೆ ಪ್ರಾಚೀನರಿಗೆ ಅದು ಕೈಜೋಡಿಸಿ ತಲೆ ಬಾಗಿಸುವ ನಮಸ್ಕಾರೀ (೬೯–೧೯೧) ಆಗಿತ್ತು. ಐರೋಪ್ಯರು ನಮಗೆ ಕೆಂಪು ಮೋರೆಯುವರಾಗಿ ಕಂಡರೆ ನಮ್ಮ ಪೂರ್ವಿಕರಿಗೆ ತಾಮ್ರವು ಮ್ಲೇಚ್ಛಮುಖಂ (೧೪೫–೬೮೯) ಆಗಿ ಕಂಡಿತ್ತು. ತಿನ್ನುವುದರಲ್ಲೂ ಉಳಿಸುವ ಲೋಭಿಯು ಕಿಂಪಚಾನ, ಮಿತಂಪಚ (೧೬೫–೮೯). ಕಿವಿಕಚ್ಚಿ ಚಾಡಿ ಹೇಳುವವ ಕರ್ಣೇಜಪ (೧೬೫–೪೨). ಏನೂ ತಿಳಿಯದವನಿಗೆ, ಅಜ್ಞನಿಗೆ ಮತ್ತೊಂದು ಹೆಸರು ಯಥಾಜಾತ (೧೬೫–೪೮), ಹುಟ್ಟಿದಾಗ ಇದ್ದಂತೆಯೇ ಈಗಲೂ ಇರುವವನು. ಭ್ರಾತೃವ್ಯ (೨೧೩–೩೦೧) ಒಡಹುಟ್ಟಿದವನೂ ಹೌದು, ಹಗೆಯೂ ಹೌದು. ಪೂಜ್ಯ (೨೧೪–೩೦೬) ಎನ್ನವುದರ ಒಂದು ವಿಶಿಷ್ಟ ಅರ್ಥ ಹೆಂಡತಿಯ ತಂದೆ, ಹೆಣ್ಣುಕೊಟ್ಟ ಮಾವ. ಪ್ರಾಯಶಃ ಲೋಕಾನುಭವ ಪದಕ್ಕೆ ನೀಡಿದ ಕಾಣಿಕೆ ಇದು.

೬

ಅಮರಕೋಶಕ್ಕೆ ಆದ್ಯತೆ ಮತ್ತು ಪುರಸ್ಕಾರ ಬಹಳ ಬೇಗನೆ ದೊರೆತಂತೆ ಕಾಣುತ್ತದೆ. ಪ್ರಾರ್ಥನೀಯ ಕೋಶಕಾರರ ಪಂಕ್ತಿಗೆ ಅಮರಸಿಂಹನು ಸೇರಿದನು.

ಕಾತ್ಯವಾಚಸ್ಪತಿವ್ಯಾಡಿಭಾಗುರ್ಯಮರಮಂಗಲಾಃ ।
ಸಾಹಸಾಂಕಮಹೇಶಾದ್ಯಾಃ ವಿಜಯಂತೇ ಜಿನಾಂತಿಮಾಃ ॥

ಎಂದು ಕೇಶವನು ಕಲ್ಪದ್ರುಕೋಶದಲ್ಲಿ ಸ್ತುತಿಸಿದ್ದಾನೆ. "ಅಮರಸಿಂಹ ವೈಜಯಂತೀ ಹಲಾಯುಧಾದಿಷು ದಶನಿಘಂಟವಃ ಇತಿ ವ್ಯವಹಾರಾತ್" ಎಂದು ಸಾಯಣರು ನುಡಿದಿದ್ದಾರೆ. ಅದರ ಮೇಲಿನ ವ್ಯಾಖ್ಯಾನಗಳ ಸಂಖ್ಯೆಯಿಂದಲೂ ಅದರ ಹಿರಿಮೆ ತಿಳಿಯುತ್ತದೆ. ಔಫ್ರೆಕ್ಟರ ಪ್ರಕಾರ ಅದರ ಮೇಲೆ ೪೦ ವ್ಯಾಖ್ಯಾನಗಳಿವೆ; ಕವಿ ಕಾವ್ಯಕಲ್ಪನಾ ಪ್ರಕಾರ ಅವು ೭೯. ಅವುಗಳಲ್ಲಿ ಕ್ಷೀರಸ್ವಾಮಿಯ ಅಮರಕೋಶೋದ್ಘಾಟನ (೧೧ನೆ ಶತಕದ ಉತ್ತರಾರ್ಧ), ಸರ್ವಾನಂದ ವಂದ್ಯಘಟೀಯನ ಟೀಕಾಸರ್ವಸ್ವ (ಕ್ರಿ.ಶ. ೧೧೫೯), ಬೃಹಸ್ಪತಿಯ ಪದಚಂದ್ರಿಕಾ ಅಥವಾ ರಾಯಮುಕುಟಮಣಿ (ಕ್ರಿ.ಶ. ೧೪೩೧), ಭಾನುಜಿ ದೀಕ್ಷಿತನ ವ್ಯಾಖ್ಯಾಸುಧಾ ಅಥವಾ ರಾಮಾಶ್ರಮಿ (೧೭ನೆ ಶತಮಾನ) ಪ್ರಮುಖವಾದವು. ೧೨ನೆ ಶತಮಾನದಲ್ಲಿದ್ದ ಸುಭೂತಿ ಅಥವಾ ಸುಭೂತಿ ಚಂದ್ರನ ಕಾಮಧೇನು ಎಂಬ ವ್ಯಾಖ್ಯಾನ ಟಿಬೆಟನ್ ಭಾಷೆಯಲ್ಲಿ ಉಳಿದಿದೆ. ಸಿಕ್ಕಿರುವ ವ್ಯಾಖ್ಯಾನಗಳಲ್ಲಿ ಕ್ಷೀರಸ್ವಾಮಿಯದೇ ಸಂಪೂರ್ಣವಾದ ಅತ್ಯಂತ ಪ್ರಾಚೀನ ವ್ಯಾಖ್ಯೆಯಾದರೂ ಅವನದೇ ಅಮರದ ಮೇಲಿನ ಪ್ರಥಮ ವ್ಯಾಖ್ಯಾನವಾಗಿರಲಿಲ್ಲ. ಗೌಡ, ಉಪಾಧ್ಯಾಯ ಮತ್ತು ಶ್ರೀಭೋಜ ಎಂಬ ತನಗಿಂತ ಹಿಂದಿನ ಮೂವರು ಅಮರಕೋಶ ವ್ಯಾಖ್ಯಾಕಾರರನ್ನು ಕ್ಷೀರಸ್ವಾಮಿ ಹೆಸರಿಸಿದ್ದಾನೆ. ಆದರೆ ಅವರ ಕೃತಿಗಳ ಬಗ್ಗೆ ಏನೊಂದೂ ತಿಳಿದುಬಂದಿಲ್ಲ.

ಆದರೆ ಈ ಪ್ರಸಿದ್ಧಿ, ಪುರಸ್ಕಾರ ಅಮರಸಿಂಹನನ್ನು ಟೀಕೆಗಳಿಂದ ರಕ್ಷಿಸಿಲ್ಲ. ಯಾವುದೇ ಕೋಶ ಒಳಗಾಗಬಹುದಾದ ಖಂಡನೆಗಳಿಗೆ ಅವನ ಕೋಶವೂ ಒಳಗಾಯಿತು. ರಚನಾಕ್ರಮದಿಂದ ಹಿಡಿದು ಪದರೂಪದವರೆಗೆ ಅದನ್ನು ಟೀಕಿಸಲಾಗಿದೆ. ಅಮರಸಿಂಹನ ಕೃತಿ ಕೋಶಸಾಹಿತ್ಯದಲ್ಲಿ ಒಂದು ಹೊಸ ಪ್ರಯೋಗವಾಗಿದ್ದಂತೆ ಕಾಣುತ್ತದೆ. ಅದು ಸಂಪೂರ್ಣ ಪರ್ಯಾಯಕೋಶವಾಗಲಿ ಸಂಪೂರ್ಣ ಲಿಂಗನಿಘಂಟಾಗಲಿ ಆಗಿರದೆ ಕಾಂಡವಿಭಾಗದಲ್ಲಿಯೂ ಒಂದು ಹೊಸ ಹೆಜ್ಜೆ ಇಟ್ಟಂತಿದೆ. "ನನು ರತ್ನಕೋಶಾದಿವತ್ ಸ್ತ್ರೀಪುಂನಪುಂಸಕವಿಧಾನೇನೈವ ವಚನಮುಚಿತಂ" ಎಂದು ಕ್ಷೀರಸ್ವಾಮಿ ಉಲ್ಲೇಖಿಸಿರುವ ಪ್ರಾಚೀನ ಆಕ್ಷೇಪ ಇದನ್ನು ಸೂಚಿಸುತ್ತದೆ. ಪದಗಳ ವಿಷಯದಲ್ಲಿಯೂ ಟೀಕೆ ತಪ್ಪಿಲ್ಲ. ವನೌಷಧಿವರ್ಗದ ೧೪೩ನೆ ಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಕ್ಷೀರಸ್ವಾಮಿಯು "ಬೃಹತೀತು ನಿದಿಗ್ಧಿಕಾ" ಎಂಬ ಭಾಗುರಿಯ ಪಾಠದಿಂದ ಅಮರನು ತಪ್ಪಿದ್ದಾನೆಂದು ಹೇಳುತ್ತಾನೆ. ಹೀಗೆಯೇ ವೈಶ್ಯವರ್ಗದ ೭೪೧ನೆ ಶ್ಲೋಕದ ಮೇಲೆ ಬರೆಯುವಲ್ಲಿ ಮಾಲಾಕಾರನು ಭಾಗುರಿಯನ್ನು ತಪ್ಪು ಓದಿದನೆಂದೂ, ಅಮರನು ಮಾಲಾಕಾರನ ಕೋಶದ ಪಾಠವನ್ನು ಅನುಸರಿಸಿ ತಪ್ಪಿದ್ದಾನೆಂದೂ ಹೇಳುತ್ತಾನೆ: "ಏತಚ್ಚ ವೃಷ್ಯಂ ಶರಮಿತಿ ಭಾಗುರಿಪಾಠೇ ಸರಮಿತಿ ಬುದ್ಧ್ವಾ ಮಾಲಾಕೃತ್ ಭ್ರಾಂತಃ । ಕೇಚಿನ್ನಷ್ಟೈಸ್ತು ಸಾಶಿತಾ

ಇತ್ಯಯಮಪಿ ಮಾಲಾಪಾಠೇನ ವಿಪ್ರಲಬ್ಧಃ।'' ಅಂತೆಯೇ ವನೌಷಧಿವರ್ಗದ ೯೯ನೆ ಶ್ಲೋಕದಲ್ಲಿ ಖದಿರ ಎನ್ನುವುದಕ್ಕೆ ಪರ್ಯಾಯವಾಗಿ ಕೊಟ್ಟಿರುವ ಬಾಲತನಯ ಎನ್ನುವುದರ ವಿಷಯವಾಗಿ ಬರೆಯುತ್ತಾ ಕ್ಷೀರಸ್ವಾಮಿಯು ಅಮರನು ಧನ್ವಂತರಿ ಕೋಶದ ಪಾಠವನ್ನು ನೋಡದಿರುವುದರಿಂದ ಹೀಗಾಗಿದೆ ಎನ್ನುತ್ತಾನೆ: ''ಬಾಲ ಪತ್ರೋ ಯವಾಸಃ ಖದಿರಶ್ಚೇತಿ ದ್ವ್ಯರ್ಥೇಷು ಧನ್ವಂತರಿಪಾಠಮದೃಷ್ಟ್ವಾ ಬಾಲ ಪುತ್ರಭ್ರಾಂತ್ಯಾ ಗ್ರಂಥಕೃತ್ ಬಾಲತನಯಮಾಹ।'' ವೈಶ್ಯವರ್ಗದ ೫೮೭ನೆ ಶ್ಲೋಕದಲ್ಲಿನ ''ಅನೃತಂ ಕೃಷಿಃ'' ಎನ್ನುವುದನ್ನು ಕುರಿತು ''ಪ್ರಮೃತಂ ಇತಿ ಪಥ್ಯಃ ಪಾಠಃ'' ಎಂದು ಸೂಚಿಸುತ್ತಾನೆ, ಏಕೆಂದರೆ ಮನುವಿನಲ್ಲಿ ''ಪ್ರಮೃತಂ ಕರ್ಷಣಂ ಸ್ಮೃತಂ'' (೪–೫) ಎಂದು ಹೇಳಿದೆ.

೧೨ನೆ ಶತಮಾನದಲ್ಲಿ ಶ್ರೀಹರ್ಷ ಎಂಬುವನು ಅಮರಕೋಶವನ್ನು ಸಮಗ್ರ ವಾಗಿ ಖಂಡಿಸಲು ಅಮರಖಂಡನ ಎಂಬ ಗ್ರಂಥವನ್ನು ರಚಿಸಿದನು. ಅವನ ಆಕ್ಷೇಪ ಗಳು ಪ್ರಧಾನವಾಗಿ ನಾಲ್ಕು. (೧) ಅಮರಕೋಶದಲ್ಲಿ ನೀಡಿರುವ ಪರ್ಯಾಯಪದ ಗಳ ಸಂಖ್ಯೆ ಸಾಲದು. (೨) ಕೋಶಗಳ ಎರಡು ಬಗೆಗಳು ಪ್ರಸಿದ್ಧಿಯಲ್ಲಿವೆ— ಪರ್ಯಾಯಕೋಶಗಳು ಮತ್ತು ನಾನಾರ್ಥಕೋಶಗಳು. ಆದರೆ ಅಮರಸಿಂಹನದು ಅಪ್ರಸಿದ್ಧವಾದ ಪರ್ಯಾಯಲಿಂಗಕೋಶ. (೩) ಅಮರನು ಪ್ರಧಾನಜಾತಿ ಹಾಗೂ ಉಪಜಾತಿಗಳನ್ನು ಸೂಚಿಸುವ ಪದಗಳನ್ನು ಯಾವ ಕ್ರಮವೂ ಇಲ್ಲದೆ ಒಟ್ಟಿಗೆ ಜೋಡಿಸುತ್ತಾನೆ. (೪) ಪದವೊಂದರ ವಿಭಿನ್ನ ಶಾಬ್ದರೂಪಗಳನ್ನೂ, ಅದು ಪ್ರಯುಕ್ತವಾಗಿರುವ ಎಲ್ಲ ಲಿಂಗಗಳನ್ನೂ ಅವನು ಉಲ್ಲೇಖಿಸಿಲ್ಲ. ಈ ಆಕ್ಷೇಪಗಳಿಗೆ ಸಮಾಧಾನ ನೀಡಿ ಅಮರನನ್ನು ಸಮರ್ಥಿಸಲು ಕೃಷ್ಣಸೂರಿ (ಸು.ಕ್ರಿ.ಶ. ೧೭೭೦) ಅಮರಮಂಡನ ಎಂಬುದನ್ನು ಬರೆದಿದ್ದಾನೆ. ಇಂಗ್ಲಿಷಿನ ಅತ್ಯಂತ ಪ್ರಸಿದ್ಧ ಪರ್ಯಾಯಕೋಶವಾದ Thesaurus ನ್ನು ರಚಿಸಿದ ಪೀಟರ್ ಮಾರ್ಕ್ ರೋಜೆ ೧೮೫೨ರಲ್ಲಿ ಆ ಗ್ರಂಥಕ್ಕೆ ಬರೆದ ಮುನ್ನುಡಿಯಲ್ಲಿ ಕೊಟ್ಟಿರುವ ಈ ಟಿಪ್ಪಣಿ ಉಲ್ಲೇಖಾರ್ಹವಾಗಿದೆ:

The following are the only publications that have come to my knowledge in which any attempt has been made to construct a systematic arrangement of ideas with a view to their expression. The earliest of these, supposed to be at least nine hundred years old, is the AMERA COSHA, or *Vocabulary of the Sanscrit Language*, by Amera Sinha, of which an English translation, by the late Henry T. Colebrooke, was printed at Serampore, in the year 1808. The classification of words is there, as might be expected, exceedingly imperfect and confused, especially in all that relates to abstract ideas or mental

operations. This will be apparent from the very title of the first section, which comprehends '*Heaven, Gods, Demons, Fire, Air, Velocity, Eternity, Much*': While *Sin, Virtue, Happiness, Destiny, Cause, Nature, Intellect, Reasoning, Knowledge, Senses, Tastes, Odours, Colours,* are included and jumbled together in the fourth section. A more logical order, however, pervades the sections relating to natural objects, such as, *Seas, Earth, Towns, Plants,* and *Animals,* which form separate classes; exhibiting a remarkable attempt at analysis at so remote a period of Indian literature.

ಇದರಿಂದ ಅಮರಸಿಂಹನ ಪ್ರಸಿದ್ಧಿಗಾಗಲಿ ಅಮರಕೋಶದ ಪ್ರಾಧಾನ್ಯಕ್ಕಾಗಲಿ ಯಾವ ಧಕ್ಕೆಯೂ ಒದಗಲಿಲ್ಲ. ಪುಷ್ಟಿಗಾಗಿ ಪೂರಕಕೋಶಗಳೂ, ಅನುಸರಿಸಿ ಸ್ವತಂತ್ರಕೋಶಗಳೂ ರಚಿತವಾದವು. ಪುರುಷೋತ್ತಮನು ತ್ರಿಕಾಂಡಶೇಷ ಎಂಬ ಪೂರಕಕೋಶವನ್ನು ರಚಿಸಿದನು. ಸರ್ವಾನಂದನು ಇದನ್ನು ಉಲ್ಲೇಖಿಸಿರುವುದರಿಂದ ಇವನ ಕಾಲ ಕ್ರಿ. ಶ. ೧೧೫೯ಕ್ಕೆ ಹಿಂದಿನದಾಗಿರಬೇಕು. ಅಮರಕೋಶದಲ್ಲಿ ಬಿಟ್ಟಿರುವ, ಆದರೆ ತನ್ನ ಕಾಲದಲ್ಲಿ ಸಾಮಾನ್ಯವ್ಯವಹಾರದಲ್ಲಿದ್ದ ಪದಗಳನ್ನು ಹೇಳುವುದಷ್ಟೇ ಅವನ ಗುರಿ ಆಗಿತ್ತು. ಅಮರಕೋಶದಲ್ಲಿ ಉಕ್ತವಾಗಿರುವ ೧೭ ಬುದ್ಧನ ಹೆಸರುಗಳಿಗೆ ಇವನು ಹೆಚ್ಚಿನ ೩೩ ಹೆಸರುಗಳನ್ನು ಸೇರಿಸುತ್ತಾನೆ. ಇತರ ಪದಗಳ ಬಗ್ಗೆಯೂ ಇಂತೆಯೇ ಮಾಡಿದ್ದಾನೆ. ಶಾಸ್ತ್ರಕಾರರು, ವ್ಯಾಖ್ಯಾನಕಾರರು ಪದಗಳ ಅರ್ಥಗಳಿಗೆ ಪ್ರಮಾಣನೀಡುವಾಗ ಇತ್ಯಮರಃ ಎಂದು ಸಾಧಾರಣವಾಗಿ ಮೊದಲು ಹೇಳಿ ಅನಂತರ ಅಥವಾ ಅದರಲ್ಲಿರದ ಪದಗಳಿಗೆ ವೈಜಯಂತೀ, ಮೇದಿನೀ, ವಿಶ್ವ ಮುಂತಾದ ಕೋಶಗಳನ್ನು ಉಲ್ಲೇಖಿಸುವುದು ಕೋಶಸಾಹಿತ್ಯದಲ್ಲಿ ಅಮರಕೋಶದ ಪ್ರಾಮಾಣ್ಯವನ್ನೂ ಅನನ್ಯಸ್ಥಾನವನ್ನೂ ಸೂಚಿಸುತ್ತದೆ. ಭಾಷಾಸಂಪತ್ತಿಗಾಗಿ ಮತ್ತು ಉಚ್ಚಾರಣಾಶುದ್ಧಿಗಾಗಿ ಚಿಕ್ಕಮಕ್ಕಳಿಗೆ ಅದನ್ನು ಬಾಯಿಪಾಠ ಮಾಡಿಸುತ್ತಿದ್ದ ಪದ್ಧತಿ ಇತ್ತೀಚಿನವರೆಗೂ ರೂಢಿಯಲ್ಲಿತ್ತು.

೭

ಅಮರಕೋಶವು ಅನೇಕ ಭಾಷೆಗಳಿಗೆ ಅನುವಾದವಾಗಿದೆ. ಪೌಲಿನಸ್ ಅಸಾಂಕ್ಟೊ ಬಾರ್ಥೊಲೊಮಿಯೋ ಎನ್ನುವವರು ಅದರ ಪ್ರಥಮಕಾಂಡದ ಲ್ಯಾಟಿನ್ ಸಂಸ್ಕರಣವನ್ನು ೧೭೯೮ರಲ್ಲಿ ರೋಮಿನಿಂದ ಪ್ರಕಟಿಸಿದರು. ವಿಲ್ಕಿನ್ಸ್ (೧೮ನೆ ಶತಕ), ಎಚ್. ಟಿ. ಕೋಲ್‌ಬ್ರೂಕ್ (ಶ್ರೀರಾಮಪುರ, ೧೮೦೭), ರೂಸ್ನೋ (೧೮೧೩), ವಿಲ್ಸನ್ (೧೮೧೯), ಯೇಟ್ಸ್ (೧೮೪೬), ಬೆನ್ಫಿ (೧೮೬೫), ರಾಮ್ ಯಾಸೆನ್ (೧೮೭೧), ವಿಲಿಯಮ್ಸ್ (೧೮೭೨) ಇಂಗ್ಲಿಷಿಗೆ ಅನುವಾದ ಮಾಡಿದ್ದಾರೆ. ಲಾಯ್ಸಿಲ್ಯೂ

ದೆಲಾಂಷಾಂ ಫ್ರೆಂಚ್‌ಭಾಷೆಗೆ (೧೮೩೯–೪೫) ಅನುವಾದಿಸಿದ್ದಾರೆ. ೧೯ನೆ ಶತಮಾನ ದಲ್ಲಿ ಹಿಂದಿ ಮತ್ತು ಲಡಖ್ ಭಾಷೆಗಳಿಗೆ ಆಗಿರುವ ಒಂದು ಅನುವಾದ ಸಿಕ್ಕಿದೆ. ರಾಮ ದೊಯು ವಿದ್ಯಾಲಂಕಾರ ೧೮೩೧ರಲ್ಲಿ ಬಂಗಾಳಿಗೆ ಅನುವಾದ ಮಾಡಿದ್ದಾರೆ. ೧೮೫೪ರಲ್ಲಿ ಅನಂತ ಶಾಸ್ತ್ರಿ ತಳೇಕರ್ ಮರಾಠಿಗೆ ಭಾಷಾಂತರಿಸಿದ್ದಾರೆ. ಭಾನು ದೀಕ್ಷಿತನ ಗುರುಬಾಲಪ್ರಬೋಧಿನಿಯನ್ನು ಓದಿ ಅದರಿಂದ ಪ್ರಭಾವಿತನಾಗಿ ತಾಳ್ಳಪಾಕ ಅನ್ನಮಾಚಾರ್ಯರ ಮಗ ತಿರುವೆಂಕಟಾಚಾರ್ಯನು ಬಾಲಪ್ರಬೋಧಿಕ ಎಂಬ ತೆಲುಗು ವ್ಯಾಖ್ಯಾನ ರಚಿಸಿದನೆಂದು ಆಂಧ್ರವಿಜ್ಞಾನಸರ್ವಸ್ವ ತಿಳಿಸುತ್ತದೆ. ತೆಲುಗಿನಲ್ಲಿ ಅಮರಕೋಶವು ಗುರುಬಾಲಪ್ರಬೋಧಿಕಸಹಿತವಾದ ಕಲಾದೊಡನೆ (೧೮೭೧) ಮತ್ತು ಅಮರಪದಪಾರಿಜಾತದೊಡನೆ (೧೮೭೨) ಪ್ರಕಟವಾಗಿದೆ.

ಕನ್ನಡದಲ್ಲಿ ಅಮರಕೋಶಕ್ಕೆ ಒಂದು ಪ್ರಾಚೀನ ಇತಿಹಾಸವಿದೆ. ನಾಗ ವರ್ಮನು (ಸು.ಕ್ರಿ.ಶ. ೧೧೫೦) ಅಭಿಧಾನಕೋಶವನ್ನು

ವರರುಚಿ ಹಲಾಯುಧಂ ಭಾ
ಗುರಿ ಶಾಶ್ವತಮಮರಕೋಶಮೆಂಬಿವು ಮೊದಲಾ ।
ಗಿರೆ ಪೂರ್ವಶಾಸ್ತ್ರಮಂ ಸಂ
ಹರಿಸಿ ಮನಂಗೊಳೆ ನಿಘಂಟುವಂ ರಚಿಸುವೆಂ ॥

ಎಂದು ಪ್ರಾರಂಭಿಸುತ್ತಾನೆ. ಸಿಕ್ಕಿರುವ ಕನ್ನಡ ವ್ಯಾಖ್ಯಾನಗಳಲ್ಲಿ ಅತ್ಯಂತ ಪ್ರಾಚೀನ ವಾದುದು ನಾಚಿರಾಜ (ಸು.ಕ್ರಿ.ಶ. ೧೩೦೦)ನದು. ಭಾರತದ ಇತರ ಯಾವುದೇ ದೇಶಭಾಷೆಯಲ್ಲಿ ಇದರಷ್ಟು ಅಥವಾ ಇದಕ್ಕಿಂತ ಹಿಂದಿನ ವ್ಯಾಖ್ಯಾನ ಇದ್ದಂತೆ ತಿಳಿದು ಬರುವುದಿಲ್ಲ. ಇದರ ಓಲೆಗರಿಯ ಪ್ರತಿಯೊಂದು ಪ್ರೊ. ಡಿ. ಎಲ್. ನರಸಿಂಹಾ ಚಾರ್ಯರ ಬಳಿ ಇದೆ. ಆದರೆ ಅದು ಕ್ಷತ್ರಿಯವರ್ಗದ ಜೈತ್ರಃ (೧೨೩–೨೪೦) ಎಂಬಲ್ಲಿಗೆ ನಿಂತಿದೆ. ವ್ಯಾಖ್ಯಾನ ಸರಳವಾಗಿರುವುದಲ್ಲದೆ ವನೌಷಧಿವರ್ಗದಲ್ಲಿ ಸಂಗ್ರಹಿಸಿರುವ ಗಿಡಮರಗಳ ಕನ್ನಡದ ಹೆಸರುಗಳು ಅಧ್ಯಯನಯೋಗ್ಯವಾಗಿವೆ. ಮೂಲದಲ್ಲಿರುವ ಶಬ್ದಗಳ ಜೊತೆಗೆ ಅನುಕ್ತ ಎಂದು ನಾಚಿರಾಜ ಕೆಲವನ್ನು ಹೇಳು ತ್ತಾನೆ. ಉದಾಹರಣೆಗೆ " ವಿನಾಯಕಃ !.... ಗಜಾನನಃ । ಪು । ಈ ೮ ವಿನಾಯಕನ ಹೆಸರು । ಅನುಕ್ತ । ಅಂಕುಶಧರಿನ್ । ಅಂಬುಧರಃ । ಈ ೨ ಅನುಕ್ತ । " ಸಂಸ್ಕೃತ ಪದಗಳ ನಡುವೆ ಸಂಸ್ಕೃತರೂಪ ತೊಟ್ಟ ಕನ್ನಡ ಪದಗಳು ಕಾಣಿಸುವ ಒಂದೆರಡು ಸಂದರ್ಭಗಳೂ ಇವೆ. ದೃಷ್ಟಾಂತಕ್ಕೆ : " ನಾವ್ಯಃ । ತ್ರಿಲಿಂಗ । ಪೂರುಗೋಲಿನಿಂದ ದಾಂಟಲು ತಕ್ಕುದರ ಹೆಸರು । ನೌಃ । ಸ್ತ್ರಿ । ತರಣಿಃ । ತರಿಃ । ಪಡಗುಃ । ಈ ೪ ನಾವೆಯ ಪೆಸರು । " (ಓಲೆ ಪತ್ರ ೯೭). ಸು. ೧೭೦೦ರಲ್ಲಿದ್ದ ಕವಿವಿಠ್ಠಲನು ಅಮರಕೋಶದ ಮೇಲೆ ಟೀಕನ್ನು ರಚಿಸಿ ಅದನ್ನು ವಿದಗ್ಧಚೂಡಾಮಣಿ ಎಂದು ಕರೆದಿದ್ದಾನೆ. ಚಿಂತಕೊಂತ ಚಲುಮಯ್ಯಾ ಮತ್ತು ಮಹಾದೇವಪ್ಪ ೧೮೫೧ರಲ್ಲಿ ಅಮರಕೋಶವನ್ನು ತೆಲುಗಿನಿಂದ ಅನುವಾದಿಸಿದರು. ೧೮೭೫ರಲ್ಲಿ ಸಿದ್ಧಾಂತಿ

ಸುಬ್ರಹ್ಮಣ್ಯಶಾಸ್ತ್ರಿ ಸಟೀಕ ಅಮರಕೋಶವನ್ನು ರಚಿಸಿದರು. ಕಿಟ್ಟೆಲ್ ಅದರ ಉಪಯೋಗ ಪಡೆದಿದ್ದಾರೆ. ಲೂಯಿ ರೈಸರ ಮೊದಲ ಮುದ್ರಣ ೧೮೭೨ರಲ್ಲಿ ಪ್ರಕಟವಾಯಿತು. ೧೮೮೮ರಲ್ಲಿ ಸೋ. ವೆಂಕಟೇಶ ಶಾಸ್ತ್ರಿ, ಮೋ. ರಾಮಶೇಷಶಾಸ್ತ್ರಿ, ಮತ್ತು ದೊ. ನಾರಾಯಣ ಶಾಸ್ತ್ರಿಗಳು ಕನ್ನಡ ಲಿಪಿಯಲ್ಲಿ ಅಮರಕೋಶದ ಸಂಸ್ಕೃತ ಮೂಲ ಹಾಗೂ ಅದರ ಕನ್ನಡ ಟೀಕೆಯನ್ನು ಪ್ರಕಟಿಸಿದರು. ಇದು ಗುರುಬಾಲ ಪ್ರಬೋಧಿಕೆಯ ಸಂಪೂರ್ಣ ಅನುವಾದ. ಲಿಂಗಾಭಟ್ಟೀಯ, ಟೀಕಾಸರ್ವಸ್ವ ಮತ್ತು ಸುಧಾದಿ ವ್ಯಾಖ್ಯಾನಸ್ಥ ವಿಶೇಷಗಳಿಂದ ಆಧಾರಿತವಾಗಿದೆಯೆಂದು ತಿಳಿಸಿದೆ. ಪದಗಳ ಅರ್ಥಗಳನ್ನು ಕೊಡುವುದರ ಜೊತೆಗೆ ವ್ಯಾಕರಣಸೂತ್ರಪೂರ್ವಕ ಅವುಗಳ ವ್ಯುತ್ಪತ್ತಿಗಳನ್ನು ತಿಳಿಸುವುದು ಈ ಗ್ರಂಥದ ವೈಶಿಷ್ಟ್ಯ. ಗ್ರಂಥದ ಮೊದಲಲ್ಲಿ ಅಮರಕೋಶಾದರ್ಶ ಎಂಬ ವಿಭಾಗವಿದೆ. ಅದರಲ್ಲಿ ಮೂರು ಬಿಂಬಗಳಿವೆ. ಅವು ಅಮರಕೋಶದ ಮೂರು ಕಾಂಡಗಳಿಗೆ ಸಂವಾದಿಯಾಗಿವೆ. ಪ್ರತಿ ಬಿಂಬದಲ್ಲೂ ಕೋಶದ ಆ ಕಾಂಡದಲ್ಲಿ ಉಕ್ತವಾದ ಸಂಸ್ಕೃತ ಶಬ್ದಗಳನ್ನು ಅಕಾರಾದಿಯಾಗಿ ಜೋಡಿಸಿ ಅವಕ್ಕೆ ಅಲ್ಲೇ ಕನ್ನಡದ ಅರ್ಥಗಳನ್ನೂ ಕೊಟ್ಟಿದೆ. ಇದನ್ನು ರಚಿಸಿದವರು ವೆಂಕಟಕೃಷ್ಣಾರ್ಯ ಎಂದು ತಿಳಿಸಿದೆ. ಒಟ್ಟಿನಲ್ಲಿ ಈ ಗ್ರಂಥ ಅತ್ಯಂತ ವಿದ್ವತ್ಪೂರ್ಣವೂ ಬಹಳ ಉಪಯುಕ್ತವೂ ಆಗಿದೆ. ಅವಶ್ಯವಾಗಿ ಪುನರ್ಮುದ್ರಣ ಕಾಣಬೇಕಾದ ಕೃತಿ. ಇತ್ತೀಚೆಗೆ ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟರು ಮೂಲಸಹಿತ ಸರಳವಾದ ಕನ್ನಡ ಅನುವಾದವನ್ನು ಪ್ರಕಟಿಸಿದ್ದಾರೆ (೧೯೬೫).

ಇವೆಲ್ಲವೂ ಅಮರಕೋಶದ ಸಂಪೂರ್ಣ ಅನುವಾದಗಳು. ಒಂದು ಕಾಂಡ, ಎರಡು ಕಾಂಡ ಹೀಗೆ ಅಸಂಪೂರ್ಣವಾದವು ಎಷ್ಟೋ ಇವೆ. ಗ್ರಂಥಾಗಾರಗಳಲ್ಲಿ ಮತ್ತು ಹಸ್ತಪ್ರತಿಗಳಲ್ಲಿ ಸಂಪೂರ್ಣವಾದವೂ ಅನೇಕ ಇರಬಹುದು. ಕನ್ನಡ ನಾಡಿನಲ್ಲಿ ಅಮರಸಿಂಹನ ಕೃತಿ ವಿದ್ವಜ್ಜನಪ್ರಿಯ ಮಾತ್ರ ಆಗಿರದೆ ಜನಸಾಮಾನ್ಯರ ಮಾನ್ಯತೆಯನ್ನೂ ಪಡೆದಿರುವಂತೆ ಕಾಣುತ್ತದೆ. ಇದಕ್ಕೆ ಪ್ರಮಾಣ ಕಿಟ್ಟೆಲರ ಕನ್ನಡ ನಿಘಂಟಿನ ಮೊದಲನೆ ಅಕ್ಷರದ ಕೆಳಗೆ ಉಲ್ಲೇಖಿಸಿರುವ ಈ ಗಾದೆ :

ಅ ಆ ಬಾರದಿದ್ದರೆ ಅಮರವಾದರೂ ಹೇಳು ! ಎಂಬನ್ತೆ.

೬

ಪ್ರಕೃತ ಗ್ರಂಥ ಲೂಯಿ ರೈಸ್‌ರವರು ಸಂಪಾದಿಸಿದ ಅಮರಕೋಶದ ನಾಲ್ಕನೆ ಆವೃತ್ತಿ (೧೯೩೭)ಯ ಪರಿಷ್ಕೃತ ಪುನರ್ಮುದ್ರಣ. ರೈಸ್‌ರ ಗ್ರಂಥದ ಮುಖ್ಯ ಪ್ರಯೋಜನ ಅದರಲ್ಲಿ ಕನ್ನಡದ ಅರ್ಥದ ಜೊತೆಗೆ ಇಂಗ್ಲಿಷ್ ಅರ್ಥವನ್ನೂ ಕೊಟ್ಟಿರುವುದು. ಪದಸೂಚಿ ಪದದ ಪೂರ್ಣರೂಪವನ್ನು ತಿಳಿಸುತ್ತದೆ. ಯಾವ ಪಾಠವನ್ನು ಅನುಸರಿಸಿದ್ದರೆಂದು ರೈಸ್‌ರು ಸೂಚಿಸಿಲ್ಲದಿದ್ದರೂ ಗುರುಬಾಲಪ್ರಭೋಧಿಕೆಯನ್ನು ಅನುಸರಿಸಿದ್ದಂತೆ ಕಾಣುತ್ತದೆ. ೧೯೩೭ರ ಹೊತ್ತಿಗೆ ಅದು ನಾಲ್ಕು ಮುದ್ರಣಗಳನ್ನು

ಕಂಡದ್ದು ಅದರ ಉಪಯುಕ್ತತೆಗೆ ಸಾಕ್ಷಿಯಾಗಿದೆ. ಸದ್ಯದ ಮುದ್ರಣದಲ್ಲಿ ಕೆಲವು ಪರಿಷ್ಕರಣಗಳನ್ನು ಮಾಡಿದೆ. ಅವುಗಳಲ್ಲಿ ಮೊದಲನೆಯದು ಆವರಣ ಚಿಹ್ನೆಗಳಿಗೆ ಸಂಬಂಧಿಸಿದ್ದು. ಲಿಂಗ ನಿರ್ದೇಶಕ್ಕಾಗಿ, ಪರ್ಯಾಯ ವಿಭಾಗಕ್ಕಾಗಿ, ಹಾಗೂ ಪಾದ ಪೂರಣಕ್ಕಾಗಿ ಬಳಸಿರುವ ಶಬ್ದಗಳನ್ನು ಇತರ ಶಬ್ದಗಳಿಂದ ಬೇರ್ಪಡಿಸಲು ಆವರಣ ಚಿಹ್ನೆಗಳನ್ನು ಬಳಸಿರುವುದಾಗಿ ರೈಸ್‌ರು ಪೀಠಿಕೆಯಲ್ಲಿ ಹೇಳಿದ್ದರೂ ಎಷ್ಟೋ ಕಡೆ ಗಳಲ್ಲಿ ಹಾಗೆ ಮಾಡಿರಲಿಲ್ಲ. ಈ ಸಂಸ್ಕರಣದಲ್ಲಿ ಅದನ್ನು ಮಾಡಿದೆ. ಎರಡನೆಯ ದಾಗಿ, ಅನುವಾದದಲ್ಲಿ ಸಂಭವಿಸಿದ್ದ ತಪ್ಪುಗಳನ್ನು ತಿದ್ದಲಾಗಿದೆ. ಅವನ್ನು ತಿದ್ದು ಪಡಿಯಲ್ಲಿ ನಮೂದಿಸಿದೆ. ಕೊನೆಯದಾಗಿ, ರೈಸ್‌ರ ಗ್ರಂಥದ ಪದಸೂಚಿ ಅನೇಕ ದೋಷಗಳಿಂದ ಕೂಡಿತ್ತು. ಕ್ರಮದಲ್ಲಿ ಬಹಳ ಅವ್ಯವಸ್ಥೆ ಇದ್ದಿತು. ಅನೇಕ ಪದಗಳ ಉಲ್ಲೇಖವಾಗಿರಲಿಲ್ಲ. ಉಲ್ಲೇಖವಾಗಿದ್ದವುಗಳದೂ ಎಲ್ಲ ಉಲ್ಲೇಖಗಳನ್ನೂ ಸೂಚಿ ಸಿರಲಿಲ್ಲ. ಆದ್ದರಿಂದ, ಈ ಮುದ್ರಣದಲ್ಲಿ ಪದಸೂಚಿಯನ್ನು ಪೂರ್ತಿ ಹೊಸದಾಗಿ ರಚಿಸಿದೆ. ರೈಸ್‌ರ ಆವೃತ್ತಿಯಲ್ಲಿ ಬಿಟ್ಟುಹೋಗಿದ್ದ ೨೬೦ ಪದಗಳನ್ನು ಮತ್ತು ೩೫೦ ಪದೋಲ್ಲೇಖಗಳನ್ನು ಸೇರಿಸಿದೆ.

* * * *

ಈ ಪರಿಷ್ಕರಣ ಕಾರ್ಯವನ್ನು ನನಗೆ ವಹಿಸಿದ ಮೈಸೂರು ವಿಶ್ವವಿದ್ಯಾ ನಿಲಯದ ಪ್ರಸಾರಾಂಗದ ಡೈರಕ್ಟರವರಿಗೆ ಮತ್ತು ಕೋಶದ ಸಂಬಂಧದಲ್ಲಿ ಕೆಲವು ಮಾಹಿತಿಗಳನ್ನು ಒದಗಿಸಿದ ಮಾನ್ಯ ಸ್ನೇಹಿತರು ಶ್ರೀ ಆರ್.ಎಲ್. ಅನಂತರಾಮಯ್ಯ, ಎಸ್. ಶಿವಣ್ಣ, ಸಾಂಬಮೂರ್ತಿ, ಹಾಗೂ ರಾಮಚಂದ್ರಶಾಸ್ತ್ರಿ ಇವರಿಗೆ ನಾನು ಕೃತಜ್ಞನಾಗಿದ್ದೇನೆ. ಕಾರಣಾಂತರಗಳಿಂದ ನಾನು ಮಾಡಬೇಕಾಗಿ ಬಂದ ವಿಳಂಬ ದಿಂದ ಕಷ್ಟನಷ್ಟಗಳಿಗೊಳಗಾದರೂ ಅವನ್ನೆಲ್ಲಾ ಶಾಂತರೀತಿಯಿಂದ ಸಹಿಸಿ ಗ್ರಂಥ ವನ್ನು ಅಚ್ಚುಕಟ್ಟಾಗಿ ಮುದ್ರಿಸಿರುವ ವಿದ್ಯಾ ಪ್ರಿಂಟರಿಯ ಶ್ರೀ ಶಿವರಾಮ್ ಅವರಿಗೆ ನಾನು ಋಣಿಯಾಗಿದ್ದೇನೆ ಎನ್ನುವುದು ಔಪಚಾರಿಕವೇನಲ್ಲ ಎಂದು ತಿಳಿಸ ಬಯಸುತ್ತೇನೆ.

ನವ ದೆಹಲಿ — ಎನ್. ಬಾಲಸುಬ್ರಹ್ಮಣ್ಯ

# ಪೀಠಿಕೆ

ಶ್ರೀಮದಾಂಧ್ರ ಕರ್ಣಾಟಕಾದಿ ಭಾಷಾ ಮಾತೃಭೂತವಾದ ಸಂಸ್ಕೃತ ಭಾಷಾ ಭ್ಯಾಸಿಗಳಿಗೂ, ದೇಶಭಾಷಾಭ್ಯಾಸಿಗಳಿಗೂ ಸಹ ಅತ್ಯಂತ ಸಾಧಕವಾದ ನಾಮ ಲಿಂಗಾನುಶಾಸನವೆಂಬ ಅಮರಕೋಶವು ಸಂಪೂರ್ಣವಾದ ನಿಘಂಟು ಎಂದು ಸರ್ವ ಜನಾಂಗೀಕೃತವಾಗಿ ವ್ಯಾಖ್ಯಾನ ಸಹಿತವಾಗಿಯೂ ಪ್ರತಿ ಪದ ಟೀಕಾ ಸಹಿತ ವಾಗಿಯೂ ಅಥವಾ ಮೂಲಗ್ರಂಥ ಮಾತ್ರವೂ ಮುದ್ರಾಪಿಸಲ್ಪಟ್ಟು ಬಹು ಪ್ರಚುರ ವಾಗಿರುವುದು ಸರಿಯಷ್ಟೆ.

ಅವುಗಳು ಕೇವಲ ಸಂಸ್ಕೃತ ವಿದ್ಯಾರ್ಥಿಗಳಿಗೆ ಮಾತ್ರ ಉಪಯೋಗವಾಗಿರು ವುದರಿಂದಲೂ ಶ್ಲೋಕಸ್ಥವಾದ ಸಮಾನಾರ್ಥಕ ಪದಗಳನ್ನೆಲ್ಲಾ ಟೀಕೆಯಲ್ಲಿ ಪುನಃ ಉದಹರಿಸಿ ಗ್ರಂಥವನ್ನು ವಿಸ್ತರಿಸಿರುವುದರಿಂದಲೂ, ಮೈಸೂರು ಸೀಮೆಯ ರಾಜಕೀಯ ಕರ್ಣಾಟಕ ಪಾಠಶಾಲೆಗಳಿಗಾಗಿ ಸುಲಭ ಮೌಲ್ಯಕ್ಕೆ ಕಾಲ ಕಾಲಕ್ಕೂ ಸಾಕಾದಷ್ಟು ಪ್ರತಿಗಳು ದೊರೆಯದೇ ಇದ್ದದ್ದರಿಂದಲೂ ಸಹ ಇದನ್ನು ರಾಜಕೀಯ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಾಪಿಸಬೇಕೆಂದು ಸಂಕಲ್ಪಿಸಲಾಯಿತು.

ಇಂಥಾ ಸಂಕಲ್ಪವು ಸಿದ್ಧಿಸುವುದಕ್ಕಾಗಿ ಗ್ರಂಥ ವಿಸ್ತರವಾಗದಂತೆ ಮೂಲಸ್ಥ ಪದಗಳಿಗೆ ಕನ್ನಡ, ಇಂಗ್ಲಿಷ್, ಈ ಎರಡು ಭಾಷೆಗಳಲ್ಲಿಯೂ ಅರ್ಥವಿರುವ ಹಾಗೆ ಮಾಡಲುದ್ಯಮಿಸಿ ಸಂಧಿ ವಿವೇಚನೆ, ಮೂಲಸ್ಥ ನಾಮ ಸಂಖ್ಯೆ, ಮೂಲಕಾರರ ಲಿಂಗಾದಿ ನಿರ್ಣಯ ಮುಂತಾದುವುಗಳು ತಿಳಿಯುವಂತೆ ತಕ್ಕ ಸಂಕೇತಗಳನ್ನು ಕಲ್ಪಿಸಿ ಬರೆಯಲ್ಪಟ್ಟವೆ.

ಹೀಗೆ ಕಲ್ಪಿತವಾದ ಸಂಕೇತಗಳು ಪಂಡಿತ ಪಾಮರ ಜನವೇದ್ಯವಾಗಿ ವಾಚಕ ಜನಕ್ಕೆ ಸೌಲಭ್ಯವಾಗುವುದಕ್ಕಾಗಿ ಈ ಪುಸ್ತಕದಲ್ಲಿರುವ ಸಂಕೇತ ವಿಧಿ, ಮುದ್ರಾಪಣ ಕ್ರಮ, ಇವುಗಳನ್ನು ವಿಶದವಾಗಿ ಬರೆದು ಮುದ್ರಾಪನಕ್ರಮ ಸೂಚಿಕೆ ಎಂಬ ಹೆಸರ ನ್ನಿಟ್ಟು ಗ್ರಂಥಾರಂಭದಲ್ಲಿಯೇ ಸೇರಿಸಿ ಇದೆ.

ಇದನ್ನು ಮಾಡುವಾಗ ಗುರುಬಾಲ ಪ್ರಬೋಧಿಕೆ, ನಾಮಲಿಂಗಾರ್ಥ ಚಂದ್ರಿಕೆ, ಆಂಧ್ರ ಟೀಕಾಮರ, ಪ್ರಾಚೀನ ಮೂಲ ಗ್ರಂಥಗಳು, ಸಿದ್ಧಾಂತ ಕೌಮುದಿ, ಮುಂತಾದ ಇತರ ಪುಸ್ತಕಗಳ ಸಹಾಯವನ್ನು ಪಡೆದು ತಿಳಿದಮಟ್ಟಿಗೆ ಪರಿಶೋಧಿಸಲಾಗಿದೆ.

ಇನ್ನೂ ಬುದ್ಧಿ ಪ್ರಮಾದ ಜನಿತ ದೋಷಗಳು ಕಂಡು ಬಂದರೆ ಅವುಗಳನ್ನೆಲ್ಲಾ ವಿಚಾರಿಸಿ ಅಧಿಕ ಪಾಠ ಶ್ಲೋಕಗಳ ವಿಷಯವಾಗಿಯೂ, ಪಾಠದ್ವಯ ವಿಷಯ ವಾಗಿಯೂ ಅರ್ಥವಿಚಾರವಾಗಿಯೂ ಸಹ ಚೆನ್ನಾಗಿ ಪರಿಶೀಲನೆ ಮಾಡಿ ಸಾಧ್ಯವಾದಲ್ಲಿ ಅವುಗಳನ್ನೆಲ್ಲಾ ಮುಂದಿನ ಮುದ್ರಾಪಣೆಯಲ್ಲಿ ಸಮಾಕರಿಸಬಹುದೆಂಬುದು ಮುಖ್ಯೋದ್ದೇಶವಾಗಿದೆ.

[— ರೈಸ್]

# ಮುದ್ರಾಪಣ ಕ್ರಮಸೂಚಿಕೆ

ಈ ಪುಸ್ತಕವನ್ನು ಅಚ್ಚುಹಾಕುವುದರಲ್ಲಿ ಮಾಡಿರುವ ಸಂಕೇತಗಳನ್ನೂ ವಿಧಿಗಳನ್ನೂ ತಿಳಿಸುವ ಅಂಶಗಳನ್ನೆಲ್ಲಾ ಓದಿ ಜ್ಞಾಪಕದಲ್ಲಿಟ್ಟುಕೊಂಡರೆ ಈ ಪುಸ್ತಕವನ್ನು ಸುಲಭವಾಗಿ ಓದಬಹುದು.

ಪ್ರತಿ ಪುಟದಲ್ಲಿಯೂ ಪ್ರಥಮತಃ ಮೂಲ ಶ್ಲೋಕಗಳೂ ಆಮೇಲೆ ಒಂದು ಅಡ್ಡಗೆರೆಯೂ ಅದರ ಕೆಳಗೆ ಇಂಗ್ಲಿಷ್ ಭಾಷೆಯಲ್ಲಿ ಅರ್ಥವೂ ಅದರ ಕೆಳಗೆ ಕನ್ನಡದಲ್ಲಿ ಅರ್ಥವೂ ಬರುವಂತೆ ಮಾಡಿ ಒಂದೊಂದು ಪಂಕ್ತಿಗೆ ಅರ್ಥಶ್ಲೋಕ ಮುಗಿದು ಶ್ಲೋಕಸಂಖ್ಯೆಯೆಲ್ಲಾ ಬಲಗಡೆಯೇ ಕ್ರಮವಾಗಿ ಬರುವಂತೆ ಮಾಡಿದೆ.

ಟೀಕೆಯಲ್ಲಿ ಮೂಲಸ್ಥ ಪದಗಳನ್ನೆಲ್ಲಾ ಬರೆಯುವುದಕ್ಕೆ ಬದಲಾಗಿ ದೇವತೆ ಅಥವಾ ಮನುಷ್ಯ ಅಥವಾ ವಸ್ತುವಾಚಕವಾದ ಪರ್ಯಾಯ ಪದಗಳೆಷ್ಟು ಇವೆಯೋ ಅಷ್ಟಕ್ಕೆ ಆ ಸಂಖ್ಯೆಯನ್ನು ಬರೆದು ಆ ಅರ್ಥವನ್ನು ಬರೆದಿದೆ. ಈ ವಿಷಯದಲ್ಲಿ ಮೂಲದೊಳಗೆ ಇಲ್ಲಿಯ ಪರ್ಯಂತರ ಇರುವ ಪದಗಳೆಲ್ಲಾ ಈ ಪರ್ಯಾಯಾರ್ಥಗಳೆಂದು ತಿಳಿಯುವುದಕ್ಕಾಗಿ ಮೂಲಸ್ಥ ಶ್ಲೋಕದ ಮಧ್ಯಾಂತ್ಯಗಳಲ್ಲಿ ಎಲ್ಲಿ ಆಯಾ ಪರ್ಯಾಯ ಪದಗಳು ಮುಗಿದಿವೆಯೋ ಅಲ್ಲಿ ಇಂಗ್ಲಿಷ್ ಅಕ್ಷರಗಳನ್ನು ಪರಿಮಿತಿ ಸೂಚಕವಾಗಿ ಹಾಕಿದೆ. ಉದಾಹರಣೆ ॥ ಸ್ವರವ್ಯಯಂ ಸ್ವರ್ಗನಾಕ ತ್ರಿದಿವತ್ರಿದಶಾಲಯಾಃ। ಸುರಲೋಕೋ ದ್ಯೌದಿವೌದ್ವೇ ಸ್ತ್ರಿಯಾಂಕ್ಲೀಬೇ ತ್ರಿವಿಷ್ಟಪಂ। *a* ೫ನೆಯ ಪುಟ ೬ನೆಯ ಶ್ಲೋಕವನ್ನು ನೋಡು. ಇದರಲ್ಲಿ *a* ಈ ಅಕ್ಷರವನ್ನು ಹಾಕಿರುವ ವರೆಗೂ ಇರುವ ಪದಗಳೆಲ್ಲಾ ಸ್ವರ್ಗಾರ್ಥಕಗಳಾದ್ದರಿಂದ ಕನ್ನಡದಲ್ಲಿ *a* ಈ ಗುರ್ತನ್ನು ಹಾಕಿ ಸ್ವರ್ಗಲೋಕ ೯ ಎಂದು ಬರೆದಿವೆ. ಹೀಗೆಯೇ ಶ್ಲೋಕದ ಮಧ್ಯದಲ್ಲಿ ಬರುವುದನ್ನೂ ಊಹಿಸಬೇಕು.

ಪರ್ಯಾಯಪದಗಳಲ್ಲದೇ ಮೂಲಕಾರರ ಲಿಂಗನಿರ್ಣಯಾದಿ ಸಂಕೇತ ಪದಗಳು ಶ್ಲೋಕದಲ್ಲಿದ್ದರೆ ಅವನ್ನು ಲೆಕ್ಕಮಾಡುವ ಭ್ರಮನಿವಾರಕ್ಕಾಗಿ ಅಂಥವುಗಳನ್ನು ಆವರಣ ಚಿಹ್ನೆಯೊಳಗೆ ಸೇರಿಸಿದೆ; ಉದಾಹರಣೆ: ೫ನೆಯ ಪುಟ ೯-೧೦ನೆಯ ಶ್ಲೋಕಗಳಲ್ಲಿ, ಬೃಂದಾರಕಾ ದೈವತಾನಿ (ಪುಂಸಿವಾ) (ದೇವತಾಸ್ಸ್ತ್ರಿಯಾಂ) ಮಹಾರಾಜಿಕ ಸಾಧ್ಯಾಶ್ಚ ರುದ್ರಾಶ್ಚ (ಗಣದೇವತಾಃ) । ಎಂಬುದರಲ್ಲಿ (ಪುಂಸಿವಾ) (ಸ್ತ್ರಿಯಾಂ) (ಗಣದೇವತಾಃ) ಎಂಬುವು ಆವರಣಚಿಹ್ನೆಯಲ್ಲಿರುವುದರಿಂದ ಪರ್ಯಾಯ ಪದಗಳ ಸಂಖ್ಯೆಗೆ ಸೇರಿದುವಲ್ಲವೆಂತಲೂ, ಮೂಲಕಾರರ ಲಿಂಗನಿರ್ಣಯಾದಿ ಸಂಕೇತ ಪದಗಳೆಂತಲೂ ಊಹಿಸಬೇಕು. ಇಲ್ಲಿಂದ ಇಲ್ಲಿಗೆ ಇಷ್ಟು ಪದಗಳೆಂದು ತಿಳಿಯುವುದಕ್ಕಾಗಿ ಪದಗಳನ್ನೆಲ್ಲಾ ಸಾಧ್ಯವಾದಮಟ್ಟಿಗೂ ವಿಂಗಡಿಸಿ ಹಾಕಿದೆ.

ಸಂಧಿಗಳನ್ನು ತಿಳಿಯಬೇಕಾದರೆ ಸಂಸ್ಕೃತ ಸ್ವರಸಂಧಿ ಮತ್ತು ವ್ಯಂಜನಸಂಧಿ ಇವುಗಳ ವಿಷಯವಾದ ಸೂತ್ರಗಳನ್ನು ತಿಳಿದಿರಬೇಕಾದ್ದರಿಂದ ಸಂಕ್ಷೇಪವಾಗಿ ಅವುಗಳ ನಿಯಮಗಳನ್ನು ಇಲ್ಲಿ ಬರೆದಿದೆ. ಇದನ್ನು ಓದುವುದಕ್ಕೆ ಮೊದಲು ವಾಗ್ವಿಧಾಯಿನಿ ಯಲ್ಲಿನ ಸೂತ್ರಗಳನ್ನು ತಿಳಿದುಕೊಂಡಿದ್ದರೆ ಇದಕ್ಕೆ ಸಹಾಯವಾಗಿರುವುದು.

## ಸಂಸ್ಕೃತ ಸ್ವರಸಂಧಿ

೧. ಏ, ಓ, ಐ, ಔಗಳನ್ನು ಬಿಟ್ಟು ಉಳಿದ ಸ್ವರಗಳಿಗೆ ಸವರ್ಣಸ್ವರಗಳು ಪರವಾದರೆ ಪೂರ್ವಾಪರಸ್ಥಾನದಲ್ಲಿ ಒಂದೇ ದೀರ್ಘಸ್ವರವು ಆದೇಶವಾಗುತ್ತದೆ. ಉದಾಹರಣೆ. ೭ನೆಯ ಪುಟ ೧೭ನೆಯ ಶ್ಲೋಕದಲ್ಲಿ — ಧಾತಾ + ಅಬ್ಜಯೋನಿಃ = ಧಾತಾಬ್ಜಯೋನಿಃ

೨. ಅ ಆ ಕಾರಗಳಿಗೆ ಇ ಈ ಕಾರಗಳು ಪರವಾದರೆ ಪೂರ್ವಾಪರ ಸ್ಥಾನಗಳಲ್ಲಿ ಒಂದೇ ಏಕಾರವೂ, ಉ ಊ ಕಾರಗಳು ಪರವಾದರೆ ಒಂದೇ ಓಕಾರವೂ, ಋ ೠ ಕಾರಗಳು ಪರವಾದರೆ ಒಂದೇ ಅರ್ ಕಾರವೂ, ಆದೇಶವಾಗುವುವು ; ಉದಾ : ೩೨ನೆಯ ಪುಟ ೨೩ನೆಯ ಶ್ಲೋಕ. ಸ್ಪೃಹಾ + ಈಹಾ = ಸ್ಪೃಹೇಹಾ. ೧೯ನೆಯ ಪುಟ ೧೪೧ನೆಯ ಶ್ಲೋಕ. ಬಾಹುಲ + ಊರ್ಜೌ = ಬಾಹುಲೋರ್ಜೌ. ೨೮ನೆಯ ಪುಟ ೨೦೧ನೆಯ ಶ್ಲೋಕ — ನಿಷಾದ + ಋಷಭ = ನಿಷಾದರ್ಷಭ ಇತ್ಯಾದಿಗಳು.

೩. ಅ ಆ ಕಾರಗಳಿಗೆ ಏ ಐಕಾರಗಳು ಪರವಾದರೆ ಪೂರ್ವಾಪರ ಸ್ಥಾನಗಳಲ್ಲಿ ಒಂದೇ ಐಕಾರವೂ ಓ ಔ ಕಾರಗಳು ಪರವಾದರೆ ಒಂದೇ ಔಕಾರವೂ ಆದೇಶವಾಗುವುವು ; ಉದಾ : ೧೧ನೇ ಪುಟ ೭೮ನೇ ಶ್ಲೋಕ. ಯಕ್ಷ + ಏಕಪಿಂಗ + ಐಬಿಬಿಲ = ಯಕ್ಷೈಕಪಿಂಗೈಲಬಿಲ. ಇತ್ಯಾದಿಗಳು.

೪. ಇ ಉ ಋ ಕಾರಗಳು ಹ್ರಸ್ವ ಅಥವಾ ದೀರ್ಘವಾಗಿದ್ದು ಇವುಗಳಿಗೆ ಅಸವರ್ಣ ಸ್ವರಪರವಾದರೆ ಇಕಾರಕ್ಕೆ ಯಕಾರವೂ, ಉಕಾರಕ್ಕೆ ವಕಾರವೂ, ಋಕಾರಕ್ಕೆ ರೇಫವೂ ಆದೇಶವಾಗುತ್ತವೆ : ಉದಾಹರಣೆ : ೧೨ನೇ ಪುಟ ೮೫ನೇ ಶ್ಲೋಕ ಪ್ರಾಚೀ + ಅವಾಚೀ = ಪ್ರಾಚ್ಯವಾಚೀ ೧೮ನೇ ಪುಟ ೧೩೧ನೇ ಶ್ಲೋಕ. ಅಮಾವಾಸ್ಯಾತು + ಅಮಾವಾಸ್ಯಾ = ಅಮಾವಾಸ್ಯಾತ್ವಮಾವಾಸ್ಯಾ ಇತ್ಯಾದಿಗಳು.

## ವ್ಯಂಜನ ಸಂಧಿ

೧. ಪರುಷಾಕ್ಷರಗಳಾಗಲಿ, ಸರಳಾಕ್ಷರಗಳಾಗಲಿ ಪೂರ್ವಪದಾಂತ್ಯದಲ್ಲಿಯೂ ಪರಪದಾರಂಭದಲ್ಲಿಯೂ ಬಂದರೆ ಸಂಧಿಯಲ್ಲಿ ಏನೂ ಭೇದವಾಗುವುದಿಲ್ಲ. ಉದಾ: ೨೮ನೇ ಪುಟ ೧೪೮ನೇ ಶ್ಲೋಕ ಮುತ್ + ಪ್ರೀತಿಃ = ಮುತ್ಪ್ರೀತಿಃ.

೨. ಪೂರ್ವಪದಾಂತ್ಯದ ಪರುಷಾಕ್ಷರಕ್ಕೆ ಸರಳಾಕ್ಷರ ಪರವಾದರೆ, ಆ ಪರುಷಾಕ್ಷರಕ್ಕೆ ಅದರ ಸರಳ ಅಲ್ಪಪ್ರಾಣವಾದೇಶವಾಗುವದು ; ಉದಾ: ೨೪ನೇ ಪುಟ ೧೬೩ನೇ ಶ್ಲೋಕ. ವಾಕ್+ವಾಣಿ=ವಾಗ್ವಾಣಿ. ೬ನೇ ಪುಟ ೧೭ನೇ ಶ್ಲೋಕ. ವಿಶ್ವಸೃಟ್+ವಿಧಿಃ=ವಿಶ್ವಸೃಡ್ವಿಧಿಃ.

೩. ಪೂರ್ವಪದಾಂತ್ಯದ ವರ್ಗೀಯಾಕ್ಷರಕ್ಕೆ ಯಾವ ಅನುನಾಸಿಕವು ಪರವಾದಾಗ್ಯೂ ಆಯಾ ವರ್ಗದ ಅನುನಾಸಿಕವೇ ವರ್ಗೀಯಾಕ್ಷರಕ್ಕೆ ಆದೇಶವಾಗುವುದು ; ಉದಾ: ೯ನೇ ಪುಟ. ೫೧ನೇ ಶ್ಲೋಕ. ಸ್ವಾರಾಟ್+ಣಮುಚಿಸೂದನಃ= ಸ್ವಾರಾಣ್ಣಮುಚಿಸೂದನಃ ಮತ್ತು ೫೧ನೇ ಶ್ಲೋಕ ತುರಾಷಾಟ್+ಮೇಘ ವಾಹನಃ=ತುರಾಷಾಣ್ಮೇಘವಾಹನಃ. ೨೧ನೇ ಪುಟ. ೧೫೫ನೇ ಶ್ಲೋಕ: ಹೃತ್+ಮಾನಸಂ=ಹೃನ್ಮಾನಸಂ ಇತ್ಯಾದಿಗಳು. ಈ ಸೂತ್ರವು ಶ ಷ ಸ ಕಾರಗಳಿಗಲ್ಲ.

೪. ಪೂರ್ವ ಪದಾಂತ್ಯದಲ್ಲಿರುವ ತ ಕಾರವು ಚ, ಜ, ಲಕಾರಗಳು ಮುಂದೆ ಇದ್ದರೆ ಆಯಾ ಅಕ್ಷರಗಳಾಗುತ್ತದೆ ; ಉದಾ: ೧೩ನೇ ಪುಟ ೯೪ನೇ ಶ್ಲೋಕ. ವಿದ್ಯುತ್+ಚಂಚಲಾ=ವಿದ್ಯುಚ್ಚಂಚಲಾ. ೧೦ನೇ ಪುಟ ೭೧ನೇ ಶ್ಲೋಕ. ಮರುತ್+ಜಗತ್ಪ್ರಾಣ=ಮರುಜ್ಜಗತ್ಪ್ರಾಣ. ೫ನೇ ಪುಟ ೧೩ನೇ ಶ್ಲೋಕ. ಮಾರಜಿತ್+ಲೋಕಜಿತ್=ಮಾರಜಿಲ್ಲೋಕಜಿತ್. ಹೀಗೆಯೇ ಛ, ಝ, ಟ, ಡ ಕಾರಗಳು ಮುಂದೆ ಬಂದರೂ ಆಗುತ್ತವೆಂದು ತಿಳಿಯತಕ್ಕದ್ದು.

೫. ಸವರ್ಣದ ಮುಂದೆ ತಕಾರ ದಕಾರಗಳು ಚಕಾರವಾಗಿಯೂ ಪರಪದ ದಶವರ್ಣವು ಛಕಾರವಾಗಿಯೂ ಪರಿಣಾಮವಾಗುತ್ತವೆ. ಉದಾ: ೬೪ನೇ ಪುಟ ೧೫೪ನೇ ಶ್ಲೋಕ. ಶಾಲೇಯಸ್ಸ್ಯಾತ್+ಶೀತಶಿವಾ=ಶಾಲೇಯಸ್ಸ್ಯಾಚ್ಛೀತ ಶಿವಾ.

೬. ಹ ಕಾರವನ್ನು ಮುಂದೆ ಹೊಂದಿರುವ ತ ಕಾರವು ದ ಕಾರವಾಗಿಯೂ ಆ ಹಕಾರವು ಧಕಾರವಾಗಿಯೂ ಪರಿಣಮಿಸುತ್ತವೆ.
ಹೀಗೆಯೇ ಹಕಾರವನ್ನು ಮುಂದೆ ಹೊಂದಿರುವ ಕಕಾರವು ಗಕಾರವಾಗಿಯೂ ಆ ಹಕಾರವು ಘಕಾರವಾಗಿಯೂ ಪರಿಣಮಿಸುತ್ತವೆ.
ಹೀಗೆಯೇ ಹಕಾರವನ್ನು ಮುಂದೆ ಹೊಂದಿರುವ ಟಕಾರವು ಡ ಕಾರವಾಗಿಯೂ ಆ ಹಕಾರವು ಢಕಾರವಾಗಿಯೂ ಆಗುತ್ತವೆ.

೭. ಸ್ವಲ್ಪ ಹೆಚ್ಚು ಕಡಿಮೆಯಾಗಿ ಎಲ್ಲಾ ಪ್ರಥಮಾ ವಿಭಕ್ತಿಗಳೂ ನಾಮವಾಚಕ ಗಳೂ ಸಂಸ್ಕೃತದಲ್ಲಿ ವಿಸರ್ಗದಿಂದ ಅಂತ್ಯವಾಗಿ ಸಂಧಿಯಲ್ಲಿ ಬಹು ಭೇದವಾಗಿ ಕಾಣಬರುವುದರಿಂದಲೂ ಪ್ರಾಯಶಃ ಈ ನಿಘಂಟಿನಲ್ಲಿ ಪ್ರಥಮಾ ವಿಭಕ್ತಿಗಳ ಪ್ರಯೋಗವೇ ಮುಖ್ಯವಾಗಿರುವುದರಿಂದಲೂ ಈ ಕೆಳಗೆ ಬರೆದಿರುವ ವಿಸರ್ಗ ಸಂಧಿ ಸೂತ್ರವನ್ನು ಚೆನ್ನಾಗಿ ತಿಳಿದರೆ ಈ ಪುಸ್ತಕದ ಮುಕ್ಕಾಲು ಪಾಲು ಕ್ರಮ ವೆಲ್ಲಾ ಸುಲಭವೇ ಆಗುವುವೆಂದು ಇವುಗಳನ್ನು ಬರೆದಿದೆ.

೮. ವಿಸರ್ಗಕ್ಕೆ ತವರ್ಗದ ಪರುಷಾಕ್ಷರಗಳು ಪರವಾದರೆ ಸಕಾರಾದೇಶವೂ ಚವರ್ಗದ ಪರುಷಾಕ್ಷರಗಳು ಪರವಾದರೆ ಶಕಾರಾದೇಶವೂ ಟವರ್ಗದ ಪರುಷಾಕ್ಷರಗಳು ಪರವಾದರೆ ಷಕಾರಾದೇಶವೂ ಟವರ್ಗದ ಪರುಷಾಕ್ಷರಗಳು ಪರವಾದರೆ ಷಕಾರಾದೇಶವೂ ಬರುತ್ತವೆ. ಉದಾ : ೫ನೇ ಪುಟ ೭ನೇ ಶ್ಲೋಕ ದೇವಾಃ + ತ್ರಿದಶಾಃ = ದೇವಾಸ್ತ್ರಿದಶಾಃ. ೬ನೇ ಪುಟ. ೧೬ನೇ ಶ್ಲೋಕ. ಸ್ವಯಂಭೂಃ + ಚತುರಾನನಃ = ಸ್ವಯಂಭೂಶ್ಚತುರಾನನಃ. ೧೪ನೇ ಪುಟ. ೧೦೩ನೇ ಶ್ಲೋಕ. ದ್ಯುತಿ + ಛವಿಃ = ದ್ಯುತಿಶ್ಛವಿಃ ||

೯. ವಿಸರ್ಗಕ್ಕೆ ಕವರ್ಗ ಪವರ್ಗಗಳ ಕರ್ಕಶಾಕ್ಷರಗಳಾಗಲೀ ಶ, ಷ, ಸ ವರ್ಣಗಳಾಗಲಿ ಪರವಾದರೆ ಆ ವಿಸರ್ಗವು ಬದಲಾಯಿಸದೇ ವಿಸರ್ಗವಾಗಿಯೇ ಇರುತ್ತದೆ. ಆದರೆ ಶ, ಷ, ಸ, ವರ್ಣಗಳು ಪರವಾದಾಗ ವಿಸರ್ಗಕ್ಕೆ ಬದಲಾಗಿ ಈ ವರ್ಣಗಳಿಗೆ ದ್ವಿತ್ವಾದೇಶ ಬರುವುದೂ, ಕವರ್ಗ ಪವರ್ಗಗಳ ಕರ್ಕಶಾಕ್ಷರಗಳು ಪರವಾದಾಗ ವಿಸರ್ಗಕ್ಕೆ ಕ್ರಮವಾಗಿ ≍ ≍ ಆದೇಶವನ್ನು ಮಾಡುವುದೂ ಉಂಟು. ವಾಕ್ಯಾಂತ್ಯದಲ್ಲಿರುವ ವಿಸರ್ಗವಾದರೋ ಬದಲಾಯಿಸದೇ ವಿಸರ್ಗವಾಗಿಯೇ ಇರುತ್ತದೆ. ಉದಾ ೬ನೇ ಪುಟ. ೧೭ನೇ ಶ್ಲೋಕ. ವಿರಂಚಿಃ + ಕಮಲಾಸನಃ = ವಿರಂಚಿಃಕಮಲಾಸನಃ || ೭ನೇ ಪುಟ. ೩೩ನೇ ಶ್ಲೋಕ. ವೈನತೇಯಃ + ಖಗೇಶ್ವರಃ = ವೈನತೇಯಃಖಗೇಶ್ವರಃ || ೬ನೇ ಪುಟ. ೨೬ನೇ ಶ್ಲೋಕ. ಕಾಮಃ + ಪಂಚಶರಃ = ಕಾಮಃಪಂಚಶರಃ || ೭ನೇ ಪುಟ. ೩೪ನೇ ಶ್ಲೋಕ. ಪಶುಪತಿಃ + ಶಿವಃ + ಶೂಲೀ = ಪಶುಪತಿಶ್ಶಿವಶ್ಶೂಲೀ || ೩೭ನೇ ಶ್ಲೋಕ. ಕೃಶಾನುರೇತಾಃ + ಸರ್ವಜ್ಞಃ = ಕೃಶಾನುರೇತಾಸ್ಸರ್ವಜ್ಞಃ ; ಈ ಎರಡು ಉದಾಹರಣೆಗಳಲ್ಲಿ ವಿಸರ್ಗಕ್ಕೆ ಬದಲಾಗಿ ಶ ಸ ವರ್ಣಗಳು ದ್ವಿತ್ವಾದೇಶವಾಗಿದೆ. ದ್ವಿತ್ವವಿಲ್ಲದೆ ಶಿವಃ ಶೂಲೀ ಎಂದು ವಿಸರ್ಗವನ್ನಾದರೂ ಬರೆಯಬಹುದು. ಆದರೆ ಇದು ರೂಢಿಯಾದ ಪದ್ಧತಿಯಾಗಿದೆ.

೧೦. ಹ್ರಸ್ವ ಅಕಾರದಮುಂದೆ ಇರುವ ವಿಸರ್ಗಕ್ಕೆ ಯಾವ ಮೃದು ವ್ಯಂಜನವಾಗಲೀ ಅಥವಾ ಹ್ರಸ್ವ ಅಕಾರವಾಗಲೀ ಪರವಾದರೆ ಆ ವಿಸರ್ಗಕ್ಕೆ ಉಕಾರಾದೇಶ ಬರುತ್ತದೆ. ಆ ಉಕಾರವು ಹಿಂದಿನ ಅಕಾರದೊಡನೆ ಗುಣಸಂಧಿಯಿಂದ ಓಕಾರವಾಗುತ್ತದೆ. ಮತ್ತು ಹ್ರಸ್ವ ಅಕಾರದ ಮುಂದಿನ ವಿಸರ್ಗಕ್ಕೆ ಅಕಾರ ಹೊರತು ಉಳಿದ ಸ್ವರ ಪರವಾದರೆ ಆ ವಿಸರ್ಗವು ಲೋಪವಾಗುತ್ತದೆ. ಪುನಃ ಸ್ವರ ಸಂಧಿಯಾಗುವುದಿಲ್ಲ. ಉದಾ : ೫ನೇ ಪುಟ ೧೪ನೇ ಶ್ಲೋಕ. ಷಡಭಿಜ್ಞಃ + ದಶಬಲಃ + ಅದ್ವಯವಾದೀ = ಷಡಭಿಜ್ಞೋ ದಶಬಲೋದ್ವಯವಾದೀ || ೧೩ನೇ ಶ್ಲೋ. ಸುಗತಃ + ಬುದ್ಧಃ + ಧರ್ಮರಾಜಃ = ಸುಗತೋ ಬುದ್ಧೋ ಧರ್ಮರಾಜಃ || ೬ನೇ ಪುಟ. ೧೬ನೇ ಶ್ಲೋಕ. ಹಿರಣ್ಯಗರ್ಭಃ +

ಲೋಕೇಶಃ=ಹಿರಣ್ಯಗರ್ಭೋಲೋಕೇಶಃ. ೬ನೇ ಪುಟ. ೨೦ನೇ ಶ್ಲೋ. ಪೀತಾಂಬರಃ+ಅಚ್ಯುತಃ=ಪೀತಾಂಬರೋಚ್ಯುತಃ ॥ ೭ನೇ ಪುಟ. ೯ನೇ ಶ್ಲೋ. ಅನಿರುದ್ಧಃ+ಉಷಾಪತಿಃ=ಅನಿರುದ್ಧ ಉಷಾಪತಿಃ ॥

೧೧. ಆಕಾರದ ಮುಂದಿನ ವಿಸರ್ಗಕ್ಕೆ ಯಾವ ಸ್ವರವೇ ಆಗಲೀ ಯಾವ ಮೃದು ವ್ಯಂಜನವೇ ಆಗಲೀ ಪರವಾದರೆ ವಿಸರ್ಗವು ಲೋಪವಾಗುತ್ತದೆ. ಉದಾ. ೫ನೇ ಪು. ೮ನೇ ಶ್ಲೋ. ಅಮರ್ತ್ಯಾಃ+ಅಮೃತಾಂಧಸಃ=ಅಮರ್ತ್ಯಾ ಅಮೃತಾಂಧಸಃ ॥ ೧೪ನೇ ಪು. ೧೦೫ನೇ ಶ್ಲೋ. ಧ್ರುವಃ+ಔತ್ತಾನಪಾದಿಃ=ಧ್ರುವ ಔತ್ತಾನಪಾದಿಃ ॥ ೧೫ನೇ ಪುಟ. ೧೧೦ನೇ ಶ್ಲೋ. ಜೀವಃ+ಆಂಗೀರಸಃ= ಜೀವ ಆಂಗೀರಸಃ. ೫ನೇ ಪು. ೭ನೇ ಶ್ಲೋ. ಅಮರಾಃ+ನಿರ್ಜರಾಃ+ ದೇವಾಃ=ಅಮರಾನಿರ್ಜರಾದೇವಾಃ ॥

೧೨. ಅ ಆ ಕಾರಗಳನ್ನು ಬಿಟ್ಟು ಉಳಿದ ಸ್ವರಗಳ ಮುಂದಿನ ವಿಸರ್ಗಕ್ಕೆ ಸ್ವರಗಳೇ ಆಗಲಿ, ಮೃದು ವ್ಯಂಜನಗಳೇ ಆಗಲಿ ಪರವಾದರೆ ಆ ವಿಸರ್ಗಕ್ಕೆ ರೇಫವು ಆದೇಶವಾಗುತ್ತದೆ. ಉದಾ: ೬ನೇ ಪುಟ. ೨೭ನೇ ಶ್ಲೋಕ. ಶಂಬರಾರಿಃ+ ಮನಸಿಜಃ=ಶಂಬರಾರಿರ್ಮನಸಿಜಃ ॥ ೯ನೇ ಶ್ಲೋಕ. ಬ್ರಹ್ಮಸೂಃ+ವಿಶ್ವಕೇತುಃ= ಬ್ರಹ್ಮಸೂರ್ವಿಶ್ವಕೇತುಃ. ೭ನೇ ಪುಟ. ೩೪ನೇ ಶ್ಲೋ. ಶಂಭುಃ+ ಈಶಃ=ಶಂಭುರೀಶಃ ॥ ೮ನೇ ಪುಟ. ೪೬ನೇ ಶ್ಲೋಕ. ಸೇನಾನೀಃ+ಅಗ್ನಿಭೂಃ+ಗುಹಃ=ಸೇನಾನೀರಗ್ನಿಭೂರ್ಗುಹಃ ॥

ಇದುವರೆಗೂ ಹೇಳಿದ ಸೂತ್ರಗಳು ಮುಖ್ಯವಾದುವುಗಳಾದ್ದರಿಂದ ವಿದ್ಯಾರ್ಥಿಗಳಿಗೆ ಮಾರ್ಗಪ್ರದರ್ಶಕವಾಗಿರುವಂತೆ ಬರೆಯಲ್ಪಟ್ಟವೆ. ಇನ್ನೂ ಅನೇಕ ವಿಶೇಷ ವಿಧಿಗಳೂ ನಿಷೇಧಗಳೂ ಇರುವುದರಿಂದ ಅವುಗಳನ್ನೆಲ್ಲಾ ಬರೆಯುವುದು ಗ್ರಂಥ ವಿಸ್ತರಕ್ಕೆ ಅವಕಾಶವೆಂತಲೂ, ಮತ್ತು ಅವುಗಳು ಕೇವಲ ವ್ಯಾಕರಣ ಶಾಸ್ತ್ರ ಗಮ್ಯಗಳೆಂತಲೂ ತಿಳಿದು ಅವುಗಳನ್ನು ಇಲ್ಲಿ ಬರೆಯಲಿಲ್ಲ. ಮೂರನೇ ಕಾಂಡದ ನಾನಾರ್ಥ ವರ್ಗದಲ್ಲಿ ಅನೇಕಾರ್ಥವುಳ್ಳ ಪದಗಳನ್ನು ಬಿಟ್ಟು ಆ ಅರ್ಥದ್ಯೋತಕಗಳಾದ ಪದಗಳನ್ನೆಲ್ಲಾ ಆವರಣಚಿಹ್ನೆಯಲ್ಲಿ ಸೇರಿಸಿ ಟೀಕೆಯಲ್ಲಿ ಆ ಅರ್ಥಗಳನ್ನೆಲ್ಲಾ ಬರೆದಿದೆ.

ಲಿಂಗಾದಿ ಸಂಗ್ರಹ ವರ್ಗವು ಶಾಸ್ತ್ರಪ್ರಮೇಯವಾದ್ದರಿಂದ ಸಂಪೂರ್ಣವಾಗಿ ಟೀಕೆಯನ್ನೆಲ್ಲಾ ಬರೆದಿದೆ.

[— ರೈಸ್ ]

# ವಿಷಯಾನುಕ್ರಮಣಿಕೆ


| | | |
|---|---|---|
| | ಪ್ರಕಾಶಕರ ಮಾತು .... .... | v |
| | ಭೂಮಿಕೆ ಎಸ್. ಬಾಲಸುಬ್ರಹ್ಮಣ್ಯ .... .... | vii |
| | ಪೀಠಿಕೆ ಲೂಯಿ ರೈಸ್ .... .... | xxvi |
| | ಮುದ್ರಾಪನ ಕ್ರಮ ಸೂಚಿಕೆ ಲೂಯಿ ರೈಸ್ .... | xxvii |
| | ಗ್ರಂಥಕರ್ತನ ಪೀಠಿಕೆ .... .... | ೧ |
| | **ಪ್ರಥಮ ಕಾಂಡ — PART I. Celestial** | |
| I. | ಸ್ವರ್ಗವರ್ಗ Celestials .... .... | ೫ |
| II. | ವ್ಯೋಮವರ್ಗ The Heavens .... .... | ೧೨ |
| III. | ದಿಗ್ವರ್ಗ Directions .... .... | ೧೨ |
| IV. | ಕಾಲವರ್ಗ Time .... ... | ೧೭ |
| V. | ಧೀವರ್ಗ Cognitive Terms .... ... | ೨೧ |
| VI. | ವಾಗ್ವರ್ಗ Speech .... .... | ೨೪ |
| VII. | ಶಬ್ದಾದಿವರ್ಗ Sounds .... .... | ೨೭ |
| VIII. | ನಾಟ್ಯವರ್ಗ The Stage .... .... | ೨೮ |
| IX. | ಪಾತಾಳವರ್ಗ The infernal regions .... | ೩೪ |
| X. | ಭೋಗಿವರ್ಗ Serpents .... .... | ೩೪ |
| XI. | ನರಕವರ್ಗ Hell .... .... | ೩೫ |
| XII. | ವಾರಿವರ್ಗ Water .... .... | ೩೬ |
| | **ದ್ವಿತೀಯ ಕಾಂಡ — PART II. Terrestrial** | |
| I. | ಭೂವರ್ಗ Earth .... .... | ೪೩ |
| II. | ಪುರವರ್ಗ Towns ... .... | ೪೬ |
| III. | ಶೈಲವರ್ಗ Mountains .... .... | ೪೯ |
| IV. | ವನೌಷಧಿವರ್ಗ Plants .... .... | ೫೧ |
| V. | ಸಿಂಹಾದಿವರ್ಗ Animals .... .... | ೭೩ |
| VI. | ಮನುಷ್ಯವರ್ಗ Mankind .... .... | ೭೯ |
| VII. | ಬ್ರಹ್ಮವರ್ಗ The priesthood .... .... | ೧೦೦ |
| VIII. | ಕ್ಷತ್ರಿಯವರ್ಗ Kingship .... .... | ೧೧೧ |
| IX. | ವೈಶ್ಯವರ್ಗ Trade .... .... | ೧೨೯ |
| X. | ಶೂದ್ರವರ್ಗ The lower orders .... .... | ೧೪೭ |
| | **ತೃತೀಯ ಕಾಂಡ — PART III. Grammatical** | |
| I. | ವಿಶೇಷ್ಯ ನಿಘ್ನವರ್ಗ Adjectives .... .... | ೧೫೮ |
| II. | ಸಂಕೀರ್ಣವರ್ಗ Miscellaneous .... .... | ೧೭೫ |
| III. | ನಾನಾರ್ಥವರ್ಗ Homonyms .... .... | ೧೮೪ |
| IV. | ನಾನಾರ್ಥಾವ್ಯಯವರ್ಗ Homonymous Indeclinables | ೨೩೦ |
| V. | ಅವ್ಯಯವರ್ಗ Indeclinables .... .... | ೨೩೪ |
| VI. | ಲಿಂಗಾದಿ ಸಂಗ್ರಹವರ್ಗ Gender .... .... | ೨೩೯ |
| | ಅಮರಕೋಶ ಪದಸೂಚೀ Alphabetical Index .... | ೨೬೩ |
| | ತಿದ್ದುಪಡಿ Emendations .... .... | ೪೦೬ |
| | ತಪ್ಪೋಲೆ Errata .... .... | ೪೦೮ |

# THE

# AMARA KŌSHA

# ಅಮರ ಕೋಶ

## INTRODUCTION

### ಗ್ರಂಥಕರ್ತನ ಪೀಠಿಕೆ

ಮೂಲ ॥ ಯಸ್ಯ ಜ್ಞಾನದಯಾಸಿಂಧೋರಗಾಧಸ್ಯಾನಘಾ ಗುಣಾಃ ।
ಸೇವ್ಯತಾಮಕ್ಷಯೋ ಧೀರಾಸ್ಸ ಶ್ರಿಯೈ ಚಾಮೃತಾಯ ಚ ॥ ೧ ॥

ಟೀಕೆ ॥ ಹೇ ಧೀರಾಃ–ಎಲೈ ಪಂಡಿತರೇ, ಜ್ಞಾನದಯಾಸಿಂಧೋಃ—ಜ್ಞಾನ–ಸರ್ವವಿಷಯಕವಾದ ಜ್ಞಾನಕ್ಕೂ, ದಯಾ–ಕೃಪೆಗೂ, ಸಿಂಧೋಃ–ಸಮುದ್ರ ಪ್ರಾಯನಾಗಿಯೂ; ಅಗಾಧಸ್ಯ – ಗಂಭೀರನಾಗಿಯೂ ಇರುವ, ಯಸ್ಯ–ಯಾವ ದೇವರ, ಗುಣಾಃ–ಸರ್ವಜ್ಞತ್ವಾದಿ ಗುಣಗಳು ಅನಘಾಃ–ಪಾಪರಹಿತಗಳಾಗಿವೆಯೋ ; ಅಕ್ಷಯಃ–ನಾಶರಹಿತನಾದ, ಸಃ–ಆ ದೇವರು, ಶ್ರಿಯೈಚ–ಸಂಪತ್ತಿಗಾಗಿಯೂ, ಅಮೃತಾಯಚ–ನಿತ್ಯ ಕೈವಲ್ಯಕ್ಕಾಗಿಯೂ, ಸೇವ್ಯತಾಂ–ನಿಮ್ಮಿಂದ ಭಜಿಸಲ್ಪಡಲಿ.

ತಾತ್ಪರ್ಯ ॥ ಜ್ಞಾನಕೃಪಾವಿಶಿಷ್ಟನಾಗಿಯೂ, ಪಾಪರಹಿತನಾಗಿಯೂ, ಪರಿಶುದ್ಧ ಗುಣಗಳುಳ್ಳವನಾಗಿಯೂ, ಇರುವ (ಸರ್ವಶಕ್ತನಾದ) ದೇವರು ಯಾರೋ ಅಂಥವನನ್ನು ಐಹಿಕ ಪ್ರಯೋಜನಕ್ಕಾಗಿಯೂ, ಪರಲೋಕದ ಶಾಶ್ವತ ಸುಖಕ್ಕಾಗಿಯೂ, ಸೇವಿಸಿರಿ ಎಂದು ಪಂಡಿತರಿಗೆ ಅಮರಸಿಂಹನು ಹೇಳುತ್ತಾನೆ.

*Meaning* **1.** Praise, O ye learned, that Eternal Pure Being who is an ocean of wisdom and love, for the sake of well-being and salvation.

ಮೂಲ ॥ ಸಮಾಹೃತ್ಯಾನ್ಯತಂತ್ರಾಣಿ ಸಂಕ್ಷಿಪ್ತೈಃ ಪ್ರತಿಸಂಸ್ಕೃತೈಃ ।
ಸಂಪೂರ್ಣಮುಚ್ಯತೇ ವರ್ಗೈರ್ನಾಮಲಿಂಗಾನುಶಾಸನಂ ॥ ೨ ॥

ಟೀಕೆ ॥ ಅನ್ಯತಂತ್ರಾಣಿ–ಇತರಗಳಾದ ತ್ರಿಕಾಂಡಿ·ವಾಗುರಿ ವಾಮನಾದಿಕೋಶಗಳನ್ನು, ಸಮಾಹೃತ್ಯ – ಸಂಗ್ರಹಿಸಿ, ಸಂಕ್ಷಿಪ್ತೈಃ – ಮಿತವಾಗಿ ಮಾಡಲ್ಪಟ್ಟವಾಗಿಯೂ, ಪ್ರತಿಸಂಸ್ಕೃತೈಃ-ಅರ್ಥವನ್ನು ತಿಳಿಸುವ ಪರ್ಯಾಯ ಸಂಸ್ಕೃತ ಪದಗಳುಳ್ಳವಾಗಿಯೂ ಇರುವ, ವರ್ಗೈಃ-ಅನ್ಯೋನ್ಯಸಂಬಂಧ ಪರ್ಯಾಯ ಪದಸಮೂಹಗಳಿಂದ, ಸಂಪೂರ್ಣಂ–ತುಂಬಿ ಇರುವ, ನಾಮಲಿಂಗಾನುಶಾಸನಂ–ನಾಮಲಿಂಗಾನುಶಾಸನವೆಂಬ ಗ್ರಂಥವು, ಉಚ್ಯತೇ–ಹೇಳಲ್ಪಡುತ್ತದೆ.

ತಾತ್ಪರ್ಯ ॥ ಈ ಗ್ರಂಥ ನಿರ್ಮಾಣಕ್ಕೆ ಪೂರ್ವದಲ್ಲಿದ್ದ ವರರುಚಿ ಕೋಶಾದಿ ಗ್ರಂಥಗಳು ದೊಡ್ಡವಾಗಿಯೂ ಗಹನವಾಗಿಯೂ ಇದ್ದುದರಿಂದ ಅವುಗಳಲ್ಲಿನ ಪದಗಳನ್ನೆಲ್ಲಾ ಸಂಗ್ರಹಿಸಿ ಒಂದು ಪ್ರಕರಣಕ್ಕೆ ಸೇರಬೇಕಾದ ಪದಗಳನ್ನೆಲ್ಲಾ ವಿಂಗಡಿಸಿ ಗುಂಪಾಗಿ ಸೇರಿಸಿ ೨೭ ವರ್ಗಗಳಾಗಿ ಭಾಗಿಸಿ ನಾಮ, ಲಿಂಗ, ವಚನ, ವ್ಯವಸ್ಥೆಯನ್ನು ತಿಳಿಸುತ್ತದೆಯಾದ್ದರಿಂದ ನಾಮಲಿಂಗಾನುಶಾಸನವೆಂಬ ಹೆಸರಿಟ್ಟು ಇದನ್ನು ರಚಿಸುತ್ತೇನೆ.

*Meaning* **2.** The *Vararuchi Kosha* and other vocabularies being too diffuse the author has compiled this *Namalinganushasana*, in which the terms are collected under 27 heads, with grammatical notes.

ಮೂಲ ॥ ಪ್ರಾಯಶೋ ರೂಪಭೇದೇನ ಸಾಹಚರ್ಯಾಚ್ಚ ಕುತ್ರಚಿತ್ ।
ಸ್ತ್ರೀಪುನ್ನಪುಂಸಕಂ ಜ್ಞೇಯಂ ತದ್ವಿಶೇಷವಿಧೇಃ ಕ್ವಚಿತ್ ॥ ೩ ॥

ಟೀಕೆ ॥ ಸ್ತ್ರೀಪುನ್ನಪುಂಸಕಂ – ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗಗಳು, ಪ್ರಾಯಶಃ-ಬಹಳವಾಗಿ, ರೂಪಭೇದೇನ–ಶಬ್ದಗಳ ರೂಪವ್ಯತ್ಯಾಸಗಳಿಂದಲೂ, ಕುತ್ರಚಿತ್–ಹಾಗೆ ತಿಳಿಯದ ಕೆಲವು ಸ್ಥಳಗಳಲ್ಲಿ, ಸಾಹಚರ್ಯಾಚ್ಚ–ಲಿಂಗಭೇದ ತಿಳಿಯಬಹುದಾದ ಮತ್ತೊಂದು ಪದದ ಸಾಮೀಪ್ಯದಿಂದಲೂ, ಕ್ವಚಿತ್–ಈ ಎರಡರಿಂದಲೂ ತಿಳಿಯದ ಇತರ ಸ್ಥಳಗಳಲ್ಲಿ, ವಿಶೇಷವಿಧೇಃ – ಈ ಶಬ್ದವು ಈ ಲಿಂಗವುಳ್ಳದ್ದೆಂದು ಹೇಳುವುದರಿಂದಲೂ, ಜ್ಞೇಯಂ–ತಿಳಿಯತಕ್ಕದ್ದು.

ತಾತ್ಪರ್ಯ ॥ ಪುಂಸ್ತ್ರೀನಪುಂಸಕಲಿಂಗ ನಿರ್ಣಯವನ್ನು ಬಹುಶಃ ಅನುಸ್ವಾರ ವಿಸರ್ಗ ದೀರ್ಘಗಳಿಂದ ಕೂಡಿದ ಶಬ್ದರೂಪಭೇದದಿಂದಲೂ, ಕೆಲವುಕಡೆ

ಲಿಂಗವ್ಯವಸ್ಥೆಯುಂಟಾದ ಮತ್ತೊಂದು ಪದದ ಸಾನ್ನಿಧ್ಯದಿಂದಲೂ, ಹಾಗೆ ಆಗದಲ್ಲಿ ಇಂಥ ಲಿಂಗವೆಂದು ಸ್ಪಷ್ಟವಾಗಿ ಹೇಳುವುದರಿಂದಲೂ, ತಿಳಿಯಬೇಕು.

*Meaning* 3. The gender of those words only is given which cannot be distinguished either by their terminations or by their associations with other words whose gender is known.

ಮೂಲ ॥ ಭೇದಾಖ್ಯಾನಾಯ ನ ದ್ವಂದ್ವೋ ನೈಕಶೇಷೋ ನ ಸಂಕರಃ ।
ಕೃತೋಽತ್ರ ಭಿನ್ನಲಿಂಗಾನಾಮನುಕ್ತಾನಾಂ ಕ್ರಮಾದೃತೇ ॥ ೪ ॥

ಟೀಕೆ ॥ ಅತ್ರ–ಈ ಗ್ರಂಥದಲ್ಲಿ, ಅನುಕ್ತಾನಾಂ–ಮತ್ತೊಂದು ಸ್ಥಳದೊಳಗೆ ಹೇಳಲ್ಪಡದೇ ಇರುವ, ಭಿನ್ನಲಿಂಗಾನಾಂ–ಬೇರೆಬೇರೆ ಲಿಂಗಗಳುಳ್ಳ ಪದಗಳ, ಭೇದಾಖ್ಯಾನಾಯ–ಲಿಂಗಭೇದವನ್ನು ಹೇಳುವುದ ಕ್ಕೋಸ್ಕರ, ದ್ವಂದ್ವಃ–ದ್ವಂದ್ವಸಮಾಸವು, ನ ಕೃತಃ–ಮಾಡಲ್ಪಡಲಿಲ್ಲ, ಏಕಶೇಷಃ–ಏಕಶೇಷವೆಂಬ ಸಮಾಸವು, ನ ಕೃತಃ–ಮಾಡಲ್ಪಟ್ಟಿಲ್ಲ, ಕ್ರಮಾದೃತೇ–ಪ್ರಸ್ತಾವ ಸಂಗತಿ ಹೊರತು, ಸಂಕರಃ–ಕೂಡಿಕೆಯು, ನ ಕೃತಃ–ಮಾಡಲ್ಪಡಲಿಲ್ಲ.

ತಾತ್ಪರ್ಯ ॥ ಈ ಗ್ರಂಥದಲ್ಲಿ ಲಿಂಗನಿರ್ಣಯಕ್ಕಾಗಿ ದ್ವಂದ್ವಸಮಾಸವನ್ನಾಗಲಿ, ಏಕ ಶೇಷವನ್ನಾಗಲಿ, ಪ್ರಕೃತ ವಿಷಯಕ್ಕೆ ಸಂಬಂಧಿಸಿದ ಪದಗಳು ಹೊರತು ಅಪ್ರಕೃತವಾದ ಬೇರೆಬೇರೆ ಪದಗಳ ಜೋಡಣೆಯನ್ನಾಗಲಿ ಮಾಡಿಲ್ಲ.

*Meaning* 4. But throughout the work the form alone will, in most cases, reveal the gender, as *dvandva* compounds have not been admitted, nor words associated together which are unconnected in meaning.

ಮೂಲ ॥ ತ್ರಿಲಿಂಗ್ಯಾಂ ತ್ರಿಷ್ವಿತಿ ಪದಂ ಮಿಥುನೇತು ದ್ವಯೋರಿತಿ ।
ನಿಷಿದ್ಧಲಿಂಗಂ ಶೇಷಾರ್ಥಂ ತ್ವಂತಾಥಾದಿ ನ ಪೂರ್ವಭಾಕ್ ॥ ೫ ॥

ಟೀಕೆ ॥ ತ್ರಿಲಿಂಗ್ಯಾಂ–ಮೂರು ಲಿಂಗಗಳಲ್ಲಿಯೂ ಎಂದು ಹೇಳತಕ್ಕ ಸ್ಥಳದಲ್ಲಿ, ತ್ರಿಷ್ವಿತಿಪದಂ–" ತ್ರಿಷು " ಎಂಬ ಪದವೂ, ಮಿಥುನೇತು–ಪುಲ್ಲಿಂಗ ಸ್ತ್ರೀಲಿಂಗಗಳೆರಡರಲ್ಲಿಯೂ ಎಂದು ಹೇಳಬೇಕಾದ ಸ್ಥಳದಲ್ಲಿ, ದ್ವಯೋ ರಿತಿಪದಂ–"ದ್ವಯೋಃ" ಎಂಬ ಪದವೂ ಹೇಳಲ್ಪಡುತ್ತದೆ. ನಿಷಿದ್ಧ ಲಿಂಗಂ–ನಿಷೇಧಿಸಲ್ಪಟ್ಟ ಲಿಂಗವು, ಶೇಷಾರ್ಥಂ–ಉಳಿದ ಲಿಂಗಕ್ಕೋ ಸ್ಕರ. ತ್ವಂತ–" ತು " ಎಂಬ ಅವ್ಯಯವೇ ತುದಿಯಲ್ಲಿ ಕೂಡಿಸಿ

ಪ್ರಯೋಗಿಸಲ್ಪಟ್ಟ ಪದವೂ, ಅಥಾದಿ-"ಅಥ" ಎಂಬ ಪದವೇ ಮೊದಲಿನಲ್ಲಿ ಸೇರಿಸಿ ಪ್ರಯೋಗಿಸಲ್ಪಟ್ಟ ಪದವೂ, ನ ಪೂರ್ವಭಾಕ್-ಮೊದಲಿನ ಪದಗಳಿಗೆ ಸಂಬಂಧಿಸಿದುವಲ್ಲ.

ತಾತ್ಪರ್ಯ ॥ ಮೂರು ಲಿಂಗಗಳಲ್ಲಿಯೂ ಉಂಟೆಂದು ಸೂಚಿಸುವುದಕ್ಕೆ "ತ್ರಿಷು" ಎಂಬ ಪದವೂ, ಪುಂಸ್ತ್ರೀಲಿಂಗಗಳೆರಡರಲ್ಲಿ ಉಂಟೆಂಬುದಕ್ಕೆ "ದ್ವಯೋಃ" ಎಂಬ ಪದವೂ ಸೇರಿಸಲ್ಪಟ್ಟಿರುತ್ತವೆಂತಲೂ, "ಅಸ್ತ್ರಿಯಾಂ" ಎಂಬಂತೆ ಒಂದು ಲಿಂಗವು ನಿಷೇಧಿಸಲ್ಪಟ್ಟಾಗ ಆ ಶಬ್ದವು ಇತರ ಲಿಂಗಗಳಲ್ಲಿ ಉಂಟೆಂತಲೂ, ಪದಗಳ ಅಂತ್ಯದಲ್ಲಿ "ತು" ಎಂಬುದು ಇದ್ದಾಗ್ಯೂ ಆದಿಯಲ್ಲಿ "ಅಥ" ಎಂಬ ಅವ್ಯಯವಿದ್ದಾಗ್ಯೂ ಅಂತಹ ಪದಗಳನ್ನು ಮೊದಲ ಪದದೊಡನೆ ಅನ್ವಯಿಸಕೂಡದೆಂತಲೂ ತಿಳಿಯತಕ್ಕದ್ದು.

*Meaning* 5. Words of *common gender* are distinguished by the abbreviation "ತ್ರಿಷು," those which are both *masculine* and *feminine* by "ದ್ವಯೋಃ". When a word is said to be not of a particular gender as in "ಅಸ್ತ್ರಿಯಾಂ" it implies that it occurs in the other two genders. The affix "ತು" and the conjunction "ಅಥ" refer to the words which follow and not to those which precede them.

## I. ಸ್ವರ್ಗವರ್ಗ—SVARGA-VARGA.

ಸ್ವರವ್ಯಯಂ ಸ್ವರ್ಗ ನಾಕ ತ್ರಿದಿವ ತ್ರಿದಶಾಲಯಾಃ ।
ಸುರಲೋಕೋ ದ್ಯೋ ದಿವೌ (ದ್ವೇ ಸ್ತ್ರಿಯಾಂ) (ಕ್ಲೀಬೇ) ತ್ರಿವಿಷ್ಟಪಂ ॥ *a* ೬
ಅಮರಾ ನಿರ್ಜರಾ ದೇವಾ ಸ್ತ್ರಿದಶಾ ವಿಬುಧಾ ಸ್ಸುರಾಃ ।
ಸುಪರ್ವಾಣ ಸ್ಸುಮನಸ ಸ್ತ್ರಿದಿವೇಶಾ ದಿವೌಕಸಃ ॥ ೭
ಆದಿತೇಯಾ ದಿವಿಷದೊ ಲೇಖಾ ಅದಿತಿನಂದನಾಃ ।
ಆದಿತ್ಯಾ ಋಭವೋಽಸ್ವಪ್ನಾ ಅಮರ್ತ್ಯಾ ಅಮೃತಾಂಧಸಃ ॥ ೮
ಬರ್ಹಿರ್ಮುಖಾಃ ಕ್ರತುಭುಜೊ ಗೀರ್ವಾಣಾ ದಾನವಾರಯಃ ।
ಬೃಂದಾರಕಾ ದೈವತಾನಿ (ಪುಂಸಿ ವಾ) ದೇವತಾ (ಸ್ತ್ರಿಯಾಂ) ॥ *b* ೯
ಆದಿತ್ಯ ವಿಶ್ವವಸವ ಸ್ತುಷಿತಾ ಭಾಸ್ವರಾ ನಿಲಾಃ ।
ಮಹಾರಾಜಿಕ ಸಾಧ್ಯಾ ಶ್ಚ ರುದ್ರಾ ಶ್ಚ (ಗಣದೇವತಾಃ) ॥ *c* ೧೦
ವಿದ್ಯಾಧರೋಽಪ್ಸರೋ ಯಕ್ಷ ರಕ್ಷೋ ಗಂಧರ್ವ ಕಿನ್ನರಾಃ ।
ಪಿಶಾಚೋ ಗುಹ್ಯಕ ಸ್ಸಿದ್ಧೋ ಭೂತೋಽ(ಮೀ ದೇವಯೋನಯಃ) ॥ *d* ೧೧
ಅಸುರಾ ದೈತ್ಯ ದೈತೇಯ ದನುಜೇಂದ್ರಾರಿ ದಾನವಾಃ ।
ಶುಕ್ರಶಿಷ್ಯಾ ದಿತಿಸುತಾಃ ಪೂರ್ವದೇವಾ ಸ್ಸುರದ್ವಿಷಃ ॥ *e* ೧೨
ಸರ್ವಜ್ಞ ಸ್ಸುಗತೋ ಬುದ್ಧೋ ಧರ್ಮರಾಜ ಸ್ತಥಾಗತಃ ।
ಸಮಂತಭದ್ರೋ ಭಗವಾ ನ್ಮಾರಜಿ ಲ್ಲೋಕಜಿ ಜ್ಜಿನಃ ॥ ೧೩
ಷಡಭಿಜ್ಞೋ ದಶಬಲೋಽದ್ವಯವಾದೀ ವಿನಾಯಕಃ ।
ಮುನೀಂದ್ರ ಶ್ರೀಘನ ಶ್ಶಾಸ್ತಾ ಮುನಿ *f* ಶ್ಶಾಕ್ಯಮುನಿ (ಸ್ತು ಯಃ) ॥ ೧೪
(ಸ) ಶಾಕ್ಯಸಿಂಹ ಸ್ಸರ್ವಾರ್ಥಸಿದ್ಧ ಶ್ಶೌದ್ಧೋದನಿ (ಶ್ಚ ಸಃ) ।
ಗೌತಮ (ಶ್ಚಾ)ರ್ಕಬಂಧು(ಶ್ಚ) ಮಾಯಾದೇವೀಸುತ(ಶ್ಚ ಸಃ) ॥ *g* ೧೫

---

*a* Svarga *(Paradise)* 9. *b* Demigods 26. *c* Celestial attendants 9. *d* Offspring of celestials 10. *e* Asuras 10. *f* Budha 18. *g* The Buddha of Shakya Muni 7.

*a* ಸ್ವರ್ಗಲೋಕ ೯. *b* ದೇವತೆಗಳು ೨೬. *c* ಗಣ ದೇವತೆಗಳು ೯. *d* ದೇವತೆಗಳೇ ಉತ್ಪತ್ತಿ ಸ್ಥಾನವಾಗಿ ಉಳ್ಳವರು ೧೦. *e* ಅಸುರರೆಂಬ ದೈತ್ಯರು ೧೦. *f* ಬುದ್ಧ ದೇವರು ೧೮. *g* ಶಾಕ್ಯರಿಗೆ ಯಾರು ಪೂಜ್ಯನೋ ಅಂಥಾ ಬುದ್ಧ ದೇವರು ೭.

ಬ್ರಹ್ಮಾಽತ್ಮಭೂ ಸ್ಸುರಜ್ಯೇಷ್ಠಃ ಪರಮೇಷ್ಠೀ ಪಿತಾಮಹಃ ।
ಹಿರಣ್ಯಗರ್ಭೋ ಲೋಕೇಶ ಸ್ಸ್ವಯಂಭೂ ಶ್ಚತುರಾನನಃ ॥ ೧೬
ಧಾತಾಽಬ್ಜಯೋನಿ ರ್ದ್ರುಹಿಣೋ ವಿರಿಂಚಿಃ ಕಮಲಾಸನಃ ।
ಸ್ರಷ್ಟಾ ಪ್ರಜಾಪತಿ ರ್ವೇಧಾ ವಿಧಾತಾ ವಿಶ್ವಸೃ ಡ್ವಿಧಿಃ ॥ ೧೭
ಶತಾನಂದ ಶ್ಶತಧೃತಿ ರ್ವಿರಿಂಚೋಽಜೋ ವಿರಿಂಚನಃ । *a*
ವಿಷ್ಣು ರ್ನಾರಾಯಣಃ ಕೃಷ್ಣೋ ವೈಕುಂಠೋ ವಿಷ್ಟರಶ್ರವಾಃ ॥ ೧೮
ದಾಮೋದರೋ ಹೃಷೀಕೇಶಃ ಕೇಶವೋ ಮಾಧವಃ ಸ್ವಭೂಃ ।
ದೈತ್ಯಾರಿಃ ಪುಂಡರೀಕಾಕ್ಷೋ ಗೋವಿಂದೋ ಗರುಡಧ್ವಜಃ ॥ ೧೯
ಪೀತಾಂಬರೋಽಚ್ಯುತ ಶ್ಶಾರ್ಙ್ಗೀ ವಿಷ್ವಕ್ಸೇನೋ ಜನಾರ್ದನಃ ।
ಉಪೇಂದ್ರ ಇಂದ್ರಾವರಜ ಶ್ಚಕ್ರಪಾಣಿ ಶ್ಚತುರ್ಭುಜಃ ॥ ೨೦
ಪದ್ಮನಾಭೋ ಮಧುರಿಪು ರ್ವಾಸುದೇವ ಸ್ತ್ರಿವಿಕ್ರಮಃ ।
ದೇವಕೀನಂದನ ಶ್ಶೌರಿಃ ಶ್ರೀಪತಿಃ ಪುರುಷೋತ್ತಮಃ ॥ ೨೧
ವನಮಾಲೀ ಬಲಿಧ್ವಂಸೀ ಕಂಸಾರಾತಿ ರಧೋಕ್ಷಜಃ ।
ವಿಶ್ವಂಭರಃ ಕೈಟಭಜಿ ದ್ವಿಧು ಶ್ಶ್ರೀವತ್ಸಲಾಂಛನಃ ॥ ೨೨
ಗದಾಗ್ರಜೋ ಮುಂಜಿಕೇಶೋ ದಾಶಾರ್ಹೋ ದಶರೂಪಭೃತ್ । *b*
ವಸುದೇವೋಽ(ಸ್ಯಜನಕ ಸ್ಸಏವಾ)ನಕದುಂದುಭಿಃ ॥ *c* ೨೩
ಬಲಭದ್ರಃ ಪ್ರಲಂಬಘ್ನೋ ಬಲದೇವೋಽಚ್ಯುತಾಗ್ರಜಃ ।
ರೇವತೀರಮಣೋ ರಾಮಃ ಕಾಮಪಾಲೋ ಹಲಾಯುಧಃ ॥ ೨೪
ನೀಲಾಂಬರೋ ರೌಹಿಣೇಯ ಸ್ತಾಲಾಂಕೋ ಮುಸಲೀ ಹಲೀ ।
ಸಂಕರ್ಷಣ ಸ್ಸೀರಪಾಣಿಃ ಕಾಳಿಂದೀಭೇದನೋ ಬಲಃ ॥ *d* ೨೫
ಮದನೋ ಮನ್ಮಥೋ ಮಾರಃ ಪ್ರದ್ಯುಮ್ನೋ ಮೀನಕೇತನಃ ।
ಕಂದರ್ಪೋ ದರ್ಪಕೋಽನಂಗಃ ಕಾಮಃ ಪಂಚಶರ ಸ್ಸ್ಮರಃ ॥ ೨೬
ಶಂಬರಾರಿ ರ್ಮನಸಿಜಃ ಕುಸುಮೇಷು ರನನ್ಯಜಃ ।
ಪುಷ್ಪಧನ್ವಾ ರತಿಪತಿ ರ್ಮಕರಧ್ವಜ ಆತ್ಮಭೂಃ ॥ ೨೭
ಶೃಂಗಾರಯೋನಿಃ ಶ್ರೀಪುತ್ರಶ್ಶೂರ್ಪಕಾರಾತಿ (ರಿತ್ಯಪಿ) । *e*
ಅರವಿಂದ ಮಶೋಕಂ(ಚ) ಚೂತಂ(ಚ) ನವಮಲ್ಲಿಕಾ ॥ ೨೮

---

*a* Brahma 25. *b* Vishnu 43. *c* Vishnu's father 2. *d* Bala-Rama 17. *e* Manmatha *(Cupid)* 22.

*a* ಬ್ರಹ್ಮನ ೨೫. *b* ವಿಷ್ಣು ೪೩. *c* ಕೃಷ್ಣ ರೂಪನಾದ ವಿಷ್ಣುವಿನ ತಂದೆ ೨. *d* ಬಲರಾಮನು ೧೭. *e* ಮನ್ಮಥನು ೨೨.

ನೀಲೋತ್ಪಲಂ(ಚ) ಪಂಚೈತೇ ಪಂಚಬಾಣಸ್ಯ ಸಾಯಕಾಃ । *a*
ಬ್ರಹ್ಮಸೂ ರ್ವಿಶ್ವಕೇತು(ಸ್ಸ್ಯಾ)ದನಿರುದ್ಧ ಉಷಾಪತಿಃ ॥ *b* ೨೯
ಲಕ್ಷ್ಮೀಃ ಪದ್ಮಾಲಯಾ ಪದ್ಮಾ ಕಮಲಾ ಶ್ರೀ ರ್ಹರಿಪ್ರಿಯಾ ।
ಇಂದಿರಾ ಲೋಕಮಾತಾ ಮಾ ರಮಾ ಮಂಗಳದೇವತಾ ॥ ೩೦
ಭಾರ್ಗವೀ ಲೋಕಜನನೀ ಕ್ಷೀರಸಾಗರಕನ್ಯಕಾ । *c*
(ಶಂಖೋ ಲಕ್ಷ್ಮೀಪತೇಃ) ಪಾಂಚಜನ್ಯ (ಶ್ಚಕ್ರಂ) ಸುದರ್ಶನಂ ॥ ೩೧
ಕೌಮೋದಕೀ (ಗದಾ ಖಡ್ಗೋ) ನಂದಕಃ ಕೌಸ್ತುಭೋ (ಮಣಿಃ) ।
(ಚಾಪ) ಶ್ಶಾರ್ಙ್ಗಂ (ಮುರಾರೇಸ್ತು) ಶ್ರೀವತ್ಸೋ (ಲಾಂಛನಂ ಮತಂ) ॥ *d*
ಗರುತ್ಮಾ ನ್ಗರುಡ ಸ್ತಾರ್ಕ್ಷ್ಯೋ ವೈನತೇಯಃ ಖಗೇಶ್ವರಃ ।
ನಾಗಾಂತಕೋ ವಿಷ್ಣುರಥ ಸ್ಸುಪರ್ಣಃ ಪನ್ನಗಾಶನಃ ॥ *e* ೩೨
ಶಂಭು ರೀಶಃ ಪಶುಪತಿ ಶ್ಶಿವ ಶ್ಶೂಲೀ ಮಹೇಶ್ವರಃ ।
ಈಶ್ವರ ಶ್ಶರ್ವ ಈಶಾನ ಶ್ಶಂಕರ ಶ್ಚಂದ್ರಶೇಖರಃ ॥ ೩೪
ಭೂತೇಶಃ ಖಂಡಪರಶು ರ್ಗಿರೀಶೋ ಗಿರಿಶೋ ಮೃಡಃ ।
ಮೃತ್ಯುಂಜಯಃ ಕೃತ್ತಿವಾಸಾಃ ಪಿನಾಕೀ ಪ್ರಮಥಾಧಿಪಃ ॥ ೩೫
ಉಗ್ರಃ ಕಪರ್ದೀ ಶ್ರೀಕಂಠ ಶ್ಶಿತಿಕಂಠಃ ಕಪಾಲಭೃತ್ ।
ವಾಮದೇವೋ ಮಹಾದೇವೋ ವಿರೂಪಾಕ್ಷ ಸ್ತ್ರಿಲೋಚನಃ ॥ ೩೬
ಕೃಶಾನುರೇತಾ ಸ್ಸರ್ವಜ್ಞೋ ಧೂರ್ಜಟಿ ರ್ನೀಲಲೋಹಿತಃ ।
ಹರಃ ಸ್ಮರಹರೋ ಭರ್ಗ ಸ್ತ್ರ್ಯಂಬಕ ಸ್ತ್ರಿಪುರಾಂತಕಃ ॥ ೩೭
ಗಂಗಾಧರೋಽಂಧಕರಿಪುಃ ಕ್ರತುಧ್ವಂಸೀ ವೃಷಧ್ವಜಃ ।
ವ್ಯೋಮಕೇಶೋ ಭವೋ ಭೀಮಃ ಸ್ಥಾಣೂ ರುದ್ರ ಉಮಾಪತಿಃ ॥ ೩೮
ಅಷ್ಟಮೂರ್ತಿ ರಹಿರ್ಬುಧ್ನೋ ಮಹಾಕಾಲೋ ಮಹಾನಟಃ । *f*
(ಕಪರ್ದೋಽಸ್ಯ) ಜಟಾಜೂಟಃ ಪಿನಾಕೋಽಜಗವಂ (ಧನುಃ) ॥ *g* ೩೯

---

*a* Manmatha's arrows 5. *b* Aniruddha 4. *c* Lakshmi 14. *d* Vishnu's—conch 1, discus 1, club 1, sword 1, breast jewel 1, bow 1, lucky mark or curl on breast 1. *e* Vishnu's vehicle Garuda 9. *f* Shiva 52. *g* Shiva's—matted hair 1, bow 2.

*a* ಮನ್ಮಥನ ಬಾಣಗಳು ೫. *b* ಅನಿರುದ್ಧನು ೪. *c* ಲಕ್ಷ್ಮೀದೇವಿಯು ೧೪. *d* ವಿಷ್ಣುವಿನ—ಶಂಖ ೧, ಚಕ್ರ ೧, ಗದೆ ೧, ಖಡ್ಗ ೧, ಮಣಿ ೧, ಬಿಲ್ಲು ೧, ವಿಷ್ಣುಮೂರ್ತಿಯಲ್ಲಿರುವ ಸೌಭಾಗ್ಯಚಿಹ್ನೆ ೧. *e* ವಿಷ್ಣು ದೇವರ ವಾಹನವಾದ ಗರುಡನು ೯. *f* ಶಿವನು ೫೨. *g* ಶಿವನ—ಜಟಾಜೂಟವೆಂಬ ಮುಡಿ ೧, ಬಿಲ್ಲು ೨.

ಪ್ರಮಥಾ (ಸ್ಸ್ಯುಃ ಪಾರಿಷದಾ)*a* (ಬ್ರಾಹ್ಮೀತ್ಯಾದ್ಯಾಸ್ತು) ಮಾತರಃ । *b*
ಬ್ರಾಹ್ಮೀ ಮಾಹೇಶ್ವರೀ (ಚೈವ) ಕೌಮಾರೀ ವೈಷ್ಣವೀ (ತಥಾ) ॥ ೪೦
ವಾರಾಹೀ (ಚೈವ ಚೇ)ಂದ್ರಾಣೀ ಚಾಮುಂಡಾ (ಸಪ್ತಮಾತರಃ) । *c*
ವಿಭೂತಿ ರ್ಭೂತಿ ರೈಶ್ವರ್ಯ (ಮಣಿಮಾದಿಕಮಷ್ಟಧಾ) ॥ *d* ೪೧
ಅಣಿಮಾ ಮಹಿಮಾ(ಚೈವ) ಗರಿಮಾ ಲಘಿಮಾ (ತಥಾ) ।
ಪ್ರಾಪ್ತಿಃ ಪ್ರಾಕಾಮ್ಯಮೀಶತ್ವಂ ವಶಿತ್ವಂ (ಚಾಷ್ಟಭೂತಯಃ) ॥ *e* ೪೨
ಉಮಾ ಕಾತ್ಯಾಯನೀ ಗೌರೀ ಕಾಳೀ ಹೈಮವತೀ ಶ್ವರೀ ।
ಶಿವಾ ಭವಾನೀ ರುದ್ರಾಣೀ ಶರ್ವಾಣೀ ಸರ್ವಮಂಗಳಾ ॥ ೪೩
ಅಪರ್ಣಾ ಪಾರ್ವತೀ ದುರ್ಗಾ ಮೃಡಾನೀ ಚಂಡಿಕ್ಯಾಂಬಿಕಾ ।
ಆರ್ಯಾ ದಾಕ್ಷಾಯಣೀ (ಚೈವ) ಗಿರಿಜಾ ಮೇನಕಾತ್ಮಜಾ ॥ *f* ೪೪
ವಿನಾಯಕೋ ವಿಘ್ನರಾಜ ದ್ವೈಮಾತುರ ಗಣಾಧಿಪಾಃ ।
(ಅಪ್ಯೇ) ಕದಂತ ಹೇರಂಬ ಲಂಬೋದರ ಗಜಾನನಾಃ ॥ *g* ೪೫
ಕಾರ್ತಿಕೇಯೋ ಮಹಾಸೇನ ಶ್ಶರಜನ್ಮಾ ಷಡಾನನಃ ।
ಪಾರ್ವತೀ ನಂದನ ಸ್ಸ್ಕಂದ ಸ್ಸೇನಾನೀ ರಗ್ನಿಭೂ ರ್ಗುಹಃ ॥ ೪೬
ಬಾಹುಲೇಯ ಸ್ತಾರಕಜಿ ದ್ವಿಶಾಖ ಶ್ಶಿಖಿವಾಹನಃ ।
ಷಾಣ್ಮಾತುರ ಶ್ಶಕ್ತಿಧರಃ ಕುಮಾರಃ ಕ್ರೌಂಚದಾರಣಃ ॥ *h* ೪೭
ಭೃಂಗೀ ಭೃಂಗಿರಿಟಸ್ತಂಡು ನಂದಿನೌ ನಂದಿಕೇಶ್ವರೇ । *i*
ಇಂದ್ರೋ ಮರುತ್ವಾ ನ್ಮಘವಾ ಬಿಡೌಜಾಃ ಪಾಕಶಾಸನಃ ॥ ೪೮
ವೃದ್ಧಶ್ರವಾ ಶ್ಶುನಾಸೀರಃ ಪುರುಹೂತಃ ಪುರಂದರಃ ।
ಜಿಷ್ಣು ರ್ಲೇಖ ರ್ಷಭ ಶ್ಶಕ್ರ ಶ್ಶತಮನ್ಯು ರ್ದಿವಸ್ಪತಿಃ ॥ ೪೯
ಸುತ್ರಾಮಾ ಗೋತ್ರಭಿ ದ್ವಜ್ರೀ ವಾಸವೋ ವೃತ್ರಹಾ ವೃಷಾ ।
ವಾಸ್ತೋಷ್ಪತಿ ಸ್ಸುರಪತಿ ರ್ಬಲಾರಾತಿ ಶ್ಶಚೀಪತಿಃ ॥ ೫೦

---

Shiva's—*a* Attendants 1. *b* Seven energies 1. *c* Names of the seven energies 1. *d* Eight faculties 3. *e* Names of the eight faculties. *f* Parvati, Shiva's wife 21. *g* Ganesha, Shiva's son 8. *h* Kumara, Shiva's son 17. *i* Nandi 5.

*a* ಶಿವನಸಭೆಯಲ್ಲಿರುವ ನಂದಿ ಮುಂತಾದ ಗಣಂಗಳು ೧. *b* ಬ್ರಾಹ್ಮೀ ಮುಂತಾದ ಸಪ್ತಮಾತೃಕೆಯರು ೧. *c* ಸಪ್ತಮಾತೃಕೆಯರ ಹೆಸರುಗಳು ೧. *d* ಶಿವನ ಎಂಟು ಬಗೆಯಾಗಿರುವ ಅಣಿಮಾದಿ ಸಿದ್ಧಿಗಳು. *e* ಎಂಟು ಬಗೆಯಾವ ಸಿದ್ಧಿಗಳ ಹೆಸರುಗಳು. *f* ಶಿವಪತ್ನಿಯಾದ ಪಾರ್ವತೀದೇವಿ ೨೧. *g* ಶಿವಪುತ್ರನಾದ ಗಣಪತಿಯು ೮. *h* ಶಿವಪುತ್ರನಾದ ಕುಮಾರಸ್ವಾಮಿ ೧೭. *i* ನಂದಿ ೫.

ಜಂಭಭೇದೀ ಹರಿಹಯಃ ಸ್ವಾರಾಣ್ಣಮುಚಿಸೂದನಃ ।
ಸಂಕ್ರಂದನೋ ದುಶ್ಚ್ಯವನ ಸ್ತುರಾಷಾ ಣ್ಮೇಘವಾಹನಃ ॥ ೫೧
ಆಖಂಡಲ ಸ್ಸಹಸ್ರಾಕ್ಷ ಋಭುಕ್ಷಾ *a* (ಸ್ತಸ್ಯತು ಪ್ರಿಯಾ) ।
ಪುಲೋಮಜಾ ಶಚೀಂದ್ರಾಣೀ (ನಗರೀ ತ್ವ) ಮರಾವತೀ ॥ ೫೨
(ಹಯ) ಉಚ್ಚೈಶ್ಶ್ರವಾ (ಸ್ಸೂತೋ) ಮಾತಲಿ ರ್ನಂದನಂ (ವನಂ) ।
(ಸ್ಯಾ ತ್ಪ್ರಾಸಾದೋ) ವೈಜಯಂತೋ ಜಯಂತಃ ಪಾಕಶಾಸನಿಃ ॥ ೫೩
ಐರಾವತೋ ಭ್ರಮಾತಂಗೈ ರಾವಣಾ ಭ್ರಮುವಲ್ಲಭಾಃ ।
ಹ್ರಾದಿನೀ ವಜ್ರ (ಮಸ್ತ್ರೀಸ್ಯಾ) ತ್ಕುಲಿಶಂ ಭಿದುರಂ ಪವಿಃ ॥ ೫೪
ಶತಕೋಟಿ ಸ್ಸ್ವರು ಶ್ಶಂಭೋ ದಂಭೋಳಿ ರಶನಿ (ರ್ದ್ವಯೋಃ) । *b*
ವ್ಯೋಮಯಾನಂ ವಿಮಾನೋ(ಽಸ್ತ್ರೀ ನಾರದಾದ್ಯಾ) ಸ್ಸುರರ್ಷಯಃ ॥ ೫೫
(ಸ್ಯಾ) ತ್ಸುಧರ್ಮಾ ದೇವಸಭಾ ಪೀಯೂಷ ಮಮೃತಂ ಸುಧಾ । *c*
ಮಂದಾಕಿನೀ ವಿಯದ್ಗಂಗಾ ಸ್ವರ್ನದೀ ಸುರದೀರ್ಘಿಕಾ ॥ *d* ೫೬
ಮೇರು ಸ್ಸುಮೇರು ರ್ಹೇಮಾದ್ರೀ ರತ್ನಸಾನು ಸ್ಸುರಾಲಯ ಃ।*e*
(ಪಂಚೈತೇ ದೇವತರವೋ) ಮಂದಾರಃ ಪಾರಿಜಾತಕಃ ॥ ೫೭
ಸಂತಾನಃ ಕಲ್ಪವೃಕ್ಷ(ಶ್ಚ ಪುಂಸಿವಾ) ಹರಿಚಂದನಂ । *f*
ಸನತ್ಕುಮಾರೋ ವೈಧಾತ್ರಃ *g* ಸ್ವರ್ವೈದ್ಯಾ ವಶ್ವಿನೀಸುತೌ ॥ ೫೮
ನಾಸತ್ಯಾ ವಶ್ವಿನೌ ದಸ್ರಾ ವಾಶ್ವಿನೇಯೌ (ಚ ತಾವುಭೌ) ।*h*
(ಸ್ತ್ರೀಯಾಂಬಹುಷ್ವ) ಪ್ಸರಸ ಸ್ಸ್ವರ್ವೇಶ್ಯಾ (ಊರ್ವಶೀಮುಖಾಃ) ॥ *i* ೫೯

---

*a* Indra 35. *b* Indra's—wife 3, capital 1, horse 1, charioteer 1, garden 1, palace 1, son 2, elephant 4, thunderbolt weapon 10. *c* Celestial chariots 2. Celestial rishis 1. Celestial assemblies 2. Ambrosia 3. *d* The celestial Ganges 4. *e* Mount Meru 5. *f* Celestial trees 5. *g* Brahma's son 2. *h* Ashvinis, the two celestial physicians 6. *i* Apsaras, celestial courtesans 2.

*a* ದೇವೇಂದ್ರನು ೩೫. *b* ಇಂದ್ರನ–ಭಾರ್ಯೆಯು ೩, ಪಟ್ಟಣವು ೧, ಕುದುರೆ ೧, ಸಾರಥಿ ೧, ತೋಟ ೧, ಉಪ್ಪರಿಗೆ ೧, ಕುಮಾರನು ೨, ಆನೆ ೪, ವಜ್ರಾಯುಧ ೧೦. *c* ದೇವರಥ ೨, ನಾರದನು ಮೊದಲಾದ ಋಷಿಗಳು ೧, ದೇವತೆಗಳ ಸಭೆಯು ೨, ಅಮೃತ ೩. *d* ಆಕಾಶ ಗಂಗೆ ೪. *e* ಮೇರುಪರ್ವತ ೫. *f* ದೇವತಾ ಕಲ್ಪವೃಕ್ಷಗಳು ೫. *g* ಬ್ರಹ್ಮಪುತ್ರನಾದ ಸನತ್ಕುಮಾರನು ೨. *h* ದೇವವೈದ್ಯರಾದ ಅಶ್ವಿನಿ ದೇವತೆಗಳು ೬. *i* ದೇವವೇಶ್ಯೆಯರು ೨.

ಹಾಹಾಹೂಹೂ (ಶ್ಚೈವಮಾದ್ಯಾ) ಗಂಧರ್ವಾ (ಸ್ತ್ರಿದಿವೌಕಸಾಂ) ।*a*
ಅಗ್ನಿ ರ್ವೈಶ್ವಾನರೋ ವಹ್ನಿ ರ್ವೀತಿಹೋತ್ರೋ ಧನಂಜಯಃ ॥ ೬೦
ಕೃಪೀಟಯೋನಿ ರ್ಜ್ವಲನೋ ಜಾತವೇದಾ ಸ್ತನೂನಪಾತ್ ।
ಬರ್ಹಿ ಶ್ಶುಷ್ಮಾ ಕೃಷ್ಣವರ್ತ್ಮಾ ಶೋಚಿಷ್ಕೇಶ ಉಷರ್ಬುಧಃ ॥ ೬೧
ಆಶ್ರಯಾಶೋ ಬೃಹದ್ಭಾನುಃ ಕೃಶಾನುಃ ಪಾವಕೋಽನಲಃ ।
ರೋಹಿತಾಶ್ವೋ ವಾಯುಸಖ ಶ್ಶಿಖಾವಾ ನಾಶುಶುಕ್ಷಣಿಃ ॥ ೬೨
ಹಿರಣ್ಯರೇತಾ ಹುತಭು ಗ್ದಹನೋ ಹವ್ಯವಾಹನಃ ।
ಸಪ್ತಾರ್ಚಿ ರ್ದಮುನಾ ಶ್ಶುಕ್ರ ಶ್ಚಿತ್ರಭಾನು ರ್ವಿಭಾವಸುಃ ॥ ೬೩
ಶುಚಿ ರಪ್ಪಿತ್ತ *b* ಮೌರ್ವ (ಸ್ತು) ಬಾಡಬೋ ಬಡಬಾನಲಃ ।*c*
(ವಹ್ನೇ ರ್ದ್ವಯೋ) ರ್ಜ್ವಾಲಕೀಲಾ ವರ್ಚಿ ರ್ಹೇತಿ ಶ್ಶಿಖಾ (ಸ್ತ್ರಿಯಾಂ)॥ ೬೪
(ತ್ರಿಷು) ಸ್ಫುಲಿಂಗೊ ಗ್ನಿಕಣ ಸ್ಸಂತಾಪ ಸ್ಸಂಜ್ವರ (ಸ್ಸಮೌ) ।*d*
ಉಲ್ಕಾ (ಸ್ಯಾ ನ್ನಿರ್ಗತಜ್ವಾಲಾ) *e* ಭೂತಿರ್ಭಸಿತ ಭಸ್ಮನೀ ॥ ೬೫
ಕ್ಷಾರೋ ರಕ್ಷಾ (ಚ) *f* ದಾವ(ಸ್ತು) ದವೋ ವನಹುತಾಶನಃ । *g*
ಧರ್ಮರಾಜಃ ಪಿತೃಪತಿ ಸ್ಸಮವರ್ತೀ ಪರೇತರಾಟ್ ॥ ೬೬
ಕೃತಾಂತೋ ಯಮುನಾಭ್ರಾತಾ ಶಮನೋ ಯಮರಾ ಡ್ಯಮಃ ।
ಕಾಲೋ ದಂಡಧರಃ ಶ್ರಾದ್ಧ ದೇವೋ ವೈವಸ್ವತೋಽಂತಕಃ ॥ *h* ೬೭
ರಾಕ್ಷಸಃ ಕೌಣಪಃ ಕ್ರವ್ಯಾ ತ್ಕ್ರವ್ಯಾದೋಽಸ್ರಪ ಆಶರಃ ।
ರಾತ್ರಿಂಚರೋ ರಾತ್ರಿಚರಃ ಕರ್ಬುರೋ ನಿಕಷಾತ್ಮಜಃ ॥ ೬೮
ಯಾತುಧಾನಃ ಪುಣ್ಯಜನೋ ನೈರೃತೋ ಯಾತು ರಕ್ಷಸೀ । *i*
ಪ್ರಚೇತಾ ವರುಣಃ ಪಾಶೀ ಯಾದಸಾಂಪತಿ ರಪ್ಪತಿಃ ॥ *j* ೬೯
ಶ್ವಸನಃ ಸ್ಪರ್ಶನೋ ವಾಯು ರ್ಮಾತರಿಶ್ವಾ ಸದಾಗತಿಃ ।
ಪೃಷದಶ್ವೋ ಗಂಧವಹೋ ಗಂಧವಾಹಾ್ಯನಿಲಾಽಶುಗಾಃ ॥ ೭೦
ಸಮೀರ ಮಾರುತ ಮರು ಜ್ಜಗತ್ಪ್ರಾಣ ಸಮೀರಣಾಃ ।
ನಭಸ್ವ ದ್ವಾತ ಪವನ ಪವಮಾನ ಪ್ರಭಂಜನಾಃ ॥ *k* ೭೧

---

*a* Gandharvas, celestial musicians 1. *b* Agni (*fire*) 34. *c* Submarine fire 3. *d* Agni's–flames 5, sparks 2, heat 2. *e* A torch 1. *f* Ashes 5. *g* Forest fire 3. *h* Yama (*Pluto*) 14. *i* Nairiti 15. *j* Varuna (*Neptune*) 5. *k* Vayu (*wind*) 20.

*a* ದೇವ ಗಾಯಕರು ೧. *b* ಅಗ್ನಿಹೋತ್ರನು ೩೪. *c* ಬಡಬಾಗ್ನಿ ೩. *d* ಅಗ್ನಿಯ—ಜ್ವಾಲೆ ೫, ಕಿಡಿಗಳು ೨, ಬಿಸಿ ೨. *e* ಕೊಳ್ಳಿ ೧. *f* ಬೂದಿ ೫. *g* ಕಾಡುಗಿಚ್ಚು ೩. *h* ಯಮಧರ್ಮರಾಯನು ೧೪. *i* ನೈರುತಿ ೧೫. *j* ವರುಣನು ೫. *k* ವಾಯುವು ೨೦.

ಪ್ರಕಂಪನ (ಶ್ಚಾ)ತಿಬಲೋ *a* ಜಂಝಾವಾತ ಸ್ಸವೃಷ್ಟಿಕಃ । *b*
ಪ್ರಾಣೋಽಪಾನಸ್ಸಮಾನ (ಶ್ಚೋ) ದಾನವ್ಯಾನೌ (ಚ) ವಾಯವಃ ॥ ೬೨
(ಶರೀರಸ್ಥಾ ಇಮೇ) *c* ರಂಹ ಸ್ತರಸೀತುರಯ ಸ್ಸ್ಯದಃ ।
ಜವೋಽ(ಥ) *d* ಶೀಘ್ರಂ ತ್ವರಿತಂ ಲಘು ಕ್ಷಿಪ್ರ ಮರಂ ದ್ರುತಂ ॥ ೬೩
ಸತ್ವರಂ ಚಪಲಂ ತೂರ್ಣ ಮವಿಲಂಬಿತ ಮಾಶು (ಚ) । *e*
ಸತತಾ ನಾರತಾ ಶ್ರಾಂತ ಸಂತತಾವಿರತಾ ನಿಶಂ ॥ ೬೪
ನಿತ್ಯಾನವರತಾ ಜಸ್ರ (ಮಪ್ಯ) *f* (ಥಾ) ತಿಶಯೋ ಭರಃ ।
ಅತಿವೇಲ ಭೃಶಾ ತ್ಯರ್ಥಾ ತಿಮಾತ್ರೋ ದ್ಗಾಢ ನಿರ್ಭರಂ ॥ ೬೫
ತೀವ್ರೈಕಾಂತ ನಿತಾಂತಾನಿ ಗಾಢ ಬಾಢ ದೃಢಾನಿ (ಚ) ।
(ಕ್ಲೀಬೇ ಶೀಘ್ರಾ ದ್ಯಸತ್ವೇಸ್ಯಾ ತ್ರಿಷ್ವೇಷಾಂ ಭೇದ್ಯಗಾಮಿ ಯತ್) ॥ *g* ೬೬
ಕುಬೇರ ಸ್ತ್ರ್ಯಂಬಕಸಖೋ ಯಕ್ಷರಾ ಡ್ಗುಹ್ಯಕೇಶ್ವರಃ ।
ಮನುಷ್ಯಧರ್ಮಾ ಧನದೋ ರಾಜರಾಜೋ ಧನಾಧಿಪಃ ॥ ೬೭
ಕಿನ್ನರೇಶೋ ವೈಶ್ರವಣಃ ಪೌಲಸ್ತ್ಯೋ ನರವಾಹನಃ ।
ಯಕ್ಷೈಕಪಿಂಗೈಲಬಿಲ ಶ್ರೀದ ಪುಣ್ಯಜನೇಶ್ವರಾಃ ॥ *h* ೬೮
(ಅಸ್ಯೋದ್ಯಾನಂ) ಚೈತ್ರರಥಂ (ಪುತ್ರಸ್ತು) ನಲಕೂಬರಃ ।
ಕೈಲಾಸ (ಸ್ಸ್ಥಾನ) ಮಲಕಾ (ಪೂರ್ವಿಮಾನಂ ತು) ಪುಷ್ಪಕಂ ॥ *i* ೬೯
(ಸ್ಯಾ)ತ್ಕಿನ್ನರಃ ಕಿಂಪುರುಷ ಸ್ತುರಂಗವದನೋ ಮಯುಃ । *j*
ನಿಧಿ(ರ್ನಾ)ಶೇವಧಿ *k* (ರ್ಭೇದಾಃ ಪದ್ಮಶಂಖಾದಯೋ ನಿಧೇಃ) ॥ ೭೦
ಮಹಾಪದ್ಮ(ಶ್ಚ) ಪದ್ಮ(ಶ್ಚ) ಶಂಖೋ ಮಕರ ಕಚ್ಛಪೌ ।
ಮುಕುಂದಃ ಕುಂದ ನೀಲೌ(ಚ) ವರ್ಚ(ಶ್ಚ ನಿಧಯೋ ನವ) ॥ *l* ೭೧
॥ ಇತಿ ಸ್ವರ್ಗವರ್ಗಃ ॥

---

*a* A gale 1. *b* Wind with rain 1. *c* The five vital airs in the body 5. *d* Swift motion 5. *e* Speed 11. *f* Incessant action or time 9. *g* Excess 14. *h* Kubera 17. *i* Kubera's—garden 1, son 1, residence 1, city 1, car 1. *j* Kinnaras 4. *k* Kubera's treasures 2. *l* Names of the 9 treasures.

*a* ಬಿರುಗಾಳಿ ೧. *b* ಮಳೆಯಿಂದ ಕೂಡಿದ ಗಾಳಿ ೧. *c* ಶರೀರದಲ್ಲಿರುವ ವಾಯುವು ೫. *d* ವೇಗದೊಡಗೂಡಿರುವ ಗಮನ ೫. *e* ಶೀಘ್ರ ಅಥವಾ ಬೇಗ ೧೧. *f* ಎಡಬಿಡದ ಕ್ರಿಯೆ ಮತ್ತು ಕಾಲಗಳು ೯. *g* ಅತಿಶಯ ೧೪. *h* ಕುಬೇರನು ೧೭. *i* ಕುಬೇರನ ತೋಟ ೧, ಮಗ ೧, ಇರುವ ಸ್ಥಳ ೧, ಪಟ್ಟಣ ೧, ವಿಮಾನ ೧. *j* ಕಿನ್ನರರು ೪. *k* ಕುಬೇರನ ನಿಧಿ ೨. *l* ಕುಬೇರನ ನವನಿಧಿಗಳ ಹೆಸರುಗಳು.

## II. ವ್ಯೋಮವರ್ಗ—VYOMA-VARGA.

ದ್ಯೋ ದಿವೌ (ದ್ವೇ ಸ್ತ್ರಿಯಾ) ಮಭ್ರಂ ವ್ಯೋಮ ಪುಷ್ಕರ ಮಂಬರಂ ।
ನಭೋಽಂತರಿಕ್ಷಂ ಗಗನ ಮನಂತಂ ಸುರವರ್ತ್ಮ ಖಂ ॥ ೮೨
ವಿಯ ದ್ವಿಷ್ಣು ಪದಂ (ವಾತು ಪುಂಸ್ಯಾ) ಕಾಶ ವಿಹಾಯಸೀ ।
ವಿಹಾಯಸೋ(ಪಿ) ನಾಕೋ(ಪಿ) ದ್ಯು(ರಪಿ ಸ್ಯಾತ್ತದವ್ಯಯಂ) ॥ ೮೩
ತಾರಾಪಥ ಶ್ಶಬ್ದಗುಣೋ ಮೇಘದ್ವಾರಂ ಮಹಾಬಿಲಂ । *a*
॥ ಇತಿ ವ್ಯೋಮವರ್ಗಃ ॥

---

## III. ದಿಗ್ವರ್ಗ—DIG-VARGA.

ದಿಶ (ಸ್ತ್ರು) ಕಕುಭಃ ಕಾಷ್ಠಾ ಆಶಾ (ಶ್ಚ) ಹರಿತ (ಶ್ಚ) (ತಾಃ) ॥ ೮೪
ಪ್ರಾಚ್ಯವಾಚೀ ಪ್ರತೀಚ್ಯ (ಸ್ತಾಃ ಪೂರ್ವದಕ್ಷಿಣಪಶ್ಚಿಮಾಃ) ।
(ಉತ್ತರಾದಿ)ಗುದೀಚೀ (ಸ್ಯಾ) *b* ದ್ದಿಶ್ಯಂ (ತು ತ್ರಿಷು ದಿಗ್ಭವೇ) ॥ *c* ೮೫
(ಅವಾಗ್ಭವ) ಮವಾಚೀನ *d* ಮುದೀಚೀನ (ಮುದಗ್ಭವಂ) । *e*
(ಪ್ರತ್ಯಗ್ಭವಂ) ಪ್ರತೀಚೀನಂ *f* (ಪ್ರಾಚೀನಂ) ಪ್ರಾಗ್ಭವಂ (ತ್ರಿಷು) ॥ *g* ೮೬
ಇಂದ್ರೋ ವಹ್ನಿಃ ಪಿತೃಪತಿ ರ್ನೈರ್ಋತೋ ವರುಣೋ ಮರುತ್ ।
ಕುಬೇರ ಈಶಃ (ಪತಯಃ ಪೂರ್ವಾದೀನಾಂ ದಿಶಾಂ ಕ್ರಮಾತ್) ॥ *h* ೮೭
ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ।
ಪುಷ್ಪದಂತ ಸ್ಸಾರ್ವಭೌಮ ಸ್ಸುಪ್ರತೀಕ (ಶ್ಚ ದಿಗ್ಗಜಾಃ) ॥ *i* ೮೮

---

*a* The sky 23. *b* The cardinal points 5—East 1, South 1, West 1, North 1. *c* Belonging to any quarter 1. *d* Belonging to the south 1. *e* Belonging to the north 1. *f* Belonging to the west 1. *g* Belonging to the east 1. *h* The eight regents of the cardinal points 8. *i* The eight elephants of the cardinal points 8.

*a* ಆಕಾಶ ೨೩. *b* ದಿಕ್ಕುಗಳ ಸಾಮಾನ್ಯ ನಾಮಗಳು ೫ — ಪೂರ್ವ ೧, ದಕ್ಷಿಣ ೧, ಪಶ್ಚಿಮ ೧, ಉತ್ತರ ೧. *c* ದಿಕ್ಕುಗಳಲ್ಲಿ ಹುಟ್ಟಿದ ವಸ್ತು ೧. *d* ದಕ್ಷಿಣದಲ್ಲಿ ಹುಟ್ಟಿದ ವಸ್ತು ೧. *e* ಉತ್ತರದಲ್ಲಿ ಹುಟ್ಟಿದ್ದು ೧. *f* ಪಶ್ಚಿಮ ದಲ್ಲಿ ಹುಟ್ಟಿದ್ದು ೧. *g* ಪೂರ್ವದಲ್ಲಿ ಹುಟ್ಟಿದ್ದು ೧. *h* ಅಷ್ಟದಿಕ್ಪಾಲಕರು ೮. *i* ಕ್ರಮವಾಗಿ ಅಷ್ಟದಿಗ್ಗಜಗಳು ೮.

(ಕರಿಣ್ಯೋ)ಽಭ್ರಮುಃ ಕಪಿಲಾ ಪಿಂಗಳಾ ನುಪಮಾ(ಕ್ರಮಾತ್) ।
ತಾಮ್ರಪರ್ಣೀ ಶುಭ್ರದಂತೀ (ಚಾಂ)ಗನಾ (ಚಾಂ)ಜನಾವತೀ ॥*a* ೮೯
(ಕ್ಲೀಬಾವ್ಯಯಂ ತ್ವ)ಪದಿಶಂ (ದಿಶೋರ್ಮಧ್ಯೇ) ವಿದಿಕ್ (ಸ್ತ್ರಿಯಾಂ) ।*b*
ಅಭ್ಯಂತರಂ (ತ್ವ)ಂತರಾಳಂ *c* ಚಕ್ರವಾಳಂ (ತು) ಮಂಡಲಂ ॥*d* ೯೦
ಅಭ್ರಂ ಮೇಘೋ ವಾರಿವಾಹ ಸ್ಸ್ತನಯಿತ್ನು ರ್ಬಲಾಹಕಃ ।
ಧಾರಾಧರೋ ಜಲಧರ ಸ್ತಟಿತ್ವಾ ನ್ವಾರಿದೋಽಂಬುಭೃತ್ ॥ ೯೧
ಘನ ಜೀಮೂತ ಮುದಿರ ಜಲಮುಗ್ಧೂಮಯೋನಯಃ ।*e*
ಕಾದಂಬಿನೀ ಮೇಘಮಾಲಾ *f* (ತ್ರಿಷುಮೇಘಭವೇ)ಭ್ರಿಯಂ ॥*g* ೯೨
ಸ್ತನಿತಂ ಗರ್ಜಿತಂ (ಮೇಘನಿರ್ಘೋಷೇ)ರಸಿತಾದಿ (ಚ) ।*h*
ಶಂಪಾ ಶತಹ್ರದಾ ಹ್ರಾದಿನ್ಯೈರಾವತ್ಯಃ ಕ್ಷಣಪ್ರಭಾ ॥ ೯೩
ತಟಿ ತ್ಸೌದಾಮನೀ ವಿದ್ಯುಚ್ಚಂಚಲಾ ಚಪಲಾ (ಪಿಚ) ।*i*
ಸ್ಫೂರ್ಜಥು ರ್ವಜ್ರನಿರ್ಘೋಷೋ *j* ಮೇಘಜ್ಯೋತಿ ರಿರಮ್ಮದಃ ॥*k* ೯೪
ಇಂದ್ರಾಯುಧಂ ಶಕ್ರಧನುಃ *l* (ತದೇವ ಋಜು) ರೋಹಿತಂ ।*m*
ವೃಷ್ಟಿ ರ್ವರ್ಷಂ (ತದ್ವಿಘಾತೇ)*n* ವಗ್ರಹಾವಗ್ರಹೌ (ಸಮೌ) ॥*o* ೯೫
ಧಾರಾಸಂಪಾತ ಆಸಾರ *p* ಶ್ಶೀಕರೋಽಂಬುಕಣ(ಸ್ಸ್ಮೃತಃ) ।*q*
ವರ್ಷೋಪಲ(ಸ್ತು)ಕರಕೋ *r* (ಮೇಘಚ್ಛನ್ನೇಹ್ನಿ) ದುರ್ದಿನಂ ॥*s* ೯೬

---

*a* The wives of those elephants 8. *b* The intermediate points 2. *c* The middle region 2. *d* Circular region 2. *e* Clouds 15. *f* A line of clouds 2. *g* Anything produced from the clouds 1. *h* Thunders of the clouds 3. *i* Lightning 10. *j* The noise of a thunderbolt 2. *k* Brightness of the clouds 2. *l* Indra's bow 2. *m* Indra's bow unbent 1. *n* Rain 2. *o* Drought 2. *p* Incessant rain 2. *q* Drops of rain 2. *r* Hail stones 2. *s* Cloudy day 1.

*a* ಅಷ್ಟದಿಗ್ಗಜಗಳ ಭಾರ್ಯೆಗಳು ೮. *b* ದಿಕ್ಕುಗಳ ನಡುವೆ ಇರುವ ಮೂಲೆಗಳು ೨. *c* ಮಧ್ಯ ಪ್ರದೇಶ ೨. *d* ಮಂಡಲಾಕಾರದಿಂ ಗುಂಡಾಗಿರುವ ವಸ್ತು ೨. *e* ಮೇಘಗಳು ೧೫. *f* ಮೇಘಪಙ್ತಿ ೨. *g* ಮೇಘದಲ್ಲಿ ಹುಟ್ಟಿದ ಜಲಾದಿಗಳು ೧. *h* ಮೇಘಗರ್ಜನೆ ಅಂದರೆ ಗುಡುಗು ೩. *i* ಮಿಂಚು ೧೦. *j* ವಜ್ರಘಟ್ಟನದಿಂದಾದ ಶಬ್ದ ಅಂದರೆ ಸಿಡಿಲಧ್ವನಿ ೨. *k* ಮೇಘ ತೇಜಸ್ಸು ೨. *l* ಇಂದ್ರ ಧನುಸ್ಸಿನ ಹೆಸರು ಅಂದರೆ ಸುರಚಾಪವೆಂಬ ಆಕಾಶದ ಬಿಲ್ಲು ೨. *m* ನೆಟ್ಟಗಿರುವ ಬಿಲ್ಲು ೧. *n* ಮಳೆ ೨. *o* ಅನಾವೃಷ್ಟಿ ೨. *p* ಯಿಡೆಬಿಡದೆ ಸುರಿಯುವ ಜಡಿಮಳೆ ೨. *q* ತುಂತುರಿಗಳು ೨. *r* ಆನೆಗಲ್ಲು ೨. *s* ಮೋಡ ಮುಚ್ಚಿರುವ ದುರ್ದಿನ ೧.

ಅಂತರ್ಧಾವ್ಯವಧಾ(ಪುಂಸಿ ತ್ವಂ) ತರ್ಧಿ ರಪವಾರಣಂ ।
ಅಪಿಧಾನ ತಿರೋಧಾನ ಪಿಧಾನಾಚ್ಛಾದನಾನಿ(ಚ) ॥*a* ೯೭
ಹಿಮಾಂಶು ಶ್ಚಂದ್ರಮಾ ಶ್ಚಂದ್ರ ಇಂದುಃ ಕುಮುದಬಾಂಧವಃ ।
ವಿಧು ಸ್ಸುಧಾಂಶು ಶ್ಶುಭ್ರಾಂಶು ರೋಷಧೀಶೋ ನಿಶಾಪತಿಃ ॥ ೯೮
ಅಬ್ಜೋ ಜೈವಾತೃಕ ಸ್ಸೋಮೋ ಗ್ಲೌರ್ಮೃಗಾಂಕಃ ಕಲಾನಿಧಿಃ ।
ದ್ವಿಜರಾಜ ಶ್ಶಶಧರೋ ನಕ್ಷತ್ರೇಶಃ ಕ್ಷಪಾಕರಃ ॥*b* ೯೯
ಕಲಾತು (ಷೋಡಶೋ ಭಾಗೋ)*c* ಬಿಂಬೋಽ(ಸ್ತ್ರೀ) ಮಂಡಲಂ (ತ್ರಿಷು) ।*d*
ಭಿತ್ತಂ ಶಕಲ ಖಂಡೇ(ವಾ ಪುಂಸ್ಯ)ರ್ಧೋಽರ್ಧಂ(ಸಮೇಂಶಕೇ) ॥*e* ೧೦೦
ಚಂದ್ರಿಕಾ ಕೌಮುದೀ ಜ್ಯೋತ್ಸ್ನಾ *f* ಪ್ರಸಾದ(ಸ್ತು) ಪ್ರಸನ್ನತಾ ।*g*
ಕಳಂಕಾಂಕೌ ಲಾಂಛನಂ(ಚ)ಚಿಹ್ನಂ ಲಕ್ಷ್ಮ(ಚ) ಲಕ್ಷಣಂ ॥ ೧೦೧
ಪಾಳಿಃ ಕೇತುರ್ಧ್ವಜೋ ಲಿಂಗಂ ನಿಮಿತ್ತಂ ವ್ಯಂಜನಂ ಪದಂ ।
ಪ್ರಜ್ಞಾನಂ (ಚಾ) ಪ್ಯಭಿಜ್ಞಾನಂ ಲಲಾಮಂ (ಚ) ಲಲಾಮ (ಚ) ॥*h* ೧೦೨
ಸುಷುಮಾ (ಪರಮಾಶೋಭಾ)*i* ಶೋಭಾ ಕಾಂತಿ ರ್ದ್ಯುತಿ ಶ್ಛವಿಃ ।*j*
ಅವಶ್ಯಾಯ (ಸ್ತು)ನೀಹಾರ ಸ್ತುಷಾರ ಸ್ತುಹಿನಂ ಹಿಮಂ ॥ ೧೦೩
ಪ್ರಾಲೇಯಂ ಮಿಹಿಕಾ *k* (ಚಾಥ) ಹಿಮಾನೀ ಹಿಮಸಂಹತಿಃ ।*l*
ಶೀತಂ(ಗುಣೇತದ್ವದರ್ಥಾ) *m* ಸ್ಸುಷಿಮ ಶ್ಶಿಶಿರೋ ಜಡಃ ॥ ೧೦೪
ತುಷಾರ ಶ್ಶೀತಲ ಶ್ಶೀತೋ ಹಿಮ (ಸ್ಸಪ್ತಾನ್ಯಲಿಂಗಕಾಃ) ।*n*
ಧ್ರುವ ಔತ್ತಾನಪಾದಿ (ಸ್ಸ್ಯಾ)*o* ದಗಸ್ತ್ಯಃ ಕುಂಭಸಂಭವಃ ॥ ೧೦೫
ಮೈತ್ರಾವರುಣಿ *p* (ರಸ್ಯೈವ) ಲೋಪಾಮುದ್ರಾ (ಸಧರ್ಮಿಣೀ) ।*q*

---

*a* A cover 8. *b* Chandra (*the moon*) 20. *c* One-sixteenth part of the moon's diameter 1. *d* The disk of the sun or moon 2. *e* Fragments 4. *f* Moonlight 3. *g* Purity 2. *h* A spot 17. *i* Dazzling brightness 1. *j* Brightness 4. *k* Dew 7. *l* Thick fog 1. *m* Cold 1. *n* Cold objects 7. *o* Pole star 2. *p* Agastya (*Canopus*) 3. *q* Agastya's wife 1.

*a* ಹೊದಿಕೆ, ಮುಚ್ಚಳ ೮. *b* ಚಂದ್ರನು ೨೦. *c* ೧೬ನೇ ಅಂಶವೆಂದರೆ ಚಂದ್ರನಲ್ಲಿ ಹದಿನಾರನೇ ಪಾಲು ೧. *d* ಚಂದ್ರಸೂರ್ಯ ಮಂಡಲಗಳು ೨. *e* ಮುರುಕು ಚೂರುಗಳು ೪. *f* ಬೆಳದಿಂಗಳು ೩. *g* ಸ್ವಚ್ಛತ್ವವು ೨. *h* ಗುರುತು ೧೭. *i* ಅಧಿಕವಾದ ಕಾಂತಿ ೧. *j* ಕಾಂತಿ ೪. *k* ಮಂಜು, ಹಿಮ ೭. *l* ಮಂಜಿನ ಗುಂಪು ೧. *m* ಶೈತ್ಯಗುಣ ೧. *n* ಶೈತ್ಯಗುಣವುಳ್ಳ ವಸ್ತುಗಳು ೭. *o* ಧ್ರುವ ನಕ್ಷತ್ರ ೨. *p* ಅಗಸ್ತ್ಯಋಷಿ ೩. *q* ಅಗಸ್ತ್ಯಪತ್ನಿ ೧.

(ಅಜಾತಶೃಂಗೋ ಗೌಃ ಕಾಲೇಽಪ್ಯಶ್ಮಶ್ರುರ್ನಾ ಚ) ತೂಬರಃ ||*a* ೩.೨೦
(ಸ್ವರ್ಣೇಽಪಿ) ರಾಃ *b* ಪರಿಕರಃ (ಪರ್ಯಂಕಪರಿವಾರಯೋಃ) |*c*
(ಮುಕ್ತಾಶುದ್ಧೌ ಚ) ತಾರ (ಸ್ಸ್ಯಾತ್) *d* ಚ್ಛರೋ (ವಾಯೌ ಸ ತು ತ್ರಿಷು) ||*e*
(ಕರ್ಬುರೇಽಥ ಪ್ರತಿಜ್ಞಾಜಿಸಂವಿದಾಪತ್ಸು) ಸಂಗರಃ | *f*
(ವೇದಭೇದೇ ಗುಪ್ತವಾದೇ) ಮಂತ್ರೋ *g* ಮಿತ್ರೋ (ರವಾವಪಿ) ||*h* ೩.೨೨
(ಮಖೇಷು ಯೂಪಖಂಡೇಽಪಿ) ಸ್ವರು *i* (ರ್ಗುಹ್ಯೇಽಪ್ಯ) ವಸ್ಕರಃ | *j*
ಆಡಂಬರ(ಸ್ತೂರ್ಯರವೇ ಗಜೇಂದ್ರಾಣಾಂ ಚ ಗರ್ಜಿತೇ) ||*k* ೩.೨೩
ಅಭಿಹಾರೋಽ (ಭಿಯೋಗೇ ಚ ಚೌರ್ಯೇ ಸನ್ನಹನೇಽಪಿ ಚ) |*l*
(ಸ್ಯಾಜ್ಜಂಗಮೇ) ಪರೀವಾರಃ (ಖಡ್ಗಕೋಶೇ ಪರಿಚ್ಛದೇ) ||*m* ೩.೨೪
ವಿಷ್ಟರೋ (ವಿಟಪೀ ದರ್ಭಮುಷ್ಟಿಃ ಪೀಠಾದ್ಯಮಾಸನಂ) |*n*
(ದ್ವಾರಿ ದ್ವಾಸ್ಥೇ) ಪ್ರತೀಹಾರಃ ಪ್ರತಿಹಾರ್ಯ(ಪ್ಯನಂತರೇ) ||*o* ೩.೨೫
(ವಿಪುಲೇ ನಕುಲೇವಿಷ್ಣೌ) ಬಭ್ರು(ಸ್ಸ್ಯಾತ್ ಪಿಂಗಳೇ ತ್ರಿಷು) |*p*

---

*a* Hornless cow; a man with a hairless face. *b* Gold; money. *c* Cot, bed-stead; attendants, followers. *d* Pearly, white; high pitch. *e* Wind; variegated. *f* Resolve, determination; war, battle; true; misfortune, calamity. *g* A part of the Veda; a mystical verse or incantation, secret communication. *h* Sun; friend. *i* Sacrifice; arrow; a piece of the sacrificial post. *j* Private parts; ordure. *k* Sound of a musical instrument; roar of an elephant. *l* Attacking; robbing; binding. *m* Movable; sheath, scabbard; servant. *n* Tree; a handful of sacred grass; beads, etc. *o* Door, gate; doorkeeper, porter. *p* A mungoose *(viverra ichneumon)*; tawny, brown.

*a* ಕೊಂಬುಗಳು ಹುಟ್ಟದಿರುವ ಗೋವು, ಪ್ರಾಯದಲ್ಲಿಯೂ ಗಡ್ಡ ಮೀಸೆಗಳು ಹುಟ್ಟದಿರುವವನು. *b* ಬಂಗಾರ, ಧನ. *c* ಮಂಚವು, ಪರಿವಾರ. *d* ಮುತ್ತಿನ ಶುದ್ಧಿ, ಎತ್ತರವಾದ ಧ್ವನಿ. *e* ವಾಯು, ನಾನಾವರ್ಣಗಳುಳ್ಳ. *f* ಪ್ರತಿಜ್ಞೆ, ಯುದ್ಧ, ನಿಶ್ಚಯ, ಆಪತ್ತು. *g* ವೇದದ ಭಾಗ, ಗಾಯತ್ರ್ಯಾದಿಗಳು, ರಹಸ್ಯವಾಗಿ ಹೇಳುವದು. *h* ಸೂರ್ಯನು, ಸ್ನೇಹಿತನು. *i* ಯಜ್ಞ, ಬಾಣ, ಯೂಪಸ್ತಂಭದ ತುಂಡು. *j* ಸ್ತ್ರೀ ಪುರುಷರ ಗುಹ್ಯಪ್ರದೇಶ, ಮಲ. *k* ವಾದ್ಯಧ್ವನಿ, ಗಜಧ್ವನಿ. *l* ಎದುರು ಬೀಳುವಿಕೆ, ಕಳವು, ಕಟ್ಟುವುದು. *m* ಸಂಚಾರವುಳ್ಳ, ಕತ್ತಿಯ ಒರೆ, ಪರಿಜನ. *n* ಮರ, ಒಂದು ಹಿಡಿಯ ದರ್ಭೆ, ಮಣಿ ಮುಂತಾದದ್ದು. *o* ಬಾಗಿಲು, ಬಾಗಿಲುಕಾಯುವವನು. *p* ಮುಂಗುಸಿ, ಪಿಂಗಳವರ್ಣ.

ಸಾರೋ (ಬಲೇ ಸ್ಥಿರಾಂಶೇ ಚ ನ್ಯಾಯ್ಯೇ ಕ್ಲೀಬಂ ವರೇತ್ರಿಷು) ||*a* ೩೨೬
ದುರೋದರೋ (ದ್ಯೂತಕಾರೇ ಪಣೇದ್ಯೂತೇ ದುರೋದರಂ) |*b*
(ಮಹಾರಣ್ಯೇ ದುರ್ಗಪಥೇ) ಕಾಂತಾರಂ (ಪುನ್ನಪುಂಸಕಂ) ||*c* ೩೨೭
ಮತ್ಸರೋऽನ್ಯಶುಭದ್ವೇಷೇ ತದ್ವತ್ಕೃಪಣಯೋಸ್ತ್ರಿಷು) |*d*
(ದೇವಾದ್ವೃತೇ) ವರಃ (ಶ್ರೇಷ್ಠೇ ತ್ರಿಷು ಕ್ಲೀಬೇ ಮನಾಕ್ಪ್ರಿಯೇ) ||*e* ೩೨೮
(ವಂಶಾಂಕುರೇ) ಕರೀರೋऽ(ಸ್ತ್ರೀ ತರುಭೇದೇ ಘಟೇ ಚ ನಾ) |*f*
(ನಾ ಚಮೂಜಘನೇ ಹಸ್ತಸೂತ್ರೇ) ಪ್ರತಿಸರೋऽ(ಸ್ತ್ರಿಯಾಂ) ||*g* ೩೨೯
(ಯಮಾನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಂಶುವಾಜಿಷು |
ಶುಕಾಹಿಕಪಿಭೇಕೇಷು) ಹರಿ (ರ್ನಾ ಕಪಿಲೇ ತ್ರಿಷು) ||*h* ೩೩೦
ಶರ್ಕರಾ (ಖರ್ಪರಾಂಶೇऽಪಿ) *i* ಯಾತ್ರಾ (ಸ್ಯಾದ್ಯಾಪನೇ ಗತೌ) | *j*
ಇರಾ (ಭೂವಾಕ್ಸುರಾऽಪ್ಸು ಸ್ಯಾತ್) *k* ತಂದ್ರೀ (ನಿದ್ರಾಪ್ರಮೀಲಯೋಃ) ||*l*

---

*a* Strength; essence, essential or vital part; fit, proper; excellent, best. *b* Gambler; wager, stake, bet; gambling. *c* Thick forest, wilderness; impassable or difficult road. *d* Envy; envious. *e* Boon or blessing sought in prayer, divine gift; excellent, best; slightly preferable. *f* The shoot of a bamboo; a leafless thorny plant common in deserts (*Capparis aphylla*); earthen pot. *g* Rear guard of an army; a thread tied upon the wrist at some particular ceremonies. *h* Yama (*Pluto*); Vayu (*God of air*), Indra; Moon; Sun; Vishnu; lion; ray; horse; parrot; snake; ape; frog; golden yellow. *i* Potshreds; sugar. *j* Leading; going, travelling. *k* The earth; speech, speaking; spirituous liquor, toddy; water. *l* Sleep; swoon.

*a* ಬಲ, ಸ್ಥಿರಾಂಶ, ಯುಕ್ತವಾದ, ಶ್ರೇಷ್ಠವಾದ. *b* ಜೂಜಾಡುವವನು, ಪಂಥ, ಜೂಜು. *c* ಹೆಗ್ಗಾಡು, ಹೋಗಲು ಕಷ್ಟವಾದ ದಾರಿ. *d* ಇತರರಿಗೆ ಒಳ್ಳೇದಾಗುವುದನ್ನು ದ್ವೇಷಿಸುವುದು, ಅಂತಹ ದ್ವೇಷವುಳ್ಳ, ಕೃಪಣ. *e* ದೇವತಾಪ್ರಸಾದ ಲಬ್ಧವಾದ ಇಷ್ಟಾರ್ಥ, ಶ್ರೇಷ್ಠವಾದ, ಸ್ವಲ್ಪ ಇಷ್ಟವಾದ. *f* ಬಿದಿರ ಮೊಳಕೆ, ಮುಳ್ಳುಗಿಡ, ಗಡಿಗೆ. *g* ಸೈನ್ಯದ ಹಿಂಭಾಗ, ಕಂಕಣ. *h* ಯಮ, ವಾಯು, ಇಂದ್ರ, ಚಂದ್ರ, ಸೂರ್ಯ, ವಿಷ್ಣು, ಸಿಂಹ, ಕಿರಣ, ಕುದುರೆ, ಗಿಣಿ, ಹಾವು, ಮಂಗ, ಕಪ್ಪೆ, ಚಿನ್ನದ ಬಣ್ಣವುಳ್ಳದ್ದು. *i* ಹೆಂಚಿನ ಚೂರು, ಸಕ್ಕರೆ. *j* ನಡೆಸುವುದು, ಗಮನ. *k* ಭೂಮಿ, ವಾಕ್ಕು, ಹೆಂಡ, ನೀರು. *l* ನಿದ್ದೆ, ಮೂರ್ಛೆ.

ಧಾತ್ರೀ (ಸ್ಯಾದುಪಮಾತಾಽಪಿ ಕ್ಷಿತಿರಪ್ಯಾಮಲಕ್ಯಪಿ) |*a*
ಕ್ಷುದ್ರಾ (ವ್ಯಂಗಾ ನಟೀ ವೇಶ್ಯಾ ಸರಘಾ ಕಂಟಕಾರಿಕಾ ‖ ೩೩೨
ತ್ರಿಷು ಕ್ರೂರೇಽಧಮೇಽಲ್ಪೇಽಪಿ)ಕ್ಷುದ್ರಂ *b* ಮಾತ್ರಾ (ಪರಿಚ್ಛದೇ |
ಅಲ್ಪೇ ಚ ಪರಿಮಾಣೇ ಚ) ಮಾತ್ರಂ(ಕಾರ್ತ್ಸ್ನ್ಯೇಽವಧಾರಣೇ) ‖*c* ೩೩೩
(ಆಲೇಖ್ಯಾಶ್ಚರ್ಯಯೋ)ಶ್ಚಿತ್ರಂ *d* ಕಳತ್ರಂ (ಶ್ರೋಣಿಭಾರ್ಯಯೋಃ) |*e*
(ಯೋಗ್ಯಭಾಜನಯೋಃ) ಪಾತ್ರಂ *f* ಪತ್ರಂ (ವಾಹನಪಕ್ಷಯೋಃ) ‖*g* ೩೩೪
(ನಿದೇಶಗ್ರಂಥಯೋ)ಶ್ಶಾಸ್ತ್ರಂ *h* ಶಸ್ತ್ರ(ಮಾಯುಧಲೋಹಯೋಃ) |*i*
(ಸ್ಯಾಜ್ಜಟಾಂಶುಕಯೋ)ರ್ನೇತ್ರಂ *j* ಕ್ಷೇತ್ರಂ (ಪತ್ನೀಶರೀರಯೋಃ) ‖*k* ೩೩೫
(ಮುಖಾಗ್ರೇ ಕ್ರೋಡಹಲಯೋಃ) ಪೋತ್ರಂ *l* ಗೋತ್ರಂ (ತು ನಾಮ್ನಿ ಚ)|*m*
ಸತ್ರ(ಮಾಚ್ಛಾದನೇ ಯಜ್ಞೇ ಸದಾ ದಾನೇ ವನೇಽಪಿ ಚ) ‖*n* ೩೩೬
ಅಜಿರಂ (ವಿಷಯೇ ಕಾಯೇ) *o* (ಽಪ್ಯ)ಂಬರಂ (ವ್ಯೋಮ್ನಿ ವಾಸಸಿ) |*p*

---

*a* Nurse ; the earth ; the emblic myrobolan tree *(Phylanthus emblica)*. *b* A woman maimed or defective in some limb ; dancing girl ; prostitute ; bee ; a sort of prickly nightshade (*Solanum jacquinii*) ; cruel ; mean ; base. *c* Family, household ; little, small ; measure, size ; all ; true. *d* A painting or picture ; wonder. *e* Buttocks ; wife. *f* Worthy ; metallic vessels, as plates, cups, etc. *g* Vehicle or conveyance ; wing ; leaf. *h* Command ; a book. *i* Weapon ; metal. *j* Hanging roots (like those of the banyan); garment ; eye. *k* Wife ; body ; holy place, place of pilgrimage. *l* Snout of a pig ; ploughshare. *m* Name ; tribe, family ; mountain, hill. *n* Covering ; sacrifice ; unceasing liberality ; forest. *o* An object perceptible to the senses, body. *p* Sky ; cloth.

*a* ಸಾಕಿದ ತಾಯಿ, ಭೂಮಿ, ನೆಲ್ಲಿಗಿಡ. *b* ಅಂಗಹೀನಳು, ನಟ್ಟುವವಳು, ಸೂಳೆ, ಜೇನುನೊಣ, ರಾಮುಗುಳ್ಳದ ಗಿಡ, ಕ್ರೂರ, ಅಧಮ, ಅಲ್ಪ. *c* ಪರಿವಾರ ಕೊಂಚ, ಅಳತೆಯ ವಿಶೇಷ, ಎಲ್ಲಾ, ಅವಧಾರಣ. *d* ಬಣ್ಣಗಳಿಂದ ಬರೆವ ಆಕಾರ ವಿಶೇಷ, ಆಶ್ಚರ್ಯ. *e* ಅಂಡು, ಹೆಂಡತಿ. *f* ಯೋಗ್ಯ, ತಳಿಗೆ ಮುಂತಾದ್ದು. *g* ವಾಹನ, ರೆಕ್ಕೆ, ಎಲೆ. *h* ಆಜ್ಞೆ, ಗ್ರಂಥ. *i* ಆಯುಧ, ಲೋಹ. *j* ಬಿಳಲು, ಬಟ್ಟೆ, ಕಣ್ಣು. *k* ಹೆಂಡತಿ, ಶರೀರ, ಪುಣ್ಯಸ್ಥಳ. *l* ಹಂದಿಯ ಮೂಗು, ನೇಗಿಲ ಮೂಗು. *m* ಹೆಸರು, ಕುಲ, ಬೆಟ್ಟ. *n* ಆಚ್ಛಾದನ, ಯಜ್ಞ, ಸದಾ ಕೊಡುವಿಕೆ, ಕಾಡು. *o* ಶಬ್ದಾದಿ ವಿಷಯ, ಶರೀರ. *p* ಆಕಾಶ, ವಸ್ತ್ರ.

ಚಕ್ರಂ (ರಾಷ್ಟ್ರೇಽ) *a* ಪ್ಯಕ್ಷರಂ (ತು ಮೋಕ್ಷೇಽಪಿ) *b* ಕ್ಷೀರ(ಮಪ್ಸು ಚ) ||*c*
(ಸ್ವರ್ಣೇಽಪಿ) ಭೂರಿಚಂದ್ರೌ (ದ್ವೌ) *d* (ದ್ವಾರಮಾತ್ರೇಽಪಿ) ಗೋಪುರಂ |*e*
(ಗುಹಾರಂಭೌ) ಗಹ್ವರೇ (ದ್ವೇ) *f* (ರಹೋಽಂತಿಕ)ಮುಪಹ್ವರೇ ||*g* ೩೩೮
(ಪುರೋಽಧಿಕಮುಪ)ರ್ಯಗ್ರಾ *h* (ಣ್ಯಗಾರೇ ನಗರೇ) ಪುರಂ |
ಮಂದಿರಂ *i* (ಚಾಥ) ರಾಷ್ಟ್ರೋಽ(ಸ್ತ್ರೀ ವಿಷಯೇ ಸ್ಯಾದುಪದ್ರವೇ) ||*j* ೩೩೯
ದರೋಽ (ಸ್ತ್ರಿಯಾಂ ಭಯೇ ಶ್ವಭ್ರೇ) *k* ವಜ್ರೋಽ(ಸ್ತ್ರೀ ಹೀರಕೇ ಪವೌ) |*l*
ತಂತ್ರಂ (ಪ್ರಧಾನೇ ಸಿದ್ಧಾಂತೇ ಸೂತ್ರವಾಯೇ ಪರಿಚ್ಛದೇ) ||*m* ೩೪೦
ಔಶೀರ(ಶ್ಚಾಮರೇ ದಂಡೇಪ್ಯೌಶೀರಂ ಶಯನಾಸನೇ) |*n*
ಪುಷ್ಕರಂ (ಕರಿಹಸ್ತಾಗ್ರೇ ವಾದ್ಯಭಾಂಡಮುಖೇ ಜಲೇ ||  ೩೪೧
ವ್ಯೋಮ್ನಿ ಖಡ್ಗಫಲೇ ಪದ್ಮೇ ತೀರ್ಥೌಷಧಿವಿಶೇಷಯೋಃ) |*o*

---

*a* Forest; army; a part of a carriage; group, assemblage; the ruddy goose (*anas caṣaroa*). *b* Final beatitude, the liberation of the soul from the body and from further transmigration, absorption, into the deity; letters of the alphabet; Brahma. *c* Water; milk. *d* Gold; much; a kind of gold; moon; a kind of camphor. *e* Door, gate; town-gate. *f* Cave; beginning. *g* Solitary, alone; near. *h* Forefront; foremost, chief, principal; superior, best. *i* House; city. *j* Realm, empire, kingdom; public calamity. *k* Fear; pit. *l* Diamond; Indra's thunderbolt. *m* Principal, chief; established principle; spinning yarn; family, household. *n* *Chamara* or chowry, a fly-whisker made of the tail of the Tartary ox; stick, rod, staff; bed, mattress; seat. *o* Tip of an elephant's trunk; head or skin of a drum; water; sky; sheath, scabbard; lotus flower; a holy bathing place or place of pilgrimage; bulb of the water-lily.

*a* ಕಾಡು, ಸೈನ್ಯ, ಬಂಡಿಯ ಅಂಗ, ಗುಂಪು, ಒಂದು ಪಕ್ಷಿ. *b* ಮೋಕ್ಷ, ಅಕಾರಾದಿಗಳು, ಬ್ರಹ್ಮ. *c* ನೀರು, ಹಾಲು. *d* ಭಂಗಾರ, ಬಹಳ; ಭಂಗಾರ ಚಂದ್ರ, ಪಚ್ಚಕರ್ಪೂರ. *e* ಬಾಗಿಲು, ಊರು ಬಾಗಿಲು. *f* ಗುಹೆ, ಆರಂಭ. *g* ಏಕಾಂತ, ಸಮೀಪ. *h* ಮುಂಭಾಗ, ಹೆಚ್ಚಾದ, ಮೇಲ್ಭಾಗ. *i* ಮನೆ, ಪಟ್ಟಣ. *j* ನಾಡು, ಉಪದ್ರವ. *k* ಅಂಜಿಕೆ, ಗುಳಿ. *l* ಒಂದು ತರದ ಮಣಿ, ಸಿಡಿಲು. *m* ಪ್ರಧಾನವಾದ, ಸಿದ್ಧಾಂತ, ನೂಲನ್ನು ನೇಯುವುದು, ಪರಿವಾರ. *n* ಚಾಮರ, ಕೋಲು, ಹಾಸಿಗೆ, ಗದ್ದಿಗೆ. *o* ಆನೆ ಸೊಂಡಿಲ ತುದಿ, ವಾದ್ಯಗಳ ಬಾಯಿ, ನೀರು, ಆಕಾಶ, ಕತ್ತಿಯ ಒರೆ, ತಾವರೆ, ತೀರ್ಥ, ಮೂಲಿಕಾವಿಶೇಷ.

ಅಂತರ (ಮವಕಾಶಾವಧಿಪರಿಧಾನಾಂತರ್ಧಿಭೇದತಾದರ್ಥ್ಯೇ ॥ ೩೪೨
ಛಿದ್ರಾತ್ಮೀಯವಿನಾಬಹಿರವಸರಮಧ್ಯೇಽಂತರಾತ್ಮನಿ ಚ) ।*a*
(ಮುಸ್ತೇಽಪಿ) ಪಿಠರಂ *b* (ರಾಜಕಶೇರುಣ್ಯಪಿ) ನಾಗರಂ ॥*c* ೩೪೩
ಶಾರ್ವರಂ (ತ್ವಂಧತಮಸೇ ಘಾತುಕೇ ಭೇದ್ಯಲಿಂಗಕಂ) ।*d*
ಗೌರೋಽ(ರುಣೇ ಸಿತೇ ಪೀತೇ) *e* (ವ್ರಣಕಾರ್ಯಪ್ಯ)ರುಷ್ಕರಃ ॥*f* ೩೪೪
ಜಠರಃ (ಕಠಿನೇಽಪಿ ಸ್ಯಾ) *g* (ದಧಸ್ತಾದಪಿ ಚಾ) ಧರಃ ।*h*
(ಅನಾಕುಲೇಽಪಿ ಚೈ) ಕಾಗ್ರೋ *i* ವ್ಯಗ್ರೋ (ವ್ಯಾಸಕ್ತ ಆಕುಲೇ) ॥*j* ೩೪೫
(ಉಪರ್ಯುದೀಚ್ಯಶ್ರೇಷ್ಠೇಷ್ವ)ಪ್ಯುತ್ತರ(ಸ್ಸ್ಯಾತ್) *k* ಅನುತ್ತರಃ ।
(ಏಷಾಂ ವಿಪರ್ಯಯೇ ಶ್ರೇಷ್ಠೇ) *l* (ದೂರಾನಾತ್ಮೋತ್ತಮಾಃ) ಪರಾಃ ॥*m* ೩೪೬
(ಸ್ವಾದುಪ್ರಿಯೌ ತು) ಮಧುರೌ *n* ಕ್ರೂರೌ (ಕಠಿನನಿರ್ದಯೌ) ।*o*
ಉದಾರೋ (ದಾತೃಮಹತೋಃ) *p* ರಿತರ(ಸ್ತ್ವನ್ಯನೀಚಯೋಃ) ॥*q* ೩೪೭

---

*a* Opportunity; limit; a garment in wear; leisure; other, different; on account of, by reason of; hole; one's own; except; out; necessary; between; internal, within one's self. *b* Earth-nut; earthen pot. *c* A sort of grass (*Cyperus rotundus*); dry ginger; belonging to a town. *d* Pitch darkness; murderer. *e* Red; white; yellow. *f* Wounding; scratching. *g* Hard; belly. *h* Lower, inferior; lip, *i* Unmoved, firm, stable; intent upon. *j* A zealous or eager man; agitated, hasty. *k* Superior, one more powerful; northern; excellent, best; reply, answer. *l* Not northern; superior, excellent. *m* Distant; other, different; pre-eminent, superior. *n* Sweet; agreeable. *o* Hard, cruel; unmerciful, pitiless. *p* Generous, liberal; great. *q* Other, different; low, mean.

*a* ಅವಕಾಶ, ಅವಧಿ, ಉಡುವ ಬಟ್ಟೆ, ವ್ಯವಧಾನ, ಭೇದ, ಅದಕ್ಕೋಸ್ಕರವಿದೆನ್ನುವಿಕೆ, ತೂತು, ತನ್ನದು, ಹೊರತು, ಹೊರಗೆ, ಅವಸರ, ನಡುವೆ, ಅಂತರಾತ್ಮ. *b* ತುಂಗೆ ಗಡ್ಡೆ, ಮಡಕೆ. *c* ಭದ್ರಮುಸ್ತೆ, ಶುಂಠಿ, ನಗರ ಸಂಬಂಧಿ. *d* ಕಗ್ಗತ್ತಲೆ, ಘಾತುಕ. *e* ಕೆಂಪಾದ, ಬಿಳಿದಾದ, ಹಳದಿಯಾದ, *f* ಹುಣ್ಣು ಮಾಡುವ, ಗೀರಿಡುವ. *g* ಕಠಿನವಾದ, ಹೊಟ್ಟೆ. *h* ಕೆಳಗಿರುವ, ತುಟಿ. *i* ಕದಲದಿರುವ, ಸಾವಧಾನ. *j* ಆಸಕ್ತ, ತ್ವರೆಪಡುವ. *k* ಮೇಲಾದ ಬಡಗಲದು, ಶ್ರೇಷ್ಠವಾದ, ಬದಲುಮಾತು. *l* ಉತ್ತರವಲ್ಲದ್ದು, ಶ್ರೇಷ್ಠ. *m* ದೂರ, ಇತರ, ಉತ್ತಮ. *n* ಸೀಯಾದ, ಇಷ್ಟವಾದ. *o* ಕಠಿಣವಾದ, ಕರುಣವಿಲ್ಲದ. *p* ಕೊಡುವ, ದೊಡ್ಡದಾದ. *q* ಅನ್ಯ, ನೀಚ.

(ಮಂದಸ್ವಚ್ಛಂದಯೋಃ) ಸ್ವೈರ *a* ಶ್ಶುಭ್ರ (ಮುದ್ದೀಪ್ತಶುಕ್ಲಯೋಃ) |*b*

|| ಇತಿ ರಾಂತಾಃ ||

(ಚೂಡಾ ಕಿರೀಟಂ ಕೇಶಾಶ್ಚ ಸಂಯತಾ) ಮೌಳಯ(ಸ್ತ್ರಯಃ) ||*c* ೩೪೮
(ದ್ರುಮಪ್ರಭೇದಮಾತಂಗಕಾಂಡಪುಷ್ಪಾಣಿ) ಪೀಲವಃ |*d*
(ಕೃತಾಂತಾನೇಹಸೋಃ) ಕಾಲ *e* (ಶ್ಚತುರ್ಥೇಽಪಿ ಯುಗೇ) ಕಲಿಃ || *f* ೩೪೯
(ಸ್ಯಾತ್ಕುರಂಗೇಽಪಿ) ಕಮಲಃ *g* (ಪ್ರಾವಾರೇಽಪಿ ಚ) ಕಂಬಳಃ |*h*
(ಕರೋಪಹಾರಯೋಃ ಪುಂಸಿ) ಬಲಿಃ (ಪ್ರಾಣ್ಯಂಗಜೇ ಸ್ತ್ರಿಯಾಂ) ||*i* ೩೫೦
(ಸ್ಥೌಲ್ಯಸಾಮರ್ಥ್ಯಸೈನ್ಯೇಷು) ಬಲಂ (ನಾ ಕಾಕಸೀರಿಣೋಃ) | *j*
ವಾತೂಲಃ (ಪುಂಸಿ ವಾತ್ಯಾಯಾಮಪಿ ವಾತಾಸಹೇ ತ್ರಿಷು) ||*k* ೩೫೧
(ಭೇದ್ಯಲಿಂಗಶ್ಶಠೇ) ವ್ಯಾಳಃ (ಪುಂಸಿ ಶ್ವಾಪದಸರ್ಪಯೋಃ) |*l*
ಮಲೋಽ(ಸ್ತ್ರೀ ಪಾಪವಿಟ್ಕಿಟ್ಟಾನ್ಯಸ್ತ್ರೀ) *m* ಶೂಲಂ (ರುಗಾಯುಧಂ) ||*n* ೩೫೨
(ಶಂಕಾವಪಿ ದ್ವಯೋಃ) ಕೀಲಃ *o* ಪಾಳಿಃ (ಸ್ತ್ರ್ಯಶ್ರ್ಯಂಕಪಙ್ಕ್ತಿಷು) |*p*

---

*a* Idle ; self-willed, independent. *b* Shining, brilliant ; white, fair. *c* A lock of hair on the crown of the head ; crown, diadem ; matted hair. *d* The tree *Careya arborea* ; elephant ; arrow ; flower. *e* Yama (*Pluto*) ; time. *f* The Kali age, the fourth or Iron age ; quarrel. *g* Deer ; Lotus ; water. *h* A scarf or upper cloth ; blanket. *i* Tax, royal revenue ; the folds of the skin on the body. *j* Bulkiness, stoutness ; strength, power ; army ; crow ; Rama. *k* Wind, gale ; unable to stand the wind. *l* Rogue, rascal ; tiger ; snake. *m* Sin ; excretion of the body, as fæces, etc. ; rust ; dirt, filth. *u* Sharp pain, as colic, etc. ; pike, dart, weapon. *o* Peg ; flame. *p* Border, margin ; mark, sign ; line, row.

*a* ಸೋಮಾರಿ, ಸ್ವತಂತ್ರ. *b* ಬೆಳಗುತ್ತಿರುವ, ಬಿಳಿದಾದ. *c* ಜುಟ್ಟು, ಕಿರೀಟ, ಜಡೆ. *d* ಒಂದು ಗಿಡ, ಆನೆ, ಬಾಣ, ಹೂವು. *e* ಯಮ, ಹೊತ್ತು. *f* ನಾಲ್ಕನೆಯ ಯುಗ, ಕಲಹ. *g* ಜಿಂಕೆ, ತಾವರೆ, ನೀರು. *h* ಅಂಗವಸ್ತ್ರ, ಕಂಬಳಿ. *i* ಕಾಣಿಕೆ, ಪ್ರಾಣಿಗಳ ಅಂಗದಲ್ಲಿರುವ ಸುಕ್ಕು. *j* ದಪ್ಪವಾಗಿರುವಿಕೆ ಸಾಮರ್ಥ್ಯ, ಸೇನೆ, ಕಾಗೆ, ರಾಮ. *k* ಗಾಳಿಯ ಸಮೂಹ, ಗಾಳಿಯನ್ನು ಸಹಿಸಲಾರದ. *l* ದುರ್ಜನ, ಹುಲಿ, ಹಾವು. *m* ಪಾಪ, ಅಮೇಧ್ಯ, ಕೊಳೆ. *n* ಒಂದು ರೋಗ, ಒಂದು ಆಯುಧ. *o* ಗೂಟ, ಉರಿ. *p* ಅಂಚು, ಗುರ್ತು, ಸಾಲು.

ಕಲಾ (ಶಿಲ್ಪೇ ಕಾಲಭೇದೇಽ) *a* ಪ್ಯಾಳಿಃ (ಸ್ತ್ರ್ಯಾವಳೀ ಅಪಿ) ॥*b* ೩೫೩
(ಅಬ್ಧ್ಯಂಬುವಿಕೃತೌ) ವೇಲಾ (ಕಾಲಮರ್ಯಾದಯೋರಪಿ) ।*c*
ಬಹುಲಾಃ (ಕೃತ್ತಿಕಾ ಗಾವೋ ಬಹುಲೋಗ್ನೌ ಶಿತೌ ತ್ರಿಷು) ॥*d* ೩೫೪
ಲೀಲಾ (ವಿಲಾಸಕ್ರಿಯಯೋಃ) *e* ರುಪಲಾ (ಶರ್ಕರಾಪಿ ಚ) ।*f*
(ಶೋಣಿತೇಽಂಭಸಿ) ಕೀಲಾಲಂ *g* ಮೂಲ(ಮಾದ್ಯೇ ಶಿಫೇಭಯೋಃ) ॥*h* ೩೫೫
ಜಾಲಂ (ಸಮೂಹ ಆನಾಯೋ ಗವಾಕ್ಷಕ್ಷಾರಕಾವಪಿ) ।*i*
ಶೀಲಂ (ಸ್ವಭಾವೇ ಸದ್ವೃತ್ತೇ) *j* (ಸಸ್ಯೇ ಹೇತುಕೃತೇ) ಫಲಂ ॥*k* ೩೫೬
(ಛದಿ ನೇತ್ರರುಜೋಃ ಕ್ಲೀಬಂ ಸಮೂಹೇ) ಪಟಲಂ (ನ ನಾ) ।*l*
(ಅಧಸ್ಸ್ವರೂಪಯೋರಸ್ತ್ರೀ) ತಲಂ *m* (ಸ್ಯಾಚ್ಚಾಮಿಷೇ) ಪಲಂ ॥*n* ೩೫೭
(ಔರ್ವಾನಲೇಽಪಿ) ಪಾತಾಳಂ *o* ಚೇಲಂ (ವಸ್ತ್ರೇಽಧಮೇ ತ್ರಿಷು) ।*p*
ಕುಕೂಲಂ (ಶಂಕುಭಿಃ ಕೀರ್ಣೇ ಶ್ವಭ್ರೇ ನಾ ತು ತುಷಾನಲೇ) ॥*q* ೩೫೮

---

*a* Mechanical work ; a division of time ; a sixteenth part. *b* A woman's female friend ; line, row. *c* The rise of the tide ; leisure, interval, opportunity ; boundary. *d* The Pleiades, the third lunar asterism ; cow ; fire ; black. *e* Amorous sport ; act, action. *f* Rock ; metal used for roads ; flint. *g* Blood ; water. *h* First, original ; hanging root of the banyan tree ; the nineteenth lunar asterism. *i* Multitude ; net ; window ; young bud. *j* Nature, disposition ; good conduct, good behaviour. *k* Fruit, produce ; gain, profit. *l* Roof ; a film over the eyes, cataract in the eye ; heap, multitude. *m* Bottom ; form, feature. *n* Flesh ; a weight = 4 *karshas*. *o* Submarine fire ; the world of the Nagas, the infernal regions. *p* Cloth ; low, mean. *q* Fence or hurdle as a protection against cattle ; smouldering ashes.

*a* ಕೈ ಕೆಲಸ, ಕಾಲವಿಶೇಷ, ಹದಿನಾರನೆಯ ಭಾಗ. *b* ಸಖಿ, ಸಾಲು. *c* ಕಡಲು ಉಕ್ಕುವುದು, ಸಮಯ, ಎಲ್ಲೆ. *d* ಕೃತ್ತಿಕಾನಕ್ಷತ್ರ, ಗೋವು, ಅಗ್ನಿ, ಕರಿದಾದ. *e* ಶೃಂಗಾರ ಚೇಷ್ಟೆ, ಕ್ರಿಯೆ. *f* ಬಂಡೆ, ಬೆಣಚುಕಲ್ಲು. *g* ರಕುತ, ನೀರು. *h* ಮೊದಲನೆಯದು, ಬಿಳಿಲು, ಒಂದು ನಕ್ಷತ್ರ. *i* ಗುಂಪು, ಬಲೆ, ಗವಾಕ್ಷ, ಎಳೆಯ ಮುಗ್ಗು. *j* ಸ್ವಭಾವ, ಒಳ್ಳೆಯ ನಡತೆ. *k* ಬೆಳೆದ ಧಾನ್ಯಾದಿ, ಪ್ರಯೋಜನ. *l* ಮನೆ ಹೊದಿಕೆ, ನೇತ್ರ ರೋಗ, ಗುಂಪು. *m* ಕೆಳಗಡೆ, ಸ್ವರೂಪ. *n* ಮಾಂಸ, ಒಂದು ತೂಕ. *o* ಬಡಬಾಗ್ನಿ, ನಾಗ ಲೋಕ. *p* ವಸ್ತ್ರ, ಕೀಳಾದ. *q* ಸುತ್ತಲೂ ಗೂಟಗಳು ನಡಲ್ಪಟ್ಟ ಗುಳಿ, ಹೊಟ್ಟಿನಲ್ಲಿರುವ ಬೆಂಕಿ.

(ನಿರ್ಣೀತೇ) ಕೇವಲ(ಮಿತಿ ತ್ರಿಲಿಂಗಂತ್ವೇಕಕೃತ್ಸ್ನಯೋಃ) ।*a*
(ಪರ್ಯಾಪ್ತಿಕ್ಷೇಮಪುಣ್ಯೇಷು) ಕುಶಲಂ (ಶಿಕ್ಷಿತೇ ತ್ರಿಷು) ॥*b* ೩೫೯
ಪ್ರವಾಳ(ಮಂಕುರೇಽಪ್ಯಸ್ತ್ರೀ *c* ತ್ರಿಷು) ಸ್ಥೂಲಂ (ಜಡೇಽಪಿ ಚ) ।*d*
ಕರಾಳೋ (ದಂತುರೇ ತುಂಗೇ) *e* (ಚಾರೌ ದಕ್ಷೇ ಚ) ಪೇಶಲಃ ॥*f* ೩೬೦
(ಮೂರ್ಖೇಽರ್ಭಕೇಽಪಿ) ಬಾಲ *g* (ಸ್ಯಾ)ಲ್ಲೋಲ(ಶ್ಚಲಸತೃಷ್ಣಯೋಃ) ।*h*

॥ ಇತಿ ಲಾಂತಾಃ ॥

ದವದಾವೌ (ವನಾರಣ್ಯವಹ್ನೀ) *i* (ಜನ್ಮಹರೌ) ಭವೌ ॥*j* ೩೬೧
(ಮಂತ್ರೀ ಸಹಾಯ)ಸ್ಸಚಿವೌ *k* (ಪತಿಶಾಖಿನರಾ) ಧವಾಃ ।*l*
ಅವಯ(ಶ್ಶೈಲಮೇಷಾರ್ಕಾ) *m* (ಆಜ್ಞಾಹ್ವಾನಾಧ್ವರಾ) ಹವಾಃ ॥*n* ೩೬೨
ಭಾವ (ಸ್ಸತ್ತಾಸ್ವಭಾವಾಭಿಪ್ರಾಯಚೇಷ್ಟಾತ್ಮಜನ್ಮಸು) ।*o*
(ಸ್ಯಾದುತ್ಪಾದೇ ಫಲೇಪುಷ್ಪೇ) ಪ್ರಸವೋ (ಗರ್ಭಮೋಚನೇ) ॥*p* ೩೬೩
(ಅವಿಶ್ವಾಸೇಽಪಹ್ನವೇಽಪಿ ನಿಕೃತಾವಪಿ) ನಿಹ್ನವಃ ।*q*

---

*a* Definite, positive; one, all. *b* Sufficient well-being; merit; expert, well-trained, skilful. *c* Germinal sprout; new leaf or shoot; coral. *d* Stupid; bulky, clumsy. *e* Up and down, uneven; high, lofty. *f* Beautiful; dexterous, clever. *g* Ignorant, foolish; boy, hair. *h* Shaking, tremulous; greedy. *i* Forest; forest fire, conflagration. *j* Birth; Siva. *k* Minister, counsellor; friend, ally, supporter. *l* Husband; the shrub *Grislea tomentosa*; man. *m* Hill, mountain; sheep; sun. *n* Command; invitation; sacrifice. *o* Being, nature, disposition; meaning; action; soul; birth. *p* Bringing forth, fruit; blossom; being in labour. *q* Distrust; concealment; contempt.

*a* ನಿರ್ಣಯಿಸಲ್ಪಟ್ಟ, ಒಂದು, ಸಮಸ್ತ. *b* ಸಾಕಾದಷ್ಟು, ಕ್ಷೇಮ, ಪುಣ್ಯ, ಶಿಕ್ಷಿಸಲ್ಪಟ್ಟ. *c* ಮೊಳಕೆ, ಚಿಗುರು, ಹವಳ. *d* ಮಂಕ, ದಪ್ಪವಾದ. *e* ಹಳ್ಳ ತಿಟ್ಟಾದ, ಉನ್ನತವಾದ. *f* ಮನೋಹರ, ಚತುರ. *g* ಮೂರ್ಖ, ಹುಡುಗ, ಕೂದಲು. *h* ಚಂಚಲವಾದ, ಆಶೆಯುಳ್ಳ. *i* ಕಾಡು, ಕಾಡುಗಿಚ್ಚು. *j* ಹುಟ್ಟುವಿಕೆ, ಶಿವ. *k* ಮಂತ್ರಿ, ಸಹಾಯವಾದ. *l* ಗಂಡನು, ಒಂದು ಮರ, ಮನುಷ್ಯ. *m* ಬೆಟ್ಟ, ಕುರಿ, ಸೂರ್ಯ. *n* ಆಜ್ಞೆ, ಕರೆಯುವಿಕೆ, ಯಜ್ಞ. *o* ಇರುವಿಕೆ, ಸ್ವಭಾವ, ತಾತ್ಪರ್ಯ, ಕ್ರಿಯೆ, ಆತ್ಮ, ಉತ್ಪತ್ತಿ. *d* ಹುಟ್ಟಿಸುವಿಕೆ, ಹಣ್ಣು, ಹೂವು, ಹೆರುವುದು. *q* ಅವಿಶ್ವಾಸ, ಬಚ್ಚಿಡುವಿಕೆ, ತಿರಸ್ಕಾರ.

(ಉತ್ಸೇಕಾಮರ್ಷಯೋರಿಚ್ಛಾ ಪ್ರಸವೇ ಮಹ) ಉತ್ಸವಃ ॥*a* ೩೬೪
ಅನುಭಾವಃ (ಪ್ರಭಾವೇ ಚ ಸತಾಂ ಚ ಮತಿನಿಶ್ಚಯೇ) ।*b*
(ಸ್ಯಾಜ್ಜನ್ಮಹೇತುಃ) ಪ್ರಭವಃ (ಸ್ಥಾನಂ ಚಾದ್ಯೋಪಲಬ್ಧಯೇ) ॥*c* ೩೬೫
ಧ್ರುವೋ (ಭಭೇದೇ ಕ್ಲೀಬಂ ತು ನಿಶ್ಚಿತೇ ಶಾಶ್ವತೇ ತ್ರಿಷು) ।*d*
ಸ್ವೋ (ಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇ ಸ್ವೋಽಸ್ತ್ರಿಯಾಂ ಧನೇ) ॥*e*
(ಸ್ತ್ರೀಕಟೀವಸ್ತ್ರಬಂಧೇಽಪಿ) ನೀವೀ (ಪರಿಪಣೇಽಪಿ ಚ) ।*f*
ಶಿವಾ (ಗೌರೀಫೇರವಯೋಃ) *g* ದ್ವಂದ್ವಂ (ಕಲಹಂಯುಗ್ಮಯೋಃ) ॥*h* ೩೬೬
(ದ್ರವ್ಯಾಸುವ್ಯವಸಾಯೇಷು) ಸತ್ವ(ಮಸ್ತ್ರೀ ತು ಜಂತುಷು) ।*i*
ಕ್ಲೀಬಂ (ನಪುಂಸಕಃ ಷಂಡೇ ವಾಚ್ಯಲಿಂಗಮವಿಕ್ರಮೇ) ॥*j* ೩೬೭

॥ ಇತಿ ವಾಂತಾಃ ॥

(ದ್ವೌ) ವಿಶೌ (ವೈಶ್ಯಮನುಜೌ) *k* (ದ್ವೌ ಚಾರಾಭಿಮರೌ) ಸ್ಪಶೌ ।*l*
(ದ್ವೌ) ರಾಶೀ (ಪುಂಜಮೇಷಾದ್ಯೌ) *m* (ದ್ವೌ) ವಂಶೌ (ಕುಲಮಸ್ಕರೌ) ॥*n*
(ರಹಃಪ್ರಕಾಶೌ) ವೀಕಾಶೌ *o* ನಿರ್ವೇಶೋ (ಭೃತಿಭೋಗಯೋಃ) ।*p*

---

*a* Swelling, overflowing; anger; desire, wish; bringing forth young; festival. *b* Dignity, authority; postive conclusion, firm opinion. *c* Birth; generative cause, origin; intelligence. *d* A star; certain, fixed; permanent. *e* Of one's own tribe, kinsman; Self; one's own; property, wealth. *f* The knot which keeps up a Hindu woman's garment; the stake in gambling. *g* Gauri or Parvati; fox or jackal. *h* Quarrel, contest, duel; pair, couple. *i* Element; life; occupation, employment; an animal, a being. *j* Eunuch; coward. *k* A man of the Vaishya or third caste, a merchant; a man. *l* Secret agent, spy; war. *m* Heap, quantity; sign of the zodiac. *n* Race, lineage; bamboo. *o* Secret or solitary place; brightness, shining, splendour. *p* Wages, hire; enjoyment, use.

*a* ಉಕ್ಕುವಿಕೆ, ಕೋಪ, ಇಚ್ಛೆ, ಹೆರುವಿಕೆ, ಹಬ್ಬ. *b* ಪ್ರಭಾವ, ಹಿರಿಯರ ಬುದ್ಧಿ, ನಿಶ್ಚಯ. *c* ಜನನ ಕಾರಣ, ಮೊದಲ ತಿಳುವಳಿಕೆಗೆ ವಿಷಯ. *d* ಒಂದು ನಕ್ಷತ್ರ, ನಿಶ್ಚಯಿಸಲ್ಪಟ್ಟ, ಶಾಶ್ವತವಾದ. *e* ಜ್ಞಾತಿ, ತಾನು, ತನ್ನದು, ಧನ. *f* ಹೆಂಗಸರ ಸೀರೆ ನಿರಿಯ ಕಟ್ಟು, ಜೂಜಿನಲ್ಲಿ ಇಟ್ಟ ವಸ್ತು. *g* ಗೌರಿ, ನರಿ. *h* ಜಗಳ, ಜೋಡಿ. *i* ವಸ್ತು, ಪ್ರಾಣ, ಉದ್ಯೋಗ, ಜಂತು. *j* ನಪುಂಸಕ, ಹೇಡಿ. *k* ವೈಶ್ಯನು, ಮನುಷ್ಯ. *l* ದೂತ, ಯುದ್ಧ. *m* ಗುಡ್ಡೆ, ಮೇಷಾದಿ. *n* ಕುಲ, ಬಿದಿರು. *o* ಏಕಾಂತ, ಸ್ಫುಟವಾದ. *p* ಕೂಲಿ, ಭೋಗಿಸುವದು.

(ಕೃತಾಂತೇ ಪುಂಸಿ) ಕೀನಾಶಃ (ಕ್ಷುದ್ರಕರ್ಷಕಯೋಸ್ತ್ರಿಷು) ॥*a* ೩೭೦
(ಪದೇ ಲಕ್ಷ್ಯೇ ನಿಮಿತ್ತೇ) ಽಪದೇಶ *b* (ಸ್ಯಾತ್) ಕುಶ (ಮಪ್ಸು ಚ) ।*c*
ದಶಾ (ವಸ್ಥಾನೇಕವಿಧಾ) *d* (ಪ್ಯಾ)ಶಾ (ತೃಷ್ಣಾಪಿಚಾಯತಾ) ॥*e* ೩೭೧
ವಶಾ (ಸ್ತ್ರೀ ಕರಿಣೀ ವಂಧ್ಯಾ) *f* ದೃಗ್(ಜ್ಞಾನೇ ಜ್ಞಾತರಿ ತ್ರಿಷು) ।*g*
(ಸ್ಯಾತ್) ಕರ್ಕಶ(ಸ್ಸಾಹಸಿಕಃ ಕಠೋರಮಸೃಣಾವಪಿ) ॥*h* ೩೭೨
ಪ್ರಕಾಶೋಽ (ತಿಪ್ರಸಿದ್ಧೇಪಿ) *i* (ಶಿಶಾವಜ್ಞೇಪಿ) ಬಾಲಿಶಃ ।*j*
ಕೋಶೋಽ (ಸ್ತ್ರೀ ಕುಟ್ಮಲೇ ಖಡ್ಗಪಿಧಾನೇಽರ್ಥೌಘದಿವ್ಯಯೋಃ) ॥*k* ೩೭೩

॥ ಇತಿ ಶಾಂತಾಃ ॥

(ಸುರಮತ್ಸ್ಯಾ)ವನಿಮಿಷೌ *l* ಪುರುಷಾ (ವಾತ್ಮಮಾನವೌ) ।*m*
(ಕಾಕಮತ್ಸ್ಯಾತ್ಯಗೌ) ಧ್ವಾಂಕ್ಷೌ *n* ಕಕ್ಷೌ (ಚ ತೃಣವೀರುಧೌ) ॥*o* ೩೭೪
ಅಭೀಷುಃ (ಪ್ರಗ್ರಹೇ ರಶ್ಮೌ) *p* ಪ್ರೈಷಃ (ಪ್ರೇಷಣಮರ್ದನೇ) ।*q*
ಪಕ್ಷ (ಸ್ಸಹಾಯೇ) *r* (ಽಪ್ಯು)ಷ್ಣೀಷ (ಶ್ಶಿರೋವೇಷ್ಟಕಿರೀಟಯೋಃ) ॥*s* ೩೭೫

---

*a* Yama (*Pluto*); vile man; cultivator, farmer. *b* Place; aim, mark; cause, reason, motive; pretext, excuse. *c* Water; sacred grass. *d* State or condition, as childhood, old age, etc; wick of a lamp. *e* Desire, hope; a quarter, region or point of the compass. *f* Woman, female; female elephant; barren cow. *g* Knowledge; learned man. *h* Rash or bold man; hard; not smooth. *i* High renown; light, lustre. *j* Boy; Simpleton. *k* Bud; sheath; treasury; heavenly. *l* A god or deity (lit: unwinking); fish. *m* Soul; man. *n* Crow; crane, heron. *o* Grass; bower; armpit. *p* Rope; ray of light. *q* Sending; beating. *r* Assistance, help; a period of time; wing; flank, side. *s* Turban; diadem.

*a* ಯಮ, ನೀಚ, ಕರ್ಷಕ. *b* ಸ್ಥಾನ, ಗುರಿ, ನಿಮಿತ್ತ, ನೆವ. *c* ನೀರು, ದರ್ಭೆ. *d* ನಾನಾಬಗೆಯ ಅವಸ್ಥೆ, ಬತ್ತಿ. *e* ಇಚ್ಛೆ, ದಿಕ್ಕು. *f* ಹೆಣ್ಣು, ಹೆಣ್ಣಾನೆ, ಬಂಜೆ, ಹಸು. *g* ಜ್ಞಾನ, ತಿಳಿದವನು. *h* ಸಾಹಸಗಾರ, ಗಟ್ಟಿ, ನುಣುಪಿಲ್ಲದ. *i* ಬಹಳ ಪ್ರಸಿದ್ಧವಾದ, ಬೆಳಕು. *j* ಹುಡುಗ, ಮೂಢನು. *k* ಮೊಗ್ಗು, ಕತ್ತಿಯ ಒರೆ, ಬೊಕ್ಕಸ, ದಿವ್ಯ. *l* ದೇವತೆ, ಮೀನು. *m* ಆತ್ಮ, ಮನುಷ್ಯ. *n* ಕಾಗೆ, ಮೀನು ತಿನ್ನುವ ಪಕ್ಷಿ. *o* ಹುಲ್ಲು, ಬಳ್ಳಿಗಳ ಹೊದೆ, ಕಂಕಳು. *p* ಹಗ್ಗ, ಕಿರಣ. *q* ಕಳುಹಿಸುವಿಕೆ, ಮರ್ದಿಸುವಿಕೆ. *r* ಸಹಾಯ, ಕಾಲಭೇದ, ರಕ್ಕೆ, ಪಕ್ಕ. *s* ರುಮಾಲು, ಕಿರೀಟ.

(ಶುಕ್ರಲೇ ಮೂಷಿಕೇ ಶ್ರೇಷ್ಠೇ ಸುಕೃತೇ ವೃಷಭೇ) ವೃಷ: |*a*
(ದ್ಯೂತೇಽಕ್ಷೇ ಶಾರಿಫಲಕೇ ಽಪ್ಯಾ)ಕರ್ಷೋ *b* ಽ(ಥಾ)ಕ್ಷ (ಮಿಂದ್ರಿಯೇ ||
ನಾ ದ್ಯೂತಾಂಗೇ ಕರ್ಷೇ ಚಕ್ರೇ ವ್ಯವಹಾರೇ ಕಲಿದ್ರುಮೇ) |*c*
ಕರ್ಷೂ(ಸ್ತ್ರೀತಾರ್ಕ ಕರೀಷಾಗ್ನಿ: ಕರ್ಷೂ: ಕುಲ್ಯಾಭಿಧಾಯಿನೀ) ||*d* ೩೭೭
(ಪುಂಭಾವೇ ತತ್ಕ್ರಿಯಾಯಾಂ ಚ) ಪೌರುಷಂ *e* ವಿಷ (ಮಪ್ಸು ಚ) |*f*
(ಉಪದಾನೇ ಽಪ್ಯಾ)ಮಿಷಂ *g* (ಸ್ಯಾದಪರಾಧೇಽಪಿ) ಕಿಲ್ಬಿಷಂ ||*h* ೩೭೮
(ಸ್ಯಾದ್ವೃಷ್ಟೌ ಲೋಕಧಾತ್ವಂಶೇ ವತ್ಸರೇ) ವರ್ಷ (ಮಸ್ತ್ರಿಯಾಂ) *i*
ಪ್ರೇಕ್ಷಾ (ನೃತ್ತೇಕ್ಷಣಪ್ರಜ್ಞಾ) *j* ಭಿಕ್ಷಾ (ಸೇವಾರ್ಥನಾ ಭೃತಿ:) ||*k* ೩೭೯
ತ್ವಿಟ್ಪ್ರೋ(ಭಾಽ ಪಿ ತ್ರಿಷು ಪರೇ) *l* ನ್ಯಕ್ಷಂ (ಕಾರ್ತ್ಸ್ನ್ಯನಿಕೃಷ್ಟಯೋ:) |*m*
(ಪ್ರತ್ಯಕ್ಷೇಽಧಿಕೃತೇ)ಽ ಧ್ಯಕ್ಷೋ *n* ರೂಕ್ಷ (ಸ್ತ್ವಪ್ರೇಮ್ಣ್ಯಚಿಕ್ಕಣೇ) ||*o* ೩೮೦

|| ಇತಿ ಷಾಂತಾ: ||

---

*a* Man of might; rat; excellent, pre-eminent; merit; bull. *b* Gambling; playing with dice; a board for playing on, as a backgammon board; attraction. *c* An organ of senses; die, dice; a weight; a wheel; dispute; the plant *Terminalia bellerica.* *d* Husbandry; a fire made with cakes of cow-dung as fuel; the name of a river. *e* Manhood, manliness; action of men; the measure of a man with arms elevated and fingers extended. *f* Water; poison. *g* Tribute, tax; flesh. *h* Fault, offence, sin. *i* Rain; a continent or division of the earth; year. *j* Dancing; seeing, looking at; sense, intellect. *k* Service; begging; wages. *l* Splendour, brilliance; ray of light. *m* All; common, inferior, mean. *n* Perception; superintendent of a village. *o* Unkind, unfriendly; harsh, rough, severe.

*a* ವೀರ್ಯವುಷ್ಟಿಯುಳ್ಳ, ಇಲಿ, ಶ್ರೇಷ್ಠನು, ಪುಣ್ಯ, ಎತ್ತು. *b* ಜೂಜು, ಪಗಡೆ, ಜೂಜಾಡುವ ಹಲಿಗೆ, ಎಳೆದುಕೊಳ್ಳುವಿಕೆ. *c* ಇಂದ್ರಿಯ, ಪಗಡೆಯ ಲೆತ್ತ, ಒಂದು ತೂಕ, ಚಕ್ರ, ವ್ಯವಹಾರ, ತಾರೆ ಮರ. *d* ಜೀವಿಕೆ, ಬೆರಣಿಯ ಬೆಂಕಿ; ನದಿ. *e* ಗಂಡಸುತನ, ಗಂಡಸಿನ ಕೆಲಸ, ಆಳು ಕೈಯೆತ್ತರದ ಅಳತೆ. *f* ನೀರು, ನಂಜು. *g* ಕಾಣಿಕೆ, ಮಾಂಸ. *h* ತಪ್ಪು, ಪಾಪ. *i* ಮಳೆ, ಭೂಖಂಡ, ಸಂವತ್ಸರ. *j* ನಾಟ್ಯ, ನೋಟ, ಪ್ರಜ್ಞೆ. *k* ಸೇವೆ, ಬೇಡುವಿಕೆ, ಕೂಲಿ. *l* ಕಾಂತಿ, ಕಿರಣ. *m* ಎಲ್ಲ, ಕೀಳಾದ. *n* ಸಾಕ್ಷಾತ್ತಾಗಿ ತಿಳಿಯಲ್ಪಟ್ಟ, ಅಧಿಕಾರಿ. *o* ಪ್ರೇಮವಿಲ್ಲದ, ನುಣುಪಿಲ್ಲದ.

(ರವಿಶ್ವೇತಚ್ಛದೌ) ಹಂಸೌ *a* (ಸೂರ್ಯವಹ್ನೀ) ವಿಭಾವಸೂ ।*b*
ವತ್ಸೌ (ತರ್ಣಕವರ್ಷೌ ದ್ವೌ) *c* (ಸಾರಂಗಾಶ್ಚ) ದಿವೌಕಸಃ ॥*d* ೩೮೧
(ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ) ರಸಃ ।*e*
(ಪುಂಸ್ಯು) ತ್ತಂಸಾವತಂಸೌ (ವಾ ಕರ್ಣಪೂರೇಽಪಿ ಶೇಖರೇ) ॥*f* ೩೮೨
(ದೇವಭೇದೇಽನಲೇ ರಶ್ಮೌ) ವಸೂ (ರತ್ನೇ ಧನೇ ವಸು) ।*g*
(ವಿಷ್ಣೌ ಚ) ವೇಧಾಃ *h* (ಸ್ತ್ರೀ)ತ್ವಾಶೀ(ರ್ಹಿತಾಶಂಸಾಹಿ ದಂಷ್ಟ್ರಯೋಃ) ॥*i*
ಲಾಲಸೇ (ಪ್ರಾರ್ಥನೌತ್ಸುಕ್ಯೇ) *j* ಹಿಂಸಾ (ಚೌರ್ಯಾದಿಕರ್ಮ ಚ) ।*k*
ಪ್ರಸೂ(ರಶ್ವಾಪಿ) *l* (ಭೂದ್ಯಾವೌ) ರೋದಸ್ಯೌ ರೋದಸೀ(ಚ ತೇ) ॥*m*
(ಜ್ವಾಲಾಭಾಸೋರ್ನಪುಂ) ಸ್ಯರ್ಚಿ *n* ರ್ಜ್ಯೋತಿ (ರ್ಭದ್ಯೋತದೃಷ್ಟಿಷು) ।*o*
(ಪಾಪಾಪರಾಧಯೋ) ರಾಗಃ *p* (ಖಗಬಾಲ್ಯಾದಿನೋ) ರ್ವಯಃ ॥*q* ೩೮೩
(ತೇಜಃಪುರೀಷಯೋ) ರ್ವರ್ಚೋ *r* ಮಹ (ಸ್ತೂತ್ಸವತೇಜಸೋಃ) ।*s*

---

*a* Sun; swan or goose. *b* Sun; *Agni*, the god of fire. *c* Calf; year. *d* A kind of cuckoo; a deity. *e* Sentiment, emotion as an object of poetry, as love, terror, etc.; poison; energy, virility; affection of the mind, passion; inclination; liquid. *f* Earring; any ornament for the head. *g* A kind of demigod; *Agni*; ray or light; gem; wealth, riches. *h* Vishnu; Brahma. *i* A blessing or benediction; the poisonous fang or poison bag of a serpent. *j* Asking, soliciting; ardent desire; one having such desire. *k* Stealing; killing, murder. *l* Mare; mother. *m* Earth; sky. *n* Flame; light. *o* Star; brightness; sight. *p* Sin; fault, offence. *q* Bird; period of life, as youth, etc. *r* Splendour, brightness; excrement. *s* Festival; splendour.

*a* ಸೂರ್ಯ, ಒಂದು ಹಕ್ಕಿ. *b* ಸೂರ್ಯ, ಅಗ್ನಿ. *c* ಕರು, ಸಂವತ್ಸರ. *d* ಒಂದು ಹಕ್ಕಿ, ಸ್ವರ್ಗವಾಸಿ. *e* ಶೃಂಗಾರಾದಿಗಳು, ನಂಜು, ವೀರ್ಯ, ಗುಣ, ಅಭಿಲಾಷೆ, ದ್ರವ. *f* ಕರ್ಣಭೂಷಣ, ಶಿರೋಭೂಷಣ. *g* ಒಂದು ತರದ ದೇವತೆಗಳು, ಅಗ್ನಿ, ಕಿರಣ, ರತ್ನ, ಧನ. *h* ವಿಷ್ಣು, ಬ್ರಹ್ಮ. *i* ಹಿತವನ್ನು ಕೋರುವದು, ಹಾವಿನ ಕೋರೆಹಲ್ಲು. *j* ಪ್ರಾರ್ಥನೆ, ಇಷ್ಟ ಪ್ರಾಪ್ತಿಯಲ್ಲಿ ಕುತೂಹಲ, ಆಸಕ್ತ. *k* ಕಳವು ಮುಂತಾದ ಕೆಲಸ, ಕೊಲೆ. *l* ಹೆಣ್ಣುಕುದುರೆ, ತಾಯಿ. *m* ಭೂಮಿ, ಆಕಾಶ. *n* ಉರಿ, ಬೆಳಕು. *o* ನಕ್ಷತ್ರ, ತೇಜಸ್ಸು, ದೃಷ್ಟಿ. *p* ಪಾಪವು, ಅಪರಾಧ. *q* ಪಕ್ಷಿ, ಬಾಲ್ಯ ಮುಂತಾದ್ದು. *r* ತೇಜಸ್ಸು, ಅಮೇಧ್ಯ. *s* ಉತ್ಸವ, ತೇಜಸ್ಸು.

ರಜೋ (ಗುಣೇಪಿ ಸ್ತ್ರೀಪುಷ್ಪೇ) *a* (ರಾಹೌ ಧ್ವಾಂತೇ ಗುಣೇ) ತಮಃ ‖*b* ೩೮೬
ಛಂದಃ (ಪದ್ಯೇಭಿಲಾಷೇ ಚ) *c* ತಪಃ (ಕೃಚ್ಛ್ರಾದಿಕರ್ಮ ಚ) ।*d*
ಸಹೋ (ಬಲಂ ಸಹಾ ಮಾರ್ಗೋ) *e* ನಭಃ (ಖಂ ಶ್ರಾವಣೋ ನಭಾಃ) ‖*f* ೩೮೭
ಓಕ (ಸ್ಸದ್ಮಾಶ್ರಯಶ್ಚೌಕಃ) *g* ಪಯಃ (ಕ್ಷೀರಂ ಪಯೋಂಬು ಚ) ।*h*
ಓಜೋ (ದೀಪ್ತೌ ಬಲೇ) *i* ಸ್ರೋತ (ಇಂದ್ರಿಯೇ ನಿಮ್ನಗಾರಯೇ) ‖*j* ೩೮೮
ತೇಜಃ (ಪ್ರಭಾವೇ ದೀಪ್ತೌ ಚ ಬಲೇ ಶುಕ್ರೇಽಪ್ಯಥ ತ್ರಿಷು) ।*k*
ವಿದ್ವಾ (ನ್ವಿದಿ ಚ) *l* ಬೀಭತ್ಸುರ್ (ಹಿಂಸ್ರೇ ಪ್ಯತಿಶಯೇತ್ವಮೀ) ‖*m* ೩೮೯
(ವೃದ್ಧಪ್ರಶಸ್ಯಯೋ) ಜ್ಯಾಯಾನ್ *n* ಕನೀಯಾಂ (ಸ್ತು ಯುವಾಲ್ಪಯೋಃ) ।*o*
ವರೀಯಾಂ (ಸ್ತೂರುವರಯೋ) *p* ಸಾಧೀಯಾನ್ (ಸಾಧುಬಾಢಯೋಃ) ‖*q*

‖ ಇತಿ ಸಾಂತಾಃ ‖

---

*a* The quality of passion, the earthly nature, the condition of humanity; menses; dust. *b Rahu,* the ascending node; darkness; a quality. *c* Prosody, metrical arrangement; desire. *d* Penance, mortification, religious austerity; the month *Magha.* *e* Strength, power; the month *Margashira.* *f* Sky; the month *Shravana.* *g* House; place; speed, swiftness. *h* Milk; water. *i* Brightness, splendour; strength, power. *j* The organs of sense; the rapidity of a stream. *k* Dignity, glory; splendour; strength; semen. *l* Learned man, man of letters. *m* Murderer; Arjuna. *n* Elder; superior. *o* Young man; very small. *p* Supreme, best; superexcellent. *q* Very good; very firm.

*a* ಒಂದು ಗುಣ, ಹೊಲೆ, ದೂಳು. *b* ರಾಹು, ಕತ್ತಲೆ, ಒಂದು ಗುಣ. *c* ಪದ್ಯ, ಅಭಿಲಾಷೆ. *d* ವ್ರತಾದಿ ಕರ್ಮ, ಮಾಘಮಾಸ. *e* ಬಲ, ಮಾರ್ಗಶೀರ್ಷಮಾಸ. *f* ಆಕಾಶ, ಶ್ರಾವಣಮಾಸ. *g* ಮನೆ, ಸ್ಥಳ, ವೇಗ. *h* ಹಾಲು, ನೀರು. *i* ಪ್ರಕಾಶ, ಬಲ. *j* ಇಂದ್ರಿಯಗಳು, ಹೊಳೆಯ ವೇಗ *k* ಪ್ರಭಾವ, ಕಾಂತಿ, ಬಲ, ರೇತಸ್ಸು. *l* ತಿಳಿದವ, ಶಾಸ್ತ್ರಜ್ಞ. *m* ಕೊಲ್ಲುವವ, ಅರ್ಜುನನು. *n* ಬಹಳ ಮುದುಕ, ಬಹಳ ಮೇಲಾದ. *o* ಪ್ರಾಯದವ, ಅತ್ಯಲ್ಪ. *p* ಬಹಳ ಘನ, ಬಹಳ ಮೇಲಾದ. *q* ಬಹಳ ಒಳ್ಳೇದು, ಬಹಳ ದೃಢ.

(ದಳೇಽಪಿ) ಬರ್ಹಂ *a* (ನಿರ್ಬಂಧೋಪರಾಗಾರ್ಕಾದಯೋ) ಗ್ರಹಾಃ |*b*
(ದ್ವಾರ್ಯಾಪೀಡೇ ಕ್ವಾಥರಸೇ) ನಿರ್ಯೂಹೋ (ನಾಗದಂತಕೇ) ||*c* ೩೯೧
(ತುಲಾಸೂತ್ರೇಽಶ್ವಾದಿರಶ್ಮೌ) ಪ್ರಗ್ರಾಹಃ (ಪ್ರಗ್ರಹೋಽಪಿಚ) |*d*
(ಪತ್ನೀಪರಿಜನಾದಾನಮೂಲಶಾಪಾಃ) ಪರಿಗ್ರಹಾಃ ||*e* ೩೯೨
(ದಾರೇಷ್ವಪಿ) ಗೃಹಾಃ *f* (ಶ್ರೋಣ್ಯಾಮು) ಪ್ಯಾರೋಹೋ (ವರಸ್ತ್ರಿಯಾಃ) |*g*
ವ್ಯೂಹೋ(ಬೃಂದೇಽ) *h* ಪ್ಯಹಿ(ರ್ವೃತ್ರೇ) *i* (ಪ್ಯಗ್ನೀಂದ್ವರ್ಕಾ)ಸ್ತಮೋಽಪಹಾಃ||*j*
(ಪರಿಚ್ಛದೇ ನೃಪಾರ್ಹೇರ್ಥೇ) ಪರಿಬರ್ಹೋ (ವ್ಯಯಾಃಪರೇ) |*k*

|| ಇತಿ ಹಾಂತಾಃ ||

|| ಇತಿ ನಾನಾರ್ಥವರ್ಗಃ ||

---

## IV. ನಾನಾರ್ಥಾವ್ಯಯ ವರ್ಗ—NANARTHAVYAYA-VARGA.

ಆಙೀ (ಷದರ್ಥೇಽಭಿವ್ಯಾಪ್ತೌ ಸೀಮಾರ್ಥೇ ಧಾತುಯೋಗಜೇ) ||*l* ೩೯೪

---

*a* Leaf ; peacock's tail. *b* Seizing ; seizure of the sun or moon by *Rahu* or *Ketu*, an eclipse ; the nine Hindu planets, *viz.*, Sun, Moon, Mars, Mercury, Jupiter, Venus, Saturn, Rahu and Ketu. *c* Door ; flowers tied in the hair ; extracted juice ; elephant's tusk. *d* The string suspending a balance ; rein, rope. *e* Wife ; dependents, family ; accepting, taking ; origin ; curse. *f* Wife ; house. *g* The female posteriors ; elephant driver. *h* Multitude, battle-array. *i* The giant *Vritra* ; snake. *j* Fire ; Moon ; Sun. *k* Dependent ; proper or suitable for a sovereign ; a thing. *l* A little as former part of adjectives ; bounded ; boundary.

*a* ಎಲೆ, ನವಿಲಗರಿ. *b* ನಿರ್ಬಂಧ, ರಾಹು ಕೇತುಗ್ರಹಣ, ಸೂರ್ಯಾದಿಗಳು *c* ಬಾಗಿಲು, ಮುಡಿದ ಪೂಸರ, ಕಷಾಯ, ಗಜದಂತ. *d* ತ್ರಾಸಿನದಾರ, ಕುದುರೆ ಮುಂತಾದುವುಗಳನ್ನು ಕಟ್ಟುವ ಹಗ್ಗ. *e* ಹೆಂಡತಿ, ಪರಿವಾರ, ತೆಗೆದುಕೊಳ್ಳುವಿಕೆ, ಮೂಲ, ಶಾಪ. *f* ಹೆಂಡತಿ, ಮನೆ. *g* ಉತ್ತಮ ಸ್ತ್ರೀನಿತಂಬ, ಆನೇಮಾವಟಿಗ. *h* ಗುಂಪು, ಸೇನಾವಿನ್ಯಾಸ. *i* ವೃತ್ರಾಸುರ, ಹಾವು. *j* ಅಗ್ನಿ, ಚಂದ್ರ, ಸೂರ್ಯ. *k* ಪರಿವಾರ, ರಾಜಯೋಗ್ಯ ವಸ್ತು. *l* ಕೊಂಚ, ಎಲ್ಲೆಯಿಂದಕೂಡಿದ್ದು, ಸಾಮಾನ್ಯವಾಗಿ ಎಲ್ಲೆ.

ಆ (ಪ್ರಗೃಹ್ಯಃ ಸ್ಮೃತೌ ವಾಕ್ಯೇಽ) *a* ಪ್ಯಾ(ಸ್ತು ಸ್ಯಾತ್ಕೋಪಪೀಡಯೋಃ) |*b*
(ಪಾಪಕುತ್ಸೇಷದರ್ಥೇ) ಕು *c* ಧಿ (ಙ್ನಿರ್ಭರ್ತ್ಸನನಿಂದಯೋಃ) ||*d* ೨೪೫
ಚಾ(ನ್ವಾಚಯಸಮಾಹಾರೇತರೇತರಸಮುಚ್ಚಯೇ) |*e*
ಸ್ವಸ್ತ್ಯಾ(ಶೀಃಕ್ಷೇಮಪುಣ್ಯಾದೌ) *f* (ಪ್ರಕರ್ಷೇ ಲಂಘನೇಽ) ಪ್ಯತಿ ||*g* ೨೪೬
ಸ್ವಿತ್ (ಪ್ರಶ್ನೇ ಚ ವಿತರ್ಕೇ ಚ) *h* ತು (ಸ್ಯಾದ್ಭೇದೇಽವಧಾರಣೇ) |*i*
ಸಕೃತ್ಸ(ಹೈಕವಾರೇ ಸ್ಯಾತ್) *j* ಆರಾ(ದ್ದೂರಸಮೀಪಯೋಃ) ||*k* ೨೪೭
(ಪ್ರತೀಚ್ಯಾಂ ಚರಮೇ) ಪಶ್ಚಾತ್ *l* ಉತಾ(ಪ್ಯರ್ಥವಿಕಲ್ಪಯೋಃ) |*m*
(ಪುನಸ್ಸಹಾರ್ಥಯೋಃ) ಶಶ್ವತ್ *n* ಸಾಕ್ಷಾತ್ (ಪ್ರತ್ಯಕ್ಷತುಲ್ಯಯೋಃ) ||*o* ೨೪೮
(ಖೇದಾನುಕಂಪಾಸಂತೋಷವಿಸ್ಮಯಾಮಂತ್ರಣೇ) ಬತ |*p*
ಹಂತ (ಹರ್ಷೇಽನುಕಂಪಾಯಾಂ ವಾಕ್ಯಾರಂಭವಿಷಾದಯೋಃ) ||*q* ೨೪೯

---

*a* An interjection of reminiscence; to fill up a line. *b* Anger; pain, annoyance. *c* Sin; blame; little. *d* Threatening; scorn. *e* Differentiate one of two things as the more important; and conjuction. *f* Blessing, benediction; welfare; happiness. *g* Much, very; flying, reverence. *h* Interrogation; doubt, hesitation. *i* But, rather; indeed, nevertheless. *j* With, together; once. *k* Afar; close, near. *l* West, western; behind. *m* Also, as well as; doubt. *n* Again; perpetually, always. *o* Manifestly, openly, in presence of, before; resembling, like. *p* Grief, sorrow; kindness, pity; joy, surprise; calling, invoking. *q* Pleasure; pity; beginning of a sentence; grief.

*a* ನೆನಹು, ವಾಕ್ಯಪೂರಣ. *b* ಕೋಪ, ಪೀಡೆ. *c* ಪಾಪವು, ನಿಂದೆ, ಕೊಂಚ. *d* ಬೆದರಿಸುವಿಕೆ, ನಿಂದಿಸುವಿಕೆ. *e* ಎರಡರೊಳಗೊಂದನ್ನು ಮುಖ್ಯವೆಂದು ಹೇಳುವುದು (ಅನ್ವಾಚಯ); ಅವಯವ ತಾರತಮ್ಯವಿಲ್ಲದೆ ಸಮುದಾಯವೇ ಮುಖ್ಯವೆಂಬುದು (ಸಮಾಹಾರ); ಪರಸ್ಪರ ಸಾಪೇಕ್ಷಗಳಾದವುಗಳಿಗೆ ಏಕ ಕ್ರಿಯಾನ್ವಯ (ಇತರೇತರ ಯೋಗ); ಪರಸ್ಪರ ನಿರಪೇಕ್ಷಗಳಾದವುಗಳಿಗೆ ಏಕ ಕ್ರಿಯಾನ್ವಯ (ಸಮುಚ್ಚಯ). *f* ಆಶೀರ್ವಾದ, ಕ್ಷೇಮ, ಪುಣ್ಯ. *g* ಹೆಚ್ಚು, ಹಾರುವಿಕೆ, ಪೂಜೆ. *h* ಪ್ರಶ್ನೆ, ಊಹೆ. *i* ಭೇದ, ಅವಧಾರಣೆ. *j* ಸಂಗಡ, ಒಂದುಸಾರಿ. *k* ದೂರ, ಹತ್ತಿರ. *l* ಪಡುವಲ, ಹಿಂದುಗಡೆ. *m* ಇನ್ನೂ, ಸಂಶಯ *n* ಮತ್ತು, ಯಾವಾಗಲೂ. *o* ಪ್ರತ್ಯಕ್ಷ, ಹೋಲುವ. *p* ದುಃಖ, ದಯೆ, ಸಂತೋಷ, ಆಶ್ಚರ್ಯ, ಕರೆಯುವಿಕೆ. *q* ಹರುಷ, ಕೃಪೆ, ವಾಕ್ಯಾರಂಭ, ದುಃಖ.

ಪ್ರತಿ(ಪ್ರತಿನಿಧೌ ವೀಪ್ಸಾಲಕ್ಷಣಾದೌ ಪ್ರಯೋಗತಃ) |*a*
ಇತಿ (ಹೇತುಪ್ರಕರಣಪ್ರಕಾರಾದಿಸಮಾಪ್ತಿಷು) ||*b* ೪೦೦
(ಪ್ರಾಚ್ಯಾಂ) ಪುರಸ್ತಾತ್ (ಪ್ರಥಮೇ ಪುರಾರ್ಥೇಽಗ್ರತ ಇತ್ಯಪಿ) |*c*
ಯಾವತ್ತಾವತ್ (ಚ ಸಾಕಲ್ಯೇಽವಧೌ ಮಾನೇಽವಧಾರಣೇ) ||*d* ೪೦೧
(ಮಂಗಳಾನಂತರಾರಂಭ ಪ್ರಶ್ನಕಾರ್ತ್ಸ್ನ್ಯೇ)ಷ್ವಥೋ ಅಥ |*e*
ವೃಥಾ(ನಿರರ್ಥಕಾವಿಧ್ಯೋ) *f* ನಾನಾ(ಽನೇಕೋಭಯಾರ್ಥಯೋಃ) ||*g* ೪೦೨
ನು (ಪೃಚ್ಛಾಯಾಂ ವಿಕಲ್ಪೇ ಚ) *h* (ಪಶ್ಚಾತ್ಸಾದೃಶ್ಯಯೋ)ರನು |*i*
(ಪ್ರಶ್ನಾವಧಾರಣಾಽನುಜ್ಞಾನುನಯಾಮಂತ್ರಣೇ) ನನು ||*j* ೪೦೩
(ಗರ್ಹಾಸಮುಚ್ಚಯಪ್ರಶ್ನಶಂಕಾಸಂಭಾವನಾ)ಸ್ವಪಿ |*k*
(ಉಪಮಾಯಾಂ ವಿಕಲ್ಪೇ) ವಾ *l* ಸಾಮಿ (ತ್ವರ್ಧೇ ಜುಗುಪ್ಸನೇ) ||*m* ೪೦೪
ಅಮಾ (ಸಹ ಸಮೀಪೇ ಚ) *n* ಕಂ (ವಾರಿಣಿ ಚ ಮೂರ್ಧ್ನಿ ಚ) |*o*

---

*a* An equivalent or substitute ; in each case, defining. *b* Cause, reason ; like, as ; thus, conclusion of a quotation ; conclusion of a book or chapter, finis. *c* East, eastern ; first ; formerly, in former times ; before. *d* As many as, all ; as far as, unto, until ; as much ; as many. *e* Well, auspicious, commencement of a sentence or poem ; afterwards, then ; beginning ; question ; all. *f* In vain ; foolishly. *g* Many, sundry ; two, different. *h* Interrogation ; either—or, doubt. *i* After ; according to, like. *j* Interrogation ; indeed, truly ; imperative, do ; consolation ; vocative. *k* Blame ; all together ; interrogation ; fear, apprehension ; just inference, right conclusion. *l* Like, as ; doubt. *m* Half, semi ; disgust. *n* With, together with ; near. *o* Water ; head.

*a* ಬದುಲು, ವೀಪ್ಸ ಲಕ್ಷಣವುಂಟಾದ್ದು. *b* ಕಾರಣ, ಪ್ರಕರಣ, ಪ್ರಕಾರ, ಆದಿ, ಮುಗಿಯುವಿಕೆ. *c* ಮೂಡಲು, ಮೊದಲು, ಪೂರ್ವಕಾಲ, ಮುಂದೆ. *d* ಎಲ್ಲವೂ, ವರೆಗೆ, ಅಳತೆ, ಅವಧಾರಣೆ. *e* ಮಂಗಳ, ಬಳಿಕ, ಪ್ರಾರಂಭ, ಪ್ರಶ್ನೆ, ಎಲ್ಲ. *f* ವ್ಯರ್ಥ, ಗೊತ್ತಿಲ್ಲದೆ. *g* ಬಹು, ಎರಡು. *h* ಪ್ರಶ್ನೆ, ವಿಕಲ್ಪ. *i* ಹಿಂದೆ, ಹೋಲಿಕೆ. *j* ಪ್ರಶ್ನೆ, ಅವಧಾರಣೆ, ಅಪ್ಪಣೆ, ಸಮಾಧಾನಗೊಳಿಸುವಿಕೆ, ಕರೆಯುವಿಕೆ. *k* ನಿಂದೆ, ಸಮುಚ್ಚಯ, ಪ್ರಶ್ನೆ, ಭಯ, ಊಹೆ. *l* ಹೋಲಿಕೆ, ಸಂಶಯ. *m* ಅರೆಪಾಲು, ಜುಗುಪ್ಸೆ. *n* ಒಂದಿಗೆ, ಹತ್ತಿರ. *o* ನೀರು, ತಲೆ.

(ಇವೇತ್ಥಮರ್ಥಯೋ)ರೇವಂ *a* ನೂನಂ (ತರ್ಕೇಽರ್ಥನಿಶ್ಚಯೇ) ॥*b* ೪೦೫
(ತೂಷ್ಣೀಮರ್ಥೇ ಸುಖೇ) ಜೋಷಂ *c* ಕಿಂ (ಪೃಚ್ಛಾಯಾಂ ಜುಗುಪ್ಸನೇ) ।*d*
ನಾಮ (ಪ್ರಕಾಶ್ಯಸಂಭಾವ್ಯಕ್ರೋಧೋಪಗಮಕುತ್ಸನೇ) ॥*e* ೪೦೬
ಅಲಂ (ಭೂಷಣಪರ್ಯಾಪ್ತಿಶಕ್ತಿವಾರಣವಾಚಕಂ) ।*f*
ಹುಂ (ವಿತರ್ಕೇ ಪರಿಪ್ರಶ್ನೇ) *g* ಸಮಯಾಂ(ತಿಕಮಧ್ಯಯೋಃ) ॥*h* ೪೦೭
ಪುನ (ರಪ್ರಥಮೇ ಭೇದೇ) *i* ನಿ(ರ್ನಿಶ್ಚಯನಿಷೇಧಯೋಃ) ।*j*
(ಸ್ಯಾತ್ಪ್ರಬಂಧೇ ಚಿರಾತೀತೇ ನಿಕಟಾಗಾಮಿಕೇ) ಪುರಾ ॥*k* ೪೦೮
ಊರರ್ಯುರೀ (ಚೋ)ರರೀ (ಚ ವಿಸ್ತಾರೇಽಂಗೀಕೃತೌ ತ್ರಯಂ) ।*l*
(ಸ್ವರ್ಗೇ ಚ ಪರಲೋಕೇ) ಸ್ವೋ *m* (ವಾರ್ತಾಸಂಭಾವ್ಯಯೋಃ)ಕಿಲ॥*n* ೪೦೯
(ನಿಷೇಧವಾಕ್ಯಾಲಂಕಾರಜಿಜ್ಞಾಸಾನುನಯೇ) ಖಲು ।*o*
(ಸಮೀಪೋಭಯತಃ ಶೀಘ್ರಸಾಕಲ್ಯಾಭಿಮುಖೇ)ಽಭಿತಃ ॥*p* ೪೧೦

---

*a* Like, as ; thus, in this manner. *b* Just conclusion ; surely, verily. *c* Silently ; comfortably ; quiet. *d* Interrogation ; disgust. *e* By name ; perhaps ; angry consent ; of course, certainly ; no matter. *f* Ornamentally, in a becoming manner ; completely, fully ; powerfully ; enough, no more ; cease. *g* Doubtful inference ; questioning. *h* Near ; middle. *l* Again ; on the contrary. *j* Certain, true ; negation. *k* Beginning of a story ; former, old, primeval, very ancient ; near future. *l* Extensively ; granted, agreed. *m* *Svarga*, paradise ; the other world. *n* Rumour, indeed ? ; not so ? *o* Not at all, prohibitive ; indeed ; not so ? ; thus (is it) not ? *p* Near ; on both sides ; soon, quickly ; completely ; towards, in presence of.

*a* ಹೋಲಿಕೆ, ಹೀಗೆ. *b* ಸಕಾರಣವಾದ ಊಹೆ, ಇದು ಹೀಗೇ ಸರಿಯೆಂಬ ನಿರ್ಣಯ. *c* ಮೌನ, ಸುಖ. *d* ಪ್ರಶ್ನೆ, ಜುಗುಪ್ಸೆ. *e* ಪ್ರಕಟಪಡಿಸತಕ್ಕ, ಹೀಗಾದೀತೆಂದು ಊಹಿಸತಕ್ಕ, ಸಿಟ್ಟು, ಅಂಗೀಕಾರ, ನಿಂದಿಸುವಿಕೆ. *f* ಅಲಂಕಾರ, ಸಂಪೂರ್ಣ, ಸಮರ್ಥ, ವಾರಣ. *g* ಕಾರಣ ಬಲಸಾಲದ ಊಹೆ, ಪ್ರಶ್ನೆ. *h* ಸಮೀಪ, ನಡುವೆ. *i* ಮತ್ತು, ಬೇರೆ. *j* ನಿಶ್ಚಯ, ನಿಷೇಧ. *k* ವಾಕ್ಯರಚನೆ, ಬಹಳ ಪೂರ್ವಕಾಲ, ಮುಂದೆ ಬರುವ ಸಮೀಪಕಾಲ. *l* ವಿಸ್ತಾರ, ಅಂಗೀಕಾರ. *m* ದೇವಲೋಕ, ಜನ್ಮಾಂತರದಲೋಕ. *n* ಜನಸಮಾಚಾರ, ಹೀಗಾಗಿರಬಹುದು. *o* ನಿಷೇಧ, ವಾಕ್ಯಾಲಂಕಾರ. ಜಿಜ್ಞಾಸೆ, ಒಡಂಬಡಿಸುವಿಕೆ. *p* ಹತ್ತಿರ, ಎರಡುಕಡೆ, ಬೇಗ, ಎಲ್ಲ, ಎದುರಾಗಿ.

(ನಾಮಪ್ರಾಕಾಶ್ಯಯೋಃ) ಪ್ರಾದು *a* ರ್ಮಿಥೋಽ(ನ್ಯೋನ್ಯಂ ರಹಸ್ಯಪಿ) |*b*
ತಿರೋಽಂ(ತರ್ಧೌ ತಿರ್ಯಗರ್ಥೇ) *c* ಹಾ (ವಿಷಾದಶುಗಾರ್ತಿಷು) ||*d* ೪೧೧
ಅಹಹೇ (ತ್ಯದ್ಭುತೇ ಖೇದೇ) *e* ಹಿ (ಹೇತಾವವಧಾರಣೇ) |*f*

|| ಇತಿ ನಾನಾರ್ಥಾವ್ಯಯ ವರ್ಗಃ ||

---

## V. ಅವ್ಯಯ ವರ್ಗ—AVYAYA-VARGA.

ಚಿರಾಯ ಚಿರರಾತ್ರಾಯ ಚಿರಸ್ಯಾ (ದ್ಯಾಶ್ಚಿರಾರ್ಥಕಾಃ) ||*g* ೪೧೨
ಮುಹುಃ ಪುನಃ ಪುನಶ್ಶಶ್ವದಭೀಕ್ಷ್ಣಮಸಕೃತ್ (ಸಮಾಃ) |*h*
ಸ್ರಾಗ್ಝಡಿತ್ಯಂಜಸಾಹ್ನಾಯ ದ್ರಾಙ್ಮಂಕ್ಷು ಸಪದಿ (ದ್ರುತೇ) ||*i* ೪೧೩
ಬಲವತ್ಸುಷ್ಠು ಕಿಮುತ ಸ್ವತ್ಯತೀವ (ಚ ನಿರ್ಭರೇ) |*j*
ಪೃಥಗ್ವಿನಾಂತರೇಣರ್ತೆ ಹಿರುಙ್ನಾನಾ (ಚ ವರ್ಜನೇ) ||*k* ೪೧೪
ಯತ್ತದ್ಯತಸ್ತತೋ ಹೇತಾ *l* (ವಸಾಕಲ್ಯೇ ತು) ಚಿಚ್ಚನ |*m*
ಕದಾಚಿಜ್ಜಾತು *n* ಸಾರ್ಧಂ (ತು) ಸಾಕಂ ಸತ್ರಾ ಸಮಂ ಸಹ ||*o* ೪೧೫
(ಅನುಕೂಲ್ಯಾರ್ಥಕೇ) ಪ್ರಾಧ್ವಂ *p* (ವ್ಯರ್ಥಕೇ ತು) ವೃಥಾ ಮುಧಾ |*q*
ಆಹೋ ಉತಾಹೋ ಕಿಮುತ (ವಿಕಲ್ಪೇ) ಕಿಂ ಕಿಮೂತ (ಚ) ||*r* ೪೧೬

---

*a* Appellation ; publish. *b* Mutually, reciprocally ; privately. *c* Hiding ; athwart, across. *d* Exclamation of rage ; of grief, of sorrow ; of pain, of weariness. *e* Exclamation of great surprise ; of great pain. *f* Because ; assuredly. *g* A long time 3. *h* Repeatedly, again 5. *i* Soon, instantly 7. *j* Much, very 6. *k* Separately, without, except 6. *l* Since, because 4. *m* Incomplete, not full 2. *n* Once, at some time 2. *o* With 5. *p* Friendly, inclined to 1. *q* In vain, fruitless 2. *r* If not so then what? or how? 6.

*a* ಹೆಸರು, ಪ್ರಕಟಪಡಿಸುವಿಕೆ. *b* ಅನ್ಯೋನ್ಯವಾಗಿ, ಏಕಾಂತವಾಗಿ. *c* ಮರೆ, ಅಡ್ಡವಾಗಿ. *d* ವಿಷಾದ, ಶೋಕ, ಪೀಡೆ. *e* ಆಶ್ಚರ್ಯ, ದುಃಖ. *f* ಕಾರಣ, ಅವಧಾರಣ. *g* ಬಹುಕಾಲ ೩. *h* ಬಾರಿಬಾರಿಗೆ ೫. *i* ಶೀಘ್ರ ೭. *j* ಬಹಳ ೬. *k* ಹೊರತು ೬. *l* ಕಾರಣ ೪. *m* ಅಸಂಪೂರ್ಣ ೨. *n* ಒಂದಾನೊಂದು ವೇಳೆ ೨. *o* ಕೂಡೆ ೫. *p* ಅನುಕೂಲತೆ ೧. *q* ನಿಷ್ಪ್ರಯೋಜನ ೨. *r* ಹಾಗಲ್ಲದಿದ್ದರೆ ೬.

ತು ಹಿ ಚ ಸ್ಮ ಹ ವೈ (ಪಾದಪೂರಣೇ) *a* (ಪೂಜನೇ) ಸ್ವತಿ ।*b*
ದಿವಾಽ(ಹ್ನೀತ್ಯಥ) *c* ದೋಷಾ (ಚ) ನಕ್ತಂ (ಚ ರಜನಾವಿತಿ) ॥*d* ೪೧೭
(ತಿರ್ಯಗರ್ಥೇ) ಸಾಚಿ ತಿರೋಽ *e* (ಪೃಥ ಸಂಬೋಧನಾರ್ಥಕಾಃ) ।
(ಸ್ಯುಃ) ಪ್ಯಾಟ್ಪಾಡಂಗ ಹೇ ಹೈ ಭೋ *f* ಸ್ಸಮಯಾ ನಿಕಷಾ ಹಿರುಕ್ ॥*g* ೪೧೮
(ಅತರ್ಕಿತೇತು) ಸಹಸಾ *h* (ಸ್ಯಾ)ತ್ಪುರಃ ಪುರತೋಽಗ್ರತಃ ।*i*
ಸ್ವಾಹಾ (ದೇವಹವಿರ್ದಾನೇ) ಶ್ರೌಷಡ್ವೌಷಡ್ವಷಟ್ಸ್ವಧಾ ॥*j* ೪೧೯
ಕಿಂಚಿದೀಷನ್ಮನಾ(ಗಲ್ಪೇ) *k* ಪ್ರೇತ್ಯಾಮುತ್ರ (ಭವಾಂತರೇ) ।*l*
ವದ್ವಾ ಯಥಾ ತಥೇವೈವಂ (ಸಾಮ್ಯೇ) *m* ಹೋಽಹಿ (ಚ ವಿಸ್ಮಯೇ) ॥*n* ೪೨೦
(ಮೌನೇ ತು) ತೂಷ್ಣೀಂ ತೂಷ್ಣೀಕಾಂ *o* ಸದ್ಯಸ್ಸಪದಿ (ತತ್ಕ್ಷಣೇ) ।*p*
ದಿಷ್ಟ್ಯಾ ಸಮುಪಜೋಷಂ (ಚೇತ್ಯಾನಂದೇ) *q* (ಽಥಾ)ಂತರೇಽಂತರಾ ॥ ೪೨೧
ಅಂತರೇಣ (ಚ ಮಧ್ಯೇ ಸ್ಯುಃ) *r* ಪ್ರಸಹ್ಯ (ತು ಹಠಾರ್ಥಕಂ) ।*s*
(ಯುಕ್ತೇ ದ್ವೇ) ಸಾಂಪ್ರತಂ ಸ್ಥಾನೇಽ *t* ಭೀಕ್ಷ್ಣಂ ಶಶ್ವತ್ (ಅನಾರತೇ) ॥*u*
(ಅಭಾವೇ) ನಹ್ಯನೋ ನಾ (ಪಿ) *v* ಮಾಸ್ಮ ಮಾಲಂ (ಚ ವಾರಣೇ) ।*w*
(ಪಕ್ಷಾಂತರೇ) ಚೇದ್ಯದಿ (ಚ) *x* (ತತ್ತ್ವೇ) ತ್ವದ್ಧಾಽಂಜಸಾ (ದ್ವಯಂ) ॥*y*

---

*a* Particles used to complete a line in poetry 6. *b* Good, well 2. *c* By day 1. *d* By night 2. *e* Crookedly, awry 2. *f* Vocative particle, Ho there! 6. *g* Near 3. *h* Hastily, rashly 3. *i* Before, in front 3. *j* Exclamations used in making offerings to the gods 5. *k* A little, scanty 3. *l* In a former life, by transmigration 2. *m* Thus, so, accordingly 6. *n* Exclamations of surprise 2. *o* Silently, in silence 2. *p* At the time, instantly 2. *q* Joy or auspiciousness, as Thank heaven 2. *r* Between, in the middle 3. *s* By force, violently 2. *t* Suitably, properly 2. *u* Incessantly, excessively 2. *v* Not 4. *w* Prohibitive particle 2. *x* If 2. *y* Directly, instantly, truly 2.

*a* ಪಾದ ಪೂರಣಾರ್ಥ ೬. *b* ಪೂಜಾರ್ಥ ೨. *c* ಹಗಲು ೧. *d* ರಾತ್ರಿ ೨. *e* ಅಡ್ಡವಾಗಿ ೨. *f* ಸಂಬೋಧನೆ ೬. *g* ಸಮೀಪ ೩. *h* ಅವಿಚಾರಿತ ೩. *i* ಮುಂದೆ ೩. *j* ದೇವತೆಗಳಿಗೆ ಹವಿರ್ಭಾಗ ಕೊಡುವಿಕೆ ೫. *k* ಕೊಂಚ ೩. *l* ಜನ್ಮಾಂತರ ೨. *m* ಹಾಗೆ ೬. *n* ಆಶ್ಚರ್ಯ ೨. *o* ಮೌನ ೨. *p* ಆಗ ತಾನೆ ೨. *q* ಸಂತೋಷ ೨. *r* ನಡುವೆ ೩. *s* ಬಲಾತ್ಕಾರ ೨, *t* ಉಚಿತ ೨. *u* ಎಡೆಬಿಡದೆ ೨. *v* ಅಭಾವ ೪. *w* ವಾರಣ ೨. *x* ಒಂದು ಪಕ್ಷ ೨. *y* ಸತ್ಯವಾಗಿ ೨.

(ಪ್ರಕಾಶೇ) ಪ್ರಾದುರಾವಿ (ಸ್ಸ್ಯಾ) *a* ದೋಮೇವಂ ಪರಮಂ (ಮತೇ) ।*b*
ಸಮಂತತ(ಸ್ತು) ಪರಿತಃ ಸರ್ವತೋ ವಿಷ್ವ(ಗಿತ್ಯಪಿ) ॥*c* ೪೨೪
(ಅಕಾಮಾನುಮತೌ) ಕಾಮ *d* (ಮಸೂಯೋಪಗಮೇಽ)ಸ್ತು (ಚ) ।*e*
ನನು (ಚ ಸ್ಯಾದ್ವಿರೋಧೋಕ್ತೌ) *f* ಕಚ್ಚಿ(ತ್ಕಾಮಪ್ರವೇದನೇ) ॥*g* ೪೨೫
ನಿಷ್ಷಮಂ ದುಷ್ಷಮಂ (ಗರ್ಹ್ಯೇ) *h* ಯಥಾಸ್ವಂ (ತು) ಯಥಾಯಥಂ ।*i*
ಮೃಷಾಮಿಥ್ಯಾ (ಚ ವಿತಥೇ) *j* ಯಥಾರ್ಥಂ (ತು) ಯತಾತಥಂ ॥*k* ೪೨೬
(ಸ್ಯು)ರೇವಂ ತು ಪುನರ್ವೈ ವೇ(ತ್ಯವಧಾರಣವಾಚಕಾಃ) ।*l*
ಪ್ರಾ ಗ(ತೀತಾರ್ಥಕಂ) *m* ನೂನಮವಶ್ಯಂ (ನಿಶ್ಚಯೇ ದ್ವಯಂ) ॥*n* ೪೨೭
ಸಂವ(ದ್ವರ್ಷೇಽ) *o* (ಪರೇ)ತ್ವರ್ವಾ *p* ಗಾಮೇವಂ *q* ಸ್ವಯ(ಮಾತ್ಮನಾ) ।*r*
(ಅಲ್ಪೇ)ನೀಚೈ(ರ್ಮಹತ್ಯು)ಚ್ಚೈಃ*t* ಪ್ರಾಯೋ(ಭೂಮ್ನ್ಯ)*u* (ದ್ರುತೇ)ಶನೈಃ।*v*
ಸನಾ (ನಿತ್ಯೇ) *w* ಬಹಿ(ರ್ಬಾಹ್ಯೇ) *x* ಸ್ಮಾ(ತೀತೇಽ) *y* ಸ್ತ(ಮದರ್ಶನೇ) ।*z*

---

*a* Manifestly, coming to light 2. *b* Be it so, very well 2. *c* Every way, everywhere, all about 4. *d* Agreeing unwillingly 1. *e* May be, no matter 2. *f* How is that? how can that be? 2. *g* A particle used in inquiries after welfare and in replies thereto, as How do you do? How is your father? All are well. *h* Blameably, erroneously 2. *i* Own, self 2. *j* Falsely, uselessly 2. *k* Truly, correctly, really 2. *l* Just so, thus exactly 5. *m* Past, formerly 1. *n* Surely, indubitably 3. *o* Annually 1. *p* Until, before or within such a time 1: *q* Yes, just so 2. *r* Personally, of one's own accord, spontaneously 1. *s* Little, low, base 1. *t* Much, excessively 1. *u* Probably, perhaps 1. *v* Slowly, stealthily 1. *w* Always, perpetually 1. *x* Out, outside 1. *y* A particle indicating the past tense 1. *z* Setting, passing out of sight 1.

*a* ಕಾಣಬರುವಂತೆ ೨. *b* ಅಂಗೀಕರಿಸುವಿಕೆ ೨. *c* ಎಲ್ಲಾಕಡೆ ೪. *d* ಇಚ್ಛೆಯಿಲ್ಲದೆ ಒಡಂಬಡುವಿಕೆ ೧. *e* ಅಸೂಯೆಯಿಂದ ಒಡಂಬಡುವಿಕೆ ೨. *f* ವಿರುದ್ಧವಾಗಿ ಹೇಳುವಿಕೆ ೨. *g* ಬೇಕಾದಹಾಗೆ ತಿಳಿಯಪಡಿಸುವಿಕೆ ೧. *h* ನಿಂದಿಸತಕ್ಕದ್ದು ೨. *i* ತಮ್ಮಿಷ್ಟಕ್ಕೆ ತಾವು ೨. *j* ಸುಳ್ಳು ೨. *k* ಸತ್ಯ ೨. *l* ಹೀಗೆಯೇ ಸರಿ ೫. *m* ಕಳೆದುಹೋದದ್ದು ೧. *n* ನಿಶ್ಚಯ ೩. *o* ವರ್ಷ ೧. *p* ಈಚೆಗೆ ೧. *q* ಒಪ್ಪುವಿಕೆ ೨. *r* ತಾನಾಗಿ ೧. *s* ಕೊಂಚ ೧. *t* ದೊಡ್ಡದಾಗಿ ೧. *u* ಬಹುವಾಗಿ ೧. *v* ಮೆಲ್ಲಗೆ ೧. *w* ಶಾಶ್ವತ ೧. *x* ಹೊರಗೆ ೧. *y* ಕಳೆದುಹೋದದ್ದು ೧. *z* ಕಾಣಬರದೆ ಹೋಗುವಿಕೆ ೧.

ಅಸ್ತಿ (ಸತ್ತ್ವೇ) *a* (ರುಷೋಕ್ತಾ)ವೂ *b* ಮುಂ(ಪ್ರಶ್ನೇಽ) *c* (ನುನಯೇ)ತ್ವಯಿ ॥*d*
(ತರ್ಕೇ) ನು *e* (ಸ್ಯಾ)ದುಷಾ (ರಾತ್ರೇರವಸಾನೇ) *f* ನಮೋ (ನತೌ) ।*g*
(ಪುನರರ್ಥೇಽಂ)ಗ *h* (ನಿಂದಾಯಾಂ) ದುಷ್ಠು *i* ಸುಷ್ಠು (ಪ್ರಶಂಸನೇ) ॥*j*
ಆಮಾ(ನುಗುಣ್ಯೇ) *k* (ಸ್ಮರಣೇ) ಯೇ *l* ಫಡ್ವಿ(ಷ್ನನಿರಾಕೃತೌ) ।*m*
(ಅಂಗೀಕೃತೌ ಸ್ಯಾ)ದಥಕಿಂ *n* (ಹೀನಸಂಬೋಧನೇ ತು) ರೇ ॥*o* ೪೩೧
ಸಾಯಂ (ಸಾಯೇ) *p* ಪ್ರಗೇ ಪ್ರಾತಃ (ಪ್ರಭಾತೇ) *q* ನಿಕಷಾ(ಽಂತಿಕೇ) ।*r*
ಪರುತ್ಪರಾರ್ಯೈಷಮೋ(ಽಬ್ದೇ ಪೂರ್ವೇ ಪೂರ್ವತರೇ ಯತಿ) ॥*s* ೪೩೨
ಅದ್ಯಾ(ತ್ರಾಹ್ನ್ಯಥ) *t* (ಥ ಪೂರ್ವೇಽಹ್ನೀತ್ಯಾದೌ) (ಪೂರ್ವೋತ್ತರಾಪರಾತ್) ।
(ತಥಾ)ಽಧರಾನ್ಯಾನ್ಯತರೇತರಾತ್ಪೂರ್ವೇದ್ಯು(ರಾದಯಃ) ॥*u* ೪೩೩
ಉಭಯದ್ಯು(ಶ್ಚೋ)ಭಯೇದ್ಯುಃ *v* (ಪರೇ ತ್ವಹ್ನಿ)ಪರೇದ್ಯವಿ ।*w*
ಹ್ಯೋ (ಗತೇ) *x* (ನಾಗತೇಽಹ್ನಿ) ಶ್ವಃ *y* ಪರಶ್ವ(ಸ್ತತ್ಪರೇಽಹನಿ) ॥*z* ೪೩೪

---

*a* There is, it is 1. *b* An exclamation of anger 1. *c* An interrogation, Hey? 1. *d* A vocative particle, I say! 1. *e* Whether—or? 1. *f* At dawn 1. *g* "Adoration!" the salutation due to an elder 1. *h* Again, further 1. *i* Evil, wicked 1. *j* Well, excellently 1. *k* Yes, agreed 1. *l* A particle of recollection, Ah! 1. *m* A mystical syllable used in incantations 1. *n* Yes, very well 1. *o* A vocative particle of contempt 1. *p* At sunset 1. *q* In the morning 2. *r* Near 1. *s* Last year 1; the year before last 1. *t* To-day, now 1. *u* Particles denoting time when followed by *dyuh* 7. *v* In two days 2. *w* Next day 2. *x* Yesterday, a past day 1. *y* Tomorrow 1. *z* The day after tomorrow 2.

*a* ಉಂಟು ೧. *b* ಕೋಪದ ಸೂಚನೆ ೧. *c* ಪ್ರಶ್ನೆ ೧. *d* ಸಮಾಧಾನ ಪಡಿಸುವಿಕೆ ೧. *e* ಊಹಿಸುವಿಕೆ ೧. *f* ಬೆಳಗಿನಜಾವ ೧. *g* ನಮಸ್ಕಾರ ೧. *h* ಮತ್ತು ೧. *i* ದೂಷಣೆ ೧. *j* ಸ್ತೋತ್ರ ೧. *k* ಅನುಕೂಲ ೧. *l* ಸ್ಮರಿಸುವಿಕೆ ೧. *m* ಅಡ್ಡಿಯನ್ನು ನಿರಾಕರಿಸುವಿಕೆ ೧. *n* ಒಡಂಬಡಿಕೆ ೧. *o* ಕೀಳಾಗಿ ಕರೆಯುವಿಕೆ ೧. *p* ಸಾಯಂಕಾಲವು ೧. *q* ಬೆಳಗ್ಗೆ ೨. *r* ಸಮೀಪ ೧. *s* ಕ್ರಮವಾಗಿ ಕಳೆದ ವರುಷ, ಅದಕ್ಕಿಂತಲೂ ಹಿಂದಣ ಸಂವತ್ಸರ ೩. *t* ಈ ಹಗಲು ೧. *u* ಕಾಲವಿಶೇಷ ವಾಚಕಗಳು ೭. *v* ಎರಡು ದಿನಗಳು ೨. *w* ಮರುದಿನ ೨. *x* ಕಳೆದ ದಿನ ೧. *y* ನಾಳೆ ೧. *z* ನಾಡಿದ್ದು ೨.

ತದಾ ತದಾನೀಂ *a* ಯುಗಪದೇಕದಾ *b* ಸರ್ವದಾ ಸದಾ |*c*
ಎತರ್ಹಿ ಸಂಪ್ರತೀದಾನೀಮಧುನಾ ಸಾಂಪ್ರತಂ (ತಥಾ) ||*d* ೪೩೫
(ದಿಗ್ದೇಶಕಾಲೇ ಪೂರ್ವಾದೌ) ಪ್ರಾಗುದಕ್ಪ್ರತ್ಯಗಾ(ದಯಃ) |*e*

|| ಇತ್ಯವ್ಯಯ ವರ್ಗಃ ||

---

*a* Then, at that time 2. *b* At the same time 2. *c* Always, forever 2. *d* Now 5. *e* East, the east (country) 1; north, the north (country) 1; West, the west (country) 1, etc.

*a* ಆಗ ೨. *b* ಒಂದೇವೇಳೆ ೨. *c* ಯಾವಾಗಲೂ ೨, *d* ಈಗ ೫. *e* ಪೂರ್ವದಿಕ್ಕು, ಪೂರ್ವದೇಶ ೧; ಬಡಗಲದೆಸೆ, ಬಡಗಲದೇಶ ೧; ಪಡುವಲದೆಸೆ, ಪಡುವಲದೇಶ ೧, ಇತ್ಯಾದಿ.

## VI. LINGADI-SANGRAHA VARGA
## ಲಿಂಗಾದಿ ಸಂಗ್ರಹ ವರ್ಗಃ

ಮೂಲ ‖ ಸಲಿಂಗಶಾಸ್ತ್ರೈಸ್ಸನ್ನಾದಿ ಕೃತ್ತದ್ಧಿತ ಸಮಾಸಜೈಃ ‖ ಅನುಕ್ತಂ ಸಂಗ್ರಹೇ ಲಿಂಗಂ ಸಂಕೀರ್ಣವದಿಹೋನ್ನಯೇತ್ ‖

ಟೀಕೆ ‖ ಸನ್ನಾದಿಕೃತ್ತದ್ಧಿತ ಸಮಾಸಜೈಃ—ಸನ್ನಾದಿಕೃತ್ತು, ತದ್ಧಿತ ಈ ಪ್ರತ್ಯಯಗಳಲ್ಲಿಯೂ ಸಮಾಸಗಳಲ್ಲಿಯೂ ಉಂಟಾದ, ಸಲಿಂಗ ಶಾಸ್ತ್ರೈಃ—ಲಿಂಗವಿಧಿಗಳಿಂದ ಕೂಡಿದ ಶಾಸ್ತ್ರಗಳಿಂದ ಇಹ ಸಂಗ್ರಹೇ—ಈ ಲಿಂಗ ಸಂಗ್ರಹವರ್ಗದಲ್ಲಿ ಸಂಕೀರ್ಣವತ್—ಸಂಕೀರ್ಣವರ್ಗದಲ್ಲಿ ಹೇಗೋಹಾಗೆ, ಅನುಕ್ತಂ—ಅನ್ಯತ್ರ ಹೇಳಲ್ಪಡದ, ಲಿಂಗಂ—ಸ್ತ್ರೀಲಿಂಗ, ಪುಂಲ್ಲಿಂಗ, ನಪುಂಸಕ ಲಿಂಗ ಗಳನ್ನು, ಉನ್ನಯೇತ್—ಊಹಿಸಬೇಕು.

The author gives further rules regarding gender.

ಮೂಲ ‖ ಲಿಂಗಶೇಷ ವಿಧಿರ್ವ್ಯಾಪೀ ವಿಶೇಷೈರ್ಯದ್ಯಬಾಧಿತಃ ‖ ೪೩೭

ಟೀಕೆ ‖ ಲಿಂಗಶೇಷವಿಧಿಃ—ಈ ವರ್ಗದಲ್ಲಿ ಹೇಳಲ್ಪಡುವ ಲಿಂಗವಿಷಯವಾದ ಸಾಮಾನ್ಯವಿಧಿಯು, ವಿಶೇಷೈಃ—ವಿಶೇಷ ವಿಧಿಗಳಿಂದ, ಅಬಾಧಿತೋ ಯದಿ—ಬಾಧಿಸಲ್ಪಡದಿದ್ದರೆ, ವ್ಯಾಪೀ—ತಾನು ವ್ಯಾಪಕವಾಗುವದು; ಅದು ಹೇಗೆಂದರೆ :—ಸ್ವರ್ಗಪರ್ಯಾಯ ಶಬ್ದಗಳು ಪುಲ್ಲಿಂಗಗಳಾಗುವು ವೆಂಬ ವಿಧಿಯು "ದ್ಯೋದಿವೌದ್ವೇ ಸ್ತ್ರಿಯಾಂ"—ಎಂಬದಾಗಿ ಪೂರ್ವದಲ್ಲಿ ಹೇಳಿದ ವಿಶೇಷ ವಿಧಿಯಿಂದ ಬಾಧಿಸಲ್ಪಡುವುದರಿಂದ ಇದು ದ್ಯೋದಿವ್ ಶಬ್ದಗಳು ಹೊರತಾಗಿ ಮಿಕ್ಕ ಸ್ವರ್ಗಪರ್ಯಾಯ ಶಬ್ದಗಳಲ್ಲಿ ಪ್ರವರ್ತಿಸುವದು.

The rules here given do not apply to exceptional words whose gender has been expressly indicated in previous chapters.

ಮೂಲ ‖ ಸ್ತ್ರಿಯಾಮೀದೂದ್ವಿರಾಮೈಕಾಚ್.

ಟೀಕೆ ‖ ಏಕಾಚ್—ಒಂದು ಸ್ವರವುಳ್ಳ, ಈದೂದ್ವಿರಾಮಾ—ಈಕಾರಾಂತ ಊಕಾರಾಂತ ಶಬ್ದಗಳು ಸ್ತ್ರಿಯಾಂ—ಸ್ತ್ರೀಲಿಂಗದಲ್ಲಿರುವವು. ಉದಾಹರಣೆ ; ಶ್ರೀ, ಧೀ, ಭೂ, ಭ್ರೂ.

Words ending in ī and ū are feminine.
from this ಸ್ತ್ರಿಯಾಂ as far as ಪುಂಸ್ತ್ರೀಸಭೇದಾನುಚರಾಂ(446) the author treats of words of the feminine gender,

ಮೂಲ ‖ ಸಯೋನಿಪ್ರಾಣಿನಾಮಚ ‖

ಟೀಕೆ ‖ ಯೋನಿಯುಳ್ಳ ಪ್ರಾಣಿಗಳ ಹೆಸರುಗಳು ಸ್ತ್ರೀಲಿಂಗದಲ್ಲಿ ವರ್ತಿಸುವವು. ಉದಾಹರಣೆ. ಮಾತೃ, ಯೋಷಿತ್, ಸುರಭಿ, ಕರೇಣು.
Names of females are feminine.

ಮೂಲ ‖ ನಾಮವಿದ್ಯುನ್ನಿಶಾವಲ್ಲೀ ವೀಣಾದಿಗ್ಭೂನದೀಹ್ರಿಯಾಂ ‖ ೪೩೮

ಟೀಕೆ ‖ ವಿದ್ಯುತ್—ಮಿಂಚು, ನಿಶಾ—ರಾತ್ರಿ, ವಲ್ಲೀ—ಬಳ್ಳಿ, ವೀಣಾ—ವೀಣೆ, ದಿಕ್—ದೆಸೆ, ಭೂ—ಭೂಮಿ, ನದೀ—ಹೊಳೆ, ಹ್ರೀ—ನಾಚಿಕೆ, ಈ ವಸ್ತುಗಳ, ನಾಮ—ಹೆಸರುಗಳು, ಸ್ತ್ರೀಲಿಂಗಗಳು.
All names relating to the following are feminine, with the exceptions noted in the places where they occur :—lightning, night, creepers, the Indian lute, points of the compass, earth, rivers, shame.

ಮೂಲ ‖ ಅದಂತೈರ್ದ್ವಿಗುರೇಕಾರ್ಥೋ

ಟೀಕೆ ‖ ಅದಂತೈಃ—ಅಕಾರಾಂತೋತ್ತರ ಪದಗಳಿಂದ ಕೂಡಿದ, ಏಕಾರ್ಥೋ ದ್ವಿಗುಃ—ಸಮಾಹಾರದ್ವಿಗುಸಮಾಸವು, ಸ್ತ್ರೀಲಿಂಗವು. ಉದಾ.—ತ್ರಯಾಣಾಂಲೋಕಾನಾಂಸಮಾಹಾರಃ—ತ್ರಿಲೋಕೀ, ಪಂಚ ವಟೀ.

*Dvigu* compounds ending in *a* are feminine.

ಮೂಲ ‖ ನಸಪಾತ್ರಯುಗಾದಿಭಿಃ ‖
Except when the second word is *patra* or *yuga*.

ಟೀಕೆ ‖ ಪಾತ್ರಯುಗಾದಿಭಿಃ—ಪಾತ್ರಯುಗ ಮುಂತಾದ ಉತ್ತರ ಪದಗಳಿಂದ ಕೂಡಿದ, ಸಃ—ಆ ದ್ವಿಗುಸಮಾಸವು ನ—ಸ್ತ್ರೀಲಿಂಗವಲ್ಲ; ಉದಾ.—ಪಂಚಪಾತ್ರಂ, ಚತುರ್ಯುಗಂ, ತ್ರಿಭುವನಂ.

ಮೂಲ ‖ ತಲ್.

ಟೀಕೆ ‖ ತಲ್ ಪ್ರತ್ಯಯಾಂತವಾದ ಶಬ್ದವು ಸ್ತ್ರೀಲಿಂಗವು. ಉದಾ.—ಪುರುಷಸ್ಯ ಭಾವಃ ಪುರುಷತಾ, ಜನಾನಾಂ ಸಮೂಹಃ ಜನತಾ, ದೇವ ಏವ ದೇವತಾ.

Abstract nouns of the class *tal*, namely those ending in *ta*, are feminine.

ಮೂಲ ‖ ಬೃಂದೇ ಯೇನಿಕಟ್ಯೈಚ್ತ್ರಾ.

ಟೀಕೆ ‖ ಬೃಂದೇ—ಸಮೂಹಾರ್ಥದಲ್ಲಿ ವಿಧಿಸಲ್ಪಟ್ಟ ಯ, ಇನಿ, ಕಟ್ಯೈಚ್, ತ್ರಾ ಎಂಬ ಪ್ರತ್ಯಯಗಳಿಂದ ಕೂಡಿರುವ ಶಬ್ದಗಳು ಸ್ತ್ರೀಲಿಂಗಗಳು. ಉದಾ—ಪಾಶಾನಾಂ ಸಮೂಹಃ-ಪಾಶ್ಯಾ, ಖಲಾನಾಂ ಸಮೂಹಃ ಖಲಿನೀ, ರಥಾನಾಂ ಸಮೂಹಃ—ರಥಕಟ್ಯಾ, ಗವಾಂಸಮೂಹಃ —ಗೋತ್ರಾ.

Collective nouns ending in *ya, ini, katya,* and *tra* are feminine.

ಮೂಲ ‖ ವೈರಮೈಥುನಿಕಾದಿವುನ್ ‖ ೪೩೯

ಟೀಕೆ ‖ ವೈರ-ವಿರೋಧದಲ್ಲೂ, ಮೈಥುನಿಕಾ-ವಿವಾಹದಲ್ಲೂ ಆದಿಶಬ್ದದಿಂದ ವೀಪ್ಸೆಯಲ್ಲೂ, ದಂಡದಲ್ಲೂ, ದಾನದಲ್ಲೂ ವಿಧಿಸಲ್ಪಟ್ಟ ವುನ್ ಎಂಬ ಪ್ರತ್ಯಯವು ಅಂತವಾಗಿವುಳ್ಳಶಬ್ದಗಳು ಸ್ತ್ರೀಲಿಂಗಗಳು-ಉದಾಹರಣೆ ವಿರೋಧದಲ್ಲಿ — ಅಶ್ವಮಹಿಷಯೋರ್ವಿರೋಧಃ — ಅಶ್ವಮಹಿಷಿಕಾ ; ಕಾಕೋಲೂಕಿಕಾ; ವಿವಾಹದಲ್ಲಿ-ಅತ್ರಿಭರದ್ವಾಜಯೋರ್ವಿವಾಹ: ಅತ್ರಿ ಭರದ್ವಾಜಿಕಾ, ವಸಿಷ್ಠಕುಶಿಕಿಕಾ ; ವೀಪ್ಸೆಯಲ್ಲಿ—ದ್ವೌದ್ವೌಪಾದೌ ದದಾತಿ, ದ್ವಿಪದಿಕಾಂದದಾತಿ, ದ್ವಿಶತಿಕಾಂದದಾತಿ ; ದಂಡದಲ್ಲಿ— ದ್ವೌಪಾದೌ ದಂಡಿತಃ,ದ್ವಿಪದಿಕಾಂದಂಡಿತಃ ; ದಾನದಲ್ಲಿ-ದ್ವೌಪಾದೌ ವ್ಯವಸೃಜತಿ ದ್ವಿಪದಿಕಾಂವ್ಯವಸೃಜತಿ ದ್ವಿಶತಿಕಾಂವ್ಯವಸೃಜತಿ. ವುಃ— ಪ್ರತ್ಯಯವು ವುಙ್ ಪ್ರತ್ಯಯಕ್ಕೆ ಉಪಲಕ್ಷಕವಾದದ್ದರಿಂದ, ವುಙ್ ಪ್ರತ್ಯಯಾಂತಗಳು ಕೆಲವು ಸ್ಥಳಗಳಲ್ಲಿ ಸ್ತ್ರೀಲಿಂಗಗಳಾಗುವುವು. ಉದಾಹರಣೆ—ಶಿಷ್ಯೋಪಾಧ್ಯಾಯಯೋರ್ಭಾವಃ ಶೈಷ್ಯೋಪಾಧ್ಯಾ ಯಿಕಾ.

Correlative terms of the class *un* (such as husband-and-wife, cat-and-mouse) are feminine when signifying correlation of enmity or opposition, marriage or alliance, desire, punishment, donation.

ಮೂಲ ‖ ಸ್ತ್ರೀಭಾವಾದಾವನಿಕ್ತಿಣ್ಣ್ವಲ್ಣಜ್ಣ್ವಚ್ಕ್ಯಬ್ಯುಜಿಞಿಞ್ಶಾಃ ‖

ಟೀಕೆ ‖ ಸ್ತ್ರಿಭಾವಾದೌ ಸ್ತ್ರ್ಯಧಿಕಾರದೊಳಗೆ ಭಾವಾದ್ಯರ್ಥಗಳಲ್ಲಿ ವಿಧಿಸಲ್ಪಟ್ಟ ಅನಿ । ಕ್ತಿನ್ । ಣ್ವುಲ್ । ಣಚ್ । ಣ್ವುಚ್ । ಕ್ಯಪ್ । ಯುಚ್ । ಅಞ್ । ಅ । ಇಞ್ । ನಿ । ಶ । ಎಂಬ ಪ್ರತ್ಯಯಗಳು ಅಂತವಾಗಿ ಉಳ್ಳಶಬ್ದಗಳು ಸ್ತ್ರೀಲಿಂಗಗಳು. ಉದಾಹರಣೆ—ಅಜನನಿಃ,

ಅಕರಣಿಃ, ಈಬಳಿ ಆಕ್ರೋಶದಲ್ಲಿ ಅನಿಪ್ರತ್ಯಯವು ‖ ಕೃತಿಃ, ಭೃತಿಃ ಇಲ್ಲಿ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯವು ‖ ಪ್ರವಾಹಿಕಾ ಪ್ರಚ್ಛರ್ದಿಕಾ, ಇಲ್ಲಿ ರೋಗಾರ್ಥದಲ್ಲಿ ಣ್ವುಲ್ ‖ ಕಾರಿಕಾ, ಜೀವಿಕಾ, ಇಲ್ಲಿ ಧಾತ್ವರ್ಥದಲ್ಲಿ ಣ್ವುಲ್ ‖ ವ್ಯಾವಕ್ರೋಶೀ-ಒಬ್ಬರಿಗೊಬ್ಬರು ಬಯ್ದು ಕೊಳ್ಳುವದು, ವ್ಯಾತ್ಯುಕ್ಷೀ-ಒಬ್ಬರಮೇಲೊಬ್ಬರು ನೀರು ಚಲ್ಲಿ ಕೊಳ್ಳುವದು ; ಇಲ್ಲಿ ಕರ್ಮ ವ್ಯತಿಹಾರದಲ್ಲಿ ಣಚ್ ಪ್ರತ್ಯಯವು ‖ ಭವತಃ ಶಾಯಿಕಾ, ಭವತಃ ಆಸಿಕಾ, ಇಲ್ಲಿ ಪರ್ಯಾಯಾರ್ಥದಲ್ಲಿ ಣ್ವುಚ್ ಪ್ರತ್ಯಯವು ‖ ಭವಾನರ್ಹತಿ ಇಕ್ಷುಭಕ್ಷಿಕಾಂ ಪಯಃ ಪಾಯಿಕಾಂ, ಈ ಸ್ಥಳದಲ್ಲಿ ಣ್ವುಚ್ ‖ ವ್ರಜ್ಯಾ, ಇಜ್ಯಾ ಇಲ್ಲಿ ಕ್ಯಪ್ ಪ್ರತ್ಯಯವು ‖ ಮಂಡನಾ, ಆಸನಾ, ಇಲ್ಲಿ ಭಾವಾರ್ಥದಲ್ಲಿ ಯುಚ್ ‖ ಪಚಾ, ಭಿದಾ, ಮೃಜಾ ಇಲ್ಲಿ ಭಾವಾರ್ಥದಲ್ಲಿ, ಅಙ್ ‖ ಚಿಕೀರ್ಷಾ ಜಿಹೀರ್ಷಾ ಇಲ್ಲಿ ಸನ್ ಪ್ರತ್ಯಯದ ಮೇಲೆ ಭಾವಾರ್ಥದಲ್ಲಿ ಅ ಪ್ರತ್ಯಯವು ‖ ಕಾಂಕಾರಿಮಕಾರ್ಷೀಃ ಇಮಾಂಕಾರಿಮಕಾರ್ಷಂ, ಇಲ್ಲಿ ಪ್ರಶ್ನಾಖ್ಯಾನಗಳಲ್ಲಿ ಇಞ್ ‖ ಗ್ಲಾನಿಃ, ಮ್ಲಾನಿಃ, ಇಲ್ಲಿ ನಿ ಪ್ರತ್ಯಯವು ‖ ಕ್ರಿಯಾ, ಇಚ್ಛಾ, ಇಲ್ಲಿ ಶ ಪ್ರತ್ಯಯ ‖

Abstract nouns of the classes *ani*, *ktin*, *nvul*, *nach*, *nvuch*, *hyap*, *yuch*, *an*, *a*, *in*, *ni*, *sha* (examples given in Canarese) are feminine.

ಮೂಲ ‖ ಉಣಾದಿಷುನಿರೂರೀಶ್ಚ

ಟೀಕೆ ‖ ಉಣಾದಿಗಳಲ್ಲಿ ನಿರ್ । ಊರ್ । ಈರ್ । ಎಂಬ ಈ ಮೂರು ಪ್ರತ್ಯಯಗಳು ಅಂತವಾಗಿ ಉಳ್ಳ ಶಬ್ದಗಳು ಸ್ತ್ರೀಲಿಂಗದಲ್ಲಿ ವರ್ತಿಸುವುವು. ಉದಾ : ನಿರ್ ಪ್ರತ್ಯಯಕ್ಕೆ ‖ ಶ್ರೇಣಿಃ । ಶ್ರೋಣಿಃ । ಊರ್ ಪ್ರತ್ಯಯಕ್ಕೆ ‖ ಖರ್ಜೂಃ । ಕಂಡೂಃ । ಚಮೂಃ ‖ ಈರ್ ಪ್ರತ್ಯಯಕ್ಕೆ ‖ ತಂದ್ರೀಃ, ಲಕ್ಷ್ಮೀಃ ‖ ಅಗ್ನಿ । ವಹ್ನಿ । ಯೋನಿ । ಪಾರ್ಷ್ಣಿ ಶಬ್ದಗಳು ನಿ ಪ್ರತ್ಯಯಾಂತಗಳಾದರೂ ಪುಮಾ೯ ಪಾರ್ಷ್ಣಿಃ ಇತ್ಯಾದಿ ವಿಶೇಷ ವಿಧಿಯಿಂದ ಬಾಧಿಸಲ್ಪಟ್ಟು ಸ್ತ್ರೀಲಿಂಗವಲ್ಲ.

*Unadi* words ending in *in*, *u*, *i* are feminine.

ಮೂಲ ‖ ಙ್ಯಾಬೂಙಂತಂಚಲಂಸ್ಥಿರಂ ‖ ‖ ೪೪೦ ‖

ಟೀಕೆ ‖ ಙೀ ಅಂದರೆ—ಙೀಪ್—ಙೀಷ್—ಙೀನ್ ಎಂಬ ಪ್ರತ್ಯಯಗಳೂ ಆಪ್ ಅಂದರೆ ಟಾಪ್-ಡಾಪ್-ಚಾಪ್ ಎಂಬ ಪ್ರತ್ಯಯಗಳೂ ಊಙ್ ಎಂಬ ಪ್ರತ್ಯಯವೂ ಅಂತವಾಗಿ ಉಳ್ಳ ಶಬ್ದಗಳು ಚಲಂ—ವಿಶೇಷ್ಯನಿಘ್ನ—

ಗಳು, ಮತ್ತು ಸ್ಥಿರಂ—ನಿಯತ ಲಿಂಗಗಳು ಆಗಿದ್ದರೂ ಸ್ತ್ರೀಲಿಂಗ ಗಳಾಗುತ್ತವೆ. ಉದಾಹರಣೆ—ವಿಶೇಷ್ಯ—ನಿಘ್ನಗಳಾದ ಙ್ಯಂತಗಳಿಗೆ— ಪುಂಸಃ ಇಯಂ ಪೌಂಸ್ನೀ, ಉಪಗೋರಿಯಂ ಔಪಗವೀ. ನಿಯತ ಲಿಂಗಗಳಾದ ಙ್ಯನ್ತತಗಳಿಗೆ-ಕರಿಣೀ-ಕರ್ತ್ರೀ ಈ ಬಳಿ ಙೀಪ್; ದಾಕ್ಷಾಯಣೀ ಗೌರೀ, ಈ ಬಳಿ ಙೀಷ್; ಶಾರ್ಙ್ಗರವೀ ಬೈದೀ ಈ ಬಳಿ ಙೀನ್; ಅಜಾ ಏಡಕಾ ರಮಾ—ಈ ಬಳಿ ಟಾಪ್; ಸುರಾಜಾ ಬಹುಸೀಮಾ ಇಲ್ಲಿ ಡಾಪ್; ರಂಭೋರೂಃ ಇಲ್ಲಿ ಊಙ್.

*Ni*-words of the classes *nip, nish, nin, ap* words of the classes *tap, dap, chap;* and *un* words are feminine.

ಮೂಲ ॥ ತತ್ಕ್ರೀಡಾಯಾಂ ಪ್ರಹರಣಂ ಚೇನ್ಮೌಷ್ಟಾಪಾಲ್ಲವಾಣದಿಕ್ ॥

ಟೀಕೆ ॥ ತತ್—ಅದು, ಕ್ರೀಡಾಯಾಂ—ಆಟದಲ್ಲಿ, ಪ್ರಹರಣಂಚೇತ್—ಆಯುಧ ವಾದರೆ ಎಂಬ ಅರ್ಥದಲ್ಲಿ ವಿಧಿಸಲ್ಪಟ್ಟ, ಣ ಪ್ರತ್ಯಯದಿಂದ ಕೂಡಿದ ಶಬ್ದಗಳು ಸ್ತ್ರೀಲಿಂಗಗಳು ॥ ಉದಾಹರಣೆ—ಮುಷ್ಟಿಃ ಪ್ರಹರಣ ಮಸ್ಯಾಂ ಕ್ರೀಡಾಯಾಂ ಮೌಷ್ಟಾ, ಪಾಲ್ಲವಾ.

Derivatives indicating weapons at play are feminine.

ಮೂಲ ॥ ಘಞಽೋಽಞಸ್ಸಾಕ್ರಿಯಾಽಸ್ಯಾಂಚೇದ್ದಾಂಡಪಾತಾಹಿಫಾಲ್ಗುನೀ
ಶ್ಯೈನಂಪಾತಾಹಿಮೃಗಯಾತೈಲಂಪಾತಾಸ್ವಧೇತಿದಿಕ್ ॥

ಟೀಕೆ ॥ ಸಾಕ್ರಿಯಾ—ಆ ಕ್ರಿಯೆಯು, ಅಸ್ಯಾಂಚೇತ್—ಈ ತಿಥಿಯಲ್ಲಿ ಉಂಟಾ ಯಿತೆಂಬ ಅರ್ಥದಲ್ಲಿ ವಿಧಿಸಲ್ಪಟ್ಟ, ಘಞಃ—ಘಞಂತದ ಶಬ್ದಗಳು ಞಃ—ಞ ಪ್ರತ್ಯಯಾಂತಶಬ್ದಗಳು ಸ್ತ್ರೀಲಿಂಗಗಳು; ದಂಡಪಾತೋಽಸ್ಯಾ—ಮಿತಿ ದಾಂಡಪಾತಾ ಫಾಲ್ಗುನೀ; ತಿಲಪಾತೋಽಸ್ಯಾಮಿತಿ ತೈಲಂ—ಪಾತಾ ಸ್ವಧಾ, ಇತ್ಯಾದಿ.

These implying time, place are feminine.

ಮೂಲ ॥ ಸ್ತ್ರೀಸ್ಯಾತ್ಕಾಚಿನ್ಮೃಣಾಳ್ಯಾದಿರ್ವಿವಕ್ಷಾಽಪಚಯೇಯದಿ ॥ ೪೪೩ ॥

ಟೀಕೆ ॥ ಅಪಚಯೇ—ಅಲ್ಪಾರ್ಥದಲ್ಲಿ, ವಿವಕ್ಷಾ—ಹೇಳಬೇಕೆಂಬ ಇಚ್ಛೆಯು, ಯದಿ—ಆದರೆ, ಮೃಣಾಳಾದಿಃ—ಮೃಣಾಳೀ ಮೊದಲಾದ ಶಬ್ದಗಳು, ಸ್ತ್ರೀಸ್ಯಾತ್—ಸ್ತ್ರೀಲಿಂಗಗಳಾಗುವುವು. ಉದಾ—ಅಲ್ಪಂ ಮೃಣಾಲಂ, ಮೃಣಾಲೀ; ಅಲ್ಪೋಘಟಃ ಘಟೀ.

Diminutives are feminine.

ಮೂಲ ॥ ಲಂಕಾ ಶೇಫಾಲಿಕಾ ಟೀಕಾ ಧಾತಕೀ ಪಂಚಿಕಾಽಥಕೀ ।
ಸಿಧ್ರಕಾ ಶಾರಿಕಾ ಹಿಕ್ಕಾ ಪ್ರಾಚಿಕೋಲ್ಕಾ ಪಿಪೀಲಿಕಾ ॥ ೪೪೪ ॥

ತಿಂದುಕೀ ಕಣಿಕಾಭಂಗೀ ಸುರಂಗಾ ಸೂಚಿಮೂಚಯಃ ||
ಪಿಚ್ಛಾ ವಿತಂಡಾ ಕಾಕಿಣ್ಯ ಶ್ಚೂರ್ಣಿಶ್ಶಾಣೀ ದ್ರುಣೀ ದರತ್ |
ಸಾತಿಃ ಕಂಥಾ ಕಥಾsಸಂದೀ ನಾಭೀ ರಾಜಸಭಾಪಿ(ಚ) ||
ಝಲ್ಲರೀ ಚರ್ಚರೀ ಪಾರೀ ಹೋರಾ ಲಟ್ವಾ(ಚ) ಸಿಧ್ಮಲಾ |
ಲಾಕ್ಷಾಲಿಕ್ಷಾ (ಚ) ಗಂಡೂಷಾ ಗೃಧ್ರಸೀ ಚಮಸೀಮಸೀ ||

ಟೀಕೆ || ಲಂಕಾ ಮೊದಲಾದ ೪೩ ಶಬ್ದಗಳು ಸ್ತ್ರೀಲಿಂಗಗಳು

These 43 words, such as Lanka, Shephalika are always feminine.

|| ಇತಿ ಸ್ತ್ರೀಲಿಂಗ ಶೇಷಃ ||

ಮೂಲ || ಪುಂಸ್ತ್ವೇ ಸಭೇದಾನುಚರಾಸ್ಸಪರ್ಯಾಯಾ ಸ್ಸುರಾಸುರಾಃ |

ಟೀಕೆ || ಸುರಾಸುರಾಃ-ಸುರವಾಚಕ ಅಸುರವಾಚಕ ಶಬ್ದಗಳು, ಪ್ರಾಯಕ ವಾಗಿ ಸಪರ್ಯಾಯಾಃ—ಅಮರನಿರ್ಜರಾದಿ, ದೈತ್ಯದೈತೇಯಾದಿ ಪರ್ಯಾಯ ಶಬ್ದಗಳಿಂದ ಕೂಡಿಯೂ, ಸಭೇದಾನುಚರಾಃ-ಇಂದ್ರಾಗ್ನ್ಯಾದಿ ಒಳಭೇದಗಳ ಶಬ್ದಗಳಿಂದಲೂ ಮತ್ತು, ಅನುಚರರಾದ ಹಾಹಾ ಹೂಹೂ ಮುಂತಾದವರನ್ನು ತಿಳಿಸುವ ಶಬ್ದಗಳಿಂದಲೂ ಕೂಡಿಯೂ ಪುಂಸ್ತ್ವೇ—ಪುಲ್ಲಿಂಗದಲ್ಲಿ ವರ್ತಿಸುವುವು.

Names of gods, rakshasas, and their attendants are masculine.

ಮೂಲ || ಸ್ವರ್ಗಯಾಗಾದ್ರಿ ಮೇಘಾಬ್ಧಿ ದ್ರುಕಾಲಾಸಿ ಶರಾರಯಃ |
ಕರಗಂಡೌಷ್ಠದೋರ್ದಂತ ಕಂಠಕೇಶನಖಸ್ತನಾಃ || ೪೪೭ ||

ಟೀಕೆ || ಸ್ವರ್ಗ, ಯಾಗ, ಪರ್ವತ, ಮೇಘ, ಸಮುದ್ರ, ವೃಕ್ಷ, ಕಾಲ, ಖಡ್ಗ, ಬಾಣ, ಶತ್ರು, ಹಸ್ತ, ಕಪೋಲ, ಓಷ್ಠ, ಬಾಹು, ದಂತ, ಕಂಠ, ಕೇಶ, ಉಗುರು, ಸ್ತನ, ಈ ೧೨ ವಸ್ತುಗಳ ಹೆಸರುಗಳು ಪುಲ್ಲಿಂಗಗಳು.

Names of heaven (*svarga*), sacrifices, mountains, clouds, the sea, trees, time, swords, arrows, enemies, the plam of the hand, cheeks, lips, arms, teeth, the neck, hair, nails, breast are masculine.

ಮೂಲ || ಅಹ್ನಾಹಾಂತಾಃ

ಟೀಕೆ ॥ ಅಹ್ನಾಂತಗಳಾದ ಪೂರ್ವಾಹ್ನಾಪರಾಹ್ನಾದಿ ಶಬ್ದಗಳೂ, ಅಹಾಂತಗಳಾದ ದ್ವ್ಯಹತ್ರ್ಯಹಾದಿ ಶಬ್ದಗಳೂ ಪುಲ್ಲಿಂಗಗಳು.

Words ending in *ahna* and *aha* are masculine.

ಮೂಲ ॥ ಕ್ಷ್ವೇಳಭೇದಾ

ಟೀಕೆ ॥ ವಿಷ ವಿಶೇಷ ವಾಚಕಗಳಾದ ಸೌರಾಷ್ಟ್ರಿಕಾದಿ ಶಬ್ದಗಳು ಪುಲ್ಲಿಂಗಗಳು.

The varieties of poison are masculine.

ಮೂಲ ॥ ರಾತ್ರಾಂತಾಃ ಪ್ರಾಗಸಂಖ್ಯಕಾಃ ।

ಟೀಕೆ ॥ ಪ್ರಾಗಸಂಖ್ಯಾಕಾಃ–ಸಂಖ್ಯಾಪೂರ್ವಪದಗಳಾಗದೆ, ರಾತ್ರಾಂತಾಃ—ರಾತ್ರ ಶಬ್ದವು ಅಂತದಲ್ಲಿ ಉಳ್ಳ, ಪೂರ್ವರಾತ್ರ ಅರ್ಧರಾತ್ರಾದಿ ಶಬ್ದಗಳು ಪುಲ್ಲಿಂಗಗಳು.

Compounds ending in *ratra* are masculine, except when formed with a numeral.

ಮೂಲ ॥ ಶ್ರೀವೇಷ್ಟಾದ್ಯಾಶ್ಚ ನಿರ್ಯಾಸಾ

ಟೀಕೆ ॥ ಶ್ರೀವೇಷ್ಟಃ, ಶ್ರೀವಾಸಃ, ಸರಳದ್ರವಃ, ಎಂಬಿವೇ ಮೊದಲಾದ ನಿರ್ಯಾಸಾಃ—ಮರದ ಹಾಲಿನ ಹೆಸರುಗಳು ಪುಲ್ಲಿಂಗಗಳು.

Names of gums exuding from trees are masculine.

ಮೂಲ ॥ ಅಸನ್ನಂತಾ ಅಬಾಧಿತಾಃ ॥ ೪೪೮ ॥

ಟೀಕೆ ॥ ಅಬಾಧಿತಾಃ–ವಿಶೇಷ ವಿಧಿಗಳಿಂದ ಬಾಧಿಸಲ್ಪಡದ ಅಸನ್ನಂತಾಃ–ಅಂಗಿರಸ್, ಪುರೋಧಸ್ ಮೊದಲಾದ ಅಸಂತಗಳೂ, ಸುಪರ್ವಾ, ಪ್ಲೀಹಾ ಮೊದಲಾದ ಅನ್ನಂತಗಳೂ ಪುಲ್ಲಿಂಗಗಳು.

Words ending in *as* and *an* are masculine, save those which have been noted as exceptions.

ಮೂಲ ॥ ಕಶೇರುಜತುವಸ್ತೂನಿ ಹಿತ್ವಾ ತುರುವಿರಾಮಕಾಃ ॥

ಟೀಕೆ ॥ ಕಶೇರು, ಜತು, ವಸ್ತು ಎಂಬ ಶಬ್ದಗಳನ್ನು, ಹಿತ್ವಾ—ಬಿಟ್ಟು, ತುರುವಿರಾಮಕಾಃ–ತು ಎಂಬ ವರ್ಣವು ಅಂತವಾಗಿ ಉಳ್ಳ ಹೇತು, ಸೇತು, ಮೊದಲಾದ ಶಬ್ದಗಳೂ, ರು ಎಂಬುದೇ ಅಂತವಾಗಿ ಉಳ್ಳ ಚರು ಗುರು, ಮೊದಲಾದ ಶಬ್ದಗಳೂ ಪುಲ್ಲಿಂಗಗಳು.

Words ending in *tu* and *ru* are masculine, except *kasheru jatu* and *vastu*.

ಮೂಲ ॥ ಕಷಣಭಮರೋಪಾಂತಾ ಯದ್ಯದಂತಾ ಅಮೀ ಅಥ ।
ಪಥನಯಸಟೋಪಾಂತಾ

ಟೀಕೆ ॥ ಕ, ಷ, ಣ, ಭ, ಮ, ರ, ಪ, ಥ, ನ, ಯ, ಸ, ಟ, ಈ ೧೨ ವರ್ಣಗಳು ಉಪಾಂತಗಳಾಗಿಯೂ, ಅಕಾರಾಂತವಾಗಿಯೂ ಇರುವ ಶಬ್ದಗಳು ಪುಲ್ಲಿಂಗಗಳು. ಉದಾ—ಅರ್ಕಃ, ಸ್ಫಟಿಕಃ, ವೃಷಃ ನಿಕಷಃ, ಗಣಃ, ಗುಣಃ, ಕುಂಭಃ, ಕಲಭಃ, ವ್ಯಾಮಃ, ಗ್ರಾಮಃ, ಹಾರಃ, ಸಾರಃ, ಧೂಪಃ, ಸೂಪಃ, ಅರ್ಥಃ, ಶಪಥಃ, ಸ್ತೇನಃ, ಜನಃ, ಕುಲಾಯಃ, ತಂತುವಾಯಃ, ರಸಃ, ದಾಸಃ, ಘಟಃ, ಪಟಃ.

Words whose penults are *ka, sha, na, bha, ma, ra, pa, tha, na, ya, sa, ta* are masculine.

ಮೂಲ ॥ ಗೋತ್ರಾಖ್ಯಾಶ್ಚರಣಾಹ್ವಯಾಃ ॥

ಟೀಕೆ ॥ ಗಾರ್ಗ್ಯ, ವಾಸಿಷ್ಠ ಎಂಬಿವು ಮೊದಲಾದ ಗೋತ್ರಾಪತ್ಯಪ್ರತ್ಯಯಾಂತ ಶಬ್ದಗಳೂ ಕಠ, ಬಹ್ವೃಚ ಎಂಬಿವು ಮೊದಲಾದ ವೇದಶಾಖಾಧ್ಯೇತೃ ವಾಚಕಗಳೂ ಪುಲ್ಲಿಂಗಗಳು.

Patronymics and names of vedic sects are masculine.

ಮೂಲ ॥ ನಾಮ್ನ್ಯಕರ್ತರಿಭಾವೇಚ ಘಞಜಬ್ನಙ್ಣಘಾಥುಚಃ ॥ ೪೫೦ ॥

ಟೀಕೆ ॥ ನಾಮ್ನಿ–ಸಂಜ್ಞೆಯಲ್ಲಿಯೂ, ಅಕರ್ತರಿ–ಕರ್ತೃವ್ಯತಿರಿಕ್ತ ಕಾರಕ ದಲ್ಲಿಯೂ, ಭಾವೇಚ–ಭಾವಾರ್ಥದಲ್ಲಿಯೂ, ಯಥಾಸಂಭವವಾಗಿ ವಿಧಿಸಲ್ಪಟ್ಟ ಘಞ್, ಅಚ್, ಅಪ್, ನಙ್, ಣ, ಘ, ಅಥುಚ್ ಎಂಬ ಈ ೭ ಪ್ರತ್ಯಯಗಳು ಅಂತವಾಗಿ ಉಳ್ಳಶಬ್ದಗಳು ಪುಲ್ಲಿಂಗಗಳು. ಉದಾಹರಣೆ.—ಘಞ್ ಪ್ರತ್ಯಯಕ್ಕೆ: ರೋಗಃ, ವೇಶಃ, ರಾಗಃ, ಭೋಗಃ; ಅಚ್ಪ್ರತ್ಯಯಕ್ಕೆ: ನಯಃ, ಜಯಃ, ಚಯಃ; ಅಪ್ ಪ್ರತ್ಯಯಕ್ಕೆ: ಕರಃ, ಗರಃ, ಲವಃ; ನಙ್ಪ್ರತ್ಯಯಕ್ಕೆ: ಯಜ್ಞಃ, ಯತ್ನಃ; ಣ ಪ್ರತ್ಯಯಕ್ಕೆ: ನ್ಯಾದಃ; ಘ ಪ್ರತ್ಯಯಕ್ಕೆ: ಉರಶ್ಛದಃ, ದಂತಚ್ಛದಃ; ಅಥುಚ್ ಪ್ರತ್ಯಯಕ್ಕೆ: ಕ್ಷುವಥುಃ, ವೇಪಥುಃ.

Words of the classes *ghan, ach, ap, nan, na, gha, athuch* are masculine.

ಮೂಲ ॥ ಲ್ಯುಃ ಕರ್ತರೀಮನಿಜ್ಭಾವೇ.

ಟೀಕೆ ॥ ಕರ್ತರಿ–ಕರ್ತ್ರರ್ಥದಲ್ಲಿ ವಿಧಿಸಲ್ಪಟ್ಟ, ಲ್ಯುಃ-ಲ್ಯುಪ್ರತ್ಯಯಾಂತಗಳಾದ ನಂದನಃ, ರಮಣಃ, ದಹನಃ ಎಂಬಿವು ಮೊದಲಾದ ಶಬ್ದಗಳೂ

ಮೇರುಸ್ಸುಮೇರುರ್ಹೇಮಾದ್ರೀ ರತ್ನಸಾನುಸ್ಸುರಾಲಯಃ ।
ಪಂಚೈತೇ ದೇವತರವೋ ಮಂದಾರಃ ಪಾರಿಜಾತಕಃ ॥ ೫೮
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಮ್ ।
ಸನತ್ಕುಮಾರೋ ವೈಧಾತ್ರಃ ಸ್ವರ್ವೈದ್ಯಾವಶ್ವಿನೀಸುತೌ ॥ ೫೯
ನಾಸತ್ಯಾವಶ್ವಿನೌ ದಸ್ರಾವಾಶ್ವಿನೇಯೌ ಚ ತಾವುಭೌ ।
ಸ್ತ್ರಿಯಾಂ ಬಹುಷ್ವಪ್ಸರಸಃ ಸ್ವರ್ವೇಶ್ಯಾ ಉರ್ವಶೀಮುಖಾಃ ॥ ೬೦
ಉರ್ವಶೀ ಮೇನಕಾ ರಂಭಾ ಘೃತಾಚೀ ಚ ತಿಲೋತ್ತಮಾ ।
ಸುಕೇಶೀ ಮಂಜುಘೋಷಾದ್ಯಾಃ ಕಥ್ಯಂತೇಽಪ್ಸರಸೋ ಬುಧೈಃ ॥ ೬೧

---

(ಪು), ಅಶನಿ (ಪು. ಸ್ತ್ರೀ)=ವಜ್ರಾಯುಧ. ವ್ಯೋಮಯಾನ (ನ), ವಿಮಾನ (ಪು. ನ)=ವಿಮಾನ. ನಾರದ ಮೊದಲಾದವರು—ನಾರದ, ತುಂಬುರು, ಭರತ, ಪರ್ವತ, ದೇವಲ ಮೊದಲಾದವರು=ದೇವರ್ಷಿಗಳು. ೫೭. ಸುಧರ್ಮನ್, ಸುಧರ್ಮಾ (ಸ್ತ್ರೀ)=ದೇವಸಭೆ. ಪಿಯೂಷ, ಅಮೃತ (ನ), ಸುಧಾ (ಸ್ತ್ರೀ)=ಅಮೃತ. ಮಂದಾಕಿನೀ, ವಿಯದ್ಗಂಗಾ, ಸ್ವರ್ಣದೀ, ಸುರದೀರ್ಘಿಕಾ (ಸ್ತ್ರೀ)=ಗಂಗಾನದಿ. ೫೮-೫೯. ಮೇರು, ಸುಮೇರು, ಹೇಮಾದ್ರಿ, ರತ್ನಸಾನು, ಸುರಾಲಯ (ಪು)=ಮೇರುಪರ್ವತ. ಮಂದಾರ, ಪಾರಿಜಾತಕ, ಸಂತಾನ, ಕಲ್ಪವೃಕ್ಷ (ಪು), ಹರಿಚಂದನ (ಪು. ನ)=ಇವು ಐದು ಬೇರೆ ಬೇರೆ ದೇವವೃಕ್ಷಗಳು. ೫೯-೬೧. ಸನತ್ಕುಮಾರ, (ಪು)=ಬ್ರಹ್ಮಪುತ್ರನಾದ ಸನತ್ಕುಮಾರ. ಸ್ವರ್ವೈದ್ಯ, ಅಶ್ವಿನೀಸುತ, ವೈಧಾತ್ರ, ನಾಸತ್ಯ, ಅಶ್ವಿನ್, ದಸ್ರ, ಆಶ್ವಿನೇಯ[1] (ಪು)=ದೇವವೈದ್ಯರಾದ ಅಶ್ವಿನೀದೇವತೆಗಳು. ಅಪ್ಸರಸ್, (ಸ್ತ್ರೀ. ನಿತ್ಯ ಬಹುವಚನಾಂತ. ಏಕವಚನದಲ್ಲಿ ಪ್ರಯೋಗವೂ ಉಂಟು) ಸ್ವರ್ಗದಲ್ಲಿರುವ ಉರ್ವಶೀ ಮೊದಲಾದ ವೇಶ್ಯೆಯರು. ಉರ್ವಶೀ, ಮೇನಕಾ, ರಂಭಾ, ಘೃತಾಚೀ, ತಿಲೋತ್ತಮಾ, ಸುಕೇಶೀ, ಮಂಜುಘೋಷಾ (ಸ್ತ್ರೀ)=ಇವರು ಅಪ್ಸರೆಯರು.

---

[1] ಈ ಶಬ್ದಗಳು ಸಾಮಾನ್ಯವಾಗಿ ದ್ವಿವಚನದಲ್ಲಿರುತ್ತವೆ. ನಾಸತ್ಯ, ದಸ್ರ ಎಂಬ ಇವರಿಬ್ಬರು ಅಣ್ಣತಮ್ಮಂದಿರು. ಇಬ್ಬರನ್ನೂ ಬೋಧಿಸುವುದಕ್ಕಾಗಿ ನಾಸತ್ಯೌ, ದಸ್ರೌ ಎಂದು ದ್ವಿವಚನಾಂತವಾಗಿ ಪ್ರಯೋಗಿಸುವುದು ಗೌಣ.



ಹಾಹಾ ಹೂಹೂಶ್ಚೈವಮಾದ್ಯಾ ಗಂಧರ್ವಾಸ್ತ್ರಿದಿವೌಕಸಾಮ್ ।
ಅಗ್ನಿರ್ವೈಶ್ವಾನರೋ ವಹ್ನಿರ್ವೀತಿಹೋತ್ರೋ ಧನಂಜಯಃ ॥ ೬೨
ಕೃಪೀಟಯೋನಿರ್ಜ್ವಲನೋ ಜಾತವೇದಾಸ್ತನೂನಪಾತ್ ।
ಬರ್ಹಿಶ್ಶುಷ್ಮಾ ಕೃಷ್ಣವರ್ತ್ಮಾ ಶೋಚಿಷ್ಕೇಶ ಉಷರ್ಬುಧಃ ॥ ೬೩
ಆಶ್ರಯಾಶೋ ಬೃಹದ್ಭಾನುಃ ಕೃಶಾನುಃ ಪಾವಕೋಽನಲಃ ।
ರೋಹಿತಾಶ್ವೋ ವಾಯುಸಖಶ್ಶಿಖಾವಾನಾಶುಶುಕ್ಷಣಿಃ ॥ ೬೪
ಹಿರಣ್ಯರೇತಾ ಹುತಭುಗ್ದಹನೋ ಹವ್ಯವಾಹನಃ ।
ಸಪ್ತಾರ್ಚಿರ್ದಮುನಾಶ್ಶುಕ್ರಶ್ಚಿತ್ರಭಾನುರ್ವಿಭಾವಸುಃ ॥ ೬೫
ಶುಚಿರಪ್ಪಿತ್ತಮೌರ್ವಸ್ತು ವಾಡವೋ ವಡವಾನಲಃ ।
ವಹ್ನೇರ್ದ್ವಯೋರ್ಜ್ವಾಲಕೀಲಾವರ್ಚಿರ್ಹೇತಿಶ್ಶಿಖಾ ಸ್ತ್ರಿಯಾಮ್ ॥ ೬೬
ತ್ರಿಷು ಸ್ಫುಲಿಂಗೋಽಗ್ನಿಕಣಸ್ಸಂತಾಪಸ್ಸಂಜ್ವರಸ್ಸಮೌ ।
ಉಲ್ಕಾ ಸ್ಯಾನ್ನಿರ್ಗತಜ್ವಾಲಾ ಭೂತಿರ್ಭಸಿತಭಸ್ಮನೀ ॥ ೬೭
ಕ್ಷಾರೋ ರಕ್ಷಾ ಚ ದಾವಸ್ತು ದವೋ ವನಹುತಾಶನಃ ।
ಧರ್ಮರಾಜಃ ಪಿತೃಪತಿಃ ಸಮವರ್ತೀ ಪರೇತರಾಟ್ ॥ ೬೮

---

೬೨-೬೬. ಹಾಹಾ, ಹೂಹೂ (ಪು)=ದೇವಲೋಕದ ಗಾಯಕರು. ಅಗ್ನಿ, ವೈಶ್ವಾನರ, ವಹ್ನಿ, ವೀತಿಹೋತ್ರ, ಧನಂಜಯ, ಕೃಪೀಟಯೋನಿ, ಜ್ವಲನ, ಜಾತವೇದಸ್, ತನೂನಪಾತ್, ಬರ್ಹಿಸ್, ಶುಷ್ಮನ್, ಕೃಷ್ಣವರ್ತ್ಮನ್, ಶೋಚಿಷ್ಕೇಶ, ಉಷರ್ಬುಧ, ಆಶ್ರಯಾಶ, ಬೃಹದ್ಭಾನು, ಕೃಶಾನು, ಪಾವಕ, ಅನಲ, ರೋಹಿತಾಶ್ವ, ವಾಯುಸಖ, ಶಿಖಾವತ್, ಆಶುಶುಕ್ಷಣಿ, ಹಿರಣ್ಯರೇತಸ್, ಹುತಭುಜ್, ದಹನ, ಹವ್ಯವಾಹನ, ಸಪ್ತಾರ್ಚಿಸ್, ದಮುನಸ್, ಶುಕ್ರ, ಚಿತ್ರಭಾನು, ವಿಭಾವಸು, ಶುಚಿ (ಪು), ಅಪ್ಪಿತ್ತ (ನ)=ಅಗ್ನಿ. ೬೬. ಔರ್ವ, ವಾಡವ, ವಡವಾನಲ (ಪು)=ಬಡಬಾಗ್ನಿ. ಜ್ವಾಲ, ಕೀಲ (ಪು. ಸ್ತ್ರೀ. ಸ್ತ್ರೀಲಿಂಗದಲ್ಲಿ ಜ್ವಾಲಾ, ಕೀಲಾ), ಅರ್ಚಿಸ್[1], ಹೇತಿ, ಶಿಖಾ (ಸ್ತ್ರೀ)=ಬೆಂಕಿಯ ಜ್ವಾಲೆ. ೬೭-೬೮. ಸ್ಫುಲಿಂಗ (ಪು. ನ. ಸ್ತ್ರೀ. ಸ್ತ್ರೀಲಿಂಗದಲ್ಲಿ ಸ್ಫುಲಿಂಗಾ), ಅಗ್ನಿಕಣ (ಪು)=ಬೆಂಕಿಯ ಕಿಡಿ, ಸಂತಾಪ, ಸಂಜ್ವರ (ಪು)=ಬಿಸಿ, ಔಷ್ಣ್ಯ. ಉಲ್ಕಾ (ಸ್ತ್ರೀ)=ಸಿಡಿದುಬಂದ ಜ್ವಾಲೆ. ಭೂತಿ (ಸ್ತ್ರೀ), ಭಸಿತ, ಭಸ್ಮನ್ (ನ), ಕ್ಷಾರ (ಪು), ರಕ್ಷಾ (ಸ್ತ್ರೀ)=ಬೂದಿ. ದಾವ, ದವ (ಪು)=ಕಾಳ್ಗಿಚ್ಚು. ಧರ್ಮರಾಜ,

---

[1] ಅರ್ಚಿಸ್ ಶಬ್ದಕ್ಕೆ ನಪುಂಸಕಲಿಂಗವೂ ಉಂಟು.

ಕೃತಾಂತೋ ಯಮುನಾಭ್ರಾತಾ ಶಮನೋ ಯಮರಾಡ್ಯಮಃ ।
ಕಾಲೋ ದಂಡಧರಃ ಶ್ರಾದ್ಧದೇವೋ ವೈವಸ್ವತೋಽಂತಕಃ ॥ ೧೯
ರಾಕ್ಷಸಃ ಕೌಣಪಃ ಕ್ರವ್ಯಾತ್ಕ್ರವ್ಯಾದೋಽಸ್ರಪ ಆಶರಃ ।
ರಾತ್ರಿಂಚರೋ ರಾತ್ರಿಚರಃ ಕರ್ವುರೋ ನಿಕಷಾತ್ಮಜಃ ॥ ೨೦
ಯಾತುಧಾನಃ ಪುಣ್ಯಜನೋ ನೈರ್ಋತೋ ಯಾತುರಕ್ಷಸೀ ।
ಪ್ರಚೇತಾ ವರುಣಃ ಪಾಶೀ ಯಾದಸಾಂಪತಿರಪ್ಪತಿಃ ॥ ೨೧
ಶ್ವಸನಃ ಸ್ಪರ್ಶನೋ ವಾಯುರ್ಮಾತರಿಶ್ವಾ ಸದಾಗತಿಃ ।
ಪೃಷದಶ್ವೋ ಗಂಧವಹೋ ಗಂಧವಾಹಾನಿಲಾಶುಗಾಃ ॥ ೨೨
ಸಮೀರಮಾರುತಮರುಜ್ಜಗತ್ಪ್ರಾಣಸಮೀರಣಾಃ ।
ನಭಸ್ವದ್ವಾತಪವನಪವಮಾನಪ್ರಭಂಜನಾಃ ॥ ೨೩
ಪ್ರಕಂಪನಶ್ಚಾತಿಬಲೋ ಜಂಝಾವಾತಸ್ಸವೃಷ್ಟಿಕಃ ।
ಪ್ರಾಣೋಽಪಾನಸ್ಸಮಾನಶ್ಚೋದಾನವ್ಯಾನೌ ಚ ವಾಯವಃ ॥ ೨೪
ಹೃದಿ ಪ್ರಾಣೋ ಗುದೇಽಪಾನಃ ಸಮಾನೋ ನಾಭಿಸಂಸ್ಥಿತಃ ।
ಉದಾನಃ ಕಂಠದೇಶಸ್ಥೋ ವ್ಯಾನಸ್ಸರ್ವಶರೀರಗಃ ॥ ೨೫

ಪಿತೃಪತಿ, ಸಮವರ್ತಿನ್, ಪರೇತರಾಜ್, ಕೃತಾಂತ, ಯಮುನಾಭ್ರಾತೃ, ಶಮನ, ಯಮರಾಜ್, ಯಮ, ಕಾಲ, ದಂಡಧರ, ಶ್ರಾದ್ಧದೇವ, ವೈವಸ್ವತ, ಅಂತಕ (ಪು)=ಯಮ. ೨೦-೨೧. ರಾಕ್ಷಸ, ಕೌಣಪ, ಕ್ರವ್ಯಾದ್, ಕ್ರವ್ಯಾದ, ಅಸ್ರಪ, ಆಶರ, ರಾತ್ರಿಂಚರ, ರಾತ್ರಿಚರ, ಕರ್ವುರ, ನಿಕಷಾತ್ಮಜ, ಯಾತುಧಾನ, ಪುಣ್ಯಜನ, ನೈರ್ಋತ (ಪು), ಯಾತು, ರಕ್ಷಸ್ (ನ)=ರಾಕ್ಷಸ, ನಿರ್ಋತಿ, ಪ್ರಚೇತಸ್, ವರುಣ, ಪಾಶಿನ್, ಯಾದಸಾಂಪತಿ, ಅಪ್ಪತಿ (ಪು)=ವರುಣ.

೨೨-೨೫. ಶ್ವಸನ, ಸ್ಪರ್ಶನ, ವಾಯು, ಮಾತರಿಶ್ವನ್, ಸದಾಗತಿ, ಪೃಷದಶ್ವ, ಗಂಧವಹ, ಗಂಧವಾಹ, ಅನಿಲ, ಆಶುಗ, ಸಮೀರ, ಮಾರುತ, ಮರುತ್[1] ಜಗತ್ಪ್ರಾಣ, ಸಮೀರಣ, ನಭಸ್ವತ್, ವಾತ, ಪವನ, ಪವಮಾನ, ಪ್ರಭಂಜನ, ಪ್ರಕಂಪನ, ಅತಿಬಲ (ಪು)=ವಾಯು. ಜಂಝಾವಾತ (ಪು)=ಮಳೆಯಿಂದ ಕೂಡಿದ ಗಾಳಿ. ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ (ಪು)=ಇವು ದೇಹದಲ್ಲಿರುವ ಪಂಚವಾಯುಗಳು. ಹೃದಯದಲ್ಲಿರುವ ವಾಯು ಪ್ರಾಣ, ಗುದಸ್ಥಾನದಲ್ಲಿರುವುದು ಅಪಾನ, ನಾಭಿಯಲ್ಲಿ ಸಮಾನ, ಕಂಠದೇಶದಲ್ಲಿ ಉದಾನ,

[1] ಮರುತ ಎಂಬ ಅಕಾರಾಂತವೂ ಉಂಟು.



ನಾಗಶ್ಚ ಕೂರ್ಮಃ ಕೃಕರೋ ದೇವದತ್ತೋ ಧನಂಜಯಃ ।
ವಾಗ್ದ್ವಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇ ಸ್ಮೃತಃ ॥ ೨೬
ಕೃಕರಾಚ್ಚ ಕ್ಷುತಂ ಜ್ಞೇಯಂ ದೇವದತ್ತಾದ್ವಿಜೃಂಭಣಮ್ ।
ನ ಜಹಾತಿ ಮೃತಂ ವಾಪಿ ಸರ್ವವ್ಯಾಪೀ ಧನಂಜಯಃ ॥ ೨೭
ಶರೀರಸ್ಥಾ ಇಮೇ ರಂಹಸ್ತರಸೀ ತು ರಯಃ ಸ್ಯದಃ ।
ಜವೋಽಥ ಶೀಘ್ರಂ ತ್ವರಿತಂ ಲಘು ಕ್ಷಿಪ್ರಮರಂ ದ್ರುತಮ್ ॥ ೨೮
ಸತ್ವರಂ ಚಪಲಂ ತೂರ್ಣಮವಿಲಂಬಿತಮಾಶು ಚ ।
ಸತತಾನಾರತಾಶ್ರಾಂತಸಂತತಾವಿರತಾನಿಶಮ್ ॥ ೨೯
ನಿತ್ಯಾನವರತಾಜಸ್ರಮಪ್ಯಥಾತಿಶಯೋ ಭರಃ ।
ಅತಿವೇಲಭೃಶಾತ್ಯರ್ಥಾತಿಮಾತ್ರೋದ್ಗಾಢನಿರ್ಭರಮ್ ॥ ೩೦
ತೀವ್ರೈಕಾಂತನಿತಾಂತಾನಿ ಗಾಢಬಾಢದೃಢಾನಿ ಚ ।
ಕ್ಲೀಬೇ ಶೀಘ್ರಾದ್ಯಸತ್ತ್ವೇ ಸ್ಯಾತ್ರಿಷ್ವೇಷಾಂ ಭೇದ್ಯಗಾಮಿ ಯತ್ ॥ ೩೧
ಕುಬೇರಸ್ತ್ರ್ಯಂಬಕಸಖೋ ಯಕ್ಷರಾಡ್ಗುಹ್ಯಕೇಶ್ವರಃ ।
ಮನುಷ್ಯಧರ್ಮಾ ಧನದೋ ರಾಜರಾಜೋ ಧನಾಧಿಪಃ ॥ ೩೨

ಸರ್ವಶರೀರವ್ಯಾಪಿಯಾದದ್ದು ವ್ಯಾನ. ೨೬-೨೭. ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ=ಇವು ಪಂಚ ಉಪವಾಯುಗಳು, ಬಾಯಲ್ಲಿರುವ ವಾಯು ನಾಗ, ರೆಪ್ಪೆಯನ್ನು ಹೊಡೆಯಿಸುವುದು ಕೂರ್ಮ, ಸೀನುವಂತೆ ಮಾಡುವ ವಾಯು ಕೃಕರ, ಆಕಳಿಸುವಂತೆ ಮಾಡುವುದು ದೇವದತ್ತ, ಮನುಷ್ಯನು ಮೃತನಾದರೂ ದೇಹವನ್ನು ವ್ಯಾಪಿಸಿ ಇರತಕ್ಕದ್ದು ಧನಂಜಯ.

೨೮-೩೨. ರಂಹಸ್, ತರಸ್ (ನ), ರಯ, ಸ್ಯದ, ಜವ (ಪು)=ವೇಗ (Speed, Velocity). ಶೀಘ್ರ, ತ್ವರಿತ, ಲಘು, ಕ್ಷಿಪ್ರ, ಅರ, ದ್ರುತ, ಸತ್ವರ, ಚಪಲ, ತೂರ್ಣ, ಅವಿಲಂಬಿತ, ಆಶು (ನ)=ವೇಗವುಳ್ಳದ್ದು (Quick, Speedy); ಬೇಗನೆ (Quickly, Speedily) (ಕ್ರಿ. ವಿ.) ಸತತ, ಅನಾರತ, ಅಶ್ರಾಂತ, ಸಂತತ, ಅವಿರತ, ಅನಿಶ, ನಿತ್ಯ, ಅನವರತ, ಅಜಸ್ರ (ನ)=ನಿತ್ಯ, ನಿರಂತರ, ಎಡಬಿಡದ ; ನಿತ್ಯವಾಗಿ ಎಡಬಿಡದೆ. ಅತಿಶಯ, ಭರ (ಪು), ಅತಿವೇಲ, ಭೃಶ, ಅತ್ಯರ್ಥ, ಅತಿಮಾತ್ರ, ಉದ್ಗಾಢ, ನಿರ್ಭರ, ತೀವ್ರ, ಏಕಾಂತ, ನಿತಾಂತ, ಗಾಢ, ಬಾಢ, ದೃಢ (ನ)=ಅತಿಶಯ, ಹೆಚ್ಚು. ಮೇಲ್ಕಂಡವುಗಳಲ್ಲಿ ಶೀಘ್ರ ಶಬ್ದದಿಂದ ದೃಢ ಶಬ್ದದವರೆಗಿರುವವುಗಳು ದ್ರವ್ಯವಾಚಿಗಳಲ್ಲದಿದ್ದರೆ-ತಿಙಂತ ವಿಶೇಷಣಗಳಾಗಿದ್ದರೆ, ನಪುಂಸಕಗಳು:—ಶೀಘ್ರಂ ಗಚ್ಛತಿ, ಸತತಂ ಪತತಿ. ದ್ರವ್ಯವಾಚಿಗಳಾಗಿದ್ದರೆ-

ಕಿನ್ನರೇಶೋ ವೈಶ್ರವಣಃ ಪೌಲಸ್ತ್ಯೋ ನರವಾಹನಃ ।
ಯಕ್ಷೈಕಪಿಂಗೈಲವಿಲಶ್ರೀದಪುಣ್ಯಜನೇಶ್ವರಾಃ ॥ ೭೩
ಅಸ್ಯೋದ್ಯಾನಂ ಚೈತ್ರರಥಂ ಪುತ್ರಸ್ತು ನಲಕೂಬರಃ ।
ಕೈಲಾಸಸ್ಥಾನಮಲಕಾ ಪೂರ್ವಿಮಾನಂ ತು ಪುಷ್ಪಕಮ್ ॥ ೭೪
ಸ್ಯಾತ್ಕಿನ್ನರಃ ಕಿಂಪುರುಷಸ್ತುರಂಗವದನೋ ಮಯುಃ ।
ನಿಧಿರ್ನಾ ಶೇವಧಿರ್ಭೇದಾಃ ಪದ್ಮಶಂಖಾದಯೋ ನಿಧೇಃ ॥ ೭೫
ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ ।
ಮುಕುಂದಕುಂದನೀಲಾಶ್ಚ ಖರ್ವಶ್ಚ ನಿಧಯೋ ನವ ॥ ೭೬

ಇತಿ ಸ್ವರ್ಗವರ್ಗಃ

## ೨. ವ್ಯೋಮವರ್ಗಃ

ದ್ಯೋದಿವೌ ದ್ವೇ ಸ್ತ್ರಿಯಾಮಭ್ರಂ ವ್ಯೋಮ ಪುಷ್ಕರಮಂಬರಮ್ ।
ನಭೋಽಂತರಿಕ್ಷಂ ಗಗನಮನಂತಂ ಸುರವರ್ತ್ಮ ಖಮ್ ॥ ೭೭

ನಾಮ ವಿಶೇಷಣಗಳಾಗಿದ್ದರೆ, ವಿಶೇಷ್ಯ ನಿಘ್ನಗಳು :—ಶೀಘ್ರಾ ಜರಾ, ಸತತಃ ಸಂಸಾರಃ. (ಅತಿಶಯ, ಭರ ಶಬ್ದಗಳು ವಿಶೇಷ್ಯವಾಗಿಯೂ ಪ್ರಯೋಗಿಸಲ್ಪಡುತ್ತವೆ :-ವರ್ಣನಾತಿಶಯರಃ, ಸಂತೋಷಭರಃ). ೭೨-೭೩. ಕುಬೇರ, ತ್ರ್ಯಂಬಕಸಖಿ, ಯಕ್ಷರಾಜ್, ಗುಹ್ಯಕೇಶ್ವರ, ಮನುಷ್ಯಧರ್ಮನ್, ಧನದ, ರಾಜರಾಜ, ಧನಾಧಿಪ, ಕಿನ್ನರೇಶ, ವೈಶ್ರವಣ, ಪೌಲಸ್ತ್ಯ, ನರವಾಹನ, ಯಕ್ಷ, ಏಕಪಿಂಗ, ಐಲವಿಲ, ಶ್ರೀದ, ಪುಣ್ಯಜನೇಶ್ವರ (ಪು)=ಕುಬೇರ. ೭೪. ಚೈತ್ರರಥ (ನ)=ಕುಬೇರನ ಉದ್ಯಾನ. ನಲಕೂಬರ (ಪು)=ಅವನ ಮಗ. ಕೈಲಾಸ (ಪು)=ಅವನ ವಾಸಪ್ರದೇಶ. ಅಲಕಾ (ಸ್ತ್ರೀ)=ಅವನ ಪಟ್ಟಣ. ಪುಷ್ಪಕ (ನ)=ಕುಬೇರನ ವಿಮಾನ. ೭೫-೭೬. ಕಿನ್ನರ, ಕಿಂಪುರುಷ, ತುರಂಗವದನ, ಮಯು (ಪು)=ಕಿನ್ನರ. ನಿಧಿ, ಶೇವಧಿ (ಪು)=ನಿಧಿ. ಪದ್ಮ, ಶಂಖ ಮೊದಲಾದವು ನಿಧಿವಿಶೇಷಗಳು. ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವ (ಪು)=ಒಂಬತ್ತು ನಿಧಿವಿಶೇಷಗಳು.

### ವ್ಯೋಮವರ್ಗ

೭೭-೭೮. ದ್ಯೋ, ದಿವ್ (ಸ್ತ್ರೀ), ಅಭ್ರ, ವ್ಯೋಮನ್, ಪುಷ್ಕರ, ಅಂಬರ, ನಭಸ್, ಅಂತರಿಕ್ಷ, ಗಗನ, ಅನಂತ, ಸುರವರ್ತ್ಮನ್, ಖ, ವಿಯತ್, ವಿಷ್ಣುಪದ (ನ), ಆಕಾಶ,



ವಿಯದ್ವಿಷ್ಣುಪದಂ ವಾ ತು ಪುಂಸ್ಯಾಕಾಶವಿಹಾಯಸೀ ।
ವಿಹಾಯಸೋಽಪಿ ನಾಕೋಽಪಿ ದ್ಯುರಪಿ ಸ್ಯಾತ್ತದವ್ಯಯಮ್ ॥ ೭೮
ತಾರಾಪಥಶ್ಶಬ್ದಗುಣೋ ಮೇಘದ್ವಾರಂ ಮಹಾಬಿಲಮ್ ।

ಇತಿ ವ್ಯೋಮವರ್ಗಃ

## ೩. ದಿಗ್ವರ್ಗಃ

ದಿಶಸ್ತು ಕಕುಭಃ ಕಾಷ್ಠಾ ಆಶಾಶ್ಚ ಹರಿತಶ್ಚ ತಾಃ ॥ ೭೯
ಪ್ರಾಚ್ಯವಾಚೀಪ್ರತೀಚ್ಯಸ್ತಾಃ ಪೂರ್ವದಕ್ಷಿಣಪಶ್ಚಿಮಾಃ ।
ಉತ್ತರಾ ದಿಗುದೀಚೀ ಸ್ಯಾದ್ದಿಶ್ಯಂ ತು ತ್ರಿಷು ದಿಗ್ಭವೇ ॥ ೮೦
ಅವಾಗ್ಭವಮವಾಚೀನಮುದೀಚೀನಮುದಗ್ಭವಮ್ ।
ಪ್ರತ್ಯಗ್ಭವಂ ಪ್ರತೀಚೀನಂ ಪ್ರಾಚೀನಂ ಪ್ರಾಗ್ಭವಂ ತ್ರಿಷು ॥ ೮೧

ವಿಹಾಯಸ್ (ಪು. ನ.) ವಿಹಾಯಸ, ನಾಕ (ಪು), ದ್ಯುಸ್ (ಅವ್ಯಯ), ತಾರಾಪಥ, ಶಬ್ದಗುಣ (ಪು), ಮೇಘದ್ವಾರ, ಮಹಾಬಿಲ (ನ)=ಆಕಾಶ.

### ದಿಗ್ವರ್ಗ

೭೯-೮೧. ದಿಶ್, ಕಕುಭ್, ಕಾಷ್ಠಾ, ಆಶಾ, ಹರಿತ್=ದಿಕ್ಕು. ಪ್ರಾಚೀ, ಅವಾಚೀ[1], ಪ್ರತೀಚೀ (ಸ್ತ್ರೀ)=ಇವು ಕ್ರಮವಾಗಿ ಪೂರ್ವ, ದಕ್ಷಿಣ, ಪಶ್ಚಿಮ ದಿಕ್ಕುಗಳು. ಪೂರ್ವಾ, ದಕ್ಷಿಣಾ, ಪಶ್ಚಿಮಾ (ಸ್ತ್ರೀ) ಎಂದೂ ಕ್ರಮವಾಗಿ ಇವುಗಳ ಹೆಸರು. ಉತ್ತರಾ, ಉದೀಚೀ (ಸ್ತ್ರೀ)=ಉತ್ತರದಿಕ್ಕು. ದಿಶ್ಯ (ಪು. ಸ್ತ್ರೀ. ನ—ವಿಶೇಷ್ಯನಿಘ್ನ)=ದಿಕ್ಕಿನಲ್ಲಿ ಹುಟ್ಟಿದುದು, ದಿಕ್ಕಿನಲ್ಲಿ ಇರತಕ್ಕದ್ದು. ಅವಾಚೀನ=ದಕ್ಷಿಣ ದಿಕ್ಕಿನಲ್ಲಿ ಇರತಕ್ಕದ್ದು, ಉದೀಚೀನ=ಉತ್ತರದಲ್ಲಿ ಇರತಕ್ಕದ್ದು, ಪ್ರತೀಚೀನ=ಪಶ್ಚಿಮದಲ್ಲಿ ಇರತಕ್ಕದ್ದು, ಪ್ರಾಚೀನ=ಪೂರ್ವದಿಕ್ಕಿನಲ್ಲಿ ಇರತಕ್ಕದ್ದು. ಅವಾಚೀನ ಮೊದಲಾದ ನಾಲ್ಕು ಶಬ್ದಗಳು. ತ್ರಿಲಿಂಗಗಳು-ವಿಶೇಷ್ಯನಿಘ್ನ. ಸ್ತ್ರೀ—ಅವಾಚೀನಾ ಇತ್ಯಾದಿ.

---

[1] ಇದು ಅಪಪಾಠವೆಂದೂ ಅಪಾಚೀ ಎಂಬುದೇ ಸರಿಯೆಂದೂ ಅಮರಸುಧಾವ್ಯಾಖ್ಯಾನದಲ್ಲಿ ಹೇಳಿದೆ.

ಇಂದ್ರೋ ವಹ್ನಿಃ ಪಿತೃಪತಿರ್ನೈರ್ಋತೋ ವರುಣೋ ಮರುತ್ ।
ಕುಬೇರ ಈಶಃ ಪತಯಃ ಪೂರ್ವಾದೀನಾಂ ದಿಶಾಂ ಕ್ರಮಾತ್ ॥ ೯೨
ಐರಾವತಃ ಪುಂಡರೀಕೋ ವಾಮನಃ ಕುಮುದೋಽಂಜನಃ ।
ಪುಷ್ಪದಂತಸ್ಸಾರ್ವಭೌಮಸ್ಸುಪ್ರತೀಕಶ್ಚ ದಿಗ್ಗಜಾಃ ॥ ೯೩
ಕರಿಣ್ಯೋಽಭ್ರಮುಕಪಿಲಾಪಿಂಗಲಾನುಪಮಾಃ ಕ್ರಮಾತ್ ।
ತಾಮ್ರಕರ್ಣೀ ಶುಭ್ರದಂತೀ ಚಾಂಗನಾ ಚಾಂಜನಾವತೀ ॥ ೯೪
ಕ್ಲೀಬಾವ್ಯಯಂ ತ್ವಪದಿಶಂ ದಿಶೋರ್ಮಧ್ಯೇ ವಿದಿಕ್ ಸ್ತ್ರಿಯಾಮ್ ।
ಅಭ್ಯಂತರಂ ತ್ವಂತರಾಲಂ ಚಕ್ರವಾಲಂ ತು ಮಂಡಲಮ್ ॥ ೯೫
ಅಭ್ರಂ ಮೇಘೋ ವಾರಿವಾಹಃ ಸ್ತನಯಿತ್ನುರ್ಬಲಾಹಕಃ ।
ಧಾರಾಧರೋ ಜಲಧರಸ್ತಟಿತ್ವಾನ್ವಾರಿದೋಽಂಬುಭೃತ್ ॥ ೯೬
ಘನಜೀಮೂತಮುದಿರಜಲಮುಗ್ಧೂಮಯೋನಯಃ ।
ಕಾದಂಬಿನೀ ಮೇಘಮಾಲಾ ತ್ರಿಷು ಮೇಘಭವೇಽಭ್ರಿಯಮ್ ॥ ೯೭

---

೯೨. ಇಂದ್ರ, ವಹ್ನಿ, ಯಮ, ನೈರ್ಋತ, ವರುಣ, ವಾಯು, ಕುಬೇರ, ಈಶಾನ (ಪು)=ಇವರು ಪೂರ್ವಾದಿ ಅಷ್ಟದಿಕ್ಕುಗಳಿಗೆ ಕ್ರಮವಾಗಿ ಅಧಿಪತಿಗಳು. ೯೩. ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ (ಪು)=ಇವು ಪೂರ್ವಾದಿ ಅಷ್ಟದಿಕ್ಕುಗಳಲ್ಲಿ ಕ್ರಮವಾಗಿ ಇರುವ ದಿಗ್ಗಜಗಳು. ೯೪. ಅಭ್ರಮು, ಕಪಿಲಾ, ಪಿಂಗಲಾ, ಅನುಪಮಾ, ತಾಮ್ರಕರ್ಣೀ, ಶುಭ್ರದಂತೀ, ಅಂಗನಾ, ಅಂಜನಾವತೀ (ಸ್ತ್ರೀ)=ಇವು ಕ್ರಮವಾಗಿ ಅಷ್ಟದಿಗ್ಗಜಗಳ ಹೆಣ್ಣಾನೆಗಳು. ೯೫. ಅಪದಿಶ (ನ. ಅವ್ಯಯ), ವಿದಿಶ್ (ಸ್ತ್ರೀ)=ಎರಡು ದಿಕ್ಕುಗಳ ಮಧ್ಯಭಾಗ, ನಡುವಿನ ದಿಕ್ಕು, ಆಗ್ನೇಯಾದಿ ಕೋಣ, ಮೂಲೆ. ಅಭ್ಯಂತರ, ಅಂತರಾಲ (ನ)=ಮಧ್ಯ. ಚಕ್ರವಾಲ, ಮಂಡಲ (ನ)=ಗುಂಡಾದ ಆಕೃತಿ = ವಸ್ತು (globe, ring). ೯೬-೯೭. ಅಭ್ರ (ನ), ಮೇಘ, ವಾರಿವಾಹ, ಸ್ತನಯಿತ್ನು, ಬಲಾಹಕ, ಧಾರಾಧರ, ಜಲಧರ, ತಟಿತ್ವತ್, ವಾರಿದ, ಅಂಬುಭೃತ್, ಘನ, ಜೀಮೂತ, ಮುದಿರ, ಜಲಮುಚ್, ಧೂಮಯೋನಿ (ಪು)=ಮೋಡ. ಕಾದಂಬಿನೀ, ಮೇಘಮಾಲಾ (ಸ್ತ್ರೀ)=ಮೋಡಗಳ ಸಾಲು. ಅಭ್ರಿಯ (ತ್ರಿ-ವಿಶೇಷ್ಯನಿಘ್ನ)=ಮೋಡದಲ್ಲಿ ಉಂಟಾದದ್ದು.



ಸ್ತನಿತಂ ಗರ್ಜಿತಂ ಮೇಘನಿರ್ಘೋಷೋ ರಸಿತಾದಿ ಚ ।
ಶಂಪಾ ಶತಹ್ರದಾ ಹ್ರಾದಿನ್ಯೈರಾವತ್ಯಃ ಕ್ಷಣಪ್ರಭಾ ॥ ೯೮
ತಡಿತ್ಸೌದಾಮನೀ ವಿದ್ಯುಚ್ಚಂಚಲಾ ಚಪಲಾ ಅಪಿ ।
ಸ್ಫೂರ್ಜಥುರ್ವಜ್ರನಿರ್ಘೋಷೇ ಮೇಘಜ್ಯೋತಿರಿರಮ್ಮದಃ ॥ ೯೯
ಇಂದ್ರಾಯುಧಂ ಶಕ್ರಧನುಃ ತದೇವ ಋಜು ರೋಹಿತಮ್ ।
ವೃಷ್ಟಿರ್ವರ್ಷಂ ತದ್ವಿಘಾತೇಽವಗ್ರಾಹಾವಗ್ರಹೌ ಸಮೌ ॥ ೧೦೦
ಧಾರಾಸಂಪಾತ ಆಸಾರಶ್ಶೀಕರೋಽಂಬುಕಣಸ್ಸ್ಮೃತಃ ।
ವರ್ಷೋಪಲಸ್ತು ಕರಕೋ ಮೇಘಚ್ಛನ್ನೇಽಹ್ನಿ ದುರ್ದಿನಮ್ ॥ ೧೦೧
ಅಂತರ್ಧಾ ವ್ಯವಧಾ ಪುಂಸಿ ತ್ವಂತರ್ಧಿರಪವಾರಣಮ್ ।
ಅಪಿಧಾನತಿರೋಧಾನಪಿಧಾನಾಚ್ಛಾದನಾನಿ ಚ ॥ ೧೦೨
ಹಿಮಾಂಶುಶ್ಚಂದ್ರಮಾಶ್ಚಂದ್ರ ಇಂದುಃ ಕುಮುದಬಾಂಧವಃ ।
ವಿಧುಸ್ಸುಧಾಂಶುಶ್ಶುಭ್ರಾಂಶುರೋಷಧೀಶೋ ನಿಶಾಪತಿಃ ॥ ೧೦೩

---

೯೮-೯೯. ಸ್ತನಿತ, ಗರ್ಜಿತ, ಮೇಘನಿರ್ಘೋಷ, ರಸಿತ (ನ)=ಗುಡುಗು. ಶಂಪಾ, ಶತಹ್ರದಾ, ಹ್ರಾದಿನೀ, ಐರಾವತೀ, ಕ್ಷಣಪ್ರಭಾ ತಡಿತ್[1], ಸೌದಾಮನೀ, ವಿದ್ಯುತ್, ಚಂಚಲಾ, ಚಪಲಾ (ಸ್ತ್ರೀ)=ಮಿಂಚು. ಸ್ಫೂರ್ಜಥು, ವಜ್ರನಿರ್ಘೋಷ (ಪು)=ಸಿಡಿಲಿನ ಶಬ್ದ. ಮೇಘಜ್ಯೋತಿಸ್ (ನ), ಇರಂಮದ (ಪು)=ಸಿಡಿಲಿನಿಂದ ಹೊರಟ ಬೆಂಕಿ. ೧೦೦. ಇಂದ್ರಾಯುಧ, ಶಕ್ರಧನುಸ್ (ನ)=ಕಾಮನಬಿಲ್ಲು. ರೋಹಿತ (ನ)=ನೆಟ್ಟಗಿರುವ ಕಾಮನ ಬಿಲ್ಲು. ವೃಷ್ಟಿ (ಸ್ತ್ರೀ), ವರ್ಷ[2] (ನ)=ಮಳೆ. ಅವಗ್ರಾಹ, ಅವಗ್ರಹ (ಪು)=ಬರಗಾಲ, ಅನಾವೃಷ್ಟಿ, ಮಳೆ ಬರದಿರುವುದು. ೧೦೧. ಧಾರಾಸಂಪಾತ, ಆಸಾರ (ಪು)=ಧಾರಾಕಾರವಾದ ಮಳೆ, ಜಡಿಮಳೆ. ಶೀಕರ (ಸೀಕರ), ಅಂಬುಕಣ (ಪು)=ನೀರಿನ ಹನಿ. ವರ್ಷೋಪಲ, ಕರಕ (ಪು)=ಆಲಿಕಲ್ಲು. ದುರ್ದಿನ (ನ)=ಮೋಡಮುಚ್ಚಿದ ದಿನ. ೧೦೨. ಅಂತರ್ಧಾ, ವ್ಯವಧಾ (ಸ್ತ್ರೀ), ಅಂತರ್ಧಿ (ಪು.) ಅಪವಾರಣ, ಅಪಿಧಾನ, ತಿರೋಧಾನ, ಪಿಧಾನ, ಆಚ್ಛಾದನ (ನ)=ಮುಚ್ಚುವಿಕೆ, ಮರೆ. ೧೦೩-೧೦೪. ಹಿಮಾಂಶು, ಚಂದ್ರಮಸ್, ಚಂದ್ರ, ಇಂದು, ಕುಮುದಬಾಂಧವ, ವಿಧು, ಸುಧಾಂಶು, ಶುಭ್ರಾಂಶು, ಓಷಧೀಶ, ನಿಶಾಪತಿ, ಅಬ್ಜ,

---

[1] ತಟಿತ್ ಎಂಬ ರೂಪವೂ ಉಂಟು. [2] ಇದಕ್ಕೆ ಪುಲ್ಲಿಂಗವೂ ಉಂಟು.

ಅಬ್ಜೋ ಜೈವಾತೃಕಸ್ಸೋಮೋ ಗ್ಲೌರ್ಮೃಗಾಂಕಃ ಕಲಾನಿಧಿಃ ।
ದ್ವಿಜರಾಜಶ್ಶಶಧರೋ ನಕ್ಷತ್ರೇಶಃ ಕ್ಷಪಾಕರಃ ॥ ೧೦೪
ಕಲಾ ತು ಷೋಡಶೋ ಭಾಗೋ ಬಿಂಬೋಽಸ್ತ್ರೀ ಮಂಡಲಂ ತ್ರಿಷು ।
ಭಿತ್ತಂ ಶಕಲಖಂಡೇ ವಾ ಪುಂಸ್ಯರ್ಧೋಽರ್ಧಂ ಸಮೇಽಂಶಕೇ ॥ ೧೦೫
ಚಂದ್ರಿಕಾ ಕೌಮುದೀ ಜ್ಯೋತ್ಸ್ನಾ ಪ್ರಸಾದಸ್ತು ಪ್ರಸನ್ನತಾ ।
ಕಲಂಕಾಂಕೌ ಲಾಂಛನಂ ಚ ಚಿಹ್ನಂ ಲಕ್ಷ್ಮ ಚ ಲಕ್ಷಣಮ್ ॥ ೧೦೬
ಪಾಲಿಃ ಕೇತುರ್ಧ್ವಜೋ ಲಿಂಗಂ ನಿಮಿತ್ತಂ ವ್ಯಂಜನಂ ಪದಮ್ ।
ಪ್ರಜ್ಞಾನಂ ಚಾಪ್ಯಭಿಜ್ಞಾನಂ ಲಲಾಮಂ ಚ ಲಲಾಮ ಚ ॥ ೧೦೭
ಸುಷಮಾ ಪರಮಾ ಶೋಭಾ ಶೋಭಾ ಕಾಂತಿರ್ದ್ಯುತಿಶ್ಛವಿಃ ।
ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮಮ್ ॥ ೧೦೮
ಪ್ರಾಲೇಯಂ ಮಿಹಿಕಾ ಚಾಥ ಹಿಮಾನೀ ಹಿಮಸಂಹತಿಃ ।
ಶೀತಂ ಗುಣೇ ತದ್ವದರ್ಥಾಸ್ಸುಷೀಮಶ್ಶಿಶಿರೋ ಜಡಃ ॥ ೧೦೯
ತುಷಾರಶ್ಶೀತಲಶ್ಶೀತೋ ಹಿಮಸ್ಸಪ್ತಾನ್ಯಲಿಂಗಕಾಃ ।
ಧ್ರುವ ಔತ್ತಾನಪಾದಿಃ ಸ್ಯಾದಗಸ್ತ್ಯಃ ಕುಂಭಸಂಭವಃ ॥ ೧೧೦

---

ಜೈವಾತೃಕ, ಸೋಮ, ಗ್ಲೌ, ಮೃಗಾಂಕ, ಕಲಾನಿಧಿ, ದ್ವಿಜರಾಜ, ಶಶಧರ, ನಕ್ಷತ್ರೇಶ, ಕ್ಷಪಾಕರ (ಪು)=ಚಂದ್ರ. ೧೦೫. ಕಲಾ (ಸ್ತ್ರೀ)=ಚಂದ್ರಮಂಡಲದ ಹದಿನಾರನೆಯ ಒಂದು ಭಾಗ, ಏಕಾಂಶ. ಬಿಂಬ (ಪು. ನ), ಮಂಡಲ (ತ್ರಿ)=ಸೂರ್ಯ ಚಂದ್ರರ ಮಂಡಲ (Disc). ಭಿತ್ತ (ನ), ಶಕಲ, ಖಂಡ, ಅರ್ಧ (ಪು.ನ)=ತುಂಡು, ಚೂರು. ಅರ್ಧ (ನ)=ಸಮಭಾಗ, ಸರಿಯಾದ ಅರ್ಧ. ೧೦೬-೧೦೭. ಚಂದ್ರಿಕಾ, ಕೌಮುದೀ, ಜ್ಯೋತ್ಸ್ನಾ (ಸ್ತ್ರೀ)=ಬೆಳದಿಂಗಳು. ಪ್ರಸಾದ (ಪು), ಪ್ರಸನ್ನತಾ (ಸ್ತ್ರೀ)=ನೈರ್ಮಲ್ಯ, ಶುದ್ಧತೆ. ಕಲಂಕ, ಅಂಕ (ಪು), ಲಾಂಛನ, ಚಿಹ್ನ, ಲಕ್ಷ್ಮನ್, ಲಕ್ಷಣ (ನ), ಪಾಲಿ, ಕೇತು, ಧ್ವಜ (ಪು), ಲಿಂಗ, ನಿಮಿತ್ತ, ವ್ಯಂಜನ, ಪದ, ಪ್ರಜ್ಞಾನ, ಅಭಿಜ್ಞಾನ, ಲಲಾಮ, ಲಲಾಮನ್ (ನ)=ಚಿಹ್ನೆ, ಗುರುತು. ೧೦೮-೧೦೯. ಸುಷಮಾ (ಸ್ತ್ರೀ)=ಉತ್ಕೃಷ್ಟವಾದ ಕಾಂತಿ. ಶೋಭಾ, ಕಾಂತಿ, ದ್ಯುತಿ, ಛವಿ (ಸ್ತ್ರೀ)=ಕಾಂತಿ. ಅವಶ್ಯಾಯ, ನೀಹಾರ, ತುಷಾರ (ಪು), ತುಹಿನ, ಹಿಮ, ಪ್ರಾಲೇಯ (ನ), ಮಿಹಿಕಾ (ಸ್ತ್ರೀ)=ಹಿಮ, ಮಂಜು. ಹಿಮಾನೀ, ಹಿಮಸಂಹತಿ (ಸ್ತ್ರೀ)=ಮಂಜಿನ ರಾಶಿ. ೧೦೯-೧೧೧. ಶೀತ (ನ)=ಶೈತ್ಯ, ತಂಪು. ಸುಷೀಮ, ಶಿಶಿರ, ಜಡ, ತುಷಾರ, ಶೀತಲ,



ಮೈತ್ರಾವರುಣಿರಸ್ಯೈವ ಲೋಪಾಮುದ್ರಾ ಸಧರ್ಮಿಣೀ ।
ನಕ್ಷತ್ರಮೃಕ್ಷಂ ಭಂ ತಾರಾ ತಾರಕಾ ಽಪ್ಯುಡು ವಾ ಸ್ತ್ರಿಯಾಮ್ ॥ ೧೧೧
ದಾಕ್ಷಾಯಣ್ಯೋಽಶ್ವಿನೀತ್ಯಾದಿ ತಾರಾ ಅಶ್ವಯುಗಶ್ವಿನೀ ।
ರಾಧಾ ವಿಶಾಖಾ ಪುಷ್ಯೇ ತು ಸಿಧ್ಯತಿಷ್ಯೌ ಶ್ರವಿಷ್ಠಯಾ ॥ ೧೧೨
ಸಮಾ ಧನಿಷ್ಠಾ ಸ್ಯುಃ ಪ್ರೋಷ್ಠಪದಾ ಭಾದ್ರಪದಾಃ ಸ್ತ್ರಿಯಃ ।
ಮೃಗಶೀರ್ಷೇ ಮೃಗಶಿರಸ್ತಸ್ಮಿನ್ನೇವಾಗ್ರಹಾಯಣೀ ॥ ೧೧೩
ಇಲ್ವಲಾಸ್ತಚ್ಛಿರೋದೇಶೇ ತಾರಕಾ ನಿವಸಂತಿ ಯಾಃ ।
ಬೃಹಸ್ಪತಿಸ್ಸುರಾಚಾರ್ಯೋ ಗೀಷ್ಪತಿರ್ಧಿಷಣೋ ಗುರುಃ ॥ ೧೧೪
ಜೀವ ಆಂಗಿರಸೋ ವಾಚಸ್ಪತಿಶ್ಚಿತ್ರಶಿಖಂಡಿಜಃ ।
ಶುಕ್ರೋ ದೈತ್ಯಗುರುಃ ಕಾವ್ಯ ಉಶನಾ ಭಾರ್ಗವಃ ಕವಿಃ ॥ ೧೧೫

---

ಶೀತ, ಹಿಮ (ವಿ. ನಿಘ್ನ. ಸ್ತ್ರೀಲಿಂಗದಲ್ಲಿ ಸುಷೀಮಾ ಇತ್ಯಾದಿ)=ತಣ್ಣನೆಯದು, ಶೀತಗುಣವುಳ್ಳದ್ದು. ಧ್ರುವ, ಔತ್ತಾನಪಾದಿ (ಪು)=ಉತ್ತಾನಪಾದನ ಮಗ, ಧ್ರುವ. ಅಗಸ್ತ್ಯ, ಕುಂಭಸಂಭವ, ಮೈತ್ರಾವರುಣಿ (ಪು)=ಅಗಸ್ತ್ಯಮುನಿ. ಲೋಪಾಮುದ್ರಾ (ಸ್ತ್ರೀ)=ಅಗಸ್ತ್ಯನ ಪತ್ನಿ. ನಕ್ಷತ್ರ, ಋಕ್ಷ, ಭ (ನ), ತಾರಾ (ಸ್ತ್ರೀ), ತಾರಕಾ, ಉಡು (ಸ್ತ್ರೀ.ನ) ತಾರಕ (ನ)=ನಕ್ಷತ್ರ. ೧೧೨-೧೧೩. ದಾಕ್ಷಾಯಣೀ (ಸ್ತ್ರೀ)=ಅಶ್ವಿನ್ಯಾದಿಯಾದ ಇಪ್ಪತ್ತೇಳು ನಕ್ಷತ್ರಗಳಲ್ಲೊಂದು[1] ಅಶ್ವಯುಜ್, ಅಶ್ವಿನೀ (ಸ್ತ್ರೀ)=ಅಶ್ವಿನೀ ನಕ್ಷತ್ರ. ರಾಧಾ, ವಿಶಾಖಾ (ಸ್ತ್ರೀ)=ವಿಶಾಖಾನಕ್ಷತ್ರ. ಪುಷ್ಯ, ಸಿಧ್ಯ, ತಿಷ್ಯ (ಪು)=ಪುಷ್ಯನಕ್ಷತ್ರ. ಶ್ರವಿಷ್ಠಾ, ಧನಿಷ್ಠಾ (ಸ್ತ್ರೀ)=ಧನಿಷ್ಠಾನಕ್ಷತ್ರ. ಪ್ರೋಷ್ಠಪದಾ, ಭಾದ್ರಪದಾ (ಸ್ತ್ರೀ)=ಭಾದ್ರಪದಾ ನಕ್ಷತ್ರ. ಮೃಗಶೀರ್ಷ, ಮೃಗಶಿರಸ್ (ನ), ಆಗ್ರಹಾಯಣೀ (ಸ್ತ್ರೀ)=ಮೃಗಶೀರ್ಷ ನಕ್ಷತ್ರ. ೧೧೪-೧೧೫. ಇಲ್ವಲಾ (ಸ್ತ್ರೀ)—ಇನ್ವಲಾ ಎಂಬ ಪಾಠಾಂತರ =ಮೃಗಶೀರ್ಷ ನಕ್ಷತ್ರದ ಮೇಲ್ಭಾಗದಲ್ಲಿರುವ ಐದು ಚಿಕ್ಕ ತಾರೆಗಳು. ಬೃಹಸ್ಪತಿ, ಸುರಾಚಾರ್ಯ, ಗೀಷ್ಪತಿ, ಧಿಷಣ, ಗುರು, ಜೀವ, ಆಂಗಿರಸ, ವಾಚಸ್ಪತಿ, ಚಿತ್ರಶಿಖಂಡಿಜ (ಪು)=ಬೃಹಸ್ಪತಿ. ಶುಕ್ರ, ದೈತ್ಯಗುರು, ಕಾವ್ಯ, ಉಶನಸ್, ಭಾರ್ಗವ, ಕವಿ (ಪು)=ಶುಕ್ರ.

[1] ಅಶ್ವಿನ್ಯಾದಿ ನಕ್ಷತ್ರಗಳ ಲಿಂಗ ವಚನಗಳ ವಿಶೇಷವನ್ನು ಪರಿಶಿಷ್ಟದಲ್ಲಿ ನೋಡಿ.

ಅಂಗಾರಕಃ ಕುಜೋ ಭೌಮೋ ಲೋಹಿತಾಂಗೋ ಮಹೀಸುತಃ ।
ರೌಹಿಣೇಯೋ ಬುಧಸ್ಸೌಮ್ಯಸ್ಸಮೌ ಸೌರಿಶನೈಶ್ಚರೌ ॥ ೧೧೬
ಶನಿಮಂದೌ ಪಂಗುಕಾಲೌ ಛಾಯಾಪುತ್ರೋಽಸಿತೋಽರ್ಕಜಃ ।
ತಮಸ್ತು ರಾಹುಃ ಸ್ವರ್ಭಾನುಸ್ಸೈಂಹಿಕೇಯೋ ವಿಧುಂತುದಃ ॥ ೧೧೭
ಸಪ್ತರ್ಷಯೋ ಮರೀಚ್ಯತ್ರಿಮುಖಾಶ್ಚಿತ್ರಶಿಖಂಡಿನಃ ।
ರಾಶೀನಾಮುದಯೋ ಲಗ್ನಂ ತೇ ತು ಮೇಷವೃಷಾದಯಃ ॥ ೧೧೮
ಸೂರಸೂರ್ಯಾರ್ಯಮಾದಿತ್ಯ ದ್ವಾದಶಾತ್ಮದಿವಾಕರಾಃ ।
ಭಾಸ್ಕರಾಹಸ್ಕರಬ್ರಧ್ನ ಪ್ರಭಾಕರವಿಭಾಕರಾಃ ॥ ೧೧೯
ಭಾಸ್ವದ್ವಿವಸ್ವತ್ಸಪ್ತಾಶ್ವಹರಿದಶ್ವೋಷ್ಣರಶ್ಮಯಃ ।
ವಿಕರ್ತನಾರ್ಕಮಾರ್ತಂಡಮಿಹಿರಾರುಣಪೂಷಣಃ ॥ ೧೨೦

---

೧೧೬-೧೧೭. ಅಂಗಾರಕ, ಕುಜ, ಭೌಮ, ಲೋಹಿತಾಂಗ, ಮಹೀಸುತ (ಪು)=ಕುಜ, ಮಂಗಳಗ್ರಹ. ರೌಹಿಣೇಯ, ಬುಧ, ಸೌಮ್ಯ, (ಪು)=ಬುಧ. ಸೌರಿ, ಶನೈಶ್ಚರ, ಶನಿ, ಮಂದ, ಪಂಗು, ಕಾಲ, ಛಾಯಾಪುತ್ರ, ಅಸಿತ, ಅರ್ಕಜ (ಪು)=ಶನಿ. ತಮಸ್ (ನ), ರಾಹು, ಸ್ವರ್ಭಾನು, ಸೈಂಹಿಕೇಯ, ವಿಧುಂತುದ (ಪು)=ರಾಹು. ೧೧೮. ಚಿತ್ರಶಿಖಂಡಿನ್ (ಪು)=ಮರೀಚಿ ಮೊದಲಾದ ಸಪ್ತರ್ಷಿಗಳು.[1] ಲಗ್ನ[2] (ನ)=ಮೇಷಾದಿರಾಶಿಗಳ ಉದಯ. ಮೇಷ, ವೃಷಭ (ಪು), ಮಿಥುನ (ನ), ಕರ್ಕಾಟಕ, ಸಿಂಹ (ಪು), ಕನ್ಯಾ, ತುಲಾ (ಸ್ತ್ರೀ), ವೃಶ್ಚಿಕ (ಪು), ಧನುಸ್ (ನ), ಮಕರ, ಕುಂಭ, ಮೀನ (ಪು)=ಇವು ದ್ವಾದಶ ರಾಶಿಗಳು. ೧೧೯-೧೨೩. ಸೂರ, ಸೂರ್ಯ, ಅರ್ಯಮನ್, ಆದಿತ್ಯ, ದ್ವಾದಶಾತ್ಮನ್, ದಿವಾಕರ, ಭಾಸ್ಕರ, ಅಹಸ್ಕರ, ಬ್ರಧ್ನ, ಪ್ರಭಾಕರ, ವಿಭಾಕರ, ಭಾಸ್ವತ್, ವಿವಸ್ವತ್, ಸಪ್ತಾಶ್ವ, ಹರಿದಶ್ವ, ಉಷ್ಣರಶ್ಮಿ, ವಿಕರ್ತನ, ಅರ್ಕ, ಮಾರ್ತಂಡ (ಮಾರ್ತಾಂಡವೂ ಉಂಟು) ಮಿಹಿರ, ಅರುಣ, ಪೂಷನ್, ದ್ಯುಮಣಿ, ತರಣಿ, ಮಿತ್ರ, ಚಿತ್ರಭಾನು, ವಿರೋಚನ, ವಿಭಾವಸು, ಗ್ರಹಪತಿ, ತ್ವಿಷಾಂಪತಿ, ಅಹರ್ಪತಿ,[3] ಭಾನು, ಹಂಸ, ಸಹಸ್ರಾಂಶು, ತಪನ, ಸವಿತೃ, ರವಿ, ಕರ್ಮಸಾಕ್ಷಿನ್, ಜಗಚ್ಚಕ್ಷುಸ್, ಅಂಶುಮಾಲಿನ್, ತ್ರಯೀತನು, ಪ್ರದ್ಯೋತನ, ದಿನಮಣಿ, ಖದ್ಯೋತ,

---

[1] ಮರೀಚಿರಂಗಿರಾ ಅತ್ರಿಃ ಪುಲಸ್ತ್ಯಃ ಪುಲಹಃ ಕ್ರತುಃ ।
ವಸಿಷ್ಠಶ್ಚೇತಿ ಸಪ್ತೈತೇ ಜ್ಞೇಯಾಶ್ಚಿತ್ರಶಿಖಂಡಿನಃ ॥

[2] ಇದಕ್ಕೆ ಪುಲ್ಲಿಂಗವೂ ಉಂಟು. [3] ಅಹಃಪತಿ ಎಂಬ ರೂಪವೂ ಉಂಟು.



ದ್ಯುಮಣಿಸ್ತರಣಿರ್ಮಿತ್ರಶ್ಚಿತ್ರಭಾನುರ್ವಿರೋಚನಃ ।
ವಿಭಾವಸುರ್ಗ್ರಹಪತಿಸ್ತ್ವಿಷಾಂಪತಿರಹರ್ಪತಿಃ ॥ ೧೨೧
ಭಾನುರ್ಹಂಸಸ್ಸಹಸ್ರಾಂಶುಸ್ತಪನಸ್ಸವಿತಾ ರವಿಃ ।
ಕರ್ಮಸಾಕ್ಷೀ ಜಗಚ್ಚಕ್ಷುರಂಶುಮಾಲೀ ತ್ರಯೀತನುಃ ॥ ೧೨೨
ಪ್ರದ್ಯೋತನೋ ದಿನಮಣಿಃ ಖದ್ಯೋತೋ ಲೋಕಬಾಂಧವಃ ।
ಸುರೋತ್ತಮೋ ಧಾಮನಿಧಿಃ ಪದ್ಮಿನೀವಲ್ಲಭೋ ಹರಿಃ ॥ ೧೨೩
ಮಾಠರಃ ಪಿಂಗಲೋ ದಂಡಶ್ಚಂಡಾಂಶೋಃ ಪಾರಿಪಾರ್ಶ್ವಿಕಾಃ ।
ಸೂರಸೂತೋಽರುಣೋಽನೂರುಃ ಕಾಶ್ಯಪಿರ್ಗರುಡಾಗ್ರಜಃ ॥ ೧೨೪
ಪರಿವೇಷಸ್ತು ಪರಿಧಿರುಪಸೂರ್ಯಕಮಂಡಲೇ ।
ಕಿರಣೋಽಸ್ರಮಯೂಖಾಂಶುಗಭಸ್ತಿಘೃಣಿಘೃಷ್ಟಯಃ ॥ ೧೨೫
ಭಾನುಃ ಕರೋ ಮರೀಚಿಃ ಸ್ತ್ರೀಪುಂಸಯೋರ್ದೀಧಿತಿಃ ಸ್ತ್ರಿಯಾಮ್ ।
ದ್ವಯೋಸ್ತು ಗೌರ್ನಪುಂಸ್ಯರ್ಚಿಸ್ತೇಜೋ ಧಾಮ ಮಹೋ ವಿಭಾ ॥ ೧೨೬

---

ಲೋಕಬಾಂಧವ, ಸುರೋತ್ತಮ, ಧಾಮನಿಧಿ, ಪದ್ಮಿನೀವಲ್ಲಭ, ಹರಿ (ಪು)=ಸೂರ್ಯ. ೧೨೪. ಮಾಠರ, ಪಿಂಗಲ, ದಂಡ (ಪು)=ಸೂರ್ಯನ ಪಾರ್ಶ್ವದಲ್ಲಿರುವ ಮೂವರು ಪರಿಚಾರಕರು.[1] ಸೂರಸೂತ, ಅರುಣ, ಅನೂರು, ಕಾಶ್ಯಪಿ, ಗರುಡಾಗ್ರಜ (ಪು)=ಸೂರ್ಯನ ಸಾರಥಿ. ೧೨೫-೧೨೬. ಪರಿವೇಷ (ಪರಿವೇಶ), ಪರಿಧಿ (ಪು), ಉಪಸೂರ್ಯಕ, ಮಂಡಲ (ನ)=ಸೂರ್ಯನ ಸುತ್ತಲೂ ಕುಂಡಲಾಕಾರವಾಗಿ ಕಾಣುವ ತೇಜೋವಿಶೇಷ (The halo round the sun). ಕಿರಣ, ಉಸ್ರ, ಮಯೂಖ, ಅಂಶು, ಗಭಸ್ತಿ, ಘೃಣಿ, ಘೃಷ್ಟಿ (ಪೃಶ್ನಿ, ವೃಷ್ಣಿ), ಭಾನು, ಕರ (ಪು), ಮರೀಚಿ (ಪು. ಸ್ತ್ರೀ), ದೀಧಿತಿ (ಸ್ತ್ರೀ), ಗೋ (ಪು.ಸ್ತ್ರೀ), ಅರ್ಚಿಸ್ (ಸ್ತ್ರೀ. ನ), ತೇಜಸ್, ಧಾಮನ್, ಮಹಸ್ (ನ), ವಿಭಾ, ಪ್ರಭಾ, ರುಚ್, ರುಚಿ, ತ್ವಿಷ್, ಭಾ, ಭಾಸ್, ಛವಿ, ದ್ಯುತಿ, ದೀಪ್ತಿ (ಸ್ತ್ರೀ), ರೋಚಿಸ್, ಶೋಚಿಸ್ (ನ)=ಪ್ರಭೆ, ಕಾಂತಿ, ಪ್ರಕಾಶ, ದ್ಯೋತ, ಆತಪ (ಪು)=ಸೂರ್ಯಪ್ರಭೆ, ಬಿಸಿಲು.

---

[1] ಒಟ್ಟು ಹದಿನೆಂಟು ಮಂದಿ ಸೂರ್ಯನ ಪರಿಚಾರಕರೆಂದೂ ಮುಖ್ಯರಾದ್ದರಿಂದ ಮೂವರ ಹೆಸರನ್ನು ಹೇಳಿದೆಯೆಂದೂ ಕೆಲವರ ಅಭಿಪ್ರಾಯ.

ಸ್ಯುಃ ಪ್ರಭಾರುಗ್ರುಚಿಸ್ತ್ವಿಡ್ಭಾಭಾಶ್ಛವಿದ್ಯುತಿದೀಪ್ತಯಃ ।
ರೋಚಿಶ್ಶೋಚಿರುಭೇ ಕ್ಲೀಬೇ ಪ್ರಕಾಶೋ ದ್ಯೋತ ಆತಪಃ ॥ ೧೨೭

ಕೋಷ್ಣಂ ಕವೋಷ್ಣಂ ಮಂದೋಷ್ಣಂ ಕದುಷ್ಣಂ ತ್ರಿಷು ತದ್ವತಿ ।
ತಿಗ್ಮಂ ತೀಕ್ಷ್ಣಂ ಖರಂ ತದ್ವನ್ಮೃಗತೃಷ್ಣಾ ಮರೀಚಿಕಾ ॥ ೧೨೮

ಇತಿ ದಿಗ್ವರ್ಗಃ

## ೪. ಕಾಲವರ್ಗಃ

ಕಾಲೋ ದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ ।
ಪ್ರತಿಪದ್ದ್ವೇ ಇಮೇ ಸ್ತ್ರೀತ್ವೇ ತದಾದ್ಯಾಸ್ತಿಥಯೋ ದ್ವಯೋಃ ॥ ೧೨೯

ಘಸ್ರೋ ದಿನಾಹನೀ ವಾ ತು ಕ್ಲೀಬೇ ದಿವಸವಾಸರೌ ।
ಪ್ರತ್ಯೂಷೋಽಹರ್ಮುಖಂ ಕಲ್ಯಮುಷಃಪ್ರತ್ಯುಷಸೀ ಅಪಿ ॥ ೧೩೦

ಪ್ರಭಾತಂ ಚ ದಿನಾಂತೇ ತು ಸಾಯಃ ಸಂಧ್ಯಾ ಪಿತೃಪ್ರಸೂಃ ।
ಪ್ರಾಹ್ಣಾಪರಾಹ್ಣಮಧ್ಯಾಹ್ನಾಸ್ತ್ರಿಸಂಧ್ಯಮಥ ಶರ್ವರೀ ॥ ೧೩೧

---

೧೨೮. ಕೋಷ್ಣ, ಕವೋಷ್ಣ, ಮಂದೋಷ್ಣ, ಕದುಷ್ಣ (ವಿ. ನಿಘ್ನ)= ಸ್ವಲ್ಪ ಬಿಸಿಯಾದದ್ದು, ಉಗುರುಬೆಚ್ಚಗಿರತಕ್ಕದ್ದು (Tepid). ತಿಗ್ಮ, ತೀಕ್ಷ್ಣ, ಖರ (ವಿ. ನಿಘ್ನ)= ಅತ್ಯುಷ್ಣವಾದದ್ದು. ಮೃಗತೃಷ್ಣಾ, ಮರೀಚಿಕಾ (ಸ್ತ್ರೀ)=ಬಿಸಿಲ್ಗುದುರೆ (Mirage).

### ಕಾಲವರ್ಗ

೧೨೯. ಕಾಲ, ದಿಷ್ಟ, ಅನೇಹಸ್, ಸಮಯ (ಪು)=ಕಾಲ (Time). ಪಕ್ಷತಿ, ಪ್ರತಿಪದ್ (ಸ್ತ್ರೀ)=ಪಾಡ್ಯ. ತಿಥಿ (ಪು.ಸ್ತ್ರೀ)=ಪಾಡ್ಯ ಮೊದಲಾದ ತಿಥಿ. ೧೩೦-೧೩೧. ಘಸ್ರ (ಪು), ದಿನ, ಅಹನ್ (ನ), ದಿವಸ, ವಾಸರ (ಪು.ನ)=ದ್ಧಿನ (Day). ಪ್ರತ್ಯೂಷ (ಪು), ಅಹರ್ಮುಖ, ಕಲ್ಯ, ಉಷಸ್, ಪ್ರತ್ಯುಷಸ್, ಪ್ರಭಾತ (ನ)=ಪ್ರಾತಃಕಾಲ. ಸಾಯ[1] (ಪು)=ಸಾಯಂಕಾಲ. ಸಂಧ್ಯಾ, ಪಿತೃಪ್ರಸೂ (ಸ್ತ್ರೀ)=ಸಂಧ್ಯಾಕಾಲ. ೧೩೧-೧೩೨. ಪ್ರಾಹ್ಣ, ಅಪರಾಹ್ಣ, ಮಧ್ಯಾಹ್ನ (ಪು)=ಇವು ಕ್ರಮವಾಗಿ ಪ್ರಾತಃಕಾಲ, ಸಾಯಂಕಾಲ, ಮಧ್ಯಾಹ್ನಗಳ ಹೆಸರುಗಳು. ಇವು ಮೂರಕ್ಕೂ ತ್ರಿಸಂಧ್ಯ (ನ) ಎಂದೂ ಹೆಸರು. ಶರ್ವರೀ, ನಿಶಾ, ನಿಶೀಥಿನೀ, ರಾತ್ರಿ,

---

[1] ಸಾಯಮ್ ಎಂಬ ಅವ್ಯಯವೂ ಉಂಟು.



ನಿಶಾ ನಿಶೀಥಿನೀ ರಾತ್ರಿಸ್ತ್ರಿಯಾಮಾ ಕ್ಷಣದಾ ಕ್ಷಪಾ ।
ವಿಭಾವರೀತಮಸ್ವಿನ್ಯೌ ರಜನೀ ಯಾಮಿನೀ ತಮೀ ॥ ೧೩೨

ತಮಿಸ್ರಾ ತಾಮಸೀ ರಾತ್ರಿರ್ಜ್ಯೌತ್ಸ್ನೀ ಚಂದ್ರಿಕಯಾನ್ವಿತಾ ।
ಆಗಾಮಿವರ್ತಮಾನಾಹರ್ಯುಕ್ತಾಯಾಂ ನಿಶಿ ಪಕ್ಷಿಣೀ ॥ ೧೩೩

ಗಣರಾತ್ರಂ ನಿಶಾ ಬಹ್ವ್ಯಃ ಪ್ರದೋಷೋ ರಜನೀಮುಖಮ್ ।
ಅರ್ಧರಾತ್ರನಿಶೀಥೌ ದ್ವೌ ದ್ವೌ ಯಾಮಪ್ರಹರೌ ಸಮೌ ॥ ೧೩೪

ಸ ಪರ್ವಸಂಧಿಃ ಪ್ರತಿಪತ್ಪಂಚದಶ್ಯೋರ್ಯದಂತರಮ್ ।
ಪಕ್ಷಾಂತೌ ಪಂಚದಶ್ಯೌ ದ್ವೇ ಪೌರ್ಣಮಾಸೀ ತು ಪೂರ್ಣಿಮಾ ॥ ೧೩೫

ಕಲಾಹೀನೇ ಸಾನುಮತಿಃ ಪೂರ್ಣೇ ರಾಕಾ ನಿಶಾಕರೇ ।
ಅಮಾವಾಸ್ಯಾ ತ್ವಮಾವಸ್ಯಾ ದರ್ಶಸ್ಸೂರ್ಯೇಂದುಸಂಗಮಃ ॥ ೧೩೬

ಸಾ ದೃಷ್ಟೇಂದುಸ್ಸಿನೀವಾಲೀ ಸಾ ನಷ್ಟೇಂದುಕಲಾ ಕುಹೂಃ ।
ಉಪರಾಗೋ ಗ್ರಹೋ ರಾಹುಗ್ರಸ್ತೇ ತ್ವಿಂದೌ ಚ ಪೂಷ್ಣಿ ಚ ॥ ೧೩೭

---

ತ್ರಿಯಾಮಾ, ಕ್ಷಣದಾ, ಕ್ಷಪಾ, ವಿಭಾವರೀ, ತಮಸ್ವಿನೀ, ರಜನೀ, ಯಾಮಿನೀ, ತಮೀ (ಸ್ತ್ರೀ)=ರಾತ್ರಿ. ೧೩೩. ತಮಿಸ್ರಾ, ತಾಮಸೀ (ಸ್ತ್ರೀ)=ಬಹಳ ಕತ್ತಲಿರುವ ರಾತ್ರಿ. ಜ್ಯೌತ್ಸ್ನೀ=ಬೆಳದಿಂಗಳಿನ ರಾತ್ರಿ. ಪಕ್ಷಿಣೀ (ಸ್ತ್ರೀ)=ಇಂದಿನ ಹಗಲು ಮತ್ತು ನಾಳೆಯ ಹಗಲು ಸೇರಿದ ನಡುವಿನ ರಾತ್ರಿ. ೧೩೪. ಗಣರಾತ್ರ (ನ)=ರಾತ್ರಿ ಸಮುದಾಯ. ಪ್ರದೋಷ (ಪು), ರಜನೀಮುಖ (ನ)=ರಾತ್ರಿಯ ಆರಂಭಕಾಲ. ಅರ್ಧರಾತ್ರ, ನಿಶೀಥ (ಪು)=ರಾತ್ರಿಯ ಮಧ್ಯಕಾಲ. ಯಾಮ, ಪ್ರಹರ (ಪು)=ಜಾವ, ಮೂರು ಘಂಟೆಗಳ ಕಾಲ. ೧೩೫. ಪರ್ವನ್ (ನ), ಸಂಧಿ (ಪು) ಅಥವಾ ಪರ್ವಸಂಧಿ (ಪು)=ಹುಣ್ಣಿಮೆ ಅಮಾವಾಸ್ಯೆಗಳೂ ಪಾಡ್ಯವೂ ಸಂಧಿಸುವ ಕಾಲ. ಪಕ್ಷಾಂತ (ಪು), ಪಂಚದಶೀ (ಸ್ತ್ರೀ)=ಹದಿನೈದನೆಯ ತಿಥಿ, ಹುಣ್ಣಿಮೆ ಅಥವಾ ಅಮಾವಾಸ್ಯೆ. ಪೌರ್ಣಮಾಸೀ, ಪೂರ್ಣಿಮಾ (ಸ್ತ್ರೀ)=ಹುಣ್ಣಿಮೆ. ೧೩೬. ಅನುಮತಿ (ಸ್ತ್ರೀ)=ಒಂದು ಕಲೆ ನ್ಯೂನವಾದ ಚಂದ್ರನುಳ್ಳ ಹುಣ್ಣಿಮೆ. ಚಂದ್ರೋದಯ ಕಾಲಕ್ಕೆ ಚತುರ್ದಶಿಯೋ ಪಾಡ್ಯವೋ ಕೂಡಿದ ಹುಣ್ಣಿಮೆ. ರಾಕಾ (ಸ್ತ್ರೀ)=ಪೂರ್ಣಚಂದ್ರನಿರುವ ಹುಣ್ಣಿಮೆ. ಅಮಾವಾಸ್ಯಾ, ಅಮಾವಸ್ಯಾ (ಸ್ತ್ರೀ) ದರ್ಶ, ಸೂರ್ಯೇಂದುಸಂಗಮ (ಪು)=ಅಮಾವಾಸ್ಯೆ. ೧೩೭-೧೩೮. ಸಿನೀವಾಲೀ (ಸ್ತ್ರೀ)=ಚಂದ್ರಕಲೆಯು ಕಾಣಿಸುವ ಅಮಾವಾಸ್ಯೆ. ಕುಹೂ (ಸ್ತ್ರೀ)=ಚಂದ್ರಕಲೆಯು ಕಾಣಿಸದ ಅಮಾವಾಸ್ಯೆ. ಉಪರಾಗ, ಗ್ರಹ

ಸೋಪಪ್ಲವೋಪರಕ್ತೌ ದ್ವಾವಗ್ನ್ಯುತ್ಪಾತ ಉಪಾಹಿತಃ ।
ಏಕಯೋಕ್ತ್ಯಾ ಪುಷ್ಪವಂತೌ ದಿವಾಕರನಿಶಾಕರೌ ॥ ೧೩೮
ಅಷ್ಟಾದಶನಿಮೇಷಾಸ್ತು ಕಾಷ್ಠಾ ತ್ರಿಂಶತ್ತು ತಾಃ ಕಲಾ ।
ತಾಸ್ತು ತ್ರಿಂಶತ್ ಕ್ಷಣಸ್ತೇ ತು ಮುಹೂರ್ತೋ ದ್ವಾದಶಾಸ್ತ್ರಿಯಾಮ್॥ ೧೩೯
ತೇ ತು ತ್ರಿಂಶದಹೋರಾತ್ರಃ ಪಕ್ಷಸ್ತೇ ದಶ ಪಂಚ ಚ ।
ಪಕ್ಷೌ ಪೂರ್ವಾಪರೌ ಶುಕ್ಲಕೃಷ್ಣೌ ಮಾಸಸ್ತು ತಾವುಭೌ ॥ ೧೪೦
ದ್ವೌ ದ್ವೌ ಮಾರ್ಗಾದಿಮಾಸೌ ಸ್ಯಾದೃತುಸ್ತೈರಯನಂ ತ್ರಿಭಿಃ ।
ಅಯನೇ ದ್ವೇ ಗತಿರುದಗ್ದಕ್ಷಿಣಾರ್ಕಸ್ಯ ವತ್ಸರಃ ॥ ೧೪೧

---

(ಪು)=ಗ್ರಹಣ. ಸೋಪಪ್ಲವ, ಉಪರಕ್ತ (ಪು)=ರಾಹುಗ್ರಸ್ತನಾದ ಚಂದ್ರ ಅಥವಾ ಸೂರ್ಯ. ಅಗ್ನ್ಯುತ್ಪಾತ, ಉಪಾಹಿತ, (ಪು)=ದುಶ್ಶಕುನರೂಪವಾಗಿ ಉಂಟಾದ ಅಗ್ನಿವಿಕಾರ, ಧೂಮಕೇತು ದರ್ಶನ ಇತ್ಯಾದಿ. ಪುಷ್ಪವತ್ (ಪು. ನಿತ್ಯದ್ವಿವಚನ)=ಸೂರ್ಯ ಚಂದ್ರರು. ೧೩೯. ಕಾಷ್ಠಾ (ಸ್ತ್ರೀ)[1]=ಹದಿನೆಂಟು ನಿಮೇಷಗಳು. ಕಲಾ (ಸ್ತ್ರೀ)=ಮೂವತ್ತು ಕಾಷ್ಠಗಳು. ಕ್ಷಣ (ಪು)=ಮೂವತ್ತು ಕಲೆಗಳು. ಮುಹೂರ್ತ (ಪು)=ಹನ್ನೆರಡು ಕ್ಷಣಗಳು. ೧೪೦. ಅಹೋರಾತ್ರ (ಪು)=ಮೂವತ್ತು ಮುಹೂರ್ತಗಳು, ೨೪ ಘಂಟೆಗಳ ಒಂದು ದಿನ. ಪಕ್ಷ (ಪು)=ಹದಿನೈದು ದಿನಗಳು. ಶುಕ್ಲಪಕ್ಷ (ಪು)=ತಿಂಗಳಿನ ಮೊದಲನೆಯ ಪಕ್ಷ. ಕೃಷ್ಣಪಕ್ಷ (ಪು)=ತಿಂಗಳಿನ ಎರಡನೆಯ ಪಕ್ಷ. ಮಾಸ (ಪು)=ಎರಡು ಪಕ್ಷಗಳೂ ಸೇರಿದ ಒಂದು ತಿಂಗಳು. ೧೪೧. ಋತು (ಪು)=(ಮಾರ್ಗಶೀರ್ಷದಿಂದ) ಎರಡೆರಡು ತಿಂಗಳಕಾಲ. ಅಯನ (ನ)=ಮೂರು ಋತುಗಳು, ಆರು ತಿಂಗಳು. ಉದಗಯನ (ನ)=ಸೂರ್ಯನ ಉತ್ತರಗತಿ. ವತ್ಸರ (ಪು)=ಎರಡು ಅಯನಗಳು, ಒಂದು ವರ್ಷ. ದಕ್ಷಿಣಾಯನ (ನ)=ಸೂರ್ಯನ ದಕ್ಷಿಣಗತಿ.

---

[1] ನಿಮೇಷ = 2/135 ಸೆಕೆಂಡ್, ಕಾಷ್ಠಾ= 4/15 ಸೆಕೆಂಡ್, ಕಲಾ =8ಸೆಕೆಂಡ್, ಕ್ಷಣ=240 ಸೆಕೆಂಡ್ ಅಥವಾ 4 ನಿಮಿಷ (minutes), ಮುಹೂರ್ತ=48ನಿಮಿಷ (minutes). ಅಹೋರಾತ್ರ=24 ಘಂಟೆಗಳ ಒಂದು ದಿನ.



ಸಮರಾತ್ರಿಂದಿವೇ ಕಾಲೇ ವಿಷುವದ್ವಿಷುವಂ ಚ ತತ್ ।
ಪುಷ್ಯಯುಕ್ತಾ ಪೌರ್ಣಮಾಸೀ ಪೌಷೀ ಮಾಸೇ ತು ಯತ್ರ ಸಾ ॥ ೧೪೨
ನಾಮ್ನಾ ಸ ಪೌಷೋ ಮಾಘಾದ್ಯಾಶ್ಚೈವಮೇಕಾದಶಾಪರೇ ।
ಮಾರ್ಗಶೀರ್ಷೇ ಸಹಾ ಮಾರ್ಗ ಆಗ್ರಹಾಯಣಿಕಶ್ಚ ಸಃ ॥ ೧೪೩
ಪೌಷೇ ತೈಷಸಹಸ್ಯೌ ದ್ವೌ ತಪಾ ಮಾಘೇಽಥ ಫಾಲ್ಗುನೇ ।
ಸ್ಯಾತ್ತಪಸ್ಯಃ ಫಾಲ್ಗುನಿಕಸ್ಸ್ಯಾಚ್ಚೈತ್ರೇ ಚೈತ್ರಿಕೋ ಮಧುಃ ॥ ೧೪೪
ವೈಶಾಖೇ ಮಾಧವೋ ರಾಧೋ ಜ್ಯೈಷ್ಠೇ ಶುಕ್ರಶ್ಶುಚಿಸ್ತ್ವಯಮ್ ।
ಆಷಾಢೇ ಶ್ರಾವಣೇ ತು ಸ್ಯಾನ್ನಭಾಃ ಶ್ರಾವಣಿಕಶ್ಚ ಸಃ ॥ ೧೪೫
ಸ್ಯುರ್ನಭಸ್ಯಃ ಪ್ರೌಷ್ಠಪದಭಾದ್ರ ಭಾದ್ರಪದಾಸ್ಸಮಾಃ ।
ಸ್ಯಾದಾಶ್ವಿನ ಇಷೋಽಪ್ಯಾಶ್ವಯುಜೋಽಪಿ ಸ್ಯಾತ್ತು ಕಾರ್ತಿಕೇ ॥ ೧೪೬
ಬಾಹುಲೋರ್ಜೌ ಕಾರ್ತಿಕಿಕೋ ಹೇಮಂತಶ್ಶಿಶಿರೋಽಸ್ತ್ರಿಯಾಮ್ ।
ವಸಂತೇ ಪುಷ್ಪಸಮಯಸ್ಸುರಭಿರ್ಗ್ರೀಷ್ಮ ಊಷ್ಮಕಃ ॥ ೧೪೭

---

೧೪೨-೧೪೩. ವಿಷುವತ್, ವಿಷುವ (ನ)=ಹಗಲು ರಾತ್ರಿಗಳು ಸಮಪ್ರಮಾಣದಲ್ಲಿರುವ ಕಾಲ (The equinox), ಪೌಷೀ (ಸ್ತ್ರೀ)=ಪುಷ್ಯಯುಕ್ತವಾದ ಹುಣ್ಣಿಮೆ. ಪೌಷ (ಪು)=ಪುಷ್ಯಯುಕ್ತವಾದ ಹುಣ್ಣಿಮೆಯಿರುವ ಮಾಸ. ಇದೇ ರೀತಿಯಲ್ಲಿ ಮಾಖ (ಮಾಘ) ಮೊದಲಾದ ಇತರ ಹನ್ನೊಂದು ತಿಂಗಳು. ಮಾಖೀ (ಮಾಘೀ)=ಹುಣ್ಣಿಮೆ, ಅದು ಇರುವ ತಿಂಗಳು ಮಾಖ (ಮಾಘ) ಇತ್ಯಾದಿ. ಮಾರ್ಗಶೀರ್ಷ, ಸಹಸ್, ಮಾರ್ಗ, ಆಗ್ರಹಾಯಣಿಕ (ಪು)=ಮಾರ್ಗಶೀರ್ಷಮಾಸ. ೧೪೪. ತೈಷ, ಸಹಸ್ಯ (ಪು)=ಪೌಷಮಾಸ. ತಪಸ್, ಮಾಘ (ಪು)=ಮಾಘಮಾಸ. ಫಾಲ್ಗುನ, ತಪಸ್ಯ, ಫಾಲ್ಗುನಿಕ (ಪು)=ಫಾಲ್ಗುನಮಾಸ. ಚೈತ್ರ, ಚೈತ್ರಿಕ, ಮಧು (ಪು)=ಚೈತ್ರ. ೧೪೫. ವೈಶಾಖ, ಮಾಧವ, ರಾಧ (ಪು)=ವೈಶಾಖ. ಜ್ಯೈಷ್ಠ, ಶುಕ್ರ=ಜ್ಯೈಷ್ಠ. ಶುಚಿ, ಆಷಾಢ (ಪು)=ಆಷಾಢ. ಶ್ರಾವಣ, ನಭಸ್, ಶ್ರಾವಣಿಕ (ಪು)=ಶ್ರಾವಣ. ೧೪೬-೧೪೭. ನಭಸ್ಯ, ಪ್ರೌಷ್ಠಪದ, ಭಾದ್ರ, ಭಾದ್ರಪದ (ಪು)=ಭಾದ್ರಪದ. ಆಶ್ವಿನ, ಇಷ, ಆಶ್ವಯುಜ (ಪು)=ಆಶ್ವಿನ. ಕಾರ್ತಿಕ, ಬಾಹುಲ, ಊರ್ಜ, ಕಾರ್ತಿಕಿಕ (ಪು)=ಕಾರ್ತಿಕ. ಹೇಮಂತ (ಪು)=ಮಾರ್ಗಶೀರ್ಷ ಪೌಷಮಾಸಗಳು ಸೇರಿದ ಋತು. ಶಿಶಿರ (ಪು. ನ)=ಮಾಘ ಫಾಲ್ಗುನಗಳು ಸೇರಿದ ಋತು.

೧೪೭-೧೪೮. ವಸಂತ, ಪುಷ್ಪಸಮಯ, ಸುರಭಿ (ಪು)=ಚೈತ್ರ ವೈಶಾಖಗಳು ಸೇರಿದ

ನಿದಾಘ ಉಷ್ಣೋಪಗಮ ಉಷ್ಣ ಊಷ್ಮಾಗಮಸ್ತಪಃ ।
ಸ್ತ್ರಿಯಾಂ ಪ್ರಾವೃಟ್ ಸ್ತ್ರಿಯಾಂ ಭೂಮ್ನಿ ವರ್ಷಾ ಅಥ ಶರತ್
ಸ್ತ್ರಿಯಾಮ್ ॥ ೧೪೮
ಷಡಮೀ ಋತವಃ ಪುಂಸಿ ಮಾರ್ಗಾದೀನಾಂ ಯುಗ್ಮೈಃ ಕ್ರಮಾತ್ ।
ಸಂವತ್ಸರೋ ವತ್ಸರೋಽಬ್ದೋ ಹಾಯನೋಽಸ್ತ್ರೀ ಶರತ್ಸಮಾಃ ॥ ೧೪೯
ಮಾಸೇನ ಸ್ಯಾದಹೋರಾತ್ರಃ ಪೈತ್ರೋ ವರ್ಷೇಣ ದೈವತಃ ।
ದಿವ್ಯೈರ್ವರ್ಷಸಹಸ್ರೈರ್ದ್ವಾದಶಭಿರ್ದೈವತಂ ಯುಗಮ್ ॥ ೧೫೦
ದೈವೇ ಯುಗಸಹಸ್ರೇ ದ್ವೇ ಬ್ರಾಹ್ಮಃ ಕಲ್ಪೌ ತು ತೌ ನೃಣಾಮ್ ।
ಮನ್ವಂತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ ॥ ೧೫೧
ಸಂವರ್ತಃ ಪ್ರಲಯಃ ಕಲ್ಪಃ ಕ್ಷಯಃ ಕಲ್ಪಾಂತ ಇತ್ಯಪಿ ।
ಅಸ್ತ್ರೀ ಪಂಕಂ ಪುಮಾನ್ ಪಾಪ್ಮಾ ಪಾಪಂ ಕಿಲ್ಬಿಷಕಲ್ಮಷಮ್ ॥ ೧೫೨
ಕಲುಷಂ ವೃಜಿನೈನೋಽಘ ಮಂಹೋದುರಿತದುಷ್ಕೃತಮ್ ।
ಸ್ಯಾದ್ಧರ್ಮಮಸ್ತ್ರಿಯಾಂ ಪುಣ್ಯಶ್ರೇಯಸೀ ಸುಕೃತಂ ವೃಷಃ ॥ ೧೫೩

---

ಋತು. ಗ್ರೀಷ್ಮ, ಊಷ್ಮಕ, ನಿದಾಘ, ಉಷ್ಣೋಪಗಮ, ಉಷ್ಣ, ಊಷ್ಮಾಗಮ, ತಪ (ಪು)=ಜ್ಯೇಷ್ಠ ಆಷಾಢಗಳು ಸೇರಿದ ಋತು. ಪ್ರಾವೃಷ್ (ಸ್ತ್ರೀ), ವರ್ಷಾ (ಸ್ತ್ರೀ. ನಿತ್ಯ ಬಹುವಚನ)=ಶ್ರಾವಣ ಭಾದ್ರಪದಗಳು ಸೇರಿದ ಋತು, ಮಳೆಗಾಲ. ಶರದ್ (ಸ್ತ್ರೀ)=ಆಶ್ವಿನ ಕಾರ್ತಿಕಗಳು ಸೇರಿದ ಋತು. ೧೪೯. ಹೀಗೆ ಹೇಮಂತಾದಿ ಋತುಗಳು ಮಾರ್ಗಶೀರ್ಷಾದಿ ಮಾಸದ್ವಯಗಳಿಗೆ ಒಂದೊಂದರಂತೆ ಆರು ಆಗುತ್ತವೆ. ಸಂವತ್ಸರ, ವತ್ಸರ, ಅಬ್ದ (ಪು), ಹಾಯನ (ಪು. ನ) ಶರದ್, ಸಮಾ (ಸ್ತ್ರೀ)=ಸಂವತ್ಸರ. ೧೫೦. ಮನುಷ್ಯ ಮಾನದಿಂದ ಒಂದು ತಿಂಗಳಿಗೆ ಪಿತೃಗಳ ಒಂದು ದಿನ. ಇದು ಪೈತ್ರ. (ಇದರಲ್ಲಿ ಶುಕ್ಲಪಕ್ಷ ಹಗಲು, ಕೃಷ್ಣಪಕ್ಷ ರಾತ್ರಿ). ಮನುಷ್ಯರ ಒಂದು ವರ್ಷಕ್ಕೆ ದೇವತೆಗಳ ಒಂದು ದಿನ. ಇದು ದೈವತ (ಇದರಲ್ಲಿ ಉತ್ತರಾಯಣ ಹಗಲು, ದಕ್ಷಿಣಾಯನ ರಾತ್ರಿ). ೧೫೧. ದೇವತೆಗಳ ಎರಡು ಸಾವಿರ ಯುಗಗಳಿಗೆ ಬ್ರಹ್ಮನ ಒಂದು ಅಹೋರಾತ್ರ. ಇದು ಬ್ರಾಹ್ಮ (ಒಂದು ಸಾವಿರ ಯುಗ ಹಗಲು, ಒಂದು ಸಾವಿರ ಯುಗ ರಾತ್ರಿ). ಇದು ಮನುಷ್ಯರಿಗೆ ಒಂದು ಕಲ್ಪ (ಪು). ಬ್ರಹ್ಮನ ಹಗಲು ಸ್ಥಿತಿಕಾಲ, ಬ್ರಹ್ಮನ ರಾತ್ರಿ ಪ್ರಳಯಕಾಲ. ಎಪ್ಪತ್ತೊಂದು ದಿವ್ಯಯುಗಗಳಿಗೆ ಒಂದು ಮನ್ವಂತರ[1] (ನ). ೧೫೨-೧೫೩. ಸಂವರ್ತ, ಪ್ರಲಯ, ಕಲ್ಪ, ಕ್ಷಯ, ಕಲ್ಪಾಂತ (ಪು)=ಪ್ರಳಯ.

---

[1] ಪರಿಶಿಷ್ಟವನ್ನು ನೋಡಿ.



ಮುತ್ಪ್ರೀತಿಃ ಪ್ರಮದೋ ಹರ್ಷಃ ಪ್ರಮೋದಾಮೋದಸಮ್ಮದಾಃ ।
ಸ್ಯಾದಾನಂದಥುರಾನಂದಶ್ಶರ್ಮಶಾತಸುಖಾನಿ ಚ ॥ ೧೫೪
ಶ್ವಃಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಲಂ ಶುಭಮ್ ।
ಭಾವುಕಂ ಭವಿಕಂ ಭವ್ಯಂ ಕುಶಲಂ ಕ್ಷೇಮಮಸ್ತ್ರಿಯಾಮ್ ॥ ೧೫೫
ಶಸ್ತಂ ಚಾಥ ತ್ರಿಷು ದ್ರವ್ಯೇ ಪಾಪಂ ಪುಣ್ಯಂ ಸುಖಾದಿ ಚ ।
ಮತಲ್ಲಿಕಾ ಮಚರ್ಚಿಕಾ ಪ್ರಕಾಂಡಮುದ್ಘತಲ್ಲಜೌ ॥ ೧೫೬
ಪ್ರಶಸ್ತವಾಚಕಾನ್ಯಮೂನ್ಯಯಶ್ಶುಭಾವಹೋ ವಿಧಿಃ ।
ದೈವಂ ದಿಷ್ಟಂ ಭಾಗಧೇಯಂ ಭಾಗ್ಯಂ ಸ್ತ್ರೀ ನಿಯತಿರ್ವಿಧಿಃ ॥ ೧೫೭
ಹೇತುರ್ನಾ ಕಾರಣಂ ಬೀಜಂ ನಿದಾನಂ ತ್ವಾದಿಕಾರಣಮ್ ।
ಕ್ಷೇತ್ರಜ್ಞ ಆತ್ಮಾ ಪುರುಷಃ ಪ್ರಧಾನಂ ಪ್ರಕೃತಿಃ ಸ್ತ್ರಿಯಾಮ್ ॥ ೧೫೮

---

ಪಂಕ, (ಪು.ನ), ಪಾಪ್ಮನ್ (ಪು), ಪಾಪ, ಕಿಲ್ಬಿಷ, ಕಲ್ಮಷ, ಕಲುಷ, ವೃಜಿನ, ಏನಸ್, ಏನೋನ್ಸ್=ಏನನ್ ಅಘನ್, ತಾಪ ಓಘ, ಅಂಹಸ್, ದುರಿತ, ದುಷ್ಕೃತ (ನ)=ಪಾಪ. ಧರ್ಮ (ಪು.ನ), ಪುಣ್ಯ, ಶ್ರೇಯಸ್, ಸುಕೃತ (ನ), ವೃಷ (ಪು)=ಧರ್ಮ, ಪುಣ್ಯ. ೧೫೪. ಮುದ್, ಪ್ರೀತಿ (ಸ್ತ್ರೀ), ಪ್ರಮದ, ಹರ್ಷ, ಪ್ರಮೋದ, ಆಮೋದ, ಸಂಮದ, ಆನಂದಥು, ಆನಂದ (ಪು), ಶರ್ಮನ್, ಸಾತ (ಶಾತ), ಸುಖ, (ನ)=ಸುಖ. ೧೫೫-೧೫೬. ಶ್ವಃಶ್ರೇಯಸ, ಶಿವ, ಭದ್ರ, ಕಲ್ಯಾಣ, ಮಂಗಲ, ಶುಭ, ಭಾವುಕ, ಭವಿಕ, ಭವ್ಯ, ಕುಶಲ (ನ), ಕ್ಷೇಮ (ಪು.ನ), ಶಸ್ತ (ನ)=ಶುಭ. ಪಾಪ, ಪುಣ್ಯ ಮತ್ತು ಸುಖದಿಂದ ಹಿಡಿದು ಶಸ್ತ ಶಬ್ದದವರೆಗೆ ಇರುವ ಶಬ್ದಗಳು ವಿಶೇಷಣವಾದಾಗ ವಿಶೇಷ್ಯನಿಘ್ನಗಳಾಗುತ್ತವೆ. ಉದಾ: ಪಾಪಃ ಪುರುಷ, ಪಾಪಾ ಸ್ತ್ರೀ, ಪಾಪಂ ಕುಲಮ್. ಸ್ತ್ರೀಲಿಂಗದಲ್ಲಿ ಕಲ್ಯಾಣಶಬ್ದವು ಕಲ್ಯಾಣೀ ಎಂದಾಗುತ್ತದೆ. ಉಳಿದವು ಆಕಾರಾಂತವಾಗುತ್ತವೆ. ಉದಾ: ಶಿವಾ, ಮಂಗಲಾ ಇತ್ಯಾದಿ. ೧೫೬-೧೫೭. ಮತಲ್ಲಿಕಾ, ಮಚರ್ಚಿಕಾ (ಸ್ತ್ರೀ), ಪ್ರಕಾಂಡ (ನ), ಉದ್ಘ, ತಲ್ಲಜ (ಪು)=ಇವು ಪ್ರಶಂಸಾ ಸೂಚಕಪದಗಳಾಗಿ ಶಬ್ದದ ಕಡೆಯಲ್ಲಿ ಬರುತ್ತವೆ. ನಿತ್ಯಸಮಾಸ. ಸ್ವತಂತ್ರವಾಗಿ ಇವುಗಳಿಗೆ ಪ್ರಯೋಗವಿಲ್ಲ. ಉದಾ:—ಪ್ರಶಸ್ತಃ ಪುರುಷಃ=ಪುರುಷಮತಲ್ಲಿಕಾ, ಪ್ರಶಸ್ತಾ ಗೌಃ=ಗೋಪ್ರಕಾಂಡಮ್. ಪ್ರಶಸ್ತಃ ಪಂಡಿತಃ=ಪಂಡಿತಪ್ರಕಾಂಡಮ್—ಪ್ರಕಾಂಡಶಬ್ದವು ಪುಲ್ಲಿಂಗದಲ್ಲಿಯೂ ಉಂಟು. ಅಯ (ಪು)=ಶುಭವನ್ನುಂಟುಮಾಡುವ ಕರ್ಮ. ದೈವ, ದಿಷ್ಟ, ಭಾಗಧೇಯ, ಭಾಗ್ಯ (ನ), ನಿಯತಿ (ಸ್ತ್ರೀ), ವಿಧಿಃ (ಪು)=ದೈವ, ಪ್ರಾಕ್ತನ ಶುಭಾಶುಭ ಕರ್ಮ. ೧೫೮. ಹೇತು (ಪು), ಕಾರಣ, ಬೀಜ (ನ)=ಕಾರಣ. ನಿದಾನ (ನ)=ಮುಖ್ಯ ಕಾರಣ. ಕ್ಷೇತ್ರಜ್ಞ,

ವಿಶೇಷಃ ಕಾಲಿಕೋಽವಸ್ಥಾ ಗುಣಾಸ್ಸತ್ತ್ವಂ ರಜಸ್ತಮಃ ।
ಜನುರ್ಜನನಜನ್ಮಾನಿ ಜನಿರುತ್ಪತ್ತಿರುದ್ಭವಃ ॥ ೧೫೯
ಪ್ರಾಣೀ ತು ಚೇತನೋ ಜನ್ಮೀ ಜಂತುಜನ್ಯುಶರೀರಿಣಃ ।
ಜಾತಿರ್ಜಾತಂ ಚ ಸಾಮಾನ್ಯಂ ವ್ಯಕ್ತಿಸ್ತು ಪೃಥಗಾತ್ಮತಾ ॥ ೧೬೦

ಇತಿ ಕಾಲವರ್ಗಃ

## ೫. ಧೀವರ್ಗಃ

ಚಿತ್ತಂ ತು ಚೇತೋ ಹೃದಯಂ ಸ್ವಾಂತಂ ಹೃನ್ಮಾನಸಂ ಮನಃ ।
ಬುದ್ಧಿರ್ಮನೀಷಾ ಧಿಷಣಾ ಧೀಃ ಪ್ರಜ್ಞಾ ಶೇಮುಷೀ ಮತಿಃ ॥ ೧೬೧
ಪ್ರೇಕ್ಷೋಪಲಬ್ಧಿಶ್ಚಿತ್ಸಂವಿತ್ಪ್ರತಿಪಜ್ಜ್ಞಪ್ತಿಚೇತನಾಃ ।
ಧೀರ್ಧಾರಣಾವತೀ ಮೇಧಾ ಸಂಕಲ್ಪಃ ಕರ್ಮ ಮಾನಸಮ್ ॥ ೧೬೨

---

ಆತ್ಮನ್, ಪುರುಷ (ಪು)=ಆತ್ಮ. ಪ್ರಧಾನ (ನ), ಪ್ರಕೃತಿ (ಸ್ತ್ರೀ)=ಸಾಂಖ್ಯರ ಪ್ರಕೃತಿ, ಗುಣ ಸಾಮ್ಯಾವಸ್ಥೆ, ಮಾಯೆ. ೧೫೯. ಅವಸ್ಥಾ (ಸ್ತ್ರೀ)=ಕಾಲದಿಂದ ಸಂಭವಿಸುವ ಯೌವನಾದ್ಯವಸ್ಥೆ. ಸತ್ತ್ವ, ರಜಸ್, ತಮಸ್, (ನ)=ಕ್ರಮವಾಗಿ ಮೂರು ಗುಣಗಳು. ಜನುಸ್, ಜನನ, ಜನ್ಮನ್ (ನ), ಜನಿ, ಉತ್ಪತ್ತಿ (ಸ್ತ್ರೀ), ಉದ್ಭವ (ಪು)=ಜನ್ಮ, ಉತ್ಪತ್ತಿ. ೧೬೦. ಪ್ರಾಣಿನ್, ಚೇತನ, ಜನ್ಮಿನ್, ಜಂತು, ಜನ್ಯು, ಶರೀರಿನ್ (ಪು)=ಪ್ರಾಣಿ. ಜಾತಿ (ಸ್ತ್ರೀ), ಜಾತ, ಸಾಮಾನ್ಯ (ನ)=ಜಾತಿ (Kind, Genus). ವ್ಯಕ್ತಿ (ಸ್ತ್ರೀ)=ವ್ಯಕ್ತಿ, ದ್ರವ್ಯ (Individual).

### ಧೀವರ್ಗಃ

೧೬೧-೧೬೨. ಚಿತ್ತ, ಚೇತಸ್, ಹೃದಯ, ಸ್ವಾಂತ, ಹೃದ್, ಮಾನಸ, ಮನಸ್ (ನ)=ಮನಸ್ಸು. ಬುದ್ಧಿ, ಮನೀಷಾ, ಧಿಷಣಾ, ಧೀ, ಪ್ರಜ್ಞಾ, ಶೇಮುಷೀಮತಿ, ಪ್ರೇಕ್ಷಾ, ಉಪಲಬ್ಧಿ, ಚಿತ್, ಸಂವಿದ್, ಪ್ರತಿಪದ್, ಜ್ಞಪ್ತಿ, ಚೇತನಾ (ಸ್ತ್ರೀ)=ಬುದ್ಧಿ, ಜ್ಞಾನ. ಮೇಧಾ (ಸ್ತ್ರೀ)=ಸ್ಮರಣಶಕ್ತಿಯುಳ್ಳ ಬುದ್ಧಿ (Retentive faculty). ಸಂಕಲ್ಪ (ಪು)=ಮನೋವ್ಯಾಪಾರ



ಚಿತ್ತಾಭೋಗೋ ಮನಸ್ಕಾರಶ್ಚರ್ಚಾ ಸಂಖ್ಯಾ ವಿಚಾರಣಾ ।
ಅಧ್ಯಾಹಾರಸ್ತರ್ಕ ಊಹೋ ವಿಚಿಕಿತ್ಸಾ ತು ಸಂಶಯಃ ॥ ೧೬೩
ಸಂದೇಹದ್ವಾಪರೌ ಚಾಥ ಸಮೌ ನಿರ್ಣಯನಿಶ್ಚಯೌ ।
ಮಿಥ್ಯಾದೃಷ್ಟಿರ್ನಾಸ್ತಿಕತಾ ವ್ಯಾಪಾದೋ ದ್ರೋಹಚಿಂತನಮ್ ॥ ೧೬೪
ಸಮೌ ಸಿದ್ಧಾಂತರಾದ್ಧಾಂತೌ ಭ್ರಾಂತಿರ್ಮಿಥ್ಯಾಮತಿರ್ಭ್ರಮಃ ।
ಸಮೌ ಸಂಕೇತಸಮಯೌ ಪ್ರತಿಪತ್ತಿರ್ವಿಹಸ್ತತಾ ॥ ೧೬೫
ಸಂವಿದಾಗೂಃ ಪ್ರತಿಜ್ಞಾನಂ ನಿಯಮಾಶ್ರವಸಂಶ್ರವಾಃ ।
ಅಂಗೀಕಾರಾಭ್ಯುಪಗಮ ಪ್ರತಿಶ್ರವಸಮಾಧಯಃ ॥ ೧೬೬
ಮೋಕ್ಷೇ ಧೀರ್ಜ್ಞಾನಮನ್ಯತ್ರ ವಿಜ್ಞಾನಂ ಶಿಲ್ಪಶಾಸ್ತ್ರಯೋಃ ।
ಮುಕ್ತಿಃ ಕೈವಲ್ಯನಿರ್ವಾಣಶ್ರೇಯೋನಿಃಶ್ರೇಯಸಾಮೃತಮ್ ॥ ೧೬೭
ಮೋಕ್ಷೋಽಪವರ್ಗೋಽಥಾಜ್ಞಾನಮವಿದ್ಯಾಹಂಮತಿಃ ಸ್ತ್ರಿಯಾಮ್ ।
ರೂಪಂ ಶಬ್ದೋ ಗಂಧರಸಸ್ಪರ್ಶಾಶ್ಚ ವಿಷಯಾ ಅಮೀ ॥ ೧೬೮

---

(Intention). ೧೬೩-೧೬೪. ಚಿತ್ತಾಭೋಗ, ಮನಸ್ಕಾರ (ಪು)=ಮನಸ್ಸಿನ ತತ್ಪರತೆ (Attention of the mind to its own feelings). ಚರ್ಚಾ, ಸಂಖ್ಯಾ, ವಿಚಾರಣಾ (ಸ್ತ್ರೀ)=ಮನಸ್ಸಿನಿಂದ ವಿಷಯ ಪರೀಕ್ಷಣೆ (Investigation ; Perusal), ಅಧ್ಯಾಹಾರ, ತರ್ಕ, ಊಹ (ಪು)=ಊಹೆ (Conjecture). ವಿಚಿಕಿತ್ಸಾ (ಸ್ತ್ರೀ), ಸಂಶಯ, ಸಂದೇಹ, ದ್ವಾಪರ (ಪು)=ಸಂಶಯ. ನಿರ್ಣಯ, ನಿಶ್ಚಯ (ಪು)=ನಿಶ್ಚಯ. ಮಿಥ್ಯಾದೃಷ್ಟಿ, ನಾಸ್ತಿಕತಾ (ಸ್ತ್ರೀ)=ಪರಲೋಕವಿಲ್ಲವೆಂಬ ಬುದ್ಧಿ (Atheism). ವ್ಯಾಪಾದ (ಪು), ದ್ರೋಹಚಿಂತನ (ನ)=ದ್ರೋಹಮಾಡಬೇಕೆಂಬ ದುರುದ್ದೇಶ (Malice). ೧೬೫. ಸಿದ್ಧಾಂತ, ರಾದ್ಧಾಂತ=ಸಾಧಿಸಿದ ನಿರ್ಣಯ. ಭ್ರಾಂತಿ, ಮಿಥ್ಯಾಮತಿ (ಸ್ತ್ರೀ), ಭ್ರಮ (ಪು)=ತಪ್ಪು ತಿಳಿವಳಿಕೆ. ಸಂಕೇತ, ಸಮಯ (ಪು)=ಶಾಸ್ತ್ರೀಯವಾದ ಸಂಕೇತ, ನಿಲುವು. ಪ್ರತಿಪತ್ತಿ (ಸ್ತ್ರೀ)=ವಿಶ್ವಾಸ, ನಂಬಿಕೆ. ವಿಹಸ್ತತಾ (ಸ್ತ್ರೀ)=ಕಂಗೆಡುವುದು, ದಿಕ್ಕು ತೋಚದಿರುವುದು. ೧೬೬. ಸಂವಿದ್, ಆಗೂ (ಸ್ತ್ರೀ), ಪ್ರತಿಜ್ಞಾನ (ನ), ನಿಯಮ, ಆಶ್ರವ, ಸಂಶ್ರವ, ಅಂಗೀಕಾರ, ಅಭ್ಯುಪಗಮ, ಪ್ರತಿಶ್ರವ, ಸಮಾಧಿ (ಪು)=ಅಂಗೀಕಾರ, ಒಪ್ಪಿಗೆ. ೧೬೭-೧೬೮. ಜ್ಞಾನ (ನ)=ಮೋಕ್ಷೋಪಯುಕ್ತವಾದ ತಿಳಿವು. ವಿಜ್ಞಾನ (ನ)=ಮೋಕ್ಷೋಪ ಯುಕ್ತವಲ್ಲದ ಶಿಲ್ಪ ಶಾಸ್ತ್ರಗಳ ತಿಳಿವು. ಮುಕ್ತಿ (ಸ್ತ್ರೀ), ಕೈವಲ್ಯ, ನಿರ್ವಾಣ, ಶ್ರೇಯಸ್, ನಿಃಶ್ರೇಯಸ, ಅಮೃತ

ಗೋಚರಾ ಇಂದ್ರಿಯಾರ್ಥಾಶ್ಚ ಹೃಷೀಕಂ ವಿಷಯೀಂದ್ರಿಯಮ್ ।
ಕರ್ಮೇಂದ್ರಿಯಂ ತು ಪಾಯ್ವಾದಿ ಮನೋನೇತ್ರಾದಿ ಧೀಂದ್ರಿಯಮ್ ॥ ೧೬೯
ತುವರಸ್ತು ಕಷಾಯೋಽಸ್ತ್ರೀ ಮಧುರೋ ಲವಣಃ ಕಟುಃ ।
ತಿಕ್ತೋಽಮ್ಲಶ್ಚ ರಸಾಃ ಪುಂಸಿ ತದ್ವತ್ಸು ಷಡಮೀ ತ್ರಿಷು ॥ ೧೭೦
ವಿಮರ್ದೋತ್ಥೇ ಪರಿಮಲೋ ಗಂಧೇ ಜನಮನೋಹರೇ ।
ಆಮೋದಸ್ಸೋಽತಿನಿರ್ಹಾರೀ ವಾಚ್ಯಲಿಂಗತ್ವಮಾಗುಣಾತ್ ॥ ೧೭೧
ಸಮಾಕರ್ಷೀ ತು ನಿರ್ಹಾರೀ ಸುರಭಿರ್ಘ್ರಾಣತರ್ಪಣಃ ।
ಇಷ್ಟಗಂಧಸ್ಸುಗಂಧಿಃ ಸ್ಯಾದಾಮೋದೀ ಮುಖವಾಸನಃ ॥ ೧೭೨

---

(ನ), ಮೋಕ್ಷ, ಅಪವರ್ಗ (ಪು)=ಮುಕ್ತಿ. ಅಜ್ಞಾನ (ನ), ಅವಿದ್ಯಾ, ಅಹಂಮತಿ (ಸ್ತ್ರೀ)=ಅಜ್ಞಾನ. ೧೬೮-೧೬೯. ರೂಪ (ನ), ಶಬ್ದ, ಗಂಧ, ರಸ, ಸ್ಪರ್ಶ (ಪು)=ಇವು ಐದು ಜ್ಞಾನೇಂದ್ರಿಯಗಳಿಂದ ತಿಳಿಯಬಹುದಾದ ವಿಷಯಗಳು. ಇವುಗಳಿಗೆ ವಿಷಯಗೋಚರ, ಇಂದ್ರಿಯಾರ್ಥ (ಪು) ಎಂದು ಹೆಸರು. ಹೃಷೀಕ, ವಿಷಯಿನ್, ಇಂದ್ರಿಯ (ನ)=ಇಂದ್ರಿಯ (Organ of Sense). ಕರ್ಮೇಂದ್ರಿಯ (ನ)=ಗುದ ಮೊದಲಾದ ಇಂದ್ರಿಯ[1]. ಧೀಂದ್ರಿಯ (ನ) ಮನಸ್ಸು, ನೇತ್ರ ಮೊದಲಾದ ಜ್ಞಾನೇಂದ್ರಿಯ.[2] ೧೭೦. ತುವರ, ಕಷಾಯ (ಪು)=ಒಗರು. ಮಧುರ (ಪು)=ಸಿಹಿ. ಲವಣ (ಪು)=ಉಪ್ಪು. ಕಟು (ಪು)=ಕಾರ. ತಿಕ್ತ (ಪು) = ಕಹಿ. ಅಮ್ಲ (ಪು)=ಹುಳಿ. ಇವು ಷಡ್ರಸಗಳು. ಇವು ವಿಶೇಷ್ಯನಿಘ್ನವಾದಾಗ ಮೂರು ಲಿಂಗಗಳಲ್ಲಿಯೂ ಇರುತ್ತವೆ : ಮಧುರಂ ಜಲಂ, ಮಧುರಾ ಶರ್ಕರಾ, ಮಧುರಃ ಇಕ್ಷುಃ. ಕಟು ಶಬ್ದವು ಸ್ತ್ರೀಲಿಂಗದಲ್ಲಿ ಕಟುಃ ಕಟ್ವೀ ಎಂದು ಎರಡು ರೂಪಗಳನ್ನು ಪಡೆಯುತ್ತದೆ. ೧೭೧. ಪರಿಮಲ (ಪು)=ಘರ್ಷಣದಿಂದ ಉದ್ಭವಿಸುವ ಚಂದನಾದಿ ಗಂಧ. ಆಮೋದ (ಪು)=ಅತ್ಯಂತ ಸುಗಂಧ. ಇಲ್ಲಿಂದ ಮುಂದೆ 'ಗುಣೇ ಶುಕ್ಲಾದಯಃ' ಎಂಬ ಶ್ಲೋಕದವರೆಗೆ—ಧೀವರ್ಗವು ಮುಗಿಯುವವರೆಗೆ ಇರುವ ಶಬ್ದಗಳು ವಿಶೇಷ್ಯನಿಘ್ನಗಳು. ೧೭೨. ಸಮಾಕರ್ಷಿನ್, ನಿರ್ಹಾರಿನ್ (ಪು. ಸ್ತ್ರೀ. ನ)=ದೂರ ವ್ಯಾಪಿಸುವ ಸುವಾಸನೆಯುಳ್ಳ ದ್ರವ್ಯ (ಸ್ತ್ರೀ. ಸಮಾಕರ್ಷಿಣೀ, ನಿರ್ಹಾರಿಣೀ), ಸುರಭಿ, ಘ್ರಾಣತರ್ಪಣ, ಇಷ್ಟಗಂಧ, ಸುಗಂಧಿ (ಪು. ಸ್ತ್ರೀ. ನ)=ಪ್ರಿಯವಾದ ಗಂಧವುಳ್ಳ ದ್ರವ್ಯ (ಸ್ತ್ರೀ. ಘ್ರಾಣತರ್ಪಣಾ, ಇಷ್ಟಗಂಧಾ).

---

[1] ಕರ್ಮೇಂದ್ರಿಯ=ವಾಕ್, ಪಾಣಿ, ಪಾದ, ಗುಹ್ಯ, ಗುದ.

[2] ಜ್ಞಾನೇಂದ್ರಿಯ=ಮನಸ್ಸು, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ನಾಸಿಕಾ.



ಪೂತಿಗಂಧಿಸ್ತು ದುರ್ಗಂಧೋ ವಿಸ್ರಂ ಸ್ಯಾದಾಮಗಂಧಿ ಯತ್ ।
ಶುಕ್ಲ ಶುಭ್ರಶುಚಿಶ್ವೇತವಿಶದಶ್ಯೇತಪಾಂಡರಾಃ ॥ ೧೭೩
ಅವದಾತಸ್ಸಿತೋ ಗೌರೋ ವಲಕ್ಷೋ ಧವಲೋಽರ್ಜುನಃ ।
ಹರಿಣಃ ಪಾಂಡುರಃ ಪಾಂಡುರೀಷತ್ಪಾಂಡುಸ್ತು ಧೂಸರಃ ॥ ೧೭೪
ಕೃಷ್ಣೇ ನೀಲಾಸಿತಶ್ಯಾಮಕಾಲಶ್ಯಾಮಲಮೇಚಕಾಃ ।
ಪೀತೋ ಗೌರೋ ಹರಿದ್ರಾಭಃ ಪಾಲಾಶೋ ಹರಿತೋ ಹರಿತ್ ॥ ೧೭೫
ಲೋಹಿತೋ ರೋಹಿತೋ ರಕ್ತಃ ಶೋಣಃ ಕೋಕನದಚ್ಛವಿಃ ।
ಅವ್ಯಕ್ತರಾಗಸ್ತ್ವರುಣಃ ಶ್ವೇತರಕ್ತಸ್ತು ಪಾಟಲಃ ॥ ೧೭೬
ಶ್ಯಾವಃಸ್ಯಾತ್ಕಪಿಶೋ ಧೂಮ್ರಧೂಮಲೌ ಕೃಷ್ಣಲೋಹಿತೇ ।
ಕಡಾರಃ ಕಪಿಲಃ ಪಿಂಗಪಿಶಂಗೌ ಕದ್ರುಪಿಂಗಲೌ ॥ ೧೭೭

---

ಆಮೋದಿನ್, ಮುಖವಾಸನ (ಪು. ಸ್ತ್ರೀ. ನ)=ಬಾಯನ್ನು ಸುಗಂಧಗೊಳಿಸುವ ತಾಂಬೂಲಾದಿ (ಸ್ತ್ರೀ. ಆಮೋದಿನೀ, ಮುಖವಾಸನಾ). ೧೭೩-೧೭೪. ಪೂತಿಗಂಧಿ, ದುರ್ಗಂಧ (ಪು. ಸ್ತ್ರೀ. ನ)=ದುರ್ವಾಸನೆಯುಳ್ಳ ವಸ್ತು (ಸ್ತ್ರೀ. ದುರ್ಗಂಧಾ). ವಿಸ್ರ, ಆಮಗಂಧಿ (ಪು. ಸ್ತ್ರೀ. ನ)=ಅಪಕ್ವವಾಗಿ ಕೆಟ್ಟ ವಾಸನೆಯುಳ್ಳ ವಸ್ತು (ಸ್ತ್ರೀ. ವಿಸ್ರಾ). ಶುಕ್ಲ, ಶುಭ್ರ, ಶುಚಿ, ಶ್ವೇತ, ವಿಶದ, ಶ್ಯೇತ, ಪಾಂಡರ, ಅವದಾತ, ಸಿತ, ಗೌರ, ವಲಕ್ಷ, ಧವಲ, ಅರ್ಜುನ (ಪು)=ಬಿಳಿಯ ಬಣ್ಣ, ಶುಭ್ರವರ್ಣ. ಹರಿಣ, ಪಾಂಡುರ, ಪಾಂಡು (ಪು)=ಕೊಂಚ ಹಳದಿ ಮಿಶ್ರವಾದ ಬಿಳುಪು. ಧೂಸರ (ಪು)=ಕೊಂಚ ಬಿಳುಪು (Grey). ೧೭೫. ಕೃಷ್ಣ, ನೀಲ, ಅಸಿತ, ಶ್ಯಾಮ, ಕಾಲ, ಶ್ಯಾಮಲ, ಮೇಚಕ (ಪು)=ಕಪ್ಪು. ಪೀತ, ಗೌರ, ಹರಿದ್ರಾಭ (ಪು)=ಹಳದಿ. ಪಾಲಾಶ, ಹರಿತ, ಹರಿತ್ (ಪು)=ಹಸಿರು. ೧೭೬. ರೋಹಿತ, ಲೋಹಿತ, ರಕ್ತ (ಪು)=ಕೆಂಪು. ಶೋಣ, ಕೋಕನದಚ್ಛವಿ (ಪು)=ಕೆಂದಾವರೆಯ ಬಣ್ಣ (Crimson). ಅವ್ಯಕ್ತರಾಗ, ಅರುಣ (ಪು)=ಎಳೆಗೆಂಪು (Reddish brown). ಶ್ವೇತರಕ್ತ, ಪಾಟಲ (ಪು)=ಕೆಂಪು ಬಿಳುಪು ಬೆರೆತಿರುವ ಬಣ್ಣ (Pale red). ೧೭೭. ಶ್ಯಾವ, ಕಪಿಶ (ಪು)= ಕಪ್ಪು ಹಳದಿ ಮಿಶ್ರವಾದ ಬಣ್ಣ (Brown). ಧೂಮ್ರ, ಧೂಮಲ, ಕೃಷ್ಣಲೋಹಿತ (ಪು)=ಕಪ್ಪು ಕೆಂಪು ಮಿಶ್ರವಾದ ಬಣ್ಣ (Dark red, Purple). ಕಡಾರ, ಕಪಿಲ, ಪಿಂಗ, ಪಿಶಂಗ, ಕದ್ರು, ಪಿಂಗಲ (ಪು)=ಪಿಂಗಳ ವರ್ಣ, ಗೋರೋಚನದ ಬಣ್ಣ (Tawny). ೧೭೮. ಚಿತ್ರ, ಕಿರ್ಮೀರ, ಕಲ್ಮಾಷ, ಶಬಲ, ಕರ್ಬುರ (ಪು)= ಚಿತ್ರವರ್ಣ. ಶುಕ್ಲಾದಿ ಶಬ್ದಗಳು ವರ್ಣವಾಚಕವಾದಾಗ ಪುಲ್ಲಿಂಗಗಳು.

ಚಿತ್ರಂ ಕಿರ್ಮೀರಕಲ್ಮಾಷಶಬಲೈತಾಶ್ಚ ಕರ್ಬುರೇ ।
ಗುಣೇ ಶುಕ್ಲಾದಯಃ ಪುಂಸಿ ಗುಣಿಲಿಂಗಾಸ್ತು ತದ್ವತಿ ॥ ೧೭೮

ಇತಿ ಧೀವರ್ಗಃ

## ೬. ವಾಗ್ವರ್ಗಃ

ಬ್ರಾಹ್ಮೀ ತು ಭಾರತೀ ಭಾಷಾ ಗೀರ್ವಾಗ್ವಾಣೀ ಸರಸ್ವತೀ ।
ವ್ಯಾಹಾರ ಉಕ್ತಿರ್ಲಪಿತಂ ಭಾಷಿತಂ ವಚನಂ ವಚಃ ॥ ೧೭೯
ಅಪಭ್ರಂಶೋಽಪಶಬ್ದಃ ಸ್ಯಾಚ್ಛಾಸ್ತ್ರೇ ಶಬ್ದಸ್ತು ವಾಚಕಃ ।
ತಿಙ್ಸುಬಂತಚಯೋ ವಾಕ್ಯಂ ಕ್ರಿಯಾ ವಾ ಕಾರಕಾನ್ವಿತಾ ॥ ೧೮೦
ಶ್ರುತಿಃ ಸ್ತ್ರೀ ವೇದ ಆಮ್ನಾಯಸ್ತ್ರಯೀ ಧರ್ಮಸ್ತು ತದ್ವಿಧಿಃ ।
ಸ್ತ್ರಿಯಾಮೃಕ್ಸಾಮಯಜುಷೀ ಇತಿ ವೇದಾಸ್ತ್ರಯಸ್ತ್ರಯೀ ॥ ೧೮೧

---

ವಿಶೇಷಣಗಳಾದಾಗ ತ್ರಿಲಿಂಗಗಳು. (ಸ್ತ್ರೀಲಿಂಗದಲ್ಲಿ ರೂಪವಿಶೇಷ:—ಶ್ಯೇತ=ಶ್ಯೇನೀ—ಶ್ಯೇತಾ, ಗೌರ=ಗೌರೀ, ಹರಿಣ=ಹರಿಣೀ, ಪಾಂಡು=ಪಾಂಡುಃ—ಪಾಂಡ್ವೀ, ಕಾಲ =ಕಾಲೀ, ರೋಹಿತ=ರೋಹಿತಾ—ರೋಹಿಣೀ, ಪಿಶಂಗ=ಪಿಶಂಗಾ—ಪಿಶಂಗೀ, ಕಲ್ಮಾಷ=ಕಲ್ಮಾಷೀ, ಏತ=ಏತಾ—ಏನೀ).

### ವಾಗ್ವರ್ಗ

೧೭೯. ಬ್ರಾಹ್ಮೀ, ಭಾರತೀ, ಭಾಷಾ, ಗಿರ್, ವಾಚ್, ವಾಣೀ, ಸರಸ್ವತೀ (ಸ್ತ್ರೀ)=ವಾಗ್ದೇವತೆ ; ವಚನ, ಮಾತು. ವ್ಯಾಹಾರ (ಪು), ಉಕ್ತಿ (ಸ್ತ್ರೀ), ಲಪಿತ, ಭಾಷಿತ, ವಚನ, ವಚಸ್ (ನ)=ವಚನ, ಮಾತು. ೧೮೦. ಅಪಭ್ರಂಶ, ಅಪಶಬ್ದ (ಪು)=ವ್ಯಾಕರಣ ವಿರುದ್ಧವಾದ ಅಸಾಧು ಶಬ್ದ. ಶಬ್ದ=ಸಾಧುಶಬ್ದ. ವಾಕ್ಯ (ನ)= ಪೂರ್ಣಾರ್ಥವನ್ನು ಕೊಡುವ ತಿಙಂತ ಅಥವಾ ಸುಬಂತಗಳ ಸಮುದಾಯ. ಉದಾ :— 'ಪಚತಿ ಭವತಿ' (ಪಾಕೋಭವತೀತ್ಯರ್ಥಃ), 'ಪ್ರಕೃತಿಸಿದ್ಧಮಿದಂ ಹಿ ಮಹಾತ್ಮನಾಮ್' ಅಥವಾ ಕಾರಕಾನ್ವಿತವಾದ ಕ್ರಿಯೆ ವಾಕ್ಯವೆನಿಸುವುದು. ಉದಾ:— ದೇವದತ್ತ ದಂಡಂ ಸ್ಪೃಶ ಹಸ್ತೇನ. ೧೮೧. ಶ್ರುತಿ (ಸ್ತ್ರೀ), ವೇದ, ಆಮ್ನಾಯ (ಪು), ತ್ರಯೀ (ಸ್ತ್ರೀ)=ವೇದ. ಧರ್ಮ=ವೇದವಿಹಿತವಾದ ಕರ್ಮ. ಋಚ್ (ಸ್ತ್ರೀ), ಸಾಮನ್, ಯಜುಸ್ (ನ)=ಇವು ಮೂರು ವೇದಗಳ ಬೇರೆ ಬೇರೆ



ಶಿಕ್ಷೇತ್ಯಾದಿ ಶ್ರುತೇರಂಗಮೋಂಕಾರಪ್ರಣವೌ ಸಮೌ ।
ಶಿಕ್ಷಾ ವ್ಯಾಕರಣಂ ಛಂದೋ ನಿರುಕ್ತಂ ಜ್ಯೋತಿಷಂ ತಥಾ ॥ ೧೮೨
ಕಲ್ಪಶ್ಚೇತಿ ಷಡಂಗಾನಿ ವೇದಸ್ಯಾಹುರ್ಮನೀಷಿಣಃ ।
ಇತಿಹಾಸಃ ಪುರಾವೃತ್ತಮುದಾತ್ತಾದ್ಯಾಸ್ತ್ರಯಃ ಸ್ವರಾಃ ॥ ೧೮೩
ಆನ್ವೀಕ್ಷಿಕೀ ದಂಡನೀತಿಸ್ತರ್ಕವಿದ್ಯಾರ್ಥಶಾಸ್ತ್ರಯೋಃ ।
ಆಖ್ಯಾಯಿಕೋಪಲಬ್ಧಾರ್ಥಾ ಪುರಾಣಂ ಪಂಚಲಕ್ಷಣಮ್ ॥ ೧೮೪
ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೇತಿ ಲಕ್ಷಣಾನಾಂ ತು ಪಂಚಕಮ್ ॥ ೧೮೫
ಪ್ರಬಂಧಃಕಲ್ಪನಾ ಕಥಾ ಪ್ರವಹ್ಲಿಕಾ ಪ್ರಹೇಲಿಕಾ ।
ಸ್ಮೃತಿಸ್ತು ಧರ್ಮಸಂಹಿತಾ ಸಮಾಹೃತಿಸ್ತು ಸಂಗ್ರಹಃ ॥ ೧೮೬
ಸಮಸ್ಯಾ ತು ಸಮಾಸಾರ್ಥಾ ಕಿಂವದಂತೀ ಜನಶ್ರುತಿಃ ।
ವಾರ್ತಾ ಪ್ರವೃತ್ತಿರ್ವೃತ್ತಾಂತ ಉದಂತಃ ಸ್ಯಾದಥಾಹ್ವಯಃ ॥ ೧೮೭
ಆಖ್ಯಾಹ್ವೇ ಅಭಿಧಾನಂ ಚ ನಾಮಧೇಯಂ ಚ ನಾಮ ಚ ।
ಹೂತಿರಾಕಾರಣಾಹ್ವಾನಂ ಸಂಹೂತಿರ್ಬಹುಭಿಃ ಕೃತಾ ॥ ೧೮೮

---

ಹೆಸರುಗಳು. ತ್ರಯೀ (ಸ್ತ್ರೀ)=ಈ ಮೂರು ವೇದಗಳು. ೧೮೨-೧೮೩. ಶಿಕ್ಷಾ ಮೊದಲಾದುದು ವೇದಾಂಗ. ಓಂಕಾರ, ಪ್ರಣವ (ಪು)=ಓಂಕಾರದ ಹೆಸರು. ವೇದಾಂಗಗಳು ಯಾವುವೆಂದರೇ : ಶಿಕ್ಷಾ (ಸ್ತ್ರೀ), ವ್ಯಾಕರಣ, ಛಂದಸ್, ನಿರುಕ್ತ, ಜ್ಯಾತಿಷ (ನ),ಕಲ್ಪ (ಪು) ಇವು ಆರು. ಇತಿಹಾಸ (ಪು), ಪುರಾವೃತ್ತ (ನ)=ಹಿಂದೆ ನಡೆದುದನ್ನು ತಿಳಿಸುವ ಭಾರತಾದಿ ಗ್ರಂಥ. ಉದಾತ್ತ, ಅನುದಾತ್ತ, ಸ್ವರಿತ (ಪು) ಇವು ಮೂರು ಸ್ವರಗಳು. ೧೮೪. ಆನ್ವೀಕ್ಷಿಕೀ (ಸ್ತ್ರೀ)=ತರ್ಕವಿದ್ಯೆ. ದಂಡನೀತಿ (ಸ್ತ್ರೀ)=ಅರ್ಥಶಾಸ್ತ್ರ. ಆಖ್ಯಾಯಿಕಾ (ಸ್ತ್ರೀ)= ತಿಳಿದಿರುವ ಸಂಗತಿಯನ್ನು ವಿವರಿಸುವ ಗ್ರಂಥವಿಶೇಷ. ಪುರಾಣ (ನ)= ಐದು ಲಕ್ಷಣಗಳಿರುವ ಗ್ರಂಥವಿಶೇಷ. ೧೮೫. ಸರ್ಗ, ಪ್ರತಿಸರ್ಗ, ವಂಶ,. ಮನ್ವಂತರಗಳು, ವಂಶ ಚರಿತೆ ಇವು ಪುರಾಣದ ಐದು ಲಕ್ಷಣಗಳು. ೧೮೬. ಕಥಾ=ಚರಿತೆಯಂತೆ ಕಲ್ಪಿಸಿದ ಪ್ರಬಂಧ. ಪ್ರವಹ್ಲಿಕಾ, ಪ್ರಹೇಲಿಕಾ (ಸ್ತ್ರೀ)= ಒಗಟು. ಸ್ಮೃತಿ, ಧರ್ಮಸಂಹಿತಾ (ಸ್ತ್ರೀ)=ಧರ್ಮಶಾಸ್ತ್ರ. ಸಮಾಹೃತಿ (ಸ್ತ್ರೀ) ಸಂಗ್ರಹ (ಪು)=ಸಂಗ್ರಹ. ೧೮೭-೧೮೮. ಸಮಸ್ಯಾ (ಸ್ತ್ರೀ)=ಕವಿಶಕ್ತಿ ಪರೀಕ್ಷಾರ್ಥವಾಗಿ ಶ್ಲೋಕವನ್ನು ಪೂರ್ಣಮಾಡಬೇಕೆಂದು ಕೊಡುವ ಶ್ಲೋಕ ಭಾಗ. ಕಿಂವದಂತೀ, ಜನಶ್ರುತಿ (ಸ್ತ್ರೀ)=ಕರ್ಣಾಕರ್ಣಿಕೆಯಾದ ಹೇಳಿಕೆ. ವಾರ್ತಾ, ಪ್ರವೃತ್ತಿ (ಸ್ತ್ರೀ), ವೃತ್ತಾಂತ, ಉದಂತ (ಪು)=ವಾರ್ತೆ,

ವಿವಾದೋ ವ್ಯವಹಾರಃ ಸ್ಯಾದುಪನ್ಯಾಸಸ್ತು ವಾಙ್ಮುಖಮ್ ।
ಉಪೋದ್ಘಾತ ಉದಾಹಾರಃ ಶಪನಂ ಶಪಥಃ ಪುಮಾನ್ ॥ ೧೮೯
ಪ್ರಶ್ನೋಽನುಯೋಗಃ ಪೃಚ್ಛಾ ಚ ಪ್ರತಿವಾಕ್ಯೋತ್ತರೇ ಸಮೇ ।
ಮಿಥ್ಯಾಭಿಯೋಗೋಽಭ್ಯಾಖ್ಯಾನಮಥ ಮಿಥ್ಯಾಭಿಶಂಸನಮ್ ॥ ೧೯೦
ಅಭಿಶಾಪಃ ಪ್ರಣಾದಸ್ತು ಶಬ್ದಃ ಸ್ಯಾದನುರಾಗಜಃ ।
ಯಶಃ ಕೀರ್ತಿಸ್ಸಮಜ್ಞಾ ಚ ಸ್ತವಃ ಸ್ತೋತ್ರಂ ಸ್ತುತಿರ್ನುತಿಃ ॥ ೧೯೧
ಆಮ್ರೇಡಿತಂ ದ್ವಿಸ್ತ್ರಿರುಕ್ತಮುಚ್ಚೈರ್ಘುಷ್ಟಂ ತು ಘೋಷಣಾ ।
ಕಾಕುಃ ಸ್ತ್ರಿಯಾಂ ವಿಕಾರೋ ಯಃ ಶೋಕಭೀತ್ಯಾದಿಭಿರ್ಧ್ವನೇಃ ॥ ೧೯೨
ಅವರ್ಣಾಕ್ಷೇಪನಿರ್ವಾದಪರಿವಾದಾಪವಾದವತ್ ।
ಉಪಕ್ರೋಶೋ ಜುಗುಪ್ಸಾ ಚ ಕುತ್ಸಾ ನಿಂದಾ ಚ ಗರ್ಹಣೇ ॥ ೧೯೩

---

ಸುದ್ದಿ. ಆಹ್ವಯ (ಪು), ಆಖ್ಯಾ, ಆಹ್ವಾ (ಸ್ತ್ರೀ), ಅಭಿಧಾನ, ನಾಮಧೇಯ, ನಾಮನ್ (ನ)=ಹೆಸರು. ಹೂತಿ, ಆಕಾರಣಾ (ಸ್ತ್ರೀ), ಆಹ್ವಾನ (ನ)=ಆಹ್ವಾನ, ಕರೆ. ಸಂಹೂತಿ (ಸ್ತ್ರೀ)=ಬಹುಜನಗಳಿಂದ ಬಂದ ಆಹ್ವಾನ. ೧೮೯. ವಿವಾದ, ವ್ಯವಹಾರ (ಪು)=ವಿವಾದ (Lawsuit). ಉಪನ್ಯಾಸ, ವಾಙ್ಮುಖ (ನ)=ಹೇಳಿಕೆ, ಭಾಷಣ. ಉಪೋದ್ಘಾತ, ಉದಾಹಾರ (ಪು)=ಪ್ರಕೃತೋಪಯುಕ್ತವಾದ ವಾಕ್ಯ. ಶಪನ (ನ), ಶಪಥ (ಪು)=ಶಪಥ, ಆಣೆ. ೧೯೦-೧೯೧. ಪ್ರಶ್ನ, ಅನುಯೋಗ (ಪು), ಪೃಚ್ಛಾ (ಸ್ತ್ರೀ)=ಪ್ರಶ್ನೆ. ಪ್ರತಿವಾಕ್ಯ, ಉತ್ತರ (ನ)=ಉತ್ತರ. ಮಿಥ್ಯಾಭಿಯೋಗ (ಪು), ಅಭ್ಯಾಖ್ಯಾನ (ನ)=ಸುಳ್ಳು ಆಪಾದನೆ (False Charge). ಮಿಥ್ಯಾಭಿಶಂಸನ (ನ), ಅಭಿಶಾಪ (ಪು)=ಅಪಪ್ರಚಾರ, ಸುಳ್ಳು ಸುದ್ದಿ ಹರಡುವುದು (False Slander). ಪ್ರಣಾದ (ಪು)=ಹರ್ಷೋದ್ಗಾರ. ಯಶಸ್ (ನ), ಕೀರ್ತಿ, ಸಮಜ್ಞಾ[1] (ಸ್ತ್ರೀ)=ಕೀರ್ತಿ, ಯಶಸ್ಸು. ಸ್ತವ (ಪು), ಸ್ತೋತ್ರ (ನ), ಸ್ತುತಿ, ನುತಿ (ಸ್ತ್ರೀ)=ಹೊಗಳಿಕೆ. ೧೯೨. ಆಮ್ರೇಡಿತ (ನ)=ಸಂಭ್ರಮಾದಿ ಗಳಿಂದ ಎರಡು ಮೂರು ಸಲ ಉಚ್ಚರಿಸಲ್ಪಟ್ಟ ಶಬ್ದ. ಉದಾ :—ಸರ್ಪ, ಸರ್ಪ. ಉಚ್ಚೈರ್ಘುಷ್ಟ (ನ), ಘೋಷಣಾ (ಸ್ತ್ರೀ) ಕೂಗಿ ಹೇಳುವುದು, ಸಾರಿ ಹೇಳುವುದು. ಕಾಕು (ಸ್ತ್ರೀ)=ಶೋಕ. ಭಯ ಮುಂತಾದವುಗಳಿಂದಾಗುವ ಧ್ವನಿ ವಿಕಾರ. ೧೯೩. ಅವರ್ಣ, ಆಕ್ಷೇಪ, ನಿರ್ವಾದ, ಪರಿವಾದ, ಅಪವಾದ, ಉಪಕ್ರೋಶ (ಪು), ಜುಗುಪ್ಸಾ, ಕುತ್ಸಾ, ನಿಂದಾ (ಸ್ತ್ರೀ), ಗರ್ಹಣ[2] (ನ)=ನಿಂದೆ.

[1] ಸಮಾಜ್ಞಾ, ಸಮಜ್ಯಾ ಎಂದು ಪಾಠಾಂತರವಿದೆ. [2]. ಗರ್ಹಣಾ (ಸ್ತ್ರೀ).



ಪಾರುಷ್ಯಮತಿವಾದಃ ಸ್ಯಾದ್ಭರ್ತ್ಸನಂ ತ್ವಪಕಾರಗೀಃ ।
ಯಸ್ಸನಿಂದ ಉಪಾಲಂಭಸ್ತತ್ರ ಸ್ಯಾತ್ಪರಿಭಾಷಣಮ್ ॥ ೧೯೪
ತತ್ರ ತ್ವಾಕ್ಷಾರಣಾ ಯಃ ಸ್ಯಾದಾಕ್ರೋಶೋ ಮೈಥುನಂ ಪ್ರತಿ ।
ಸ್ಯಾದಾಭಾಷಣಮಾಲಾಪಃ ಪ್ರಲಾಪೋಽನರ್ಥಕಂ ವಚಃ ॥ ೧೯೫
ಅನುಲಾಪೋ ಮುಹುರ್ಭಾಷಾ ವಿಲಾಪಃ ಪರಿದೇವನಮ್ ।
ವಿಪ್ರಲಾಪೋ ವಿರೋಧೋಕ್ತಿಸ್ಸಂಲಾಪೋ ಭಾಷಣಂ ಮಿಥಃ ॥ ೧೯೬
ಸುಪ್ರಲಾಪಸ್ಸುವಚನಮಪಲಾಪಸ್ತು ನಿಹ್ನವಃ ।
ಸಂದೇಶವಾಗ್ವಾಚಿಕಂ ಸ್ಯಾದ್ವಾಗ್ಭೇದಾಸ್ತು ತ್ರಿಷೂತ್ತರೇ ॥ ೧೯೭
ರುಶತೀ ವಾಗಕಲ್ಯಾಣೀ ಸ್ಯಾತ್ಕಲ್ಯಾ ತು ಶುಭಾತ್ಮಿಕಾ ।
ಅತ್ಯರ್ಥಮಧುರಂ ಸಾಂತ್ವಂ ಸಂಗತಂ ಹೃದಯಂಗಮಮ್ ॥ ೧೯೮
ನಿಷ್ಠುರಂ ಪರುಷಂ ಗ್ರಾಮ್ಯಮಶ್ಲೀಲಂ ಸೂನೃತಂ ಪ್ರಿಯೇ ।
ಸತ್ಯೇಽಥ ಸಂಕುಲಕ್ಲಿಷ್ಟೇ ಪರಸ್ಪರಪರಾಹತೇ ॥ ೧೯೯

---

೧೯೪. ಪಾರುಷ್ಯ (ನ), ಅತಿವಾದ (ಪು)=ಅಪ್ರಿಯವಾದ ಮಾತು. ಭರ್ತ್ಸನ (ನ), ಅಪಕಾರಗಿರ್ (ಸ್ತ್ರೀ)=ಬೆದರಿಕೆಯ ಮಾತು. ಉಪಾಲಂಭ (ಪು), ಪರಿಭಾಷಣ (ನ)= ಬಯ್ಯುವುದು. ೧೯೫. ಆಕ್ಷಾರಣಾ[1] (ಸ್ತ್ರೀ)=ಮೈಥುನಕ್ಕಾಗಿ ಹಂಬಲಿಸಿ ಕೂಗುವುದು. ಆಭಾಷಣ (ನ), ಆಲಾಪ (ಪು)=ಸಂಭಾಷಣೆ. ಪ್ರಲಾಪ (ಪು)=ವ್ಯರ್ಥವಾದ ಮಾತು (Prattle). ೧೯೬. ಅನುಲಾಪ (ಪು)=ಮತ್ತೆ ಮತ್ತೆ ಹೇಳುವುದು. ವಿಲಾಪ (ಪು), ಪರಿದೇವನ (ನ)=ಅಳುವುದು, ಗೋಳಾಡುವುದು (Lamentation). ವಿಪ್ರಲಾಪ (ಪು), ವಿರೋಧೋಕ್ತಿ (ಸ್ತ್ರೀ)=ಅನ್ಯೋನ್ಯ ವಿರುದ್ಧವಾದ ಮಾತು. ಸಂಲಾಪ (ಪು)=ಅನ್ಯೋನ್ಯ ಸಂಭಾಷಣೆ (Conversation). ೧೯೭. ಸುಪ್ರಲಾಪ (ಪು)=ಒಳ್ಳೆಯ ಮಾತು. ಅಪಲಾಪ, ನಿಹ್ನವ (ಪು)=ಅಲ್ಲಗಳೆಯುವುದು. ಸಂದೇಶವಾಚ್ (ಸ್ತ್ರೀ) ವಾಚಿಕ (ನ)=ಹೇಳಿಕಳಿಸುವ ಮಾತು (Message). ಮುಂದೆ ಹೇಳುವ ಶಬ್ದಗಳು ಲಿಂಗತ್ರಯದಲ್ಲಿ ಇರುತ್ತವೆ. ೧೯೮. ರುಶತೀ (ಸ್ತ್ರೀ)=ಅಶುಭವಾಕ್ಯ (ರುಶನ್ ಶಬ್ದಃ, ರುಶತ್ ವಚನಮ್). ಕಲ್ಯಾ (ಸ್ತ್ರೀ)=ಶುಭವಾಕ್ಯ. ಸಾಂತ್ವ (ನ)=ಬಹಳ ಒಳ್ಳೆಯ ಮಾತು. ಸಂಗತ (ನ)=ಮನಸ್ಸಿಗೆ ಒಪ್ಪುವ ಮಾತು.

೧೯೯. ನಿಷ್ಠುರ, ಪರುಷ (ನ)=ಒರಟು ಮಾತು. ಗ್ರಾಮ್ಯ, ಅಶ್ಲೀಲ (ನ)=ಭಂಡತನದ

[1] ಆಕ್ಷಾರಣ ಎಂದು ನಪುಂಸಕವೂ ಉಂಟು.

ಲುಪ್ತವರ್ಣಪದಂ ಗ್ರಸ್ತಂ ನಿರಸ್ತಂ ತ್ವರಿತೋದಿತಮ್ ।
ಅಂಬೂಕೃತಂ ಸನಿಷ್ಠೀವಮಬದ್ಧಂ ಸ್ಯಾದನರ್ಥಕಮ್ ॥ ೨೦೦
ಅನಕ್ಷರಮವಾಚ್ಯಂ ಸ್ಯಾದಾಹತಂ ತು ಮೃಷಾರ್ಥಕಮ್ ।
ಅಥ ಮ್ಲಿಷ್ಟಮವಿಸ್ಪಷ್ಟಂ ವಿತಥಂ ತ್ವನೃತಂ ವಚಃ ॥ ೨೦೧
ಸೋಲ್ಲುಂಠನಂ ತು ಸೋತ್ಪ್ರಾಸಂ ಮಣಿತಂ ರತಿಕೂಜಿತಮ್ ।
ಸತ್ಯಂ ತಥ್ಯಮೃತಂ ಸಮ್ಯಗಮೂನಿ ತ್ರಿಷು ತದ್ವತಿ ॥ ೨೦೨

ಇತಿ ವಾಗ್ವರ್ಗಃ

## ೭. ಶಬ್ದಾದಿವರ್ಗಃ

ಶಬ್ದೇ ನಿನಾದನಿನದಧ್ವನಿಧ್ವಾನರವಸ್ವನಾಃ ।
ಸ್ವಾನನಿರ್ಘೋಷನಿರ್ಹ್ರಾದನಾದನಿಸ್ವಾನನಿಸ್ವನಾಃ ।

---

ಮಾತು. ಸೂನೃತ (ನ)=ಸತ್ಯವೂ ಪ್ರಿಯವೂ ಆದ ಮಾತು. ಸಂಕುಲ, ಕ್ಲಿಷ್ಟ (ನ)=ಅನನ್ವಿತವೂ ವಿರುದ್ಧವೂ ಆದ ಮಾತು. ೨೦೦. ಗ್ರಸ್ತ (ನ)=ಅಕ್ಷರವನ್ನೋ ಶಬ್ದವನ್ನೋ ನುಂಗಿ ಆಡುವ ಮಾತು. ನಿರಸ್ತ (ನ)=ತ್ವರೆಯಿಂದ ಹೇಳುವ ಮಾತು. ಅಂಬೂಕೃತ (ನ)=ಉಗುಳು ತೂರುವಂತೆ ಆಡುವ ಮಾತು. ಅಬದ್ಧ (ನ)=ಅರ್ಥಶೂನ್ಯವಾದ ಮಾತು. ೨೦೧. ಅನಕ್ಷರ, ಅವಾಚ್ಯ (ನ)=ಹೇಳಬಾರದ ನಿಂದಾವಾಕ್ಯ. ಆಹತ (ನ)=ಅಸಂಭಾವಿತವಾದ ಸುಳ್ಳು ಮಾತು. ಮ್ಲಿಷ್ಟ, ಅವಿಸ್ಪಷ್ಟ (ನ)=ಅಸ್ಫುಟವಾದ ವಚನ. ವಿತಥ, ಅನೃತ (ನ)=ಸುಳ್ಳು. ೨೦೨. ಸೋಲ್ಲುಂಠನ, ಸೋತ್ಪ್ರಾಸ (ನ)=ಚುಚ್ಚುಮಾತು, ಅಣಕ. ಮಣಿತ (ನ)=ರತಿಕಾಲದ ಶಬ್ದ (Murmuring sound uttered at cohabitation). ಸತ್ಯ, ತಥ್ಯ, ಋತ, ಸಮ್ಯಚ್ (ನ)= ಸತ್ಯ (ಸಮ್ಯಕ್, ಸಮ್ಯಂಚೌ, ಸಮ್ಯಂಚಃ (ಪು), ಸಮೀಚೀ (ಸ್ತ್ರೀ). ರುಶತೀ ಶಬ್ದದಿಂದ ಹಿಡಿದು ಸಮ್ಯಕ್ ಶಬ್ದದವರೆಗೆ ವಿಶೇಷ್ಯ ನಿಘ್ನಗಳು. ಕಲ್ಯಾ ಮೊದಲಾದವು—ಕಲ್ಯಾ (ಸ್ತ್ರೀ), ಕಲ್ಯಃ (ಪು), ಕಲ್ಯಂ (ನ) ಎಂಬುದಾಗಿ ಮೂರು ಲಿಂಗಗಳಲ್ಲಿಯೂ ರೂಪಗಳನ್ನು ಪಡೆಯುತ್ತವೆ.

### ಶಬ್ದಾದಿವರ್ಗ

೨೦೩—೨೦೪. ಶಬ್ದ, ನಿನಾದ, ನಿನದ, ಧ್ವನಿ, ಧ್ವಾನ, ರವ, ಸ್ವನ, ಸ್ವಾನ, ನಿರ್ಘೋಷ, ನಿರ್ಹ್ರಾದ, ನಾದ, ನಿಸ್ವಾನ, ನಿಸ್ವನ, ಆರವ, ಆರಾವ, ಸಂರಾವ, ವಿರಾವ (ಪು)=ಶಬ್ದ



ಆರವಾರಾವಸಂರಾವವಿರಾವಾ ಅಥ ಮರ್ಮರಃ ॥ ೨೦೩
ಸ್ವನಿತೇ ವಸ್ತ್ರಪರ್ಣಾನಾಂ ಭೂಷಣಾನಾಂ ತು ಶಿಂಜಿತಮ್ ।
ನಿಕ್ವಾಣೋ ನಿಕ್ವಣಃ ಕ್ವಾಣಃ ಕ್ವಣಃ ಕ್ವಣನಮಿತ್ಯಪಿ ॥ ೨೦೪
ವೀಣಾಯಾಃ ಕ್ವಣಿತೇ ಪ್ರಾದೇಃ ಪ್ರಕ್ವಾಣಪ್ರಕ್ವಣಾದಯಃ ।
ಕೋಲಾಹಲಃ ಕಲಕಲಸ್ತಿರಶ್ಚಾಂ ವಾಶಿತಂ ರುತಮ್ ॥ ೨೦೫
ಸ್ತ್ರೀ ಪ್ರತಿಶ್ರುತ್ಪ್ರತಿಧ್ವಾನೇ ಗೀತಂ ಗಾನಮಿಮೇ ಸಮೇ ।

ಇತಿ ಶಬ್ದಾದಿವರ್ಗಃ

## ೮. ನಾಟ್ಯವರ್ಗಃ

ನಿಷಾದರ್ಷಭಗಾಂಧಾರಷಡ್ಜಮಧ್ಯಮಧೈವತಾಃ ॥ ೨೦೬
ಪಂಚಮಶ್ಚೇತ್ಯಮೀ ಸಪ್ತ ತಂತ್ರೀಕಂಠೋತ್ಥಿತಾಃ ಸ್ವರಾಃ ।
ಷಡ್ಜಂ ಮಯೂರೋ ವದತಿ ಗಾವಸ್ತ್ವೃಷಭಭಾಷಿಣಃ । ೨೦೭
ಅಜಾವಿಕಂ ತು ಗಾಂಧಾರಂ ಕ್ರೌಂಚಃ ಕ್ವಣತಿ ಮಧ್ಯಮಮ್ ।
ಪುಷ್ಪಸಾಧಾರಣೇ ಕಾಲೇ ಪಿಕಃ ಕೂಜತಿ ಪಂಚಮಮ್ ॥ ೨೦೮

---

(Sound). ಮರ್ಮರ (ಪು)=ಬಟ್ಟೆ ಮತ್ತು ಎಲೆಗಳ ಮರ್ಮರ ಶಬ್ದ. ಶಿಂಜಿತ (ನ)=ಒಡವೆಗಳ ಶಬ್ದ (Tinkling Sound.) ನಿಕ್ವಾಣ, ನಿಕ್ವಣ, ಕ್ವಾಣ, ಕ್ವಣ (ಪು), ಕ್ವಣನ (ನ)=ವಾದ್ಯ ಮೊದಲಾದವುಗಳ ಮಧುರಧ್ವನಿ. ೨೦೫-೨೦೬. ಪ್ರಕ್ವಾಣ, ಪ್ರಕ್ವಣ, (ಉಪಕ್ವಣ, ಅನುಕ್ವಣ) (ಪು)=ವೀಣಾಧ್ವನಿ. ಕೋಲಾಹಲ, ಕಲಕಲ (ಪು)=ಗುಂಪಿನಲ್ಲಿ ಹುಟ್ಟುವ ದೊಡ್ಡ ಶಬ್ದ. ವಾಶಿತ, ರುತ (ನ)=ಮೃಗ ಪಕ್ಷಿ ಮೊದಲಾದ ಪ್ರಾಣಿಗಳ ಶಬ್ದ. ಪ್ರತಿಶ್ರುತ್ (ಸ್ತ್ರೀ), ಪ್ರತಿಧ್ವಾನ (ಪು)=ಪ್ರತಿಧ್ವನಿ. (Echo). ಗೀತ, ಗಾನ (ನ)=ಹಾಡು, ಸಂಗೀತ.

### ನಾಟ್ಯವರ್ಗ

೨೦೬-೨೦೭. ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ (ಪು)= ಇವು ಏಳು ತಂತಿಯಿಂದಲೂ ಪ್ರಾಣಿವರ್ಗದ ಕಂಠದಿಂದಲೂ ಉತ್ಪನ್ನವಾಗುವ ಬೇರೆ ಬೇರೆ ಸ್ವರಗಳು. ನವಿಲು ಷಡ್ಜಸ್ವರದಲ್ಲಿ ಕೂಗುತ್ತದೆ. ಎತ್ತುಗಳು ಋಷಭದಲ್ಲಿ ಗುಟರು ಹಾಕುತ್ತವೆ. ೨೦೮. ಆಡು ಕುರಿಗಳು ಗಾಂಧಾರದಲ್ಲಿಯೂ, ಕ್ರೌಂಚಪಕ್ಷಿಯು ಮಧ್ಯಮದಲ್ಲಿಯೂ ಕೂಗುತ್ತವೆ. ವಸಂತಕಾಲದಲ್ಲಿ ಕೋಗಿಲೆಯು ಪಂಚಮಸ್ವರದಲ್ಲಿ

ಧೈವತಂ ಹೇಷತೇ ವಾಜೀ ನಿಷಾದಂ ಬೃಂಹತೇ ಗಜಃ ।
ಮಯೂರಾದಯ ಏತೇ ಹಿ ಮತ್ತಾ ಗಾಯಂತಿ ಪಂಚಮಮ್ ॥ ೨೦೯
ಕಾಕಲೀ ತು ಕಲೇ ಸೂಕ್ಷ್ಮೇ ಧ್ವನೌ ತು ಮಧುರಾಽಸ್ಫುಟೇ ।
ಕಲೋ ಮಂದ್ರಸ್ತು ಗಂಭೀರೇ ತಾರೋಽತ್ಯುಚ್ಚೈಸ್ತ್ರಯಸ್ತ್ರಿಷು ॥ ೨೧೦
ಸಮನ್ವಿತಲಯಸ್ತ್ವೇಕತಾಲೋ ವೀಣಾ ತು ವಲ್ಲಕೀ ।
ವಿಪಂಚೀ ಸಾ ತು ತಂತ್ರೀಭಿಸ್ಸಪ್ತಭಿಃ ಪರಿವಾದಿನೀ ॥ ೨೧೧
ತತಂ ವೀಣಾದಿಕಂ ವಾದ್ಯಮಾನದ್ಧಂ ಮುರಜಾದಿಕಮ್ ।
ವಂಶಾದಿಕಂ ತು ಸುಷಿರಂ ಕಾಂಸ್ಯತಾಲಾದಿಕಂ ಘನಮ್ ॥ ೨೧೨
ಚತುರ್ವಿಧಮಿದಂ ವಾದ್ಯವಾದಿತ್ರಾತೋದ್ಯನಾಮಕಮ್ ।
ಮೃದಂಗಾ ಮುರಜಾ ಭೇದಾಸ್ತ್ವಂಕ್ಯಾಲಿಂಗ್ಯೋರ್ಧ್ವಕಾಸ್ತ್ರಯಃ ॥ ೨೧೩
ಸ್ಯಾದಶಃ ಪಟಹೋ ಢಕ್ಕಾ ಭೇರೀ ಸ್ತ್ರೀ ದುಂದುಭಿಃ ಪುಮಾನ್ ।
ಆನಕಃ ಪಟಹೋಽಸ್ತ್ರೀಸ್ಯಾತ್ಕೋಣೋ ವೀಣಾದಿವಾದನಮ್ ॥ ೨೧೪

---

ಹಾಡುತ್ತದೆ. ೨೦೯. ಕುದುರೆಯು ಧೈವತದಲ್ಲಿಯೂ ಆನೆಯು ನಿಷಾದದಲ್ಲಿಯೂ ಶಬ್ದಮಾಡುತ್ತವೆ. ನವಿಲು ಮೊದಲಾದ ಹಕ್ಕಿಗಳು ಮದಿಸಿದಾಗ ಪಂಚಮಸ್ವರದಲ್ಲಿ ಹಾಡುವುದುಂಟು. ೨೧೦. ಕಾಕಲೀ (ಸ್ತ್ರೀ)=ಸೂಕ್ಷ್ಮವಾದ ಸ್ಪಷ್ಟ ಮಧುರಧ್ವನಿ. ಕಲ (ಪು)=ಅವ್ಯಕ್ತ ಮಧುರಧ್ವನಿ. ಮಂದ್ರ (ಪು)=ಗಂಭೀರವಾದ ಮೇಘಾದಿಗಳ ಧ್ವನಿ. ತಾರ (ಪು)=ಗಟ್ಟಿಯಾದ ಧ್ವನಿ. ಕಲ, ಮಂದ್ರ, ತಾರ—ಈ ಮೂರು ವಿಶೇಷ್ಯನಿಘ್ನಗಳಾಗಿ ಲಿಂಗತ್ರಯದಲ್ಲಿರುತ್ತವೆ. ೨೧೧. ಏಕತಾಲ (ಪು)=ನೃತ್ಯಗೀತವಾದ್ಯಗಳಿಂದ ಸಮತೆ ಹೊಂದಿದ ಧ್ವನಿ. ವೀಣಾ, ವಲ್ಲಕೀ, ವಿಪಂಚೀ (ಸ್ತ್ರೀ)=ವೀಣೆ. ಪರಿವಾದಿನೀ (ಸ್ತ್ರೀ)=ಏಳು ತಂತಿಗಳಿರುವ ವೀಣೆ (ಸತಾರ್). ೨೧೨. ತತ (ನ)=ವೀಣೆ ಮೊದಲಾದ ತಂತ್ರೀವಾದ್ಯ (ಸೈರಂಧ್ರೀ, ರಾವಣ ಹಸ್ತ, ಕಿಂನರಾದಿವಾದ್ಯ). ಆನದ್ಧ (ನ)=ಮದ್ದಳೆ ಮೊದಲಾದ ಚರ್ಮ ವಾದ್ಯ (ತಬಲ, ಭೇರಿ ಮೊದಲಾದ ವಾದ್ಯ). ಸುಷಿರ (ನ)=ಕೊಳಲು, ಕಹಳೆ ಮೊದಲಾದ ಮುಖವಾದ್ಯ. ಘನ (ನ)=ಕಂಚಿನ ತಾಳ, ಘಂಟೆ ಮೊದಲಾದದ್ದು. ೨೧೩. ವಾದ್ಯ, ವಾದಿತ್ರ, ಆತೋದ್ಯ (ನ)=ತತ ಮೊದಲಾದ ನಾಲ್ಕು ಬಗೆಯ ವಾದ್ಯ. ಮೃದಂಗ, ಮುರಜ (ಪು)=ಮದ್ದಳೆ. ಅಂಕ್ಯ, ಆಲಿಂಗ್ಯ, ಊರ್ಧ್ವಕ (ಪು)=ಇವು ಮೂರು ಮದ್ದಳೆಯ ಭೇದಗಳು. ೨೧೪. ಯಶಃ ಪಟಹ (ಪು), ಢಕ್ಕಾ (ಸ್ತ್ರೀ)=ಢವಣೆ, ಗಿಡಬುಡಕಿ. ಭೇರೀ (ಸ್ತ್ರೀ), ದುಂದುಭಿ (ಪು)=ನಗಾರಿ.



ವೀಣಾದಂಡಃ ಪ್ರವಾಲಃ ಸ್ಯಾತ್ಕಕುಭಸ್ತು ಪ್ರಸೇವಕಃ ।
ಕೋಲಂಬಕಸ್ತು ಕಾಯೋಽಸ್ಯಾ ಉಪನಾಹೋ ನಿಬಂಧನಮ್ ॥ ೨೧೫
ವಾದ್ಯಪ್ರಭೇದಾ ಡಮರುಮಡ್ಡುಡಿಂಡಿಮಝರ್ಝರಾಃ ।
ಮರ್ದಲಃ ಪಣವೋಽನ್ಯೇ ಚ ನರ್ತಕೀ ಲಾಸಿಕಾ ಸಮೇ ॥ ೨೧೬
ವಿಲಂಬಿತಂ ದ್ರುತಂ ಮಧ್ಯಂ ತತ್ತ್ವಮೋಘೋ ಘನಂ ಕ್ರಮಾತ್ ।
ತಾಲಃ ಕಾಲಕ್ರಿಯಾಮಾನಂ ಲಯಸ್ಸಾಮ್ಯಮಥಾಸ್ತ್ರಿಯಾಮ್ ॥ ೨೧೭
ತಾಂಡವಂ ನಟನಂ ನಾಟ್ಯಂ ಲಾಸ್ಯಂ ನೃತ್ಯಂ ಚ ನರ್ತನಮ್ ।
ತೌರ್ಯತ್ರಿಕಂ ನೃತ್ತಗೀತವಾದ್ಯಂ ನಾಟ್ಯಮಿದಂ ತ್ರಯಮ್ ॥ ೨೧೮
ಭ್ರಕುಂಸಶ್ಚ ಭ್ರುಕುಂಸಶ್ಚ ಭ್ರೂಕುಂಸಶ್ಚೇತಿ ನರ್ತಕಃ ।
ಸ್ತ್ರೀವೇಷಧಾರೀ ಪುರುಷೋ ನಾಟ್ಯೋಕ್ತೌ ಗಣಿಕಾಜ್ಜುಕಾ ॥ ೨೧೯

---

ಆನಕ (ಪು), ಪಟಹ (ಪು. ನ)= ತಮಟೆ. ಕೋಣ (ಪು)=ವೀಣೆ ಮೊದಲಾದ್ದನ್ನು ಬಾರಿಸಲು ಉಗುರಿಗೆ ಸಿಕ್ಕಿಸಿಕೊಳ್ಳುವ ನಕ್ಕಿ ಮೊದಲಾದ ವಿವಿಧ ಸಾಧನ. ೨೧೫. ವೀಣಾದಂಡ, ಪ್ರವಾಲ (ಪು)=ವೀಣೆಯ ದಂಡಿಗೆ ತೋಳು (Neck of a lute). ಕಕುಭ, ಪ್ರಸೇವಕ (ಪು)=ವೀಣಾ ದಂಡದ ಕೆಳಗಿರುವ ಬುರುಡೆ. ಕೋಲಂಬಕ (ಪು)=ತಂತ್ರೀಹೀನವಾದ ವೀಣೆಯ ಶರೀರ. ಉಪನಾಹ (ಪು), ನಿಬಂಧನ (ನ)=ವೀಣೆಯ ತಂತಿಯನ್ನು ಬಿಗಿಯುವ ಬಿರಡೆ. ೨೧೬. ಡಮರು, ಮಡ್ಡು, ಡಿಂಡಿಮ, ಝರ್ಝರ, ಮರ್ದಲ, ಪಣವ (ಪು)=ಬಡಿಯುವ ವಾದ್ಯದ ನಾನಾಭೇದಗಳು. ನರ್ತಕೀ, ಲಾಸಿಕಾ (ಸ್ತ್ರೀ)=ನರ್ತಕಿ (ಪುಲ್ಲಿಂಗದಲ್ಲಿ ನರ್ತಕ, ಲಾಸಕ).

೨೧೭. ತತ್ತ್ವ (ನ)=ಮೆಲ್ಲಗೆ (ವಿಲಂಬಿತವಾಗಿ) ನಡೆಯುವ ನೃತ್ಯಗೀತವಾದ್ಯಗಳು (ಈ ಅರ್ಥದಲ್ಲಿ ತತ್ವ, ತತ್ತ್ವ ಎಂದು ಎರಡು ಬಗೆಯಲ್ಲಿ ಬರೆಯಬಹುದು.) ಓಘ (ಪು)=ಬೇಗ ಬೇಗನೆ ನಡೆಯುವ ನೃತ್ಯಾದಿ. ಘನ (ನ)=ಮಧ್ಯಸ್ಥವೇಗದಲ್ಲಿ ನಡೆಯುವ ನೃತ್ಯಾದಿ. ತಾಲ (ಪು)=ಸಂಗೀತದಲ್ಲಿ ಕಾಲಕ್ರಿಯೆಗಳನ್ನು ನಿಯಮಿಸುವ ಸಾಧನ. ಲಯ (ಪು)=ಗೀತ, ವಾದ್ಯ, ಪಾದನ್ಯಾಸಾದಿಗಳಲ್ಲಿ ಕಾಲಕ್ರಿಯೆಗಳ ಹೊಂದಾಣಿಕೆ. ೨೧೮. ತಾಂಡವ (ಪು.ನ), ನಟನ, ನಾಟ್ಯ, ಲಾಸ್ಯ, ನೃತ್ಯ, ನರ್ತನ (ನ)=ನೃತ್ಯ, ಕುಣಿತ. ತೌರ್ಯತ್ರಿಕ, ನಾಟ್ಯ (ನ)=ನೃತ್ಯ ಗೀತ ವಾದ್ಯಗಳ ಸಮುದಾಯ. ೨೧೯. ಭ್ರಕುಂಸ, ಭ್ರುಕುಂಸ, ಭ್ರೂಕುಂಸ (ಪು)=ಸ್ತ್ರೀವೇಷ ವನ್ನು ಧರಿಸಿ ಅಭಿನಯಿಸುವ ಗಂಡಸು. ಮುಂದೆ 'ಅಂಗಹಾರ' ಶಬ್ದದವರೆಗೆ ಇರುವ ಶಬ್ದಗಳು ನಾಟ್ಯಶಾಸ್ತ್ರದಲ್ಲಿ ಪಾರಿಭಾಷಿಕವಾದವುಗಳು. ಅಜ್ಜುಕಾ (ಸ್ತ್ರೀ)=ವೇಶ್ಯೆ.

ಭಗಿನೀಪತಿರಾವುತ್ತೋ ಭಾವೋ ವಿದ್ವಾನಥಾವುಕಃ ।
ಜನಕೋ ಯುವರಾಜಸ್ತು ಕುಮಾರೋ ಭರ್ತೃದಾರಕಃ ॥ ೨೨೦
ರಾಜಾ ಭಟ್ಟಾರಕೋ ದೇವಸ್ತತ್ಸುತಾ ಭರ್ತೃದಾರಿಕಾ ।
ದೇವೀ ಕೃತಾಭಿಷೇಕಾಯಾಮಿತರಾಸು ತು ಭಟ್ಟಿನೀ ॥ ೨೨೧
ಅಬ್ರಹ್ಮಣ್ಯಮವಧ್ಯೋಕ್ತೌ ರಾಜ್ಞಃ ಶ್ಯಾಲಸ್ತು ರಾಷ್ಟ್ರಿಯಃ ।
ಅಂಬಾ ಮಾತಾಥ ಬಾಲಾ ಸ್ಯಾದ್ವಾಸೂರಾರ್ಯಸ್ತು ಮಾರಿಷಃ ॥ ೨೨೨
ಅತ್ತಿಕಾ ಭಗಿನೀ ಜ್ಯೇಷ್ಠಾ ನಿಷ್ಠಾ ನಿರ್ವಹಣೇ ಸಮೇ ।
ಹಂಡೇ ಹಂಜೇ ಹಲಾಹ್ವಾನೇ ನೀಚಾಂ ಚೇಟೀಂ ಸಖೀಂ ಪ್ರತಿ ॥ ೨೨೩
ಅಂಗಹಾರೋಽಂಗವಿಕ್ಷೇಪೋ ವ್ಯಂಜಕಾಭಿನಯೌ ಸಮೌ ।
ನಿರ್ವೃತ್ತೇ ತ್ವಂಗಸತ್ತ್ವಾಭ್ಯಾಂ ದ್ವೇ ತ್ರಿಷ್ವಾಂಗಿಕಸಾತ್ತ್ವಿಕೇ ॥ ೨೨೪

---

೨೨೦. ಆವುತ್ತ (ಪು)= ಸೋದರಿಯ ಗಂಡ. ಭಾವ (ಪು)= ವಿದ್ವಾಂಸ. ಆವುಕ (ಪು)=ತಂದೆ. ಕುಮಾರ, ಭರ್ತೃದಾರಕ (ಪು)=ಯುವರಾಜ, ರಾಜಪುತ್ರ. ೨೨೧. ಭಟ್ಟಾರಕ, ದೇವ (ಪು)=ರಾಜ. ಭರ್ತೃದಾರಿಕಾ (ಸ್ತ್ರೀ)=ರಾಜಪುತ್ರಿ. ದೇವೀ (ಸ್ತ್ರೀ)=ಪಟ್ಟದರಾಣಿ. ಭಟ್ಟಿನೀ (ಸ್ತ್ರೀ)=ಪಟ್ಟಾಭಿಷಿಕ್ತಳಲ್ಲದ ರಾಜ ಭಾರ್ಯೆ.

೨೨೨. ಅಬ್ರಹ್ಮಣ್ಯ (ನ)=ಕೊಲ್ಲಕೂಡದು ಎಂಬ ಅಭಿಪ್ರಾಯದಿಂದ ಅರಚಿಕೊಳ್ಳುವ ಶಬ್ದ. ರಾಷ್ಟ್ರಿಯ (ಪು)=ರಾಜನ ಮೈದುನ. ಅಂಬಾ (ಸ್ತ್ರೀ)=ತಾಯಿ. ವಾಸೂ (ಸ್ತ್ರೀ)=ಕುಮಾರಿ, ಹುಡುಗಿ. ಮಾರಿಷ (ಪು)=ಸಭ್ಯನಾದ ಪುರುಷ. ೨೨೩. ಅತ್ತಿಕಾ (ಸ್ತ್ರೀ)= ಅಕ್ಕ, ಹಿರಿಯ ಸೋದರಿ. ನಿಷ್ಠಾ (ಸ್ತ್ರೀ), ನಿರ್ವಹಣ (ನ)=ಕಥಾಸಮಾಪ್ತಿ, ನಿರ್ವಾಹ, ನಿರ್ವಹಣ ಸಂಧಿ. ಹಂಡೇ, ಹಂಜೇ, ಹಲಾ (ಸ್ತ್ರೀ)=ಇವು ಮೂರು ಸಂಬೋಧನಗಳು. ಕೆಳಮಟ್ಟದ ಹೆಂಗಸನ್ನು ಹಂಡೇ ಎಂದೂ ದಾಸಿಯನ್ನು ಹಂಜೇ ಎಂದೂ ಸಖಿಯನ್ನು ಹಲಾ ಎಂದೂ ಸಂಬೋಧಿಸಬೇಕು. ೨೨೪. ಅಂಗಹಾರ, ಅಂಗವಿಕ್ಷೇಪ (ಪು)=ನೃತ್ಯದಲ್ಲಿ ಅಂಗಗಳ ಚಾಲನೆ. ವ್ಯಂಜಕ, ಅಭಿನಯ (ಪು)=ಅಭಿನಯ. ಅಂಗವಿನ್ಯಾಸದಿಂದ ಭಾವಾವಿಷ್ಕರಣ. ಆಂಗಿಕ (ಪು.ಸ್ತ್ರೀ.ನ)=ಭ್ರೂವಿಕ್ಷೇಪ ಮೊದಲಾಗಿ ಅಂಗಗಳಿಂದ ನಡೆಸುವ ಅಭಿನಯ, (ಸ್ತ್ರೀ. ಆಂಗಿಕೀ). ಸಾತ್ತ್ವಿಕ (ಪು.ಸ್ತ್ರೀ.ನ)=ಸ್ತಂಭ, ಸ್ವೇದ ಮುಂತಾದ ಸಾತ್ತ್ವಿಕ ಭಾವಗಳಿಂದ ನಡೆಸುವ ಅಭಿನಯ (ಸ್ತ್ರೀ. ಸಾತ್ತ್ವಿಕೀ). ೨೨೫. ಶೃಂಗಾರ, ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ಬೀಭತ್ಸ, ರೌದ್ರ=ಇವು ಎಂಟು ರಸಗಳು (ಶಾಂತರಸವನ್ನು ಇಲ್ಲಿ ಹೇಳಿಲ್ಲ, ಅದೂ ಸೇರಿದರೆ



ಶೃಂಗಾರವೀರಕರುಣಾದ್ಭುತಹಾಸ್ಯಭಯಾನಕಾಃ ।
ಬೀಭತ್ಸರೌದ್ರೌ ಚ ರಸಾಃ ಶೃಂಗಾರಶ್ಶುಚಿರುಜ್ಜ್ವಲಃ ॥ ೨೨೫
ಉತ್ಸಾಹವರ್ಧನೋ ವೀರಃ ಕಾರುಣ್ಯಂ ಕರುಣಾ ಘೃಣಾ ।
ಕೃಪಾ ದಯಾನುಕಂಪಾ ಸ್ಯಾದನುಕ್ರೋಶೋಽಪ್ಯಥೋ ಹಸಃ ॥ ೨೨೬
ಹಾಸೋ ಹಾಸ್ಯಂ ಚ ಬೀಭತ್ಸಂ ವಿಕೃತಂ ತ್ರಿಷ್ವಿದಂ ದ್ವಯಮ್ ।
ವಿಸ್ಮಯೋಽದ್ಭುತಮಾಶ್ಚರ್ಯಂ ಚಿತ್ರಮಪ್ಯಥ ಭೈರವಮ್ ॥ ೨೨೭
ದಾರುಣಂ ಭೀಷಣಂ ಭೀಷ್ಮಂ ಘೋರಂ ಭೀಮಂ ಭಯಾನಕಮ್ ।
ಭಯಂಕರಂ ಪ್ರತಿಭಯಂ ರೌದ್ರಂ ತೂಗ್ರಮಮೀ ತ್ರಿಷು ॥ ೨೨೮
ಚತುರ್ದಶ ದರತ್ರಾಸೌ ಭೀತಿರ್ಭೀಃ ಸಾಧ್ವಸಂ ಭಯಮ್ ।
ವಿಕಾರೋ ಮಾನಸೋ ಭಾವೋಽನುಭಾವೋ ಭಾವಬೋಧಕಃ ॥ ೨೨೯

---

ನವರಸಗಳು). ಶೃಂಗಾರ, ಶುಚಿ, ಉಜ್ಜ್ವಲ (ಪು)=ಶೃಂಗಾರರಸ.

೨೨೬-೨೨೭. ವೀರ (ಪು)=ಉತ್ಸಾಹದಿಂದ ವರ್ಧಿಸುವ ರಸ. ಕಾರುಣ್ಯ (ನ), ಕರುಣಾ, ಘೃಣಾ, ಕೃಪಾ, ದಯಾ, ಅನುಕಂಪಾ[1] (ಸ್ತ್ರೀ), ಅನುಕ್ರೋಶ (ಪು)=ದಯೆ. ಹಸ, ಹಾಸ (ಪು), ಹಾಸ್ಯ (ನ)=ಹಾಸ್ಯ. ಬೀಭತ್ಸ, ವಿಕೃತ (ಪು. ಸ್ತ್ರೀ. ನ)=ಜುಗುಪ್ಸೆಯನ್ನು ಉಂಟು ಮಾಡತಕ್ಕದ್ದು.

೨೨೭-೨೨೮. ವಿಸ್ಮಯ, (ಪು), ಅದ್ಭುತ, ಆಶ್ಚರ್ಯ, ಚಿತ್ರ (ನ)=ಆಶ್ಚರ್ಯಕರ. ಭೈರವ, ದಾರುಣ, ಭೀಷ್ಮ, ಘೋರ, ಭೀಮ, ಭಯಾನಕ, ಭಯಂಕರ, ಪ್ರತಿಭಯ (ನ)=ಭೀತಿದಾಯಕವಾದದ್ದು, ಭಯಾನಕರಸ. ರೌದ್ರ, ಉಗ್ರ (ನ)=ಕೋಪಪ್ರಧಾನವಾದ ರೌದ್ರರಸ. ಅದ್ಭುತ ಶಬ್ದದಿಂದ ಮೊದಲ್ಗೊಂಡು ಮೇಲ್ಕಂಡ ಹದಿನಾಲ್ಕು ಶಬ್ದಗಳು ವಿಶೇಷ್ಯ ನಿಘ್ನವಾಗಿ ಲಿಂಗತ್ರಯದಲ್ಲಿ ಬರುತ್ತವೆ (ಸ್ತ್ರೀ, ರೌದ್ರೀ, ಭೈರವೀ). ೨೨೯. ದರ, ತ್ರಾಸ (ಪು) ಭೀತಿ, ಭೀ (ಸ್ತ್ರೀ), ಸಾಧ್ವಸ, ಭಯ (ನ)=ಹೆದರಿಕೆ. ಭಾವ (ಪು)=ಮನಸ್ಸಿನ ವಿಕಾರ, ಚಿತ್ತವೃತ್ತಿ. ಅನುಭಾವ (ಪು)=ಚಿತ್ತವೃತ್ತಿಯನ್ನು ತಿಳಿಸುವ ಮುಖವಿಕಾಸಾದಿ (The expression of emotion in the features). ೨೩೦-೨೩೧. ಗರ್ವ, ಅಭಿಮಾನ, ಅಹಂಕಾರ (ಪು)= ಅಹಂಕಾರ. ಮಾನ=ನಾನು ದೊಡ್ಡವನೆಂಬ ಚಿತ್ತದ ಉತ್ಕರ್ಷ (Self respect). ಅನಾದರ, ಪರಿಭವ, ಪರೀಭಾವ (ಪು), ತಿರಸ್ಕ್ರಿಯಾ, ರೀಢಾ, ಅವಮಾನನಾ, ಅವಜ್ಞಾ (ಸ್ತ್ರೀ),

[1] ಅನುಕಂಪಃ ಎಂದು ಪುಲ್ಲಿಂಗವೂ ಉಂಟು.

ಗರ್ವೋಽಭಿಮಾನೋಽಹಂಕಾರೋ ಮಾನಶ್ಚಿತ್ತಸಮುನ್ನತಿಃ ।
ಅನಾದರಃ ಪರಿಭವಃ ಪರೀಭಾವಸ್ತಿರಸ್ಕ್ರಿಯಾ ॥ ೨೩೦
ರೀಢಾವಮಾನನಾವಜ್ಞಾವಹೇಲನಮಸೂರ್ಕ್ಷಣಮ್ ।
ಮಂದಾಕ್ಷಂ ಹ್ರೀಸ್ತ್ರಪಾ ವ್ರೀಡಾ ಲಜ್ಜಾ ಸಾಪತ್ರಪಾನ್ಯತಃ ॥ ೨೩೧
ಕ್ಷಾಂತಿಸ್ತಿತಿಕ್ಷಾಭಿಧ್ಯಾ ತು ಪರಸ್ಯ ವಿಷಯೇ ಸ್ಪೃಹಾ ।
ಅಕ್ಷಾಂತಿರೀರ್ಷ್ಯಾಸೂಯಾ ತು ದೋಷಾರೋಪೋ ಗುಣೇಷ್ವಪಿ ॥ ೨೩೨
ವೈರಂ ವಿರೋಧೋ ವಿದ್ವೇಷೋ ಮನ್ಯುಶೋಕೌ ತು ಶುಕ್ ಸ್ತ್ರಿಯಾಮ್ ।
ಪಶ್ಚಾತ್ತಾಪೋಽನುತಾಪಶ್ಚ ವಿಪ್ರತೀಸಾರ ಇತ್ಯಪಿ ॥ ೨೩೩
ಕೋಪಕ್ರೋಧಾಮರ್ಷರೋಷಪ್ರತಿಘಾ ರುಟ್‌ಕ್ರುಧೌ ಸ್ತ್ರಿಯೌ ।
ಶುಚೌ ತು ಚರಿತೇ ಶೀಲಮುನ್ಮಾದಶ್ಚಿತ್ತವಿಭ್ರಮಃ ॥ ೨೩೪
ಪ್ರೇಮಾ ನಾ ಪ್ರಿಯತಾ ಹಾರ್ದಂ ಪ್ರೇಮ ಸ್ನೇಹೋಽಥ ದೋಹದಮ್ ।
ಇಚ್ಛಾ ಕಾಂಕ್ಷಾಸ್ಪೃಹೇಹಾ ತೃಡ್ವಾಂಛಾ ಲಿಪ್ಸಾ ಮನೋರಥಃ ॥ ೨೩೫

---

ಅವಹೇಲನ, ಅಸೂರ್ಕ್ಷಣ (ನ)=ಅವಮಾನ. ಮಂದಾಕ್ಷ (ನ), ಹ್ರೀ, ತ್ರಪಾ, ವ್ರೀಡಾ,[1] ಲಜ್ಜಾ (ಸ್ತ್ರೀ)=ನಾಚಿಕೆ. ಅಪತ್ರಪಾ (ಸ್ತ್ರೀ)=ಪರರ ಎದುರಿಗೆ ಉಂಟಾದ ನಾಚಿಕೆ. ೨೩೨. ಕ್ಷಾಂತಿ, ತಿತಿಕ್ಷಾ (ಸ್ತ್ರೀ)= ತಾಳ್ಮೆ. ಅಭಿಧ್ಯಾ (ಸ್ತ್ರೀ)=ಪರದ್ರವ್ಯದ ಅಪೇಕ್ಷೆ. ಅಕ್ಷಾಂತಿ, ಈರ್ಷ್ಯಾ (ಸ್ತ್ರೀ)=ಹೊಟ್ಟೆಕಿಚ್ಚು. ಅಸೂಯಾ (ಸ್ತ್ರೀ)=ಪರರ ಗುಣದಲ್ಲಿ ದೋಷವನ್ನಾರೋಪಿಸುವ ಬುದ್ಧಿ. ೨೩೩. ವೈರ (ನ), ವಿರೋಧ, ವಿದ್ವೇಷ (ಪು)=ವೈರ. ಮನ್ಯು, ಶೋಕ (ಪು), ಶುಚ್ (ಸ್ತ್ರೀ)=ಶೋಕ. ಪಶ್ಚಾತ್ತಾಪ, ಅನುತಾಪ, ವಿಪ್ರತೀಸಾರ (ಪು)=ಪಶ್ಚಾತ್ತಾಪ. ೨೩೪. ಕೋಪ, ಕ್ರೋಧ, ಅಮರ್ಷ, ರೋಷ, ಪ್ರತಿಘ (ಪು), ರುಷ್, ಕ್ರುಧ್ (ಸ್ತ್ರೀ)= ಸಿಟ್ಟು. ಶೀಲ (ನ)=ಒಳ್ಳೆಯ ನಡತೆ. ಉನ್ಮಾದ, ಚಿತ್ತವಿಭ್ರಮ (ಪು)=ಹುಚ್ಚು. ೨೩೫-೨೩೬. ಪ್ರೇಮನ್ (ಪು), ಪ್ರಿಯತಾ (ಸ್ತ್ರೀ) ಹಾರ್ದ, ಪ್ರೇಮನ್ (ನ), ಸ್ನೇಹ (ಪು)=ಸ್ನೇಹ, ಪ್ರೀತಿ. ದೋಹದ[2] (ನ), ಇಚ್ಛಾ, ಕಾಂಕ್ಷಾ, ಸ್ಪೃಹಾ, ಈಹಾ, ತೃಷ್, ವಾಂಛಾ, ಲಿಪ್ಸಾ (ಸ್ತ್ರೀ) ಮನೋರಥ, ಕಾಮ, ಅಭಿಲಾಷ, ತರ್ಷ (ಪು)=ಇಚ್ಛೆ, ಬಯಕೆ. ಲಾಲಸಾ (ಸ್ತ್ರೀ)=ತೀವ್ರವಾದ ಬಯಕೆ. ಉಪಾಧಿ (ಪು), ಧರ್ಮಚಿಂತಾ (ಸ್ತ್ರೀ)=ಧರ್ಮವಿಚಾರ. ಆಧಿ (ಪು)=ಮನೋವ್ಯಥೆ.

[1] ವ್ರೀಡ ಎಂದು ಪುಲ್ಲಿಂಗವೂ ಉಂಟು. [2] ದೋಹದ ಶಬ್ದವು ಪುಲ್ಲಿಂಗದಲ್ಲಿಯೂ ಉಂಟು.



ಕಾಮೋಽಭಿಲಾಷಸ್ತರ್ಷಶ್ಚ ಸ ಮಹಾನ್ ಲಾಲಸಾ ದ್ವಯೋಃ ।
ಉಪಾಧಿರ್ನಾ ಧರ್ಮಚಿಂತಾ ಪುಂಸ್ಯಾಧಿರ್ಮಾನಸೀ ವ್ಯಥಾ ॥ ೨೩೬
ಸ್ಯಾಚ್ಚಿಂತಾ ಸ್ಮೃತಿರಾಧ್ಯಾನಮುತ್ಕಂಠೋತ್ಕಲಿಕೇ ಸಮೇ ।
ಉತ್ಸಾಹೋ ವ್ಯವಸಾಯಃ ಸ್ಯಾತ್ಸ ವೀರ್ಯಮತಿಶಕ್ತಿಭಾಕ್ ॥ ೨೩೭
ಕಪಟೋಽಸ್ತ್ರೀ ವ್ಯಾಜದಂಭೋಪಧಯಶ್ಛದ್ಮಕೈತವೇ ।
ಕುಸೃತಿರ್ನಿಕೃತಿಶ್ಶಾಠ್ಯಂ ಪ್ರಮಾದೋಽನವಧಾನತಾ ॥ ೨೩೮
ಕೌತೂಹಲಂ ಕೌತುಕಂ ಚ ಕುತುಕಂ ಚ ಕುತೂಹಲಮ್ ।
ಸ್ತ್ರೀಣಾಂ ವಿಲಾಸಬಿಬ್ಬೋಕವಿಭ್ರಮಾ ಲಲಿತಂ ತಥಾ ॥ ೨೩೯
ಹೇಲಾ ಲೀಲೇತ್ಯಮೀ ಹಾವಾಃ ಕ್ರಿಯಾಃ ಶೃಂಗಾರಭಾವಜಾಃ ।
ದ್ರವಕೇಲಿಪರೀಹಾಸಾಃ ಕ್ರೀಡಾ ಲೀಲಾ ಚ ನರ್ಮ ಚ ॥ ೨೪೦

---

೨೩೭. ಚಿಂತಾ, ಸ್ಮೃತಿ (ಸ್ತ್ರೀ), ಆಧ್ಯಾನ (ನ)=ಸ್ಮರಿಸಿಕೊಳ್ಳುವುದು. ಉತ್ಕಂಠಾ, ಉತ್ಕಲಿಕಾ (ಸ್ತ್ರೀ)=ತೀವ್ರಾಭಿಲಾಷೆಯಿಂದಾಗುವ ಸ್ಮರಣೆ. ಉತ್ಸಾಹ, ಅಧ್ಯವಸಾಯ (ಪು)=ಉತ್ಸಾಹ. ವೀರ್ಯ (ನ)= ಅತ್ಯಂತ ಶಕ್ತಿಯುಕ್ತವಾದ ಉತ್ಸಾಹ. ೨೩೮. ಕಪಟ (ಪು. ನ), ವ್ಯಾಜ, ದಂಭ, ಉಪಧಿ (ಪು), ಛದ್ಮನ್, ಕೈತವ (ನ), ಕುಸೃತಿ, ನಿಕೃತಿ (ಸ್ತ್ರೀ), ಶಾಠ್ಯ (ನ)=ಕಪಟತನ (Hypocrisy). ಪ್ರಮಾದ (ಪು), ಅನವಧಾನತಾ (ಸ್ತ್ರೀ)= ಎಚ್ಚರಿಕೆಯಿಲ್ಲದಿರುವುದು (Carelessness) ೨೩೯-೨೪೦. ಕೌತೂಹಲ, ಕೌತುಕ, ಕುತುಕ, ಕುತೂಹಲ (ನ)=ಕುತೂಹಲ (Curiosity). ವಿಲಾಸ ಮೊದಲಾದ ಆರು ಶೃಂಗಾರಭಾವದಿಂದುಂಟಾಗುವ ಸ್ತ್ರೀಯರ ಚೇಷ್ಟೆಗಳು :— ವಿಲಾಸ (ಪು)=ಕಾಂತನ ಬಳಿಯಲ್ಲಿ ಸಂಭವಿಸುವ ಮುಗುಳ್ನಗೆ ಮೊದಲಾದುದು. ಬಿಬ್ಬೋಕ (ಪು)=ಗರ್ವದಿಂದ ಅನಾದರ. ವಿಭ್ರಮ (ಪು)=ಯೌವನಮದದಿಂದ ಮಾಡುವ ಚೇಷ್ಟೆ. ಲಲಿತ (ನ)=ಕೋಮಲ ವಿಧಾನದಿಂದ ಕರಚರಣಾದ್ಯಂಗಗಳ ಚಾಲನೆ. ಹೇಲಾ (ಸ್ತ್ರೀ)= ಅಭಿಲಾಷೆಯನ್ನು ವ್ಯಕ್ತಪಡಿಸುವ ಚೇಷ್ಟೆ. ಲೀಲಾ (ಸ್ತ್ರೀ)=ಮನೋವಿನೋದಾರ್ಥವಾಗಿ ಪ್ರಿಯನ ಅನುಕರಣೆ. ೨೪೦-೨೪೧. ದ್ರವ, ಕೇಲಿ[1], ಪರೀಹಾಸ (ಪು), ಕ್ರೀಡಾ, ಲೀಲಾ (ಸ್ತ್ರೀ), ನರ್ಮನ್ (ನ)=ಕ್ರೀಡೆ, ವಿನೋದ. ವ್ಯಾಜ, ಅಪದೇಶ (ಪು), ಲಕ್ಷ್ಯ (ನ)=ವ್ಯಾಜ, ನೆವ (Pretence). ಕ್ರೀಡಾ, ಖೇಲಾ (ಸ್ತ್ರೀ), ಕೂರ್ದನ (ನ)=ಆಟ (Game). ಘರ್ಮ, ನಿದಾಘ, ಸ್ವೇದ (ಪು)=ಸೆಕೆ (Heat).

[1] ಕೇಲೀ ಎಂದು ಸ್ತ್ರೀಲಿಂಗವೂ ಉಂಟು.

**ವ್ಯಾಜೋಽಪದೇಶೋ ಲಕ್ಷ್ಯಂ ಚ ಕ್ರೀಡಾ ಖೇಲಾ ಚ ಕೂರ್ದನಮ್ ।**
**ಘರ್ಮೋ ನಿದಾಘಃಸ್ವೇದಃಸ್ಯಾತ್ಪ್ರಲಯೋ ನಷ್ಟಚೇಷ್ಟತಾ ॥** ೨೪೧
**ಅವಹಿತ್ಥಾಕಾರಗುಪ್ತಿಸ್ಸಮೌ ಸಂವೇಗಸಂಭ್ರಮೌ ।**
**ಸ್ಯಾದಾಚ್ಛುರಿತಕಂ ಹಾಸಸ್ಸೋತ್ಪ್ರಾಸಸ್ಸ ಮನಾಕ್ಸ್ಮಿತಮ್ ॥** ೨೪೨
**ಮಧ್ಯಮಃಸ್ಯಾದ್ವಿಹಸಿತಂ ರೋಮಾಂಚೋ ರೋಮಹರ್ಷಣಮ್ ।**
**ಕ್ರಂದಿತಂ ರುದಿತಂ ಕ್ರುಷ್ಟಂ ಜೃಂಭಸ್ತು ತ್ರಿಷು ಜೃಂಭಣಮ್ ॥** ೨೪೩
**ವಿಪ್ರಲಂಭೋ ವಿಸಂವಾದೋ ರಿಂಗಣಂ ಸ್ಖಲನಂ ಸಮೇ ।**
**ಸ್ಯಾನ್ನಿದ್ರಾ ಶಯನಂ ಸ್ವಾಪಃ ಸ್ವಪ್ನಸ್ಸಂವೇಶ ಇತ್ಯಪಿ ॥** ೨೪೪
**ತಂದ್ರೀ ಪ್ರಮೀಲಾ ಭ್ರುಕುಟಿಃ ಭ್ರುಕುಟಿರ್ಭ್ರೂಕುಟಿಃ ಸ್ತ್ರಿಯಾಮ್ ।**
**ಅದೃಷ್ಟಿಃ ಸ್ಯಾದಸೌಮ್ಯೇಽಕ್ಷ್ಣಿ ಸಂಸಿದ್ಧಿಪ್ರಕೃತೀ ತ್ವಿಮೇ ॥** ೨೪೫

---

(ಸ್ವೇದ=ಬೆವರು ಎಂಬ ಅರ್ಥವೂ ಉಂಟು). ಪ್ರಲಯ (ಪು), ನಷ್ಟಚೇಷ್ಟತಾ (ಸ್ತ್ರೀ)=ಮೂರ್ಛೆ, ಹರ್ಷಾದ್ಯತಿರೇಕದಿಂದ ಎಚ್ಚರದಪ್ಪುವುದು. ೨೪೨. ಅವಹಿತ್ಥಾ[1], ಆಕಾರಗುಪ್ತಿ (ಸ್ತ್ರೀ)=ಶೋಕಾದಿಜನ್ಯವಾದ ವಿಕಾರವನ್ನು ಮರೆಮಾಚುವುದು. ಸಂವೇಗ, ಸಂಭ್ರಮ (ಪು)=ಹರ್ಷಾದಿಗಳಿಂದ ಕೆಲಸದಲ್ಲುಂಟಾಗುವ ತ್ವರೆ. ಆಚ್ಛುರಿತಕ (ನ)=ಇನ್ನೊಬ್ಬರನ್ನು ಗೇಲಿಮಾಡುವ ನಗು. ಸ್ಮಿತ (ನ)=ಮುಗುಳ್ನಗೆ (Smile) ೨೪೩. ವಿಹಸಿತ (ನ)=ಮೃದುವಾದ ನಗು (Gentle laugh). ರೋಮಾಂಚ (ಪು), ರೋಮಹರ್ಷಣ (ನ)=ರೋಮಾಂಚ, ಮೈನವಿರೇಳುವುದು. ಕ್ರಂದಿತ, ರುದಿತ, ಕ್ರುಷ್ಟ (ನ)=ಅಳು, ರೋದನ. ಜೃಂಭ (ಪು. ಸ್ತ್ರೀ. ನ) ಜೃಂಭಣ (ನ)=ಆಕಳಿಕೆ ; ಅಂಗಗಳನ್ನು ಹಿಗ್ಗಿಸುವುದು. ೨೪೪. ವಿಪ್ರಲಂಭ, ವಿಸಂವಾದ (ಪು)=ಒಪ್ಪಿದುದನ್ನು ವಿರೋಧಿಸುವುದು (Contradiction) ರಿಂಗಣ, ಸ್ಖಲನ (ನ)=ತಪ್ಪುವುದು, ಜಾರುವುದು (Slip). ನಿದ್ರಾ (ಸ್ತ್ರೀ), ಶಯನ (ನ) ಸ್ವಾಪ, ಸ್ವಪ್ನ, ಸಂವೇಶ (ಪು)=ನಿದ್ರೆ. ೨೪೫-೨೪೬. ತಂದ್ರೀ[2], ಪ್ರಮೀಲಾ (ಸ್ತ್ರೀ)=ಆಯಾಸದಿಂದಾಗುವ ಅಸಾಮರ್ಥ್ಯ (Exhaustion) ; ಜೋಮು (Drowsiness). ಭ್ರುಕುಟಿ, ಭ್ರುಕಟಿ, ಭ್ರೂಕುಟಿ (ಸ್ತ್ರೀ)=ಹುಬ್ಬುಗಂಟಿಕ್ಕುವುದು. ಅದೃಷ್ಟಿ (ಸ್ತ್ರೀ)=ಕ್ರೂರದೃಷ್ಟಿ. ಸಂಸಿದ್ಧಿ,

[1] ಅವಹಿತ್ಥ ಎಂದು ನಪುಂಸಕಲಿಂಗವೂ ಉಂಟು.
[2] ತಂದ್ರಿ, ತಂದ್ರಾ ಎಂಬ ರೂಪಾಂತರಗಳೂ ಉಂಟು.



**ಸ್ವರೂಪಂ ಚ ಸ್ವಭಾವಶ್ಚ ನಿಸರ್ಗಶ್ಚಾಥ ವೇಪಥುಃ ।**
**ಕಂಪೋಽಥ ಕ್ಷಣ ಉದ್ಧರ್ಷೋ ಮಹ ಉದ್ಧವ ಉತ್ಸವಃ ॥** ೨೪೬

ಇತಿ ನಾಟ್ಯವರ್ಗಃ

---

ಪ್ರಕೃತಿ (ಸ್ತ್ರೀ), ಸ್ವರೂಪ (ನ), ಸ್ವಭಾವ, ನಿಸರ್ಗ (ಪು)=ಸ್ವಭಾವ (Nature). ವೇಪಥು, ಕಂಪ (ಪು)=ನಡುಕ. ಕ್ಷಣ, ಉದ್ಧರ್ಷ, ಮಹ, ಉದ್ಧವ, ಉತ್ಸವ (ಪು)=ಉತ್ಸವ, ಅತ್ಯಾನಂದ.

ಮತ್ಸ್ಯಪಿತ್ತಾ ಕೃಷ್ಣಭೇದೀ ಚಕ್ರಾಂಗೀ ಶಕುಲಾದನೀ ।
ಆತ್ಮಗುಪ್ತಾ ಜಡಾಽವ್ಯಂಡಾ ಕಂಡೂರಾ ಪ್ರಾವೃಷಾಯಣೀ ॥ ೪೪೧
ಋಷ್ಯಪ್ರೋಕ್ತಾ ಶೂಕಶಿಂಬಿಃ ಕಪಿಕಚ್ಛೂಶ್ಚ ಮರ್ಕಟೀ ।
ಚಿತ್ರೋಪಚಿತ್ರಾ ನ್ಯಗ್ರೋಧೀ ದ್ರವಂತೀ ಶಂಬರೀ ವೃಷಾ ॥ ೪೪೨
ಪ್ರತ್ಯಕ್‌ಶ್ರೇಣೀ ಸುತಶ್ರೇಣೀ ರಂಡಾ ಮೂಷಕಪರ್ಣ್ಯಪಿ ।
ಅಪಾಮಾರ್ಗಃಶೈಖರಿಕೋ ಧಾಮಾರ್ಗವಮಯೂರಕೌ ॥ ೪೪೩
ಪ್ರತ್ಯಕ್ಪರ್ಣೀ ಕೇಶಪರ್ಣೀ ಕಿಣಿಹೀ ಖರಮಂಜರೀ ।
ಹಂಜಿಕಾ ಬ್ರಾಹ್ಮಣೀ ಪದ್ಮಾ ಭಾರ್ಗೀ ಬ್ರಾಹ್ಮಣಯಷ್ಟಿಕಾ ॥ ೪೪೪
ಅಂಗಾರವಲ್ಲೀ ಬಾಲೇಯಶಾಕಬರ್ಬರವರ್ಧಕಾಃ ।
ಮಂಜಿಷ್ಠಾ ವಿಕಸಾ ಜಿಂಗೀ ಸಮಂಗಾ ಕಾಲಮೇಷಿಕಾ ॥ ೪೪೫
ಮಂಡೂಕಪರ್ಣೀ ಭಂಡೀರೀ ಭಾಂಡೀ ಯೋಜನವಲ್ಲ್ಯಪಿ ।
ಯಾಸೋ ಯವಾಸೋ ದುಃಸ್ಪರ್ಶೋ ಧನ್ವಯಾಸಃ ಕುನಾಶಕಃ ॥ ೪೪೬

---

ಶಕುಲಾದನೀ (ಸ್ತ್ರೀ)=ಕಟು ರೋಹಿಣಿ.

೪೪೧-೪೪೨. ಆತ್ಮಗುಪ್ತಾ, ಜಡಾ, ಅವ್ಯಂಡಾ, ಕಂಡೂರಾ, ಪ್ರಾವೃಷಾಯಣೀ, ಋಷ್ಯಪ್ರೋಕ್ತಾ, ಶೂಕಶಿಂಬಿ, ಕಪಿಕಚ್ಛೂ, ಮರ್ಕಟೀ, (ಸ್ತ್ರೀ)=ನಸುಗುನ್ನಿಗಿಡ, ಮಂಗನಕಾಯಿ ಗಿಡ.

೪೪೨-೪೪೩. ಚಿತ್ರಾ, ಉಪಚಿತ್ರಾ, ನ್ಯಗ್ರೋಧೀ, ದ್ರವಂತೀ, ಶಂಬರೀ, ವೃಷಾ, ಪ್ರತ್ಯಕ್‌ಶ್ರೇಣೀ, ಸುತಶ್ರೇಣೀ, ರಂಡಾ, ಮೂಷಕಪರ್ಣೀ (ಸ್ತ್ರೀ)=ಎಲಿಯಾಲ, ಇಲಿಕಿವಿಗಿಡ.

೪೪೩-೪೪೪. ಅಪಾಮಾರ್ಗ, ಶೈಖರಿಕ, ಧಾಮಾರ್ಗವ, ಮಯೂರಕ (ಪು), ಪ್ರತ್ಯಕ್ ಪರ್ಣೀ, ಕೇಶಪರ್ಣೀ (ಕೀಶಪರ್ಣೀ), ಕಿಣಿಹೀ, ಖರಮಂಜರೀ (ಸ್ತ್ರೀ)=ಉತ್ತರಣೆಗಿಡ.

೪೪೪-೪೪೫. ಹಂಜಿಕಾ, ಬ್ರಾಹ್ಮಣೀ, ಪದ್ಮಾ, ಭಾರ್ಗೀ, ಬ್ರಾಹ್ಮಣಯಷ್ಟಿಕಾ, ಅಂಗಾರವಲ್ಲೀ (ಸ್ತ್ರೀ), ಬಾಲೇಯಶಾಕ, ಬರ್ಬರ, ವರ್ಧಕ (ಪು)=ಗಂಟುಬಾರಂಗಿ.

೪೪೫-೪೪೬. ಮಂಜಿಷ್ಠಾ, ವಿಕಸಾ, ಜಿಂಗೀ, ಸಮಂಗಾ, ಕಾಲಮೇಷಿಕಾ (ಕಾಲಮೇಶಿಕಾ), ಮಂಡೂಕಪರ್ಣೀ, ಭಂಡೀರೀ, ಭಂಡೀ, ಯೋಜನವಲ್ಲೀ (ಸ್ತ್ರೀ)= ಮಂಜಿಷ್ಠ, ಮಂಜಟಿಗೆ.

೪೪೬-೪೪೭. ಯಾಸ, ಯವಾಸ, ದುಃಸ್ಪರ್ಶ, ಧನ್ವಯಾಸ, ಕುನಾಶಕ (ಪು), ರೋದನೀ, ಕಚ್ಛುರಾ, ಅನಂತಾ, ಸಮುದ್ರಾಂತಾ, ದುರಾಲಭಾ (ಸ್ತ್ರೀ)=ಚುರ್ಚಿ, ತುರಚಿಗಿಡ.



ರೋದನೀ ಕಚ್ಛುರಾನಂತಾ ಸಮುದ್ರಾಂತಾ ದುರಾಲಭಾ ।
ಪೃಶ್ನಿಪರ್ಣೀ ಪೃಥಕ್ಪರ್ಣೀ ಚಿತ್ರಪರ್ಣ್ಯಂಘ್ರಿಪರ್ಣಿಕಾ ॥ ೪೪೭
ಕ್ರೋಷ್ಟುವಿನ್ನಾ ಸಿಂಹಪುಚ್ಛೀ ಕಲಶೀ ಧಾವನೀ ಗುಹಾ ।
ನಿದಿಗ್ಧಿಕಾ ಸ್ಪೃಶೀ ವ್ಯಾಘ್ರೀ ಬೃಹತೀ ಕಂಟಕಾರಿಕಾ ॥ ೪೪೮
ಪ್ರಚೋದನೀ ಕುಲೀ ಕ್ಷುದ್ರಾ ದುಃಸ್ಪರ್ಶಾ ರಾಷ್ಟ್ರಿಕೇತ್ಯಪಿ ।
ನೀಲೀ ಕಾಲಾ ಕ್ಲೀತಕಿಕಾ ಗ್ರಾಮೀಣಾ ಮಧುಪರ್ಣಿಕಾ ॥ ೪೪೯
ರಂಜನೀ ಶ್ರೀಫಲೀ ತುತ್ಥಾ ದ್ರೋಣೀ ದೋಲಾ ಚ ನೀಲಿನೀ ।
ಅವಲ್ಗುಜಸ್ಸೋಮರಾಜೀ ಸುವಲ್ಲೀ ಸೋಮವಲ್ಲಿಕಾ ॥ ೪೫೦
ಕಾಲಮೇಷೀ ಕೃಷ್ಣಫಲಾ ವಾಗುಜೀ ಪೂತಿಫಲ್ಯಪಿ ।
ಕೃಷ್ಣೋಪಕುಲ್ಯಾ ವೈದೇಹೀ ಮಾಗಧೀ ಚಪಲಾ ಕಣಾ ॥ ೪೫೧
ಊಷಣಾ ಪಿಪ್ಪಲೀ ಶೌಂಡೀ ಕೋಲಾಥ ಕರಿಪಿಪ್ಪಲೀ ।
ಕಪಿವಲ್ಲೀ ಕೋಲವಲ್ಲೀ ಶ್ರೇಯಸೀ ವಶಿರಃ ಪುಮಾನ್ ॥ ೪೫೨

---

೪೪೭-೪೪೮. ಪೃಶ್ನಿಪರ್ಣೀ, ಪೃಥಕ್‌ಪರ್ಣೀ, ಚಿತ್ರಪರ್ಣೀ, ಅಂಘ್ರಿಪರ್ಣಿಕಾ, ಕ್ರೋಷ್ಟುವಿನ್ನಾ, ಸಿಂಹಪುಚ್ಛೀ, ಕಲಶೀ, ಧಾವನೀ, ಗುಹಾ (ಸ್ತ್ರೀ)=ನರಿಹೊನ್ನೆಗಿಡ, ಕೋಲುಹೊನ್ನೆ.

೪೪೮-೪೪೯. ನಿದಿಗ್ಧಿಕಾ, ಸ್ಪೃಶೀ, ವ್ಯಾಘ್ರೀ, ಬೃಹತೀ, ಕಂಟಕಾರಿಕಾ, ಪ್ರಚೋದನೀ, ಕುಲೀ, ಕ್ಷುದ್ರಾ, ದುಃಸ್ಪರ್ಶಾ, ರಾಷ್ಟ್ರಿಕಾ (ಸ್ತ್ರೀ)=ಹೆಗ್ಗುಳ.

೪೪೯-೪೫೦. ನೀಲೀ, ಕಾಲಾ, ಕ್ಲೀತಕಿಕಾ, ಗ್ರಾಮೀಣಾ, ಮಧುಪರ್ಣಿಕಾ, ರಂಜನೀ, ಶ್ರೀಫಲೀ, ತುತ್ಥಾ, ದ್ರೋಣೀ, ದೋಲಾ, ನೀಲಿನೀ (ಸ್ತ್ರೀ)=ನೀಲಿಗಿಡ (Indigo plant).

೪೫೦-೪೫೧. ಅವಲ್ಗುಜ (ಪು), ಸೋಮರಾಜೀ, ಸುವಲ್ಲೀ, ಸೋಮವಲ್ಲಿಕಾ, ಕಾಲಮೇಷೀ, ಕೃಷ್ಣಫಲಾ, ವಾಗುಜೀ (ವಾಕುಚೀ), ಪೂತಿಫಲೀ (ಸ್ತ್ರೀ)=ಬಾಹುಜಿಗೆ ಗಿಡ.

೪೫೧-೪೫೨. ಕೃಷ್ಣಾ, ಉಪಕುಲ್ಯಾ, ವೈದೇಹೀ, ಮಾಗಧೀ, ಚಪಲಾ, ಕಣಾ, ಊಷಣಾ, ಪಿಪ್ಪಲೀ, ಶೌಂಡೀ, ಕೋಲಾ (ಸ್ತ್ರೀ)=ಹಿಪ್ಪಲೀಬಳ್ಳಿ, ಕರಿಪಿಪ್ಪಲೀ, ಕಪಿವಲ್ಲೀ, ಕೋಲವಲ್ಲೀ, ಶ್ರೇಯಸೀ (ಸ್ತ್ರೀ), ವಶಿರ (ಪು)=ಗಜಹಿಪ್ಪಲಿ.

ಚವ್ಯಂ ತು ಚವಿಕಾ ಕಾಕಚಿಂಚೀಗುಂಜೇ ತು ಕೃಷ್ಣಲಾ ।
ಪಲಂಕಷಾ ತ್ವಿಕ್ಷುಗಂಧಾ ಶ್ವದಂಷ್ಟ್ರಾ ಸ್ವಾದುಕಂಟಕಃ ॥ ೪೫೩
ಗೋಕಂಟಕೋ ಗೋಕ್ಷುರಕೋ ವನಶೃಂಗಾಟ ಇತ್ಯಪಿ ।
ವಿಶ್ವಾ ವಿಷಾ ಪ್ರತಿವಿಷಾತಿವಿಷೋಪವಿಷಾರುಣಾ ॥ ೪೫೪
ಶೃಂಗೀ ಮಹೌಷಧಂ ಚಾಥ ಕ್ಷೀರಾವೀ ದುಗ್ಧಿಕಾ ಸಮೇ ।
ಶತಮೂಲೀ ಬಹುಸುತಾ ಭೀರುರಿಂದೀವರೀ ವರೀ ॥ ೪೫೫
ಋಷ್ಯಪ್ರೋಕ್ತಾಭೀರುಪತ್ರೀ ನಾರಾಯಣ್ಯಶ್ಶತಾವರೀ ।
ಅಹೇರುರಥ ಪೀತದ್ರುಕಾಲೇಯಕಹರಿದ್ರವಃ ॥ ೪೫೬
ದಾರ್ವೀ ಪಚಂಪಚಾ ದಾರುಹರಿದ್ರಾ ಪರ್ಜನೀತ್ಯಪಿ ।
ವಚೋಗ್ರಗಂಧಾ ಷಡ್ಗ್ರಂಥಾ ಗೋಲೋಮೀ ಶತಪರ್ವಿಕಾ ॥ ೪೫೭
ಶುಕ್ಲಾ ಹೈಮವತೀ ವೈದ್ಯಮಾತೃಸಿಂಹ್ಯೌ ತು ವಾಶಿಕಾ ।
ವೃಷೋಟರೂಷಸ್ಸಿಂಹಾಸ್ಯೋ ವಾಸಕೋ ವಾಜಿದಂತಕಃ ॥ ೪೫೮

---

೪೫೩. ಚವ್ಯ (ನ), ಚವಿಕಾ (ಸ್ತ್ರೀ)=ಕಾಡುಮೆಣಸು. ಕಾಕಚಿಂಚೀ, ಗುಂಜಾ, ಕೃಷ್ಣಲಾ (ಸ್ತ್ರೀ)=ಗುಲಗಂಜಿ ಬಳ್ಳಿ.

೪೫೩-೪೫೪. ಪಲಂಕಷಾ, ಇಕ್ಷುಗಂಧಾ, ಶ್ವದಂಷ್ಟ್ರಾ (ಸ್ತ್ರೀ), ಸ್ವಾದುಕಂಟಕ, ಗೋಕಂಟಕ, ಗೋಕ್ಷುರಕ, ವನಶೃಂಗಾಟ (ಪು)=ನೆಗ್ಗಿಲುಗಿಡ.

೪೫೪-೪೫೫. ವಿಶ್ವಾ, ವಿಷಾ, ಪ್ರತಿವಿಷಾ, ಅತಿವಿಷಾ, ಉಪವಿಷಾ, ಅರುಣಾ, ಶೃಂಗೀ (ಸ್ತ್ರೀ), ಮಹೌಷಧ (ನ)=ಅತಿಬಜೆ, ಅತಿವಿಷದಬಳ್ಳಿ. ಕ್ಷೀರಾವೀ, ದುಗ್ಧಿಕಾ (ಸ್ತ್ರೀ)=ಹಾಲುತೊಟ್ಟಿನಗಿಡ.

೪೫೫-೪೫೬. ಶತಮೂಲೀ, ಬಹುಸುತಾ, ಅಭೀರು (ಭೀರು), ಇಂದೀವರೀ, ವರೀ, ಋಷ್ಯಪ್ರೋಕ್ತಾ, ಅಭೀರುಪತ್ರೀ (ಭೀರುಪತ್ರೀ), ನಾರಾಯಣೀ, ಶತಾವರೀ, ಅಹೇರು (ಸ್ತ್ರೀ)=ಶತಾವರಿ, ಮಜ್ಜಿಗೆ ಗೆಡ್ಡೆ ಬಳ್ಳಿ. ಪೀತದ್ರು, ಕಾಲೇಯಕ, ಹರಿದ್ರು (ಪು), ದಾರ್ವೀ, ಪಚಂಪಚಾ, ದಾರುಹರಿದ್ರಾ, ಪರ್ಜನೀ (ಸ್ತ್ರೀ)=ಮರದರಿಶಿನ. ವಚಾ, ಉಗ್ರಗಂಧಾ, ಷಡ್ಗ್ರಂಥಾ, ಗೋಲೋಮೀ, ಶತಪರ್ವಿಕಾ (ಸ್ತ್ರೀ)=ಬಜೆ.

೪೫೮. ಶುಕ್ಲಾ, ಹೈಮವತೀ (ಸ್ತ್ರೀ)=ಬಿಳಿಯ ಬಜೆ. ವೈದ್ಯಮಾತೃ, ಸಿಂಹೀ, ವಾಶಿಕಾ (ಸ್ತ್ರೀ), ವೃಷ, ಅಟರೂಷ, ಸಿಂಹಾಸ್ಯ, ವಾಸಕ, ವಾಜಿದಂತಕ (ಪು)=ಆಡುಮುಟ್ಟದ ಗಿಡ, ಆಡುಸೋಗೆ.



ಆಸ್ಫೋಟಾ ಗಿರಿಕರ್ಣೀ ಸ್ಯಾದ್ವಿಷ್ಣುಕ್ರಾಂತಾಽಪರಾಜಿತಾ ।
ಇಕ್ಷುಗಂಧಾ ತು ಕಾಂಡೇಕ್ಷುಕೋಕಿಲಾಕ್ಷೇಕ್ಷುರಕ್ಷುರಾಃ ॥ ೪೫೯
ಶಾಲೇಯಸ್ಸ್ಯಾಚ್ಛೀತಶಿವಶ್ಛತ್ರಾ ಮಧುರಿಕಾ ಮಿಸಿಃ ।
ಮಿಶ್ರೇಯಾಪ್ಯಥ ಸೀಹುಂಡೋ ವಜ್ರದ್ರುಃ ಸ್ನುಕ್ಸ್ನುಹೀ ಗುಡಾ ॥ ೪೬೦
ಸಮಂತದುಗ್ಧಾಥೋ ವೇಲ್ಲಮಮೋಘಾ ಚಿತ್ರತಂಡುಲಾ ।
ತಂಡುಲಶ್ಚ ಕ್ರಿಮಿಘ್ನಶ್ಚ ವಿಡಂಗಂ ಪುನ್ನಪುಂಸಕಮ್ ॥ ೪೬೧
ಬಲಾ ವಾಟ್ಯಾಲಕೋ ಘಂಟಾರವಾ ತು ಶಣಪುಷ್ಪಿಕಾ ।
ಮೃದ್ವೀಕಾ ಗೋಸ್ತನೀ ದ್ರಾಕ್ಷಾ ಸ್ವಾದ್ವೀ ಮಧುರಸೇತಿ ಚ ॥ ೪೬೨
ಸರ್ವಾನುಭೂತಿಸ್ಸರಲಾ ತ್ರಿಪುಟಾ ತ್ರಿವೃತಾ ತ್ರಿವೃತ್ ।
ತ್ರಿಭಂಡೀ ರೇಚನೀ ಶ್ಯಾಮಾಪಾಲಿಂದ್ಯೌ ತು ಸುಷೇಣಿಕಾ ॥ ೪೬೩
ಕಾಲಾ ಮಸೂರವಿದಲಾರ್ಧಚಂದ್ರಾ ಕಾಲಮೇಷಿಕಾ ।
ಮಧುಕಂ ಕ್ಲೀತಕಂ ಯಷ್ಟಿಮಧುಕಂ ಮಧುಯಷ್ಟಿಕಾ ॥ ೪೬೪

---

೪೫೯. ಆಸ್ಫೋಟಾ, ಗಿರಿಕರ್ಣೀ, ವಿಷ್ಣುಕ್ರಾಂತಾ, ಅಪರಾಜಿತಾ (ಸ್ತ್ರೀ)=ವಿಷ್ಣುಕ್ರಾಂತ. ಇಕ್ಷುಗಂಧಾ (ಸ್ತ್ರೀ), ಕಾಂಡೇಕ್ಷು, ಕೋಕಿಲಾಕ್ಷ, ಇಕ್ಷುರ, ಕ್ಷುರ (ಪು)=ಕೊಳವಳಿಕೆ, ಕೊಳವಂಕೆ, 'ತಾಲಿಂಖಾನ.'

೪೬೦-೪೬೧. ಶಾಲೇಯ, ಶೀತಶಿವ (ಪು), ಛತ್ರಾ, ಮಧುರಿಕಾ, ಮಿಸಿ, ಮಿಶ್ರೇಯಾ (ಸ್ತ್ರೀ)=ಸಬ್ಬಸಿಗೆ. ಸೀಹುಂಡ, ವಜ್ರದ್ರು (ಪು), ಸ್ನುಹ್ (-ಕ್-ಟ್), ಸ್ನುಹೀ, ಗುಡಾ, ಸಮಂತದುಗ್ಧಾ (ಸ್ತ್ರೀ)=ಜಿಕ್ಕಳ್ಳಿ, ಬೊಂಕೆ ಕಳ್ಳಿ. ವೇಲ್ಲ (ನ), ಅಮೋಘಾ, ಚಿತ್ರತಂಡುಲಾ (ಸ್ತ್ರೀ), ತಂಡುಲ (ತಂದೂಲ), ಕ್ರಿಮಿಘ್ನ (ಪು), ವಿಡಂಗ (ಪು. ನ)=ವಾಯುವಿಡಂಗ.

೪೬೨. ಬಲಾ (ಸ್ತ್ರೀ), ವಾಟ್ಯಾಲಕ (ಪು)=ಚಿಟ್ಟಹರುಳುಗಿಡ. ಘಂಟಾರವಾ, ಶಣಪುಷ್ಪಿಕಾ (ಸ್ತ್ರೀ)=ಗಿಲಿಗಿಚ್ಚಿಗಿಡ, ಗಿಲಕೆಗಿಡ. ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ (ಸ್ತ್ರೀ)=ದ್ರಾಕ್ಷಿಬಳ್ಳಿ.

೪೬೩-೪೬೪. ಸರ್ವಾನುಭೂತಿ, ಸರಲಾ, ತ್ರಿಪುಟಾ, ತ್ರಿವೃತಾ, ತ್ರಿವೃತ್, ತ್ರಿಭಂಡೀ, ರೇಚನೀ (ಸ್ತ್ರೀ)=ತಿಗಡೆಮರ. ಶ್ಯಾಮಾ, ಪಾಲಿಂದೀ, ಸುಷೇಣಿಕಾ, ಕಾಲಾ, ಮಸೂರವಿದಲಾ, ಅರ್ಧಚಂದ್ರಾ, ಕಾಲಮೇಷಿಕಾ (ಸ್ತ್ರೀ)=ಕರಿತಿಗಡೆ. ಮಧುಕ, ಕ್ಲೀತಕ, ಯಷ್ಟಿಮಧುಕ (ನ), ಮಧುಯಷ್ಟಿಕಾ (ಸ್ತ್ರೀ)=ಜ್ಯೇಷ್ಠ ಮಧು, ಅತಿಮಧುರ.

ವಿದಾರೀ ಕ್ಷೀರಶುಕ್ಲೇಕ್ಷುಗಂಧಾ ಕ್ರೋಷ್ಟ್ರೀ ತು ಯಾ ಸಿತಾ ।
ಅನ್ಯಾ ಕ್ಷೀರವಿದಾರೀ ಸ್ಯಾನ್ಮಹಾಶ್ವೇತರ್ಕ್ಷಗಂಧಿಕಾ ॥ ೪೬೫
ಲಾಂಗಲೀ ಶಾರದೀ ತೋಯಪಿಪ್ಪಲೀ ಶಕುಲಾದನೀ ।
ಖರಾಶ್ವಾ ಕಾರವೀ ದೀಪ್ಯೋ ಮಯೂರೋ ಲೋಚಮಸ್ತಕಃ ॥ ೪೬೬
ಗೋಪೀ ಶ್ಯಾಮಾ ಶಾರಿವಾ ಸ್ಯಾಚ್ಚಂದನೋತ್ಪಲಶಾರಿವಾ ।
ಯೋಗ್ಯಮೃದ್ಧಿಃ ಸಿದ್ಧಿಲಕ್ಷ್ಮ್ಯೌ ವೃದ್ಧೇರಪ್ಯಾಹ್ವಯಾ ಇಮೇ ॥ ೪೬೭
ಕದಲೀ ವಾರಣಬುಸಾ ರಂಭಾ ಮೋಚಾಂಶುಮತ್ಫಲಾ ।
ಕಾಷ್ಠೀಲಾ ಮುದ್ಗಪರ್ಣೀತು ಕಾಕಮುದ್ಗಾ ಸಹೇತ್ಯಪಿ ॥ ೪೬೮
ವಾರ್ತಾಕೀ ಹಿಂಗುಲೀ ಸಿಂಹೀ ಭಂಟಾಕೀ ದುಷ್ಪ್ರಧರ್ಷಿಣೀ ।
ನಾಕುಲೀ ಸುರಸಾ ರಾಸ್ನಾ ಸುಗಂಧಾ ಗಂಧನಾಕುಲೀ ॥ ೪೬೯

---

೪೬೫. ವಿದಾರೀ, ಕ್ಷೀರಶುಕ್ಲಾ, ಇಕ್ಷುಗಂಧಾ (ಸ್ತ್ರೀ)=ಬಿಳಿಯ ನೆಲಗುಂಬಳ. ಕ್ರೋಷ್ಟ್ರೀ, ಕ್ಷೀರವಿದಾರೀ, ಮಹಾಶ್ವೇತಾ,[1] ಋಕ್ಷಗಂಧಿಕಾ (ಸ್ತ್ರೀ)=ಕರಿಯ ನೆಲಗುಂಬಳ.

೪೬೬. ಲಾಂಗಲೀ, ಶಾರದೀ, ತೋಯಪಿಪ್ಪಲೀ, ಶಕುಲಾದನೀ, (ಸ್ತ್ರೀ)=ನೀರುಹಿಪ್ಪಲಿ ಗಿಡ. ಖರಾಶ್ವಾ, ಕಾರವೀ (ಸ್ತ್ರೀ), ದೀಪ್ಯ, ಮಯೂರ, ಲೋಚಮಸ್ತಕ (ಪು)=ಓಮ, ಮಯೂರಶಿಖೆ.

೪೬೭. ಗೋಪೀ, ಶ್ಯಾಮಾ, ಶಾರಿವಾ, ಚಂದನಾ (ಅನಂತಾ), ಉತ್ಪಲಶಾರಿವಾ (ಸ್ತ್ರೀ)=ಸೊಗದೆಬೇರಿನ ಗಿಡ, ಸುಗಂಧಪಾಲ. ಯೋಗ್ಯ (ನ), ಋದ್ಧಿ, ಸಿದ್ಧಿ, ಲಕ್ಷ್ಮೀ, ವೃದ್ಧಿ (ಸ್ತ್ರೀ)=ಋದ್ಧಿ ಅಥವಾ ವೃದ್ಧಿಯೆಂಬ ಮೂಲಿಕೆ.

೪೬೮. ಕದಲೀ, ವಾರಣಬುಸಾ, ರಂಭಾ, ಮೋಚಾ, ಅಂಶುಮತ್ಫಲಾ, ಕಾಷ್ಠೀಲಾ (ಸ್ತ್ರೀ)=ಬಾಳೆಮರ. ಮುದ್ಗಪರ್ಣೀ, ಕಾಕಮುದ್ಗಾ, ಸಹಾ (ಸ್ತ್ರೀ)=ಕಾಡು ಹೆಸರು.

೪೬೯-೪೭೦. ವಾರ್ತಾಕೀ[2], ಹಿಂಗುಲೀ, ಸಿಂಹೀ, ಭಂಟಾಕೀ, ದುಷ್ಪ್ರಧರ್ಷಿಣೀ (ಸ್ತ್ರೀ)=ಬದನೆಗಿಡ. ನಾಕುಲೀ, ಸುರಸಾ, ರಾಸ್ನಾ, ಸುಗಂಧಾ, ಗಂಧನಾಕುಲೀ, ನಕುಲೇಷ್ಟಾ, ಭುಜಂಗಾಕ್ಷೀ, ಛತ್ರಾಕೀ, ಸುವಹಾ (ಸ್ತ್ರೀ)=ರಾಸ್ನೆ, ಸರ್ಪಾಕ್ಷಿ, ನಂಜಾರೆ. ವಿದಾರಿಗಂಧಾ, ಅಂಶುಮತೀ, ಶಾಲಪರ್ಣೀ, ಸ್ಥಿರಾ, ಧ್ರುವಾ (ಸ್ತ್ರೀ)= ಮೂರೆಲೆ ಹೊನ್ನೆ.

---

[1] ಮಹಾ+ಅಶ್ವೇತಾ=ಮಹಾಶ್ವೇತಾ. [2] ವಾರ್ತಾ, ವಾರ್ತಾಕು (ಸ್ತ್ರೀ), ವಾರ್ತಾಂಗ, ವಾತಿಂಗಣ (ಪು)—ಎಂಬ ರೂಪಾಂತರಗಳು ಉಂಟು.



ನಕುಲೇಷ್ಟಾ ಭುಜಂಗಾಕ್ಷೀ ಛತ್ರಾಕೀ ಸುವಹಾ ಚ ಸಾ ।
ವಿದಾರಿಗಂಧಾಂಶುಮತೀ ಶಾಲಪರ್ಣೀ ಸ್ಥಿರಾ ಧ್ರುವಾ ॥ ೪೭೦
ತುಂಡಿಕೇರೀ ಸಮುದ್ರಾಂತಾ ಕಾರ್ಪಾಸೀ ಬದರೇತಿಚ ।
ಭಾರದ್ವಾಜೀ ತು ಸಾ ವನ್ಯಾ ಶೃಂಗೀ ತು ವೃಷಭೋ ವೃಷಃ ॥ ೪೭೧
ಗಾಂಗೇರುಕೀ ನಾಗಬಲಾ ಝಷಾ ಹ್ರಸ್ವಗವೇಧುಕಾ ।
ಧಾಮಾರ್ಗವೋ ಘೋಷಕಾಸ್ಸ್ಯಾನ್ಮಹಾಜಾಲೀ ಸ ಪೀತಕಃ ॥ ೪೭೨
ಜ್ಯೌತ್ಸ್ನೀ ಪಟೋಲಿಕಾ ಜಾಲೀ ನಾದೇಯೀ ಭೂಮಿಜಂಬುಕಾ ।
ಸ್ಯಾಲ್ಲಾಂಗಲೀ ತ್ವಗ್ನಿಶಿಖಾ ಕಾಕಾಂಗೀ ಕಾಕನಾಸಿಕಾ ॥ ೪೭೩
ಗೋಧಾಪದೀ ತು ಸುವಹಾ ಮುಸಲೀ ತಾಲಮೂಲಿಕಾ ।
ಅಜಶೃಂಗೀ ವಿಷಾಣೀ ಸ್ಯಾದ್ಗೋಜಿಹ್ವಾದಾರ್ವಿಕೇ ಸಮೇ ॥ ೪೭೪
ತಾಂಬೂಲವಲ್ಲೀ ತಾಂಬೂಲೀ ನಾಗವಲ್ಲ್ಯಪ್ಯಥ ದ್ವಿಜಾ ।
ಹರೇಣೂ ರೇಣುಕಾ ಕೌಂತೀ ಕಪಿಲಾ ಭಸ್ಮಗಂಧಿನೀ ॥ ೪೭೫

---

೪೭೧. ತುಂಡಿಕೇರೀ, ಸಮುದ್ರಾಂತಾ, ಕಾರ್ಪಾಸೀ, ಬದರಾ (ಸ್ತ್ರೀ)=ಹತ್ತಿಗಿಡ. ಭಾರದ್ವಾಜೀ (ಸ್ತ್ರೀ)=ಕಾಡುಹತ್ತಿಗಿಡ. ಶೃಂಗೀ (ಸ್ತ್ರೀ), (ಶೃಂಗಿನ್), ವೃಷಭ, ವೃಷ (ಪು)=ಹೆರಿಗೆ ಹಾಲೆ ಗಿಡ.

೪೭೨. ಗಾಂಗೇರುಕೀ, ನಾಗಬಲಾ, ಝಷಾ, ಹ್ರಸ್ವಗವೇಧುಕಾ (ಸ್ತ್ರೀ)=ಹೀರೆಬಳ್ಳಿ, ಧಾಮಾರ್ಗವ, ಘೋಷಕ (ಪು)=ಕಹಿಹೀರೆ. ಮಹಾಜಾಲಿನ್ (ಪು), ಮಹಾಜಾಲೀ (ಸ್ತ್ರೀ)=ಕಾಡುಹೀರೆ.

೪೭೩. ಜ್ಯೌತ್ಸ್ನೀ, ಪಟೋಲಿಕಾ, ಜಾಲೀ (ಸ್ತ್ರೀ)=ಪಡವಲಬಳ್ಳಿ. ನಾದೇಯೀ, ಭೂಮಿಜಂಬುಕಾ (ಸ್ತ್ರೀ)=ನಾಯಿನೇರಳೆ. ಲಾಂಗಲೀ, ಅಗ್ನಿಶಿಖಾ (ಸ್ತ್ರೀ)=ಕೋಲುಕುಟಕನ ಮರ. ಕಾಕಾಂಗೀ, ಕಾಕನಾಸಿಕಾ (ಸ್ತ್ರೀ)=ಕಾಗಿತೊಂಡೆ.

೪೭೪. ಗೋಧಾಪದೀ, ಸುವಹಾ (ಸ್ತ್ರೀ)=ಹಂಸಪಾದೀಗಿಡ. ಮುಸಲೀ, ತಾಲಮೂಲಿಕಾ (ಸ್ತ್ರೀ)=ನೆಲತಾಳೆ, 'ಸಾಲಾಮಿಶ್ರೀ'. ಅಜಶೃಂಗೀ, ವಿಷಾಣೀ (ಸ್ತ್ರೀ)=ಕುರುಟಿಕೆಗಿಡ. ಗೋಜಿಹ್ವಾ, ದಾರ್ವಿಕಾ (ಸ್ತ್ರೀ)=ಎತ್ತಿನ ನಾಲಿಗೆ ಗಿಡ.

೪೭೫. ತಾಂಬೂಲವಲ್ಲೀ, ತಾಂಬೂಲೀ, ನಾಗವಲ್ಲೀ (ಸ್ತ್ರೀ)=ವೀಳ್ಯದೆಲೆ ಬಳ್ಳಿ. ದ್ವಿಜಾ, ಹರೇಣು, ರೇಣುಕಾ, ಕೌಂತೀ, ಕಪಿಲಾ, ಭಸ್ಮಗಂಧಿನೀ (ಸ್ತ್ರೀ)=ರೇಣುಕೆಬೀಜದ ಗಿಡ, ಶಕ್ಕೋಲೆಗಿಡ.

ಏಲಾವಾಲುಕಮೈಲೇಯಂ ಸುಗಂಧಿ ಹರಿವಾಲುಕಮ್ ।
ವಾಲುಕಂ ಚಾಥ ಪಾಲಂಕ್ಯಾಂ ಮುಕುಂದಃ ಕುಂದಕುಂದುರೂ ॥ ೪೭೬
ಬಾಲಂ ಹ್ರೀಬೇರಬರ್ಹಿಷ್ಠೋದೀಚ್ಯಂ ಕೇಶಾಂಬುನಾಮ ಚ ।
ಕಾಲಾನುಸಾರ್ಯವೃದ್ಧಾಶ್ಮಪುಷ್ಪಶೀತಶಿವಾನಿ ತು ॥ ೪೭೭
ಶೈಲೇಯಂ ತಾಲಪರ್ಣೀ ತು ದೈತ್ಯಾ ಗಂಧಕುಟೀ ಮುರಾ ।
ಗಂಧಿನೀ ಗಜಭಕ್ಷ್ಯಾ ತು ಸುವಹಾ ಸುರಭೀ ರಸಾ ॥ ೪೭೮
ಮಹೇರಣಾ ಕುಂದುರುಕೀ ಸಲ್ಲಕೀ ಹ್ರಾದಿನೀತಿ ಚ ।
ಅಗ್ನಿಜ್ವಾಲಾಸುಭಿಕ್ಷೇ ತು ಧಾತಕೀ ಧಾತುಪುಷ್ಪಿಕಾ ॥ ೪೭೯
ಪೃಥ್ವಿಕಾ ಚಂದ್ರಬಾಲೈಲಾ ನಿಷ್ಕುಟಿರ್ಬಹುಲಾಥ ಸಾ ।
ಸೂಕ್ಷ್ಮೋಪಕುಂಚಿಕಾ ತುತ್ಥಾ ಕೋರಂಗೀ ತ್ರಿಪುಟಾ ತ್ರುಟಿಃ ॥ ೪೮೦
ವ್ಯಾಧಿಃ ಕುಷ್ಠಂ ಪಾರಿಭಾವ್ಯಂ ವಾಪ್ಯಂ ಪಾಕಲಮುತ್ಪಲಮ್ ।
ಶಂಖಿನೀ ಚೋರಪುಷ್ಪೀ ಸ್ಯಾತ್ಕೇಶಿನ್ಯಥ ವಿತುನ್ನಕಃ ॥ ೪೮೧
ಝುಟಾಮಲಾಜ್ಝಟಾ ತಾಲೀ ಶಿವಾ ತಾಮಲಕೀತಿ ಚ ।
ಪ್ರಪೌಂಡರೀಕಂ ಪೌಂಡರ್ಯಮಥ ತುನ್ನಃ ಕುಬೇರಕಃ ॥ ೪೮೨

---

೪೭೬. ಏಲಾವಾಲುಕ, ಐಲೇಯ, ಸುಗಂಧಿ, ಹರಿವಾಲುಕ, ವಾಲುಕ (ನ)=ಸುರಸುರಕೆ, ಕಿರಿಯಾಲಕ್ಕಿ. ಪಾಲಂಕೀ (ಸ್ತ್ರೀ), ಮುಕುಂದ, ಕುಂದ, ಕುಂದುರು (ಪು)=ಕುಂದುರಕ, ಮೊಲದ ಕಿವಿ ಗಡ್ಡೆಗಿಡ.

೪೭೭. ಬಾಲ, ಹ್ರೀಬೇರ, ಬರ್ಹಿಷ್ಠ, ಉದೀಚ್ಯ, ಕೇಶಾಂಬು (ನ), (ಕೇಶ ಮತ್ತು ಜಲದ ಪರ್ಯಾಯ ಶಬ್ದಗಳು ಎಂದು ಕೆಲವರು)=ಮುಡಿವಾಳ.

೪೭೭-೪೭೯. ಕಾಲಾನುಸಾರ್ಯ, ವೃದ್ಧ, ಅಶ್ಮಪುಷ್ಪ, ಶೀತಶಿವ, ಶೈಲೇಯ (ನ)=ಕಲ್ಲು ಹೂ, ಕಲ್ನಾರು, ಶಿಲಾಜಿತು. ತಾಲಪರ್ಣೀ, ದೈತ್ಯಾ, ಗಂಧಕುಟೀ, ಮುರಾ, ಗಂಧಿನೀ, (ಸ್ತ್ರೀ)=ಕಿರಿಶಿವನಿ. ಗಜಭಕ್ಷ್ಯಾ, ಸುವಹಾ, ಸುರಭಿ, ರಸಾ, ಮಹೇರಣಾ, ಕುಂದುರುಕೀ ಸಲ್ಲಕೀ, (ಹ್ರಾದಿನೀ) ಹ್ಲಾಹಿನೀ (ಸ್ತ್ರೀ) =ತದುಕಿನಗಿಡ ಆನೆಬೇಲ. ಅಗ್ನಿಜ್ವಾಲಾ, ಸುಭಿಕ್ಷಾ, ಧಾತಕೀ, ಧಾತುಪುಷ್ಪಿಕಾ (ಧಾತೃಪುಷ್ಪಿಕಾ) (ಸ್ತ್ರೀ)=ಧಾತಕೀ, ಕುಸುಮದ ಗಿಡ, ಆರೆಹೂವಿನ ಗಿಡ.

೪೮೦. ಪೃಥ್ವಿಕಾ, ಚಂದ್ರಬಾಲಾ, ಏಲಾ, ನಿಷ್ಕುಪಿ, ಬಹುಲಾ (ಸ್ತ್ರೀ)=ಯಾಲಕ್ಕಿ. ಉಪಕುಂಚಿಕಾ, ತುತ್ಥಾ, ಕೋರಂಗೀ, ತ್ರಿಪುಟಾ, ತ್ರುಟಿ (ಸ್ತ್ರೀ)=ಸಣ್ಣಯಾಲಕ್ಕಿ.

೪೮೧-೪೮೨. ವ್ಯಾಧಿ (ಪು), ಕುಷ್ಠ, ಪಾರಿಭಾವ್ಯ, ವಾಪ್ಯ, ಪಾಕಲ, ಉತ್ಪಲ (ನ)=ಚಂಗಲ



ಕುಣಿಃ ಕಚ್ಛಃ ಕಾಂತಲಕೋ ನಂದಿವೃಕ್ಷೋಽಥ ರಾಕ್ಷಸೀ ।
ಚಂಡಾ ಧನಹರೀ ಕ್ಷೇಮದುಷ್ಪತ್ರಗಣಹಾಸಕಾಃ ॥ ೪೮೩
ವ್ಯಾಲಾಯುಧಂ ವ್ಯಾಘ್ರನಖಂ ಕರಂಜಂ ಚಕ್ರಕಾರಕಮ್ ।
ಶುಷಿರಾ ವಿದ್ರುಮಲತಾ ಕಪೋತಾಂಘ್ರಿರ್ನಟೀ ನಲೀ ॥ ೪೮೪
ಧಮನ್ಯಂಜನಕೇಶೀಚ ಹನುರ್ಹಟ್ಟವಿಲಾಸಿನೀ ।
ಶುಕ್ತಿಶ್ಶಂಖಃ ಖುರಃ ಕೋಲದಲಂ ನಖಮಥಾಢಕೀ ॥ ೪೮೫
ಕಾಕ್ಷೀ ಮೃತ್ಸ್ನಾ ತುವರಿಕಾ ಮೃತಾಲಕಸುರಾಷ್ಟ್ರಜೇ ।
ಕುಟನ್ನಟಂ ದಾರಪುರಂ ವಾನೇಯಂ ಪರಿಪೇಲವಮ್ ॥ ೪೮೬
ಪ್ಲವಗೋಪುರಗೋನರ್ದಕೈವರ್ತೀಮುಸ್ತಕಾನಿ ಚ ।
ಗ್ರಂಥಿಪರ್ಣಂ ಶುಕಂ ಬರ್ಹಿಪುಷ್ಪಂ ಸ್ಥೌಣೇಯಕುಕ್ಕುರೇ ॥ ೪೮೭
ಮರುನ್ಮಾಲಾ ತು ಪಿಶುನಾ ಸ್ಪೃಕ್ಕಾ ದೇವೀ ಲತಾ ಲಘುಃ ।
ಸಮುದ್ರಾಂತಾ ವಧೂಃ ಕೋಟಿವರ್ಷಾ ಲಂಕೋಪಿಕೇತ್ಯಪಿ ॥ ೪೮೮

---

ಕೋಷ್ಠ. ಶಂಖಿನೀ, ಚೋರಪುಷ್ಪಿ, ಕೇಶಿನೀ (ಸ್ತ್ರೀ)=ಕಡಿಯಾಲ. ವಿತುನ್ನಕ (ಪು), ಝುಟಾ, ಅಮಲಾ, ಅಜ್ಝಟಾ, ತಾಲೀ, ಶಿವಾ, ತಾಮಲಕೀ (ಸ್ತ್ರೀ)=ಕಿರುನೆಲ್ಲಿಗಿಡ.

೪೮೨-೪೮೩. ಪ್ರಪೌಂಡರೀಕ, ಪೌಂಡರ್ಯ (ನ)=ಪುಂಡಿಗಿಡ. ತುನ್ನ, ಕುಬೇರಕ, ಕುಣಿ, ಕಚ್ಛ, ಕಾಂತಲಕ, ನಂದಿವೃಕ್ಷ (ಪು)=ನಂದೀಮರ. ರಾಕ್ಷಸೀ, ಚಂಡಾ, ಧನಹರೀ (ಸ್ತ್ರೀ), ಕ್ಷೇಮ, ದುಷ್ಪತ್ರ, ಗಣಹಾಸಕ (ಪು)=ಕರೀಕಚೋರ, ಬಲರಾಕ್ಷಸೀಗಡ್ಡೆ ಗಿಡ.

೪೮೪-೪೮೫. ವ್ಯಾಲಾಯುಧ, ವ್ಯಾಘ್ರನಖ, ಕರಂಜ, ಚಕ್ರಕಾರಕ (ನ)=ಹುಲಿಯುಗುರು ಗಿಡ, ವ್ಯಾಘ್ರನಖಿ. ಶುಷಿರಾ (ಸುಷಿರಾ), ವಿದ್ರುಮಲತಾ, ಕಪೋತಾಂಘ್ರಿ, ನಟೀ, ನಲೀ, ಧಮನೀ, ಅಂಜನಕೇಶೀ (ಸ್ತ್ರೀ)=ವಾಟೆಗಿಡ (ಬಿದಿರಿನಂತೆ ಇರುತ್ತದೆ, ಒಳಗಡೆ ಟೊಳ್ಳು). (ಸ್ತ್ರೀ)=ಸುಗಂಧಯುಕ್ತವಾದ ಲತಾವಿಶೇಷ.

೪೮೫-೪೮೬. ಶುಕ್ತಿ (ಸ್ತ್ರೀ), ಶಂಖ, ಖುರ (ಪು), ಕೋಲದಲ, ನಖ (ನ)=ನಖವೆಂಬ ಮೂಲಿಕೆ. ಆಢಕೀ, ಕಾಕ್ಷೀ, ಮೃತ್ಸ್ನಾ, ತುವರಿಕಾ (ಸ್ತ್ರೀ) ಮೃತಾಲಕ, ಸುರಾಷ್ಟ್ರಜ (ನ)=ತೊಗರಿಗಿಡ.

೪೮೬-೪೮೭. ಕುಟನ್ನಟ, ದಾಶಪುರ, ವಾನೇಯ, ಪರಿಪೇಲವ, ಪ್ಲವ, ಗೋಪುರ, ಗೋನರ್ದ, ಕೈವರ್ತೀಮುಸ್ತಕ (ನ)=ತುಂಗಮುಸ್ತೆ, ತುಂಗೆಗೆಡ್ಡೆ. ಗ್ರಂಥಿಪರ್ಣ, ಶುಕ, ಬರ್ಹಿಪುಷ್ಪ, ಸ್ಥೌಣೇಯ, ಕುಕ್ಕುರ (ನ)=ಪಚ್ಚೆಗಿಡ ; ಮಾಚೀಪತ್ರೆಯಗಿಡ.

೪೮೮. ಮರುನ್ಮಾಲಾ, ಪಿಶುನಾ, ಸ್ಪೃಕ್ಕಾ, ದೇವೀ, ಲತಾ, ಲಘು, ಸಮುದ್ರಾಂತಾ,

ತಪಸ್ವಿನೀ ಜಟಾಮಾಂಸೀ ಜಟಿಲಾ ಲೋಮಶಾ ಮಿಸೀ ।
ತ್ವಕ್ಪತ್ರಮುತ್ಕಟಂ ಭೃಂಗಂ ತ್ವಚಂ ಚೋಚಂ ವರಾಂಗಕಮ್ ॥ ೪೮೯
ಕರ್ಚೂರಕೋ ದ್ರಾವಿಡಕಃ ಕಾಲ್ಯಕೋ ವೇಧಮುಖ್ಯಕಃ ।
ಓಷಧ್ಯೋ ಜಾತಿಮಾತ್ರೇ ಸ್ಯುರಜಾತೌ ಸರ್ವಮೌಷಧಮ್ ॥ ೪೯೦
ಶಾಕಾಖ್ಯಂ ಪತ್ರಪುಷ್ಪಾದಿ ತಂಡುಲೀಯೋಽಲ್ಪಮಾರಿಷಃ ।
ವಿಶಲ್ಯಾಗ್ನಿಶಿಖಾನಂತಾ ಫಲಿನೀ ಶಕ್ರಪುಷ್ಪ್ಯಪಿ ॥ ೪೯೧
ಸ್ಯಾದೃಕ್ಷಗಂಧಾ ಛಗಲಾಂತ್ರ್ಯಾವೇಗೀ ವೃದ್ಧದಾರಕಃ ।
ಜುಂಗೋ ಬ್ರಾಹ್ಮೀ ತು ಮತ್ಸ್ಯಾಕ್ಷೀ ವಯಸ್ಥಾ ಸೋಮವಲ್ಲರೀ ॥ ೪೯೨
ಪಟುಪರ್ಣೀ ಹೈಮವತೀ ಸ್ವರ್ಣಕ್ಷೀರೀ ಹಿಮಾವತೀ ।
ಹಯಪುಚ್ಛೀ ತು ಕಾಂಬೋಜೀ ಮಾಷಪರ್ಣೀ ಮಹಾಸಹಾ ॥ ೪೯೩

ವಧೂ, ಕೋಟಿವರ್ಷಾ, ಲಂಕೋಪಿಕಾ (ಸ್ತ್ರೀ)=ಸುಂಕೆಬೇರು.

೪೮೯. ತಪಸ್ವಿನೀ, ಜಟಾ, ಮಾಂಸೀ, ಜಟಾಮಾಂಸೀ, ಜಟಿಲಾ, ಲೋಮಶಾ, ಮಿಸೀ (ಸ್ತ್ರೀ)=ಜಟಾಮಾಂಸಿ. ತ್ವಕ್‌ಪತ್ರ, ಉತ್ಕಟ, ಭೃಂಗ, ತ್ವಚ, ಚೋಚ, ವರಾಂಗಕ (ನ)=ಲವಂಗಪತ್ರೆಗಿಡ.

೪೯೦. ಕರ್ಚೂರಕ, ದ್ರಾವಿಡಕ, ಕಾಲ್ಯಕ (ಕಲ್ಪಕ), ವೇಧಮುಖ್ಯಕ (ಪು)=ಕಚೋರ, ಗಂಧಕಚೋರ. ಓಷಧೀ (ಸ್ತ್ರೀ)=ಆಕೃತಿಯಿಂದ ಜಾತಿಯನ್ನು ಗುರುತಿಸಬಹುದಾದ ಎಲ್ಲಾ ಬಗೆಯ ಮೂಲಿಕೆ. ಔಷಧ (ನ)=ಮೂಲಿಕೆಯಿಂದ ಮಾಡಿದ ರಸ, ತೈಲ ಮುಂತಾದ ದ್ರವ್ಯ.

೪೯೧. ಶಾಕ (ನ)=ಗಿಡದ ಹೂ ಎಲೆ ಮೊದಲಾದದ್ದು. 'ಮೂಲ ಪತ್ರ ಕರೀರಾಗ್ರ ಫಲ ಕಾಂಡಾಧಿರೂಢಕಮ್ । ತ್ವಕ್ ಪುಷ್ಪಂ ಕವಚಂ ಚೈವ ಶಾಕಂ ದಶವಿದಂ ಸ್ಮೃತಮ್ ॥'= ಬೇರು, ಎಲೆ, ಕೊಂಬು (ಮೊಳೆ), ಕುಡಿ, ಹಣ್ಣು-ಕಾಯಿ, ಕಾಂಡ, ಬೀಜ, ದಿಂಡು, ತೊಗಟೆ, ಹೂ, ಸಿಪ್ಪೆ—ಇವು ಶಾಕ. ತಂಡುಲೀಯ, ಅಲ್ಪಮಾರಿಷ (ಪು)=ಕೀರೆಸೊಪ್ಪಿನ ಗಿಡ, ಕಿರಕಸಾಲೆ. ವಿಶಲ್ಯಾ, ಅಗ್ನಿಶಿಖಾ, ಅನಂತಾ, ಫಲಿನೀ, ಶಕ್ರಪುಷ್ಪೀ (ಸ್ತ್ರೀ)=ಬೆಣ್ಣೆ ಬಿದಿರಿನ ಗಿಡ.

೪೯೨. ಋಕ್ಷಗಂಧಾ, ಛಗಲಾಂತ್ರಿ (ಛಗಲಾಂಡೀ), ಆವೇಗೀ (ಸ್ತ್ರೀ), ವೃದ್ಧದಾರಕ, ಜುಂಗ (ಪು)=ಅನಂತಗೊಂಡೆಸೊಪ್ಪು. ಬ್ರಾಹ್ಮೀ, ಮತ್ಸ್ಯಾಕ್ಷೀ, ವಯಸ್ಥಾ, ಸೋಮವಲ್ಲರೀ (ಸ್ತ್ರೀ)=ಒಂದೆಲಗ.

೪೯೩. ಪಟುಪರ್ಣೀ, ಹೈಮವತೀ, ಸ್ವರ್ಣಕ್ಷೀರೀ, ಹಿಮಾವತೀ (ಸ್ತ್ರೀ)=ಕಂಕೋಷ್ಠ, ಘಂಟಾಮಣಿ ಸೊಪ್ಪು. ಹಯಪುಚ್ಛೀ, ಕಾಂಬೋಜೀ, ಮಾಷಪರ್ಣೀ, ಮಹಾಸಹಾ (ಸ್ತ್ರೀ)=ಕಾಡು ಉದ್ದು.



ತುಂಡಿಕೇರೀ ರಕ್ತಫಲಾ ಬಿಂಬಿಕಾ ಪೀಲುಪರ್ಣ್ಯಪಿ ।
ಬರ್ಬರಾ ಕವರೀ ತುಂಗೀ ಖರಪುಷ್ಪಾಜಗಂಧಿಕಾ ॥ ೪೯೪
ಏಲಾಪರ್ಣೀ ತು ಸುವಹಾ ರಾಸ್ನಾ ಯುಕ್ತರಸಾ ಚ ಸಾ ।
ಚಾಂಗೇರೀ ಚುಕ್ರಿಕಾ ದಂತಶಠಾಂಬಷ್ಠಾಮ್ಲಲೋಣಿಕಾ ॥ ೪೯೫
ಸಹಸ್ರವೇಧೀ ಚುಕ್ರೋಽಮ್ಲವೇತಸಶ್ಶತವೇಧ್ಯಪಿ ।
ನಮಸ್ಕಾರೀ ಗಂಡಕಾಲೀ ಸಮಂಗಾ ಖದಿರೇತ್ಯಪಿ ॥ ೪೯೬
ಜೀವಂತೀ ಜೀವನೀ ಜೀವಾ ಜೀವನೀಯಾ ಮಧುಸ್ರವಾ ।
ಕೂರ್ಚಶೀರ್ಷೋ ಮಧುರಕಃ ಶೃಂಗಹ್ರಸ್ವಾಂಗಜೀವಕಾಃ ॥ ೪೯೭
ಕಿರಾತತಿಕ್ತೋ ಭೂನಿಂಬೋಽನಾರ್ಯತಿಕ್ತೋಽಥ ಸಪ್ತಲಾ ।
ವಿಮಲಾ ಸಾತಲಾ ಭೂರಿಫೇನಾ ಚರ್ಮಕಷೇತ್ಯಪಿ ॥ ೪೯೮

೪೯೪. ತುಂಡಿಕೇರೀ, ರಕ್ತಫಲಾ, ಬಿಂಬಿಕಾ, ಪೀಲುಪರ್ಣೀ (ಸ್ತ್ರೀ)=ತೊಂಡೆಬಳ್ಳಿ. ಬರ್ಬರಾ (ವರ್ವರಾ), ಕವರೀ, ತುಂಗೀ, ಖರಪುಷ್ಪಾ, ಅಜಗಂಧಿಕಾ (ಸ್ತ್ರೀ)=ನಾರಂಬಾಳೆ, ನಾರವಾಳ.

೪೯೫. ಏಲಾಪರ್ಣೀ, ಸುವಹಾ, ರಾಸ್ನಾ, ಯುಕ್ತರಸಾ (ಸ್ತ್ರೀ)=ಸಣ್ಣ ರಾಸ್ನೆ, 'ಸಾರ್ಸಪರಿಲಾ'. ಚಾಂಗೇರೀ, ಚುಕ್ರಿಕಾ, ದಂತಶಠಾ, ಅಂಬಷ್ಠಾ, ಆಮ್ಲಲೋಣಿಕಾ (ಸ್ತ್ರೀ)=ಪುಳ್ಳಂಪುರಚೆ, ಹುಳಿಸೊಪ್ಪು.

೪೯೬. ಸಹಸ್ರವೇಧಿನ್, ಚುಕ್ರ, ಅಮ್ಲವೇತಸ, ಶತವೇಧಿನ್ (ಪು)=ಹುಳಿಹಬ್ಬೆಗಿಡ, ನಿಂಬೆಹುಲ್ಲು. ನಮಸ್ಕಾರಿನ್ (ಪು), ಗಂಡಕಾಲೀ, ಸಮಂಗಾ, ಖದಿರಾ (ಸ್ತ್ರೀ)=ಮುಟ್ಟಿದರ ಮುನಿಯ, ಮುಚಗ, ನಾಚಿಕೆಮುಳ್ಳಿನ ಗಿಡ.

೪೯೭. ಜೀವಂತೀ, ಜೀವನೀ, ಜೀವಾ, ಜೀವನೀಯಾ, ಮಧುಸ್ರವಾ (ಸ್ತ್ರೀ)=ಕಿರಿಹಾಲೆ. ಕೂರ್ಚಶೀರ್ಷ, ಮಧುರಕ, ಶೃಂಗ, ಹ್ರಸ್ವಾಂಗ, ಜೀವಕ (ಪು)=ಜೀವಕ, ಹಕ್ಕಿಶಿಳ್ಳೆಗಿಡ.

೪೯೮. ಕಿರಾತತಿಕ್ತ, ಭೂನಿಂಬ, ಅನಾರ್ಯತಿಕ್ತ (ಪು)=ನೆಲಬೇವು, ಜಿರಾಯತ. ಸಪ್ತಲಾ, ವಿಮಲಾ, ಸಾತಲಾ, ಭೂರಿಫೇನಾ, ಚರ್ಮಕಷಾ (ಸ್ತ್ರೀ)=ಹಮ್ಮಗಾರೆ, ಸಂಬರೇಣಿ, ಅಂಟುವಾಳದ ಭೇದ.

೪೯೯. ವಾಯಸೋಲೀ, ಸ್ವಾದುರಸಾ, ವಯಸ್ಥಾ (ಸ್ತ್ರೀ)=ಕಾಕೋಳಿಸೊಪ್ಪು. ಮಕೂಲಕ, ನಿಕುಂಭ (ಪು), ದಂತಿಕಾ, ಪ್ರತ್ಯಕ್ಶ್ರೇಣೀ, ಉದುಂಬರ ಪರ್ಣೀ (ಸ್ತ್ರೀ)=ವಜ್ರದಂತಿ, ಕರಿಯ ಉಮ್ಮತ್ತಿ.

ವಾಯಸೋಲೀ ಸ್ವಾದುರಸಾ ವಯಸ್ಥಾಥ ಮಕೂಲಕಃ ।
ನಿಕುಂಭೋ ದಂತಿಕಾ ಪ್ರತ್ಯಕ್ಶ್ರೇಣ್ಯುದುಂಬರಪರ್ಣ್ಯಪಿ ॥ ೪೯೯
ಅಜಮೋದಾ ತೂಗ್ರಗಂಧಾ ಬ್ರಹ್ಮದರ್ಭಾ ಯವಾನಿಕಾ ।
ಮೂಲೇ ಪುಷ್ಕರಕಾಶ್ಮೀರಪದ್ಮಪತ್ರಾಣಿ ಪೌಷ್ಕರೇ ॥ ೫೦೦
ಅವ್ಯಥಾತಿಚರಾ ಪದ್ಮಾ ಚಾರಟೀ ಪದ್ಮಚಾರಿಣೀ ।
ಕಾಂಪಿಲ್ಯಃ ಕರ್ಕಶಶ್ಚಂದ್ರೋ ರಕ್ತಾಂಗೋ ರೋಚನೀತ್ಯಪಿ ॥ ೫೦೧
ಪ್ರಪುನ್ನಾಡಸ್ತ್ವೇಡಗಜೋ ದದ್ರುಘ್ನಶ್ಚಕ್ರಮರ್ದಕಃ ।
ಪದ್ಮಾಟ ಉರಣಾಕ್ಷಶ್ಚ ಪಲಾಂಡುಸ್ತು ಸುಕಂದಕಃ ॥ ೫೦೨
ಲತಾರ್ಕದುರ್ದ್ರುಮೌ ತತ್ರ ಹರಿತೇಽಥ ಮಹೌಷಧಮ್ ।
ಲಶುನಂ ಗೃಂಜನಾರಿಷ್ಟ ಮಹಾಕಂದ ರಸೋನಕಾಃ ॥ ೫೦೩
ಪುನರ್ನವಾ ತು ಶೋಥಘ್ನೀ ವಿತುನ್ನಂ ಸುನಿಷಣ್ಣಕಮ್ ।
ಸ್ಯಾದ್ವಾತಕಶ್ಶೀತಲೋಽಪರಾಜಿತಾ ಶಣಪರ್ಣ್ಯಪಿ ॥ ೫೦೪

---

೫೦೦. ಅಜಮೋದಾ, ಉಗ್ರಗಂಧಾ, ಬ್ರಹ್ಮದರ್ಭಾ, ಯವಾನಿಕಾ (ಸ್ತ್ರೀ)=ಓಮು, ಅಜಮೋದ. ಪುಷ್ಕರ, ಕಾಶ್ಮೀರ, ಪದ್ಮಪತ್ರ (ನ)=ನೆಲದಾವರೆಗಡ್ಡೆ.

೫೦೧. ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ (ಸ್ತ್ರೀ)=ಬೆಟ್ಟದಾವರೆ. ಕಾಂಪಿಲ್ಯ, ಕರ್ಕಶ, ಚಂದ್ರ, ರಕ್ತಾಂಗ (ಪು), ರೋಚನೀ (ಸ್ತ್ರೀ)=ರೋಚನೀ ಗಿಡ.

೫೦೨. ಪ್ರಪುನ್ನಾಡ, ಏಡಗಜ, ದದ್ರುಘ್ನ, ಚಕ್ರಮರ್ದಕ, ಪದ್ಮಾಟ, ಉರಣಾಕ್ಷ (ಪು)=ತರ್ಗಚೀ ಗಿಡ, ತಗಚಿ, ಚಗಚಿ. ಪಲಾಂಡು, ಸುಕಂದಕ (ಪು)=ನೀರುಳ್ಳಿ.

೫೦೩. ಲತಾರ್ಕ, ದುರ್ದ್ರುಮ (ಪು)=ದಿಂಡು ಈರುಳ್ಳಿ, ಹಸಿರು ಈರುಳ್ಳಿ. ಮಹೌಷಧ, ಲಶುನ, (ನ), ಗೃಂಜನ, ಅರಿಷ್ಟ, ಮಹಾಕಂದ, ರಸೋನಕ (ಪು)=ಬೆಳ್ಳುಳ್ಳಿ.

೫೦೪. ಪುನರ್ನವಾ, ಶೋಥಘ್ನೀ (ಸ್ತ್ರೀ)=ಕೊಮ್ಮೆ ಗಿಡ, ಗಣಜಿಲೆ. ವಿತುನ್ನ, ಸುನಿಷಣ್ಣಕ (ನ)=ನೀರುಚಂಚಲಿ. ವಾತಕ, ಶೀತಲ (ಪು), ಅಪರಾಜಿತಾ, ಶಣಪರ್ಣೀ (ಸ್ತ್ರೀ)=ತಕ್ಕಿಲೆಗಿಡ, ಸಿಡಿಲೊಲ್ಲದ ಗಿಡ.

೫೦೫. ಪಾರಾವತಾಂಘ್ರಿ, ಕಟಭೀ, ಪಣ್ಯಾ, ಜ್ಯೋತಿಷ್ಮತೀ (ಸ್ತ್ರೀ)=ಕಂಗೊಂಗೆಗಿಡ, ಮಿಂಚುಬಳ್ಳಿ. ವಾರ್ಷಿಕ (ನ), ತ್ರಾಯಮಾಣಾ, ತ್ರಾಯಂತೀ, ಬಲಭದ್ರಿಕಾ (ಸ್ತ್ರೀ)=ನೀರಾಮೆ ಬಳ್ಳಿ.



ಪಾರಾವತಾಂಘ್ರಿಃ ಕಟಭೀ ಪಣ್ಯಾ ಜ್ಯೋತಿಷ್ಮತೀ ಲತಾ ।
ವಾರ್ಷಿಕಂ ತ್ರಾಯಮಾಣಾ ಸ್ಯಾತ್ ತ್ರಾಯಂತೀ ಬಲಭದ್ರಿಕಾ ॥ ೫೦೫
ವಿಷ್ವಕ್ಸೇನಪ್ರಿಯಾ ಘೃಷ್ಟಿರ್ವಾರಾಹೀ ಬದರೇತ್ಯಪಿ ।
ಮಾರ್ಕವೋ ಭೃಂಗರಾಜಸ್ಸ್ಯಾತ್ಕಾಕಮಾಚೀ ತು ವಾಯಸೀ ॥ ೫೦೬
ಶತಪುಷ್ಪಾ ಸಿತಚ್ಛತ್ರಾತಿಚ್ಛತ್ರಾ ಮಧುರಾ ಮಿಸಿಃ ।
ಅವಾಕ್ಪುಷ್ಪೀ ಕಾರವೀ ಚ ಸರಣಾ ತು ಪ್ರಸಾರಣೀ ॥ ೫೦೭
ತಸ್ಯಾಂ ಕಟಂಭರಾ ರಾಜಬಲಾ ಭದ್ರಬಲೇತ್ಯಪಿ ।
ಜನೀ ಜತೂಕಾ ರಜನೀ ಜತುಕೃಚ್ಚಕ್ರವರ್ತಿನೀ ॥ ೫೦೮
ಸಂಸ್ಪರ್ಶಾಥ ಶಟೀ ಗಂಧಮೂಲೀ ಷಡ್ಗ್ರಂಥಿಕೇತ್ಯಪಿ ।
ಕರ್ಚೂರೋಽಪಿ ಪಲಾಶೋಽಥ ಕಾರವೇಲ್ಲಃ ಕಟಿಲ್ಲಕಃ ॥ ೫೦೯
ಸುಷವೀ ಚಾಥ ಕುಲಕಂ ಪಟೋಲಸ್ತಿಕ್ತಕಃ ಪಟುಃ ।
ಕೂಷ್ಮಾಂಡಕಸ್ತು ಕರ್ಕಾರುರುರ್ವಾರುಃ ಕರ್ಕಟೀ ಸ್ತ್ರಿಯೌ ॥ ೫೧೦

---

೫೦೬. ವಿಷ್ವಕ್ಸೇನಪ್ರಿಯಾ, ಘೃಷ್ಟಿ, ವಾರಾಹೀ, ಬದರಾ (ಸ್ತ್ರೀ)=ಹಾಮಚೀಬಳ್ಳಿ. ಮಾರ್ಕವ, ಭೃಂಗರಾಜ (ಪು)=ಗರುಗ, ಹೊನಗೊನ್ನೆ. ಕಾಕಮಾಚೀ, ವಾಯಸೀ (ಸ್ತ್ರೀ)=ಕಾಚೀ ಗಿಡ, ಕರೀಗಣಿಕೆ.

೫೦೭-೫೦೮. ಶತಪುಷ್ಪಾ, ಸಿತಚ್ಛತ್ರಾ, ಅತಿಚ್ಛತ್ರಾ, ಮಧುರಾ, ಮಿಸಿ, ಅವಾಕ್ಪುಷ್ಪೀ, ಕಾರವೀ (ಸ್ತ್ರೀ)=ಕಾಡುಸಬ್ಬಸಿಗೆ. ಸರಣಾ, ಪ್ರಸಾರಣೀ (ಪ್ರಸಾರಿಣೀ), ಕಟಂಭರಾ, ರಾಜಬಲಾ, ಭದ್ರಬಲಾ (ಸ್ತ್ರೀ)=ಸಾರಣೆಗಿಡ, ಮುಳ್ಳುಅಗಸೆ.

೫೦೮-೫೦೯-೫೧೦. ಜನೀ, ಜತೂಕಾ, ರಜನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ (ಸ್ತ್ರೀ)=ಕೊರಿಂದೆಗಿಡ, ಚಕ್ರವರ್ತಿಸೊಪ್ಪಿನಗಿಡ, ಚಕ್ಕೋತ. ಶಟೀ, ಗಂಧ ಮೂಲೀ, ಷಡ್ಗ್ರಂಥಿಕಾ (ಸ್ತ್ರೀ), ಕರ್ಚೂರ, ಪಲಾಶ (ಪು)=ಗಂಟುಕಚೋರ. ಕಾರವೇಲ್ಲ, ಕಟಿಲ್ಲಕ (ಕಠಿಲ್ಲಕ) (ಪು), ಸುಷವೀ (ಸ್ತ್ರೀ)=ಹಾಗಲಬಳ್ಳಿ. ಕುಲಕ (ನ), ಪಟೋಲ, ತಿಕ್ತಕ, ಪಟು (ಪು)=ಕಹಿಪಡವಲ.

೫೧೦. ಕೂಷ್ಮಾಂಡಕ, ಕರ್ಕಾರು (ಪು)=ಬೂದುಗುಂಬಳ. ಉರ್ವಾರು (ಈರ್ವಾರು), ಕರ್ಕಟೀ (ಸ್ತ್ರೀ)=ಸೌತೆ.

ಇಕ್ಷ್ವಾಕುಃ ಕಟುತುಂಬೀ ಸ್ಯಾತ್ತುಂಬ್ಯಲಾಬೂರುಭೇ ಸಮೇ ।
ಚಿತ್ರಾ ಗವಾಕ್ಷೀ ಗೋಡುಂಬಾ ವಿಶಾಲಾತ್ವಿಂದ್ರವಾರುಣೀ ॥ ೫೧೧
ಅರ್ಶೋಘ್ನಃ ಸೂರಣಃ ಕಂದೋ ಗಂಡೀರಸ್ತು ಸಮಷ್ಠಿಲಾ ।
ಕಲಂಬ್ಯುಪೋದಕಾಽಸ್ತ್ರೀ ತು ಮೂಲಕಂ ಹಿಲಮೋಚಿಕಾ ॥ ೫೧೨
ವಾಸ್ತುಕಂ ಶಾಕಭೇದಾಃ ಸ್ಯುಃ ದೂರ್ವಾ ತು ಶತಪರ್ವಿಕಾ ।
ಸಹಸ್ರವೀರ್ಯಾಭಾರ್ಗವ್ಯೌ ರುಹಾನಂತಾಥ ಸಾ ಸಿತಾ ॥ ೫೧೩
ಗೋಲೋಮೀ ಶತವೀರ್ಯಾ ಚ ಗಂಡಾಲೀ ಶಕುಲಾಕ್ಷಕಃ ।
ಕುರುವಿಂದೋ ಮೇಘನಾಮಾ ಮುಸ್ತಾ ಮುಸ್ತಕಮಸ್ತ್ರಿಯಾಮ್ ॥ ೫೧೪
ಸ್ಯಾತ್ ಭದ್ರಮುಸ್ತಕೋ ಗುಂದ್ರಾ ಚೂಡಾಲಾ ಚಕ್ರಲೋಚ್ಚಟಾ ।
ವಂಶೇ ತ್ವಕ್ಸಾರಕರ್ಮಾರತ್ವಚಿಸಾರತೃಣಧ್ವಜಾಃ ॥ ೫೧೫

---

೫೧೧. ಇಕ್ಷ್ವಾಕು, ಕಟುತುಂಬೀ (ಸ್ತ್ರೀ)=ಕಹಿಸೋರೆಗಿಡ. ತುಂಬೀ, ಅಲಾಬೂ (ಸ್ತ್ರೀ)=ಸಿಹಿಸೋರೆಗಿಡ. (ಅಲಾಬು (ನ)=ಸಿಹಿಸೋರೆಕಾಯಿ). ಚಿತ್ರಾ, ಗವಾಕ್ಷೀ, ಗೋಡುಂಬಾ (ಗೋತುಂಬಾ) (ಸ್ತ್ರೀ)=ಹೆಮ್ಮಕ್ಕರೆ, ಸೌತೆಯ ಭೇದ. ವಿಶಾಲಾ, ಇಂದ್ರವಾರುಣೀ (ಸ್ತ್ರೀ)=ಹಾವುಮೆಕ್ಕೆಗಿಡ.

೫೧೨. ಅರ್ಶೋಘ್ನ, ಸೂರಣ, ಕಂದ (ಪು)=ಸೂರಣಗಡ್ಡೆ. ಗಂಡೀರ (ಪು), ಸಮಷ್ಠಿಲಾ (ಸ್ತ್ರೀ)=ಮೊಗವಾಳೆಗಡ್ಡೆ, ಹೊಳೆಬದನೆ. ಕಲಂಬೀ (ಸ್ತ್ರೀ)=ಬಳ್ಳಿಬಚ್ಚಲುಸೊಪ್ಪು, ಹಂಬುಬಳಸೆ. ಉಪೋದಕಾ (ಸ್ತ್ರೀ)=ಕಾವುಬಚ್ಚಲುಸೊಪ್ಪು. ಮೂಲಕ (ಪು.ನ.)=ಮೂಲಂಗಿ. ಹಿಲಮೋಚಿಕಾ (ಸ್ತ್ರೀ)=ಚಿಲಿಕೆಸೊಪ್ಪು.

೫೧೩-೫೧೪. ವಾಸ್ತುಕ (ನ)=ಹರಿವೆ. ದೂರ್ವಾ, ಶತಪರ್ವಿಕಾ, ಸಹಸ್ರವೀರ್ಯಾ, ಭಾರ್ಗವೀ, ರುಹಾ, ಅನಂತಾ (ಸ್ತ್ರೀ)=ದೂರ್ವೆ, ಗರಿಕೆ. ಗೋಲೋಮೀ, ಶತವೀರ್ಯಾ, ಗಂಡಾಲೀ (ಸ್ತ್ರೀ), ಶಕುಲಾಕ್ಷಕ (ಪು)=ಬಿಳಿಯ ದೂರ್ವೆ, ಬಿಳಿಗರಿಕೆ.

೫೧೪. ಕುರುವಿಂದ, ಮೇಘ (ಪು), ಮುಸ್ತಾ (ಸ್ತ್ರೀ), ಮುಸ್ತಕ (ಪು.ನ)=ಒಂದು ಬಗೆಯ ತುಂಗೆಗಡ್ಡೆ, ನೀಳವಾದ ತುಂಗೆಗಡ್ಡೆ.

೫೧೫. ಭದ್ರಮುಸ್ತಕ (ಪು), ಗುಂದ್ರಾ (ಸ್ತ್ರೀ)=ಭದ್ರಮುಸ್ತೆ. ಚೂಡಾಲಾ, ಚಕ್ರಲಾ, ಉಚ್ಚಟಾ (ಸ್ತ್ರೀ)=ಗಂಟೆಮುಸ್ತೆ.



ಶತಪರ್ವಾ ಯವಫಲೋ ವೇಣುಮಸ್ಕರತೇಜನಾಃ ।
ವೇಣವಃ ಕೀಚಕಾಸ್ತೇಸ್ಯುರ್ಯೇ ಸ್ವನಂತ್ಯನಿಲೋದ್ಧತಾಃ ॥ ೫೧೬
ಗ್ರಂಥಿರ್ನಾ ಪರ್ವಪರುಷೀ ಗುಂದ್ರಸ್ತೇಜನಕಶ್ಶರಃ ।
ನಡಸ್ತು ಧಮನಃ ಪೋಟಗಲೋಽಥೋ ಕಾಶಮಸ್ತ್ರಿಯಾಮ್ ॥ ೫೧೭
ಇಕ್ಷುಗಂಧಾ ಪೋಟಗಲಃ ಪುಂಭೂಮನಿ ತು ಬಲ್ವಜಾಃ ।
ರಸಾಲ ಇಕ್ಷುಸ್ತದ್ಭೇದಾಃ ಪುಂಡ್ರಕಾಂತಾರಕಾದಯಃ ॥ ೫೧೮
ಸ್ಯಾದ್ವೀರಣಂ ವೀರತರಂ ಮೂಲೇಽಸ್ಯೋಶೀರಮಸ್ತ್ರಿಯಾಮ್ ।
ಅಭಯಂ ನಲದಂ ಸೇವ್ಯಮಮೃಣಾಲಂ ಜಲಾಶಯಮ್ ॥ ೫೧೯
ಲಾಮಜ್ಜಕಂ ಲಘುಲಯಮವದಾಹೇಷ್ಟಕಾಪಥೇ ।
ನಡಾದಯಸ್ತೃಣಂ ಗರ್ಮುಚ್ಛ್ಯಾಮಾಕಪ್ರಮುಖಾ ಅಪಿ ॥ ೫೨೦
ಅಸ್ತ್ರೀ ಕುಶಂ ಕುಥೋ ದರ್ಭಃ ಪವಿತ್ರಮಥ ಕತ್ತೃಣಮ್ ।
ಪೌರಸೌಗಂಧಿಕಧ್ಯಾಮದೇವಜಗ್ಧಕರೌಹಿಷಮ್ ॥ ೫೨೧

---

೫೧೫-೫೧೬. ವಂಶ ತ್ವಕ್ಸಾರ, ಕರ್ಮಾರ, ತ್ವಚಿಸಾರ, ತೃಣಧ್ವಜ, ಶತಪರ್ವನ್, ಯವಫಲ, ವೇಣು, ಮಸ್ಕರ, ತೇಜನ (ಪು)=ಬಿದಿರು. ಕೀಚಕ (ಪು)=ಗಾಳಿ ಬೀಸಿದಾಗ ಶಬ್ದ ಮಾಡುವ ಬಿದಿರು.

೫೧೭. ಗ್ರಂಥಿ (ಪು), ಪರ್ವನ್, ಪರುಸ್ (ನ)=ಬಿದಿರು ಮೊದಲಾದವುಗಳ ಗೆಣ್ಣು,-ಗು. ಗುಂದ್ರ, ತೇಜನಕ, ಶರ (ಪು)=ಕಾಗೆಬಿದಿರು.

೫೧೭-೫೧೮. ನಡ, ಧಮನ, ಪೋಟಗಲ, (ಪು)=ದೇವನಾಳ, ದೇವಲಾಲಿಕಡ್ಡಿ. ಕಾಶ (ಪು. ನ), ಇಕ್ಷುಗಂಧಾ (ಸ್ತ್ರೀ), ಪೋಟಗಲ (ಪು)=ಜಂಬುಹುಲ್ಲು. ಬಲ್ವಜ (ಪು. ನಿತ್ಯಬ. ವ)=ಜೊಂಡುಹುಲ್ಲು. ರಸಾಲ, ಇಕ್ಷು (ಪು)=ಕಬ್ಬು. ಪುಂಡ್ರ, ಕಾಂತಾರಕ (ಪು)=ಕಬ್ಬಿನ ಭೇದ.

೫೧೯-೫೨೦. ವೀರಣ, ವೀರತರ (ನ)=ಲಾವಂಚದ ಗಿಡ. ಉಶೀರ (ಪು. ನ), ಅಭಯ, ನಲದ, ಸೇವ್ಯ, ಅಮೃಣಾಲ, ಜಲಾಶಯ, ಲಾಮಜ್ಜಕ, ಲಘುಲಯ, ಲಘು, ಲಯ, ಅವದಾಹ, ಇಷ್ಟಕಾಪಥ (ನ)=ಲಾವಂಚದ ಬೇರು.

೫೨೦. ನಡಶಬ್ದ (೫೧೭ನೆಯ ಶ್ಲೋಕ) ಮೊದಲಾಗಿ ಶ್ಯಾಮಾಕ ಶಬ್ದದವರೆಗಿರತಕ್ಕವು ತೃಣಭೇದ ಎನಿಸಿಕೊಳ್ಳುತ್ತವೆ. ಗರ್ಮುತ್ (ಸ್ತ್ರೀ)=ತೃಣಧಾನ್ಯ ವಿಶೇಷ. ಶ್ಯಾಮಾಕ (ಪು)=ಸಾಮೆ.

ಛತ್ರಾತಿಚ್ಛತ್ರಪಾಲಘ್ನೌ ಮಾಲಾತೃಣಕಭೂಸ್ತೃಣೌ ।
ಶಷ್ಪಂ ಬಾಲತೃಣಂ ಘಾಸೋ ಯವಸಂ ತೃಣಮರ್ಜುನಮ್ ॥ ೫೨೨
ತೃಣಾನಾಂ ಸಂಹತಿಸ್ತೃಣ್ಯಾ ನಡ್ಯಾ ತು ನಡಸಂಹತಿಃ ।
ತೃಣರಾಜಾಹ್ವಯಸ್ತಾಲೋ ನಾಲಿಕೇರಸ್ತು ಲಾಂಗಲೀ ॥ ೫೨೩
ಘೋಂಟಾ ತು ಪೂಗಃ ಕ್ರಮುಕೋ ಗುವಾಕಃ ಖಪುರೋಽಸ್ಯ ತು ।
ಫಲಮುದ್ವೇಗಮೇತೇ ಚ ಹಿಂತಾಲಸಹಿತಾಸ್ತ್ರಯಃ ॥ ೫೨೪
ಖರ್ಜೂರಃ ಕೇತಕೀ ತಾಲೀ ಖರ್ಜೂರೀ ಚ ತೃಣದ್ರುಮಾಃ ।

ಇತಿ ವನೌಷಧಿವರ್ಗಃ

---

೫೨೧. ಕುಶ (ಪು. ನ), ಕುಥ, ದರ್ಭ, (ಪು), ಪವಿತ್ರ (ನ)=ದರ್ಭೆಹುಲ್ಲು. ಕತ್ತೃಣ, ಪೌರ, ಸೌಗಂಧಿಕ, ಧ್ಯಾಮ, ದೇವಜಗ್ಧಕ, ರೌಹಿಷ (ನ)=ಕಾಚಿಹುಲ್ಲು ; ದಮನ.

೫೨೨. ಛತ್ರಾ (ಸ್ತ್ರೀ), ಅತಿಚ್ಛತ್ರ, ಪಾಲಘ್ನ (ಪು)=ನಾಯಿಕೊಡೆ ; ಛತ್ರಾಕಾರವಾಗಿ ಬೆಳೆಯುವ ಹುಲ್ಲು. ಮಾಲಾತೃಣಕ, ಭೂಸ್ತೃಣ (ಪು)=ಚಿಟ್ಟುಹುಲ್ಲು. ಚಾಪೆಗೆ ಉಪಯೋಗಿಸುವಹುಲ್ಲು. ಶಷ್ಪ, ಬಾಲ ತೃಣ (ನ)=ಎಳೆಹುಲ್ಲು. ಘಾಸ (ಪು), ಯವಸ (ನ)=ದನಗಳು ತಿನ್ನುವ ಹುಲ್ಲು, ಮೇವು. ತೃಣ, ಅರ್ಜುನ (ನ)=ಸಾಮಾನ್ಯವಾದ ಹುಲ್ಲು.

೫೨೩. ತೃಣ್ಯಾ (ಸ್ತ್ರೀ)=ಹುಲ್ಲುಹೊರೆ, ಮೆದೆ. ನಡ್ಯಾ (ಸ್ತ್ರೀ)= ನಡಗಳ ಹೊರೆ, ಮೆದೆ. ತೃಣರಾಜ, ತಾಲ (ಪು)=ತಾಳೆಮರ. ನಾಲಿಕೇರ (ನಾರಿಕೇಲ) ಲಾಂಗಲಿನ್ (ಪು)=ತೆಂಗಿನಮರ.

೫೨೪-೫೨೫. ಘೋಂಟಾ (ಸ್ತ್ರೀ), ಪೂಗ, ಕ್ರಮುಕ, ಗುವಾಕ, ಖಪುರ (ಪು)=ಅಡಿಕೆಮರ. ಉದ್ವೇಗ (ನ)=ಅಡಿಕೆಕಾಯಿ. ಹಿಂತಾಲ (ಪು)=ಕಿರುತಾಳೆ. ಖರ್ಜೂರ (ಪು)=ಖರ್ಜೂರದ ಮರ. ಕೇತಕೀ, ತಾಲೀ (ಸ್ತ್ರೀ)=ಕೇದಗೆ ಹೂವಿನ ಗಿಡ, ಶ್ರೀತಾಳೆ. ಖರ್ಜೂರಿ (ಸ್ತ್ರೀ)=ಖರ್ಜೂರದ ಒಂದು ಭೇದ. ನಾಲಿಕೇರ ಶಬ್ದದಿಂದ ಹಿಡಿದು ಖರ್ಜೂರಿ ಶಬ್ದದವರೆಗಿರತಕ್ಕವು ತೃಣದ್ರುಮವೆನಿಸಿಕೊಳ್ಳುತ್ತವೆ.

## ೫. ಸಿಂಹಾದಿವರ್ಗಃ

ಸಿಂಹೋ ಮೃಗೇಂದ್ರಃ ಪಂಚಾಸ್ಯೋ ಹರ್ಯಕ್ಷಃ ಕೇಸರೀ ಹರಿಃ ॥ ೫೨೫
ಶಾರ್ದೂಲದ್ವೀಪಿನೌ ವ್ಯಾಘ್ರೇ ತರಕ್ಷುಸ್ತು ಮೃಗಾದನಃ ।
ವರಾಹಸ್ಸೂಕರೋ ಘೃಷ್ಟಿಃ ಕೋಲಃ ಪೋತ್ರೀ ಕಿರಿಃ ಕಿಟಿಃ ॥ ೫೨೬
ದಂಷ್ಟ್ರೀ ಘೋಣೀ ಸ್ತಬ್ಧರೋಮಾ ಕ್ರೋಡೋ ಭೂದಾರ ಇತ್ಯಪಿ ।
ಕಪಿಪ್ಲವಂಗಪ್ಲವಗಶಾಖಾಮೃಗವಲೀಮುಖಾಃ ॥ ೫೨೭
ಮರ್ಕಟೋ ವಾನರಃ ಕೀಶೋ ವನೌಕಾ ಅಥ ಭಲ್ಲುಕೇ ।
ಋಕ್ಷಾಚ್ಛಭಲ್ಲಭಲ್ಲೂಕಾ ಗಂಡಕೇ ಖಡ್ಗಖಡ್ಗಿನೌ ॥ ೫೨೮
ಲುಲಾಯೋ ಮಹಿಷೋ ವಾಹದ್ವಿಷತ್ಕಾಸರಸೈರಿಭಾಃ ।
ಸ್ತ್ರಿಯಾಂ ಶಿವಾ ಭೂರಿಮಾಯಗೋಮಾಯುಮೃಗಧೂರ್ತಕಾಃ ॥ ೫೨೯
ಶೃಗಾಲ ವಂಚಕ ಕ್ರೋಷ್ಟು ಫೇರು ಫೇರವ ಜಂಬುಕಾಃ ।
ಓತುರ್ಬಿಡಾಲೋ ಮಾರ್ಜಾಲೋ ವೃಷದಂಶಕ ಆಖುಭುಕ್ ॥ ೫೩೦

---

### ಸಿಂಹಾದಿವರ್ಗ

೫೨೫. ಸಿಂಹ, ಮೃಗೇಂದ್ರ, ಪಂಚಾಸ್ಯ, ಹರ್ಯಕ್ಷ, ಕೇಸರಿನ್, ಹರಿ (ಪು)=ಸಿಂಹ.[1]

೫೨೬-೫೨೭. ಶಾರ್ದೂಲ, ದ್ವೀಪಿನ್, ವ್ಯಾಘ್ರ (ಪು)=ಹುಲಿ.[2] ತರಕ್ಷು, ಮೃಗಾದನ (ಪು)=ಕಿರುಬ, ಶಿವಂಗಿ. ವರಾಹ, ಸೂಕರ, ಘೃಷ್ಟಿ, ಕೋಲ, ಪೋತ್ರಿನ್, ಕಿರಿ, ಕಿಟಿ, ದಂಷ್ಟ್ರಿನ್, ಘೋಣಿನ್, ಸ್ತಬ್ಧರೋಮನ್, ಕ್ರೋಡ, ಭೂದಾರ (ಪು)=ಹಂದಿ.

೫೨೭-೫೨೮. ಕಪಿ, ಪ್ಲವಂಗ, ಪ್ಲವಗ, ಶಾಖಾಮೃಗ, ವಲೀಮುಖ, ಮರ್ಕಟ, ವಾನರ, ಕೀಶ, ವನೌಕಸ್ (ಪು)=ಕಪಿ, ಕೋತಿ. ಭಲ್ಲುಕ, ಋಕ್ಷ, ಅಚ್ಛಭಲ್ಲ, ಭಲ್ಲ, ಭಲ್ಲೂಕ (ಪು)=ಕರಡಿ. ಗಂಡಕ, ಖಡ್ಗ, ಖಡ್ಗಿನ್, (ಪು)=ಗಂಡಾಮೃಗ, ಖಡ್ಗಮೃಗ.

೫೨೯-೫೩೦. ಲುಲಾಯ, ಮಹಿಷ, ವಾಹದ್ವಿಷತ್, ಕಾಸರ, ಸೈರಿಭ (ಪು)=ಕೋಣ. ಶಿವಾ (ಸ್ತ್ರೀ), ಭೂರಿಮಾಯ, ಗೋಮಾಯು, ಮೃಗಧೂರ್ತಕ, ಶೃಗಾಲ (ಸೃಗಾಲ), ವಂಚಕ, ಕ್ರೋಷ್ಟು, ಫೇರು, ಫೇರವ, ಜಂಬುಕ (ಪು)=ನರಿ. (ಶಿವಾಶಬ್ದವು ಗಂಡು ಹೆಣ್ಣು ನರಿ

---

[1] 'ಕಂಠೀರವೋ ಮೃಗರಿಪುರ್ಮೃಗದೃಷ್ಟಿರ್ಮೃಗಾಶನಃ' —ಇವೂ ಸಿಂಹಪರ್ಯಾಯಗಳು.
[2] 'ಪುಂಡರೀಕಃ ಪಂಚನಖಚಿತ್ರಕಾಯ ಮೃಗದ್ವಿಷಃ' —ಇವೂ ಹುಲಿಯ ಪರ್ಯಾಯಗಳು.

ತ್ರಯೋ ಗೌಧೇರಗೌಧಾರಗೌಧೇಯಾ ಗೋಧಿಕಾತ್ಮಜೇ ।
ಶ್ವಾವಿತ್ತು ಶಲ್ಯಸ್ತಲ್ಲೋಮ್ನಿ ಶಲಲೀ ಶಲಲಂ ಶಲಮ್ ॥ ೫೩೧
ವಾತಪ್ರಮೀರ್ವಾತಮೃಗಃ ಕೋಕಸ್ತ್ವೀಹಾಮೃಗೋ ವೃಕಃ ।
ಮೃಗೇ ಕುರಂಗವಾತಾಯುಹರಿಣಾಜಿನಯೋನಯಃ ॥ ೫೩೨
ಐಣೇಯಮೇಣ್ಯಾಶ್ಚರ್ಮಾದ್ಯಮೇಣಸ್ಯೈಣಮುಭೇ ತ್ರಿಷು ।
ಕದಲೀ ಕಂದಲೀ ಚೀನಶ್ಚಮೂರುಪ್ರಿಯಕಾವಪಿ ॥ ೫೩೩
ಸಮೂರುಶ್ಚೇತಿ ಹರಿಣಾ ಅಮೀ ಅಜಿನಯೋನಯಃ ।
ಕೃಷ್ಣಸಾರ ರುರು ನ್ಯಂಕು ರಂಕು ಶಂಬರ ರೌಹಿಷಾಃ ॥ ೫೩೪
ಗೋಕರ್ಣಪೃಷತೈಣರ್ಶ್ಯರೋಹಿತಾಶ್ಚಮರೋ ಮೃಗಾಃ ।
ಗಂಧರ್ವಶ್ಶರಭೋ ರಾಮಸ್ಸೃಮರೋ ಗವಯಃ ಶಶಃ ॥ ೫೩೫

---

ಗಳೆರಡನ್ನೂ ಬೋಧಿಸುತ್ತದೆ. ಕ್ರೋಷ್ಟು ಶಬ್ದದ ಸ್ತ್ರೀಲಿಂಗರೂಪ ಕ್ರೋಷ್ಟ್ರೀ). ಓತು, ಬಿಡಾಲ, ಮಾರ್ಜಾಲ (ಮಾರ್ಜಾರ), ವೃಷದಂಶಕ, ಆಖುಭುಜ್ (ಪು)=ಬೆಕ್ಕು.

೫೩೧. ಗೌಧೇರ, ಗೌಧಾರ, ಗೌಧೇಯ (ಪು)=ಉಡ, ಉಡದ ಮರಿ. ಶ್ವಾವಿಧ್, ಶಲ್ಯ (ಪು)=ಮುಳ್ಳುಹಂದಿ. ಶಲಲೀ (ಸ್ತ್ರೀ), ಶಲಲ, ಶಲ (ನ)=ಮುಳ್ಳುಹಂದಿಯ ಕೂದಲು, ವರಾಹಕಟ್ಟು.

೫೩೨. ವಾತಪ್ರಮೀ, ವಾತಮೃಗ (ಪು)=ಗಾಳಿಗೆ ಎದುರಾಗಿ ಓಡುವ ಸ್ವಭಾವವುಳ್ಳ ಜಿಂಕೆ. ಕೋಕ, ಈಹಾಮೃಗ, ವೃಕ (ಪು)=ತೋಳ. ಮೃಗ, ಕುರಂಗ, ವಾತಾಯು, ಹರಿಣ, ಅಜಿನಯೋನಿ (ಪು)=ಜಿಂಕೆ.

೫೩೩-೫೩೪. ಐಣೇಯ (ನ)=ಹೆಣ್ಣುಜಿಂಕೆಯ ಚರ್ಮ, ಮಾಂಸ ಮೊದಲಾದದ್ದು. ಐಣ (ನ)= ಗಂಡುಜಿಂಕೆಯ ಚರ್ಮ, ಮಾಂಸ ಮೊದಲಾದದ್ದು. ಈ ಎರಡು ಶಬ್ದಗಳು ವಿಶೇಷ್ಯಾನುರೋಧವಾಗಿ ಮೂರು ಲಿಂಗಗಳಲ್ಲಿಯೂ ಬರುತ್ತವೆ. ಉದಾ :—ಐಣೇಯಃ -ಐಣಃ ಪಾದಃ, ಐಣೇಯೀ- ಐಣೀ ತ್ವಕ್, ಐಣೇಯಂ-ಐಣಂ ಮಾಂಸಮ್. ಕದಲೀ, ಕಂದಲೀ (ಸ್ತ್ರೀ), ಚೀನ, ಚಮೂರು, ಪ್ರಿಯಕ, ಸಮೂರು (ಪು)=ಉತ್ತಮವಾದ ಚರ್ಮವನ್ನು ಕೊಡುವ ವಿವಿಧ ಜಿಂಕೆಗಳು.

೫೩೪-೫೩೫. ಕೃಷ್ಣಸಾರ, ರುರು, ನ್ಯಂಕು, ರಂಕು, ಶಂಬರ (ಶಂವರ), ರೌಹಿಷ, ಗೋಕರ್ಣ, ಪೃಷತ, ಏಣ, ಋಶ್ಯ (ಋಷ್ಯ), ರೋಹಿತ, ಚಮರ (ಪು)=ವಿವಿಧ ಜಾತಿಯ ಜಿಂಕೆಗಳು. ಗಂಧರ್ವ (ಪು)=ಕಸ್ತೂರೀ ಮೃಗ. ಶರಭ (ಪು)=ಸಿಂಹಕ್ಕಿಂತ ಬಲಶಾಲಿಯಾದ



ಇತ್ಯಾದಯೋ ಮೃಗೇಂದ್ರಾದ್ಯಾ ಗವಾದ್ಯಾಃ ಪಶುಜಾತಯಃ ।
ಉಂದುರುರ್ಮೂಷಿಕೋಽಪ್ಯಾಖುರ್ಗಿರಿಕಾ ಬಾಲಮೂಷಿಕಾ ॥ ೫೩೬
ಚುಚುಂದರೀ ಗಂಧಮೂಷೀ ದೀರ್ಘದೇಹೀ ತು ಮೂಷಿಕಾ ।
ಸರಟಃ ಕೃಕಲಾಸಸ್ಸ್ಯಾನ್ಮುಸಲೀ ಗೃಹಗೋಧಿಕಾ ॥ ೫೩೭
ಲೂತಾ ಸ್ತ್ರೀ ತಂತುವಾಯೋರ್ಣನಾಭಮರ್ಕಟಕಾಸ್ಸಮಾಃ ।
ನೀಲಂಗುಸ್ತು ಕ್ರಿಮಿಃ ಕರ್ಣಜಲೌಕಾ ಶತಪದ್ಯುಭೇ ॥ ೫೩೮
ವೃಶ್ಚಿಕಶ್ಶೂಕಕೀಟಸ್ಸ್ಯಾದಲಿದ್ರೋಣೌ ತು ವೃಶ್ಚಿಕೇ ।
ಪಾರಾವತಃ ಕಲರವಃ ಕಪೋತೋಽಥ ಶಶಾದನಃ ॥ ೫೩೯
ಪತ್ರೀ ಶ್ಯೇನ ಉಲೂಕಸ್ತು ವಾಯಸಾರಾತಿಪೇಚಕೌ ।
ವ್ಯಾಘ್ರಾಟಃ ಸ್ಯಾದ್ಭರದ್ವಾಜಃ ಖಂಜರೀಟಸ್ತು ಖಂಜನಃ ॥ ೫೪೦

---

ಮೃಗವಿಶೇಷ. ರಾಮ (ಪು)=ದೊಡ್ಡ ಜಾತಿಯ ಜಿಂಕೆ. ಸೃಮರ (ಪು)=ದೊಡ್ಡ ಚಮರೀಮೃಗ. ಗವಯ (ಪು)=ಹಸುವಿನಂತಿರುವ ಒಂದು ಮೃಗ, ಕಾಡುಹಸು, ಕಡವ. ಶಶ (ಪು)=ಮೊಲ.

೫೩೬. ಇದುವರೆಗೆ ಹೇಳಿದ ಸಿಂಹಾದಿಪ್ರಾಣಿಗಳಿಗೂ ಮುಂದೆ ವೈಶ್ಯವರ್ಗದಲ್ಲಿ ಹೇಳುವ ಗೋ, ಮೇಷಾದಿಗಳಿಗೂ ಪಶುಗಳೆಂದು ಹೆಸರು. ಉಂದುರು, ಮೂಷಿಕ,[1] ಆಖು (ಪು)=ಇಲಿ. ಗಿರಿಕಾ, ಬಾಲಮೂಷಿಕಾ (ಸ್ತ್ರೀ)=ಚಿಟ್ಟಿಲಿ, ಚಿಕ್ಕ ಜಾತಿಯ ಇಲಿ.

೫೩೭. ಚುಚುಂದರೀ, ಗಂಧಮೂಷೀ (ಸ್ತ್ರೀ)=ಮೂಗಿಲಿ. ದೀರ್ಘದೇಹಿನ್ (ಪು) ಮೂಷಿಕಾ (ಸ್ತ್ರೀ)=ಹೆಗ್ಗಣ. ಸರಟ, ಕೃಕಲಾಸ (ಪು)=ಓತೀಕೇತ, ಹೆಂಟೆಗೊದ್ದ, ಹಾವುರಾಣಿ. ಮುಸಲೀ, ಗೃಹಗೋಧಿಕಾ (ಸ್ತ್ರೀ)=ಹಲ್ಲಿ, ಪಲ್ಲಿ, ಗೌಳಿ.

೫೩೮. ಲೂತಾ (ಸ್ತ್ರೀ), ತಂತುವಾಯ, ಊರ್ಣನಾಭ, ಮರ್ಕಟಕ (ಪು)=ಜೇಡರಹುಳು. ನೀಲಂಗು, ಕ್ರಿಮಿ[2] (ಪು)=ಹುಳು, ಕ್ರಿಮಿ. ಕರ್ಣಜಲೌಕಾ, ಕರ್ಣಜಲೌಕಸ್, ಶತಪದೀ (ಸ್ತ್ರೀ)=ಜರಿ, ನೂರು ಕಾಲಿನ ಹುಳು.

೫೩೯-೫೪೦. ವೃಶ್ಚಿಕ, ಶೂಕಕೀಟ (ಪು)=ಚೇಳಿನಂತಿರುವ ಒಂದು ಹುಳು. ಅಲಿ, ದ್ರೋಣ (ದ್ರುಣ), ವೃಶ್ಚಿಕ, (ಪು)=ಚೇಳು. ಪಾರಾವತ, ಕಲರವ, ಕಪೋತ (ಪು)=ಪಾರಿವಾಳ. ಶಶಾದನ, ಪತ್ರಿನ್, ಶ್ಯೇನ (ಪು)=ಗಿಡಗ, ಡೇಗೆ. ಉಲೂಕ, ವಾಯಸಾರಾತಿ, ಪೇಚಕ[3] (ಪು)=ಗೂಗೆ,

[1] ಉಂದರ, ಮೂಷಕ ಎಂಬ ರೂಪಾಂತರಗಳೂ ಉಂಟು.
[2] ಕೃಮಿ ಎಂಬ ರೂಪಾಂತರವೂ ಉಂಟು.
[3] 'ದಿವಾಂಧಃ ಕೌಶಿಕೋ ಘೂಕೋ ದಿವಾಭೀತೋ ನಿಶಾಟನಃ' ಇವೂ ಗೂಬೆಯ ಪರ್ಯಾಯಗಳು.

ಲೋಹಪೃಷ್ಠಸ್ತು ಕಂಕಸ್ಸ್ಯಾದಥ ಚಾಷಃ ಕಿಕೀದಿವಿಃ ।
ಕಲಿಂಗಭೃಂಗಧೂಮ್ಯಾಟಾ ಅಥ ಸ್ಯಾಚ್ಛತಪತ್ರಕಃ ॥ ೫೪೧
ದಾರ್ವಾಘಾಟೋಽಥ ಸಾರಂಗಸ್ತೋಕಕಶ್ಚಾತಕಸ್ಸಮಾಃ ।
ಕೃಕವಾಕುಸ್ತಾಮ್ರಚೂಡಃ ಕುಕ್ಕುಟಶ್ಚರಣಾಯುಧಃ ॥ ೫೪೨
ಚಟಕಃ ಕಲವಿಂಕಃ ಸ್ಯಾತ್ತಸ್ಯ ಸ್ತ್ರೀ ಚಟಕಾ ತಯೋಃ ।
ಪುಮಪತ್ಯೇ ಚಾಟಕೈರಸ್ತ್ರ್ಯಪತ್ಯೇ ಚಟಕೈವ ಸಾ ॥ ೫೪೩
ಕರ್ಕರೇಟುಃ ಕರೇಟುಃ ಸ್ಯಾತ್ಕೃಕಣಕ್ರಕರೌ ಸಮೌ ।
ವನಪ್ರಿಯಃ ಪರಭೃತಃ ಕೋಕಿಲಃ ಪಿಕ ಇತ್ಯಪಿ ॥ ೫೪೪
ಕಾಕೇ ತು ಕರಟಾರಿಷ್ಟಬಲಿಪುಷ್ಟಸಕೃತ್ಪ್ರಜಾಃ ।
ಧ್ವಾಂಕ್ಷಾತ್ಮಘೋಷಪರಭೃದ್ಬಲಿಭುಗ್ವಾಯಸಾ ಅಪಿ ॥ ೫೪೫

---

ಗೂಬೆ. ವ್ಯಾಘ್ರಾಟ, ಭರದ್ವಾಜ (ಪು)=ಭರದ್ವಾಜಪಕ್ಷಿ. ಖಂಜರೀಟ, ಖಂಜನ (ಪು)=ಕೆಂಬೂತ, ಕಾಡಿಗೆ, ಸೊಗಸಿನ ಹಕ್ಕಿ.

೫೪೧-೫೪೨. ಲೋಹಪೃಷ್ಠ, ಕಂಕ (ಪು)=ಒಂದು ಜಾತಿಯ ಹದ್ದು. ಚಾಷ, ಕಿಕೀದಿವಿ (ಪು)=ಶಕುನದ ಹಕ್ಕಿ, ಹಾಲುಹಕ್ಕಿ. ಕಲಿಂಗ, ಭೃಂಗ, ಧೂಮ್ಯಾಟ (ಪು)=ನೀರಿನಲ್ಲಿ ಆಟವಾಡುವ ಕುಕ್ಕುಟಿ ಎಂಬ ಹಕ್ಕಿ. ಶತಪತ್ರಕ, ದಾರ್ವಾಘಾಟ (ಪು) ಮರಕುಟುಕ ಹಕ್ಕಿ. ಸಾರಂಗ (ಶಾರಂಗ), ಸ್ತೋಕಕ,=ಚಾತಕಪಕ್ಷಿ. ಕೃಕವಾಕು, ತಾಮ್ರಚೂಡ, ಕುಕ್ಕುಟ, ಚರಣಾಯುಧ (ಪು)=ಕೋಳಿ.

೫೪೩. ಚಟಕ, ಕಲವಿಂಕ (ಪು)=ಗುಬ್ಬಿ, ಗುಬ್ಬಚ್ಚಿ. ಚಟಕಾ (ಸ್ತ್ರೀ)=ಹೆಣ್ಣುಗುಬ್ಬಚ್ಚಿ. ಚಾಟಕೈರ (ಪು)=ಗಂಡುಗುಬ್ಬಚ್ಚಿಮರಿ. ಚಟಕಾ (ಸ್ತ್ರೀ)=ಹೆಣ್ಣುಗುಬ್ಬಚ್ಚಿಮರಿ.

೫೪೪. ಕರ್ಕರೇಟು, ಕರೇಟು (ಪು)=ಕಬ್ಬಕ್ಕಿ, ಕರ್ಕರೆಹಕ್ಕಿ. ಕೃಕಣ, ಕ್ರಕರ (ಪು)=ಕಾಡುಕೋಳಿ. ವನಪ್ರಿಯ, ಪರಭೃತ, ಕೋಕಿಲ, ಪಿಕ (ಪು)=ಕೋಗಿಲೆ.

೫೪೫-೫೪೬. ಕಾಕ, ಕರಟ, ಅರಿಷ್ಟ, ಬಲಿಪುಷ್ಟ, ಸಕೃತ್‌ಪ್ರಜಸ್, ಧ್ವಾಂಕ್ಷ, ಆತ್ಮಘೋಷ, ಪರಭೃತ್, ಬಲಿಭುಜ್, ವಾಯಸ, ಚಿರಜೀವಿನ್, ಏಕದೃಷ್ಟಿ, ಮೌಕುಲಿ, ಪಿಕವರ್ಧನ (ಪು)=ಕಾಗೆ. ದ್ರೋಣಕಾಕ, ಕಾಕೋಲ (ಪು)=ಸಂಬಾರಕಾಗೆ, ಕುಂಬಾರಕಾಗೆ. ದಾತ್ಯೂಹ, ಕಾಲಕಂಠಕ (ಪು)=ನೀರುಕೋಳಿ.



ಚಿರಜೀವೀ ಚೈಕದೃಷ್ಟಿರ್ಮೌಕುಲಿಃ ಪಿಕವರ್ಧನಃ ।
ದ್ರೋಣಕಾಕಸ್ತು ಕಾಕೋಲೋ ದಾತ್ಯೂಹಃ ಕಾಲಕಂಠಕಃ ॥ ೫೪೬
ಆತಾಯಿಚಿಲ್ಲೌ ದಾಕ್ಷಾಯ್ಯಗೃಧ್ರೌ ಕೀರಶುಕೌ ಸಮೌ ।
ಕ್ರುಙ್ ಕ್ರೌಂಚೋಽಥ ಬಕಃ ಕಹ್ವಃ ಪುಷ್ಕರಾಹ್ವಸ್ತು ಸಾರಸಃ ॥ ೫೪೭
ಕೋಕಶ್ಚಕ್ರಶ್ಚಕ್ರವಾಕೋ ರಥಾಂಗಾಹ್ವಯನಾಮಕಃ ।
ಕಾದಂಬಃ ಕಲಹಂಸಸ್ಸ್ಯಾದುತ್ಕ್ರೋಶಕುರರೌ ಸಮೌ ॥ ೫೪೮
ಹಂಸಾಸ್ತು ಶ್ವೇತಗರುತಶ್ಚಕ್ರಾಂಗಾ ಮಾನಸೌಕಸಃ ।
ರಾಜಹಂಸಾಸ್ತು ತೇ ಚಂಚುಚರಣೈರ್ಲೋಹಿತೈಸ್ಸಿತಾಃ ॥ ೫೪೯
ಮಲಿನೈರ್ಮಲ್ಲಿಕಾಖ್ಯಾಸ್ತೇ ಧಾರ್ತರಾಷ್ಟ್ರಾಸ್ಸಿತೇತರೈಃ ।
ಶರಾರಿರಾಟಿರಾಡಿಶ್ಚ ಬಲಾಕಾ ಬಿಸಕಂಠಿಕಾ ॥ ೫೫೦

---

೫೪೭. ಆತಾಯಿನ್, ಚಿಲ್ಲ (ಪು)=ಚಿಕ್ಕ ಹದ್ದು, ಮುಂಡಮುಳಕನ ಹಕ್ಕಿ. ದಾಕ್ಷಾಯ್ಯ, ಗೃಧ್ರ (ಪು)=ಹದ್ದು. ಕೀರ, ಶುಕ (ಪು)=ಗಿಳಿ. ಕ್ರುಂಚ್, ಕ್ರೌಂಚ (ಪು)=ನೀರುಕೊಕ್ಕರೆ, ನಾರಾಯಣ ಪಕ್ಷಿ, ಕೊಂಚೆ. ಬಕ, ಕಹ್ವ (ಪು)=ಬಕಪಕ್ಷಿ, ಕೊಕ್ಕರೆ, ಬೆಳ್ಳಕ್ಕಿ. ಪುಷ್ಕರಾಹ್ವ, ಸಾರಸ (ಪು)=ಸಾರಸ ಪಕ್ಷಿ, ತಾವರೆಹಕ್ಕಿ.

೫೪೮. ಕೋಕ, ಚಕ್ರ, ಚಕ್ರವಾಕ, ರಥಾಂಗಾಹ್ವಯನಾಮಕ, (ರಥಾಂಗಾಹ್ವ, ರಥಾಂಗನಾಮನ್) (ಪು)=ಚಕ್ರವಾಕ ಪಕ್ಷಿ. ಕಾದಂಬ, ಕಲಹಂಸ[1] (ಪು)=ಧೂಮ್ರವರ್ಣದ ರೆಕ್ಕೆಯುಳ್ಳ ಒಂದು ಬಗೆಯ ಹಂಸ ; ಬಾತು. ಉತ್ಕ್ರೋಶ, ಕುರರ (ಪು)=ಕುರವ ಹಕ್ಕಿ, ಕಡಲ ಹದ್ದು.

೫೪೯. ಹಂಸ, ಶ್ವೇತಗರುತ್, ಚಕ್ರಾಂಗ, ಮಾನಸೌಕಸ್ (ಪು)=ಬಿಳಿಯ ಹಂಸ. ರಾಜಹಂಸ (ಪು)=ಕೊಕ್ಕು ಮತ್ತು ಕಾಲುಗಳು ಕೆಂಪಾಗಿರುವ ಬಿಳಿಯ ಹಂಸ.

೫೫೦. ಮಲ್ಲಿಕಾಖ್ಯ (ಮಲ್ಲಿಕಾಕ್ಷ) (ಪು)=ಮಾಸಲು ಬಣ್ಣದ ಕೊಕ್ಕು ಮತ್ತು ಕಾಲುಗಳಿರುವ ಬಿಳಿಯ ಹಂಸ, ಧಾರ್ತರಾಷ್ಟ್ರ (ಪು)=ಕಪ್ಪು ಬಣ್ಣದ ಕೊಕ್ಕು ಮತ್ತು ಕಾಲುಗಳಿರುವ ಬಿಳಿಯ ಹಂಸ. ಶರಾರಿ, ಆಟಿ, ಆಡಿ (ಆತಿ) (ಸ್ತ್ರೀ)=ಸರಕುಟ ಹಕ್ಕಿ. ಬಲಾಕಾ, ಬಿಸಕಂಠಿಕಾ (ಸ್ತ್ರೀ)=ದೊಡ್ಡ ಕೊಕ್ಕರೆ, ದೊಡ್ಡ ಬೆಳ್ಳಕ್ಕಿ.

---

[1] ಕಲಹಂಸ ಶಬ್ದಕ್ಕೆ ಬಿಳಿಯ ರಾಜಹಂಸ ಎಂಬ ಅರ್ಥವೂ ಇದೆ.

ಹಂಸಸ್ಯ ಯೋಷಿದ್ವರಟಾ ಸಾರಸಸ್ಯ ತು ಲಕ್ಷ್ಮಣಾ ।
ಜತುಕಾಜಿನಪತ್ರಾ ಸ್ಯಾತ್ಪರೋಷ್ಣೀ ತೈಲಪಾಯಿಕಾ ॥ ೫೫೧
ವರ್ವಣಾ ಮಕ್ಷಿಕಾ ನೀಲಾ ಸರಘಾ ಮಧುಮಕ್ಷಿಕಾ ।
ಪತಂಗಿಕಾ ಪುತ್ತಿಕಾ ಸ್ಯಾದ್ದಂಶಸ್ತು ವನಮಕ್ಷಿಕಾ ॥ ೫೫೨
ದಂಶೀ ತಜ್ಜಾತಿರಲ್ಪಾ ಸ್ಯಾದ್ಗಂಧೋಲೀ ವರಟಾ ದ್ವಯೋಃ ।
ಭೃಂಗಾರೀ ಚೀರುಕಾ ಚೀರೀ ಝಿಲ್ಲಿಕಾ ಚ ಸಮಾ ಇಮಾಃ ॥ ೫೫೩
ಸಮೌ ಪತಂಗಶಲಭೌ ಖದ್ಯೋತೋ ಜ್ಯೋತಿರಿಂಗಣಃ ।
ಮಧುವ್ರತೋ ಮಧುಕರೋ ಮಧುಲಿಣ್ಮಧುಪಾಲಿನಃ ॥ ೫೫೪
ದ್ವಿರೇಫಪುಷ್ಪಲಿಡ್ಭೃಂಗಷಟ್ಪದಭ್ರಮರಾಲಯಃ ।
ಇಂದಿಂದಿರಶ್ಚಂಚರೀಕೋ ರೋಲಂಬೋ ಬಂಭರಶ್ಚ ಸಃ ॥ ೫೫೫
ಮಯೂರೋ ಬರ್ಹಿಣೋ ಬರ್ಹೀ ನೀಲಕಂಠೋ ಭುಜಂಗಭುಕ್ ।
ಶಿಖಾವಲಶ್ಶಿಖೀ ಕೇಕೀ ಮೇಘನಾದಾನುಲಾಸ್ಯಪಿ ॥ ೫೫೬

೫೫೧. ವರಟಾ (ಸ್ತ್ರೀ)=ಹೆಣ್ಣು ಹಂಸ. ಲಕ್ಷ್ಮಣಾ (ಸ್ತ್ರೀ)=ಹೆಣ್ಣು ಸಾರಸ. ಜತುಕಾ (ಜಾತೂಕಾ), ಅಜಿನಪತ್ರಾ (ಸ್ತ್ರೀ)=ಬಾವಲಿ, ಕಪಟದಹಕ್ಕಿ, ಕಬ್ಬಟ್ಟೆಹಕ್ಕಿ. ಪರೋಷ್ಣೀ, ತೈಲ ಪಾಯಿಕಾ (ಸ್ತ್ರೀ)=ಜಿರಲೆ.

೫೫೨. ವರ್ವಣಾ, ಮಕ್ಷಿಕಾ, ನೀಲಾ (ಸ್ತ್ರೀ)=ನೊಣ. ಸರಘಾ, ಮಧುಮಕ್ಷಿಕಾ (ಸ್ತ್ರೀ)=ಜೇನುಹುಳು, ಜೇನುನೊಣ. ಪತಂಗಿಕಾ, ಪುತ್ತಿಕಾ (ಸ್ತ್ರೀ)=ಜೇನುನೊಣದ ಭೇದ ; ಪತಂಗ. ದಂಶ (ಪು), ವನಮಕ್ಷಿಕಾ (ಸ್ತ್ರೀ)=ಕಾಡುನೊಣ.

೫೫೩. ದಂಶೀ (ಸ್ತ್ರೀ)=ಚಿಕ್ಕದಾದ ಕಾಡುನೊಣ. ಗಂಧೋಲೀ (ಸ್ತ್ರೀ), ವರಟಾ (ಸ್ತ್ರೀಪು.—ವರಟ)=ಕಣಜದ ಹುಳು. ಭೃಂಗಾರೀ, ಚೀರುಕಾ (ಚೀರಿಕಾ), ಚೀರೀ, ಝಿಲ್ಲಿಕಾ (ಸ್ತ್ರೀ)=ಜೀರುಂಡೆ.

೫೫೪-೫೫೫. ಪತಂಗ, ಶಲಭ (ಪು)=ಮಿಡತೆ, ದೀಪದ ಹುಳು. ಖದ್ಯೋತ, ಜ್ಯೋತಿರಿಂಗಣ (ಪು)=ಮಿಂಚುಹುಳ. ಮಧುವ್ರತ, ಮಧುಕರ, ಮಧುಲಿಹ್, ಮಧುಪ, ಅಲಿನ್, ದ್ವಿರೇಫ, ಪುಷ್ಪಲಿಹ್, ಭೃಂಗ, ಷಟ್ಪದ, ಭ್ರಮರ, ಅಲಿ, ಇಂದಿಂದಿರ, ಚಂಚರೀಕ, ರೋಲಂಬ, ಬಂಭರ (ಪು)=ದುಂಬಿ.

೫೫೬. ಮಯೂರ, ಬರ್ಹಿಣ, ಬರ್ಹಿನ್, ನೀಲಕಂಠ, ಭುಜಂಗಭುಜ್, ಶಿಖಾವಲ, ಶಿಖಿನ್, ಕೇಕಿನ್, ಮೇಘನಾದಾನುಲಾಸಿನ್ (ಪು)=ನವಿಲು.



ಕೇಕಾ ವಾಣೀ ಮಯೂರಸ್ಯ ಸಮೌ ಚಂದ್ರಕಮೇಚಕೌ ।
ಶಿಖಾ ಚೂಡಾ ಶಿಖಂಡಸ್ತು ಪಿಚ್ಛಬರ್ಹೇ ನಪುಂಸಕೇ ॥ ೫೫೭
ಖಗೇ ವಿಹಂಗ ವಿಹಗ ವಿಹಂಗಮ ವಿಹಾಯಸಃ ।
ಶಕುಂತಿ ಪಕ್ಷಿ ಶಕುನಿ ಶಕುಂತ ಶಕುನ ದ್ವಿಜಾಃ ॥ ೫೫೮
ಪತತ್ರಿಪತ್ರಿಪತಗ ಪತತ್ಪತ್ರ ರಥಾಂಡಜಾಃ ।
ನಗೌಕೋ ವಾಜಿ ವಿಕಿರ ವಿ ವಿಷ್ಕಿರ ಪತತ್ರಯಃ ॥ ೫೫೯
ನೀಡೋದ್ಭವಾ ಗರುತ್ಮಂತಃ ಪಿತ್ಸಂತೋ ನಭಸಂಗಮಾಃ ।
ತೇಷಾಂ ವಿಶೇಷಾ ಹಾರೀತೋ ಮದ್ಗುಃ ಕಾರಂಡವಃ ಪ್ಲವಃ ॥ ೫೬೦
ತಿತ್ತಿರಿಃ ಕುಕ್ಕಭೋ ಲಾವೋ ಜೀವಂಜೀವಶ್ಚಕೋರಕಃ ।
ಕೋಯಷ್ಟಿಕಷ್ಟಿಟ್ಟಿಭಕೋ ವರ್ತಕೋ ವರ್ತಿಕಾದಯಃ ॥ ೫೬೧
ಗರುತ್ಪಕ್ಷಚ್ಛದಾಃ ಪತ್ರಂ ಪತತ್ರಂ ಚ ತನೂರುಹಮ್ ।
ಸ್ತ್ರೀ ಪಕ್ಷತಿಃ ಪಕ್ಷಮೂಲಂ ಚಂಚುಸ್ತ್ರೋಟಿರುಭೇ ಸ್ತ್ರಿಯೌ ॥ ೫೬೨

೫೫೭. ಕೇಕಾ (ಸ್ತ್ರೀ)=ನವಿಲಿನ ಕೂಗು. ಚಂದ್ರಕ, ಮೇಚಕ (ಪು)=ನವಿಲುಗರಿಯ ಕಣ್ಣು. ಶಿಖಾ, ಚೂಡಾ (ಸ್ತ್ರೀ)=ನವಿಲುಜುಟ್ಟು. ಶಿಖಂಡ (ಪು), ಪಿಚ್ಛ, ಬರ್ಹ (ನ)=ನವಿಲುಗರಿ.

೫೫೮-೫೫೯-೫೬೦. ಖಗ, ವಿಹಂಗ, ವಿಹಗ, ವಿಹಂಗಮ, ವಿಹಾಯಸ್, ಶಕುಂತಿ, ಪಕ್ಷಿನ್, ಶಕುನಿ, ಶಕುಂತ, ಶಕುನ, ದ್ವಿಜ, ಪತತ್ರಿನ್, ಪತ್ರಿನ್, ಪತಗ, ಪತತ್, ಪತ್ರರಥ, ಅಂಡಜ, ನಗೌಕಸ್, ವಾಜಿನ್, ವಿಕಿರ, ವಿ, ವಿಷ್ಕಿರ, ಪತತ್ರಿ, ನೀಡೋದ್ಭವ, ಗರುತ್ಮತ್, ಪಿತ್ಸತ್, ನಭಸಂಗಮ (ಪು)=ಹಕ್ಕಿ.

೫೬೦-೫೬೧. ಹಾರೀತ (ಪು)=ಹಸಿರು ಬಣ್ಣದ ಒಂದು ಹಕ್ಕಿ. ಮದ್ಗು (ಪು)=ನೀರುಕಾಗೆ. ಕಾರಂಡವ (ಪು)=ಚಿತ್ರವರ್ಣದ ನೀರುಹಕ್ಕಿ. ಪ್ಲವ (ಪು)=ಚಿಕ್ಕ ನೀರುಕೋಳಿ. ಕಾರಂಡವ, ಪ್ಲವ ಇವೆರಡೂ ಪರ್ಯಾಯಗಳೆಂದು ಕೆಲವರ ಮತ. ತಿತ್ತಿರಿ (ಪು)=ಕವುಜಗ ಹಕ್ಕಿ. ಕುಕ್ಕಭ (ಕುಕ್ಕುಭ) (ಪು)=ಕಾಡುಕೋಳಿ, ಗುಮ್ಮನ ಹಕ್ಕಿ. ಲಾವ (ಪು)=ಲಾವಿಗೆ ಹಕ್ಕಿ. ಜೀವಂಜೀವ (ಪು)=ವಿಷನಾಶಕವಾದ ಒಂದು ಹಕ್ಕಿ. ಚಕೋರಕ (ಪು)=ಚಕೋರಪಕ್ಷಿ. ಜೀವಂಜೀವ, ಚಕೋರಕ=ಇವೆರಡೂ ಪರ್ಯಾಯಗಳೆಂದು ಕೆಲವರ ಮತ. ಕೋಯಷ್ಟಿಕ (ಪು)=ಕೀಚು ಗಾಲದ ಹಕ್ಕಿ. ಟಿಟ್ಟಿಭಕ (ಪು)=ಟಿಬ್ಬಿಭಪಕ್ಷಿ. ವರ್ತಕ (ಪು)=ಕೆಂಡಲೆ ಹಕ್ಕಿ. ವರ್ತಿಕಾ (ಸ್ತ್ರೀ)=ಪಕ್ಷಿವಿಶೇಷ.

೫೬೨. ಗರುತ್, ಪಕ್ಷ, ಛದ (ಪು), ಪತ್ರ, ಪತತ್ರ, ತನೂರುಹ (ನ)=ರೆಕ್ಕೆ. ಪಕ್ಷತಿ (ಸ್ತ್ರೀ), ಪಕ್ಷಮೂಲ. (ನ) ರೆಕ್ಕೆಯ ಮೂಲಭಾಗ ಚಂಚು, ತ್ರೋಟಿ (ಸ್ತ್ರೀ)=ಕೊಕ್ಕು.

ಪ್ರಡೀನೋಡ್ಡೀನಸಂಡೀನಾನ್ಯೇತಾಃ ಖಗಗತಿಕ್ರಿಯಾಃ ।
ಪೇಶೀ ಕೋಶೋ ದ್ವಿಹೀನೇಂಽಡಂ ಕುಲಾಯೋ ನೀಡಮಸ್ತ್ರಿಯಾಮ್ ॥ ೫೬೩
ಪೋತಃ ಪಾಕೋಽರ್ಭಕೋ ಡಿಂಭಃ ಪೃಥುಕಶ್ಶಾವಕಶ್ಶಿಶುಃ ।
ಸ್ತ್ರೀಪುಂಸೌ ಮಿಥುನಂ ದ್ವಂದ್ವಂ ಯುಗ್ಮಂ ತು ಯುಗಲಂ ಯುಗಮ್ ॥ ೫೬೪
ಸಮೂಹ ನಿವಹ ವ್ಯೂಹ ಸಂದೋಹ ವಿಸರ ವ್ರಜಾಃ ।
ಸ್ತೋಮೌಘ ನಿಕರ ವ್ರಾತ ವಾರ ಸಂಘಾತ ಸಂಚಯಾಃ ॥ ೫೬೫
ಸಮುದಾಯಸ್ಸಮುದಯಸ್ಸಮವಾಯಶ್ಚಯೋ ಗಣಃ ।
ಸ್ತ್ರಿಯಾಂ ತು ಸಂಹತಿರ್ವೃಂದಂ ನಿಕುರಂಬಂ ಕದಂಬಕಮ್ ॥ ೫೬೬
ವೃಂದಭೇದಾಃ ಸಮೈರ್ವರ್ಗಃ ಸಂಘಸಾರ್ಥೌ ತು ಜಂತುಭಿಃ ।
ಸಜಾತೀಯೈಃ ಕುಲಂ ಯೂಥಂ ತಿರಶ್ಚಾಂ ಪುನ್ನಪುಂಸಕಮ್ ॥ ೫೬೭

೫೬೩. ಪ್ರಡೀನ (ನ)=ನೇರವಾಗಿ ಮುಂದಕ್ಕೆ ಹಾರುವುದು. ಉಡ್ಡೀನ (ನ)=ಮೇಲಕ್ಕೆ ಹಾರುವುದು. ಸಂಡೀನ (ನ)= ಗುಂಪಾಗಿ ಹಾರುವುದು. ಪೇಶೀ (ಸ್ತ್ರೀ), ಕೋಶ (ಕೋಷ)[1] (ಪು) ಅಂಡ (ನ)=ಮೊಟ್ಟೆ, ತತ್ತಿ. ಕುಲಾಯ (ಪು), ನೀಡ (ಪು.ನ)=ಹಕ್ಕಿಗಳ ಗೂಡು.

೫೬೪. ಪೋತ, ಪಾಕ, ಅರ್ಭಕ, ಡಿಂಭ, ಪೃಥುಕ, ಶಾವಕ, ಶಿಶು (ಪು)=ಮರಿ, ಪಿಳ್ಳೆ. ಸ್ತ್ರೀಪುಂಸ (ಪು. ನಿತ್ಯದ್ವಿವಚನ), ಮಿಥುನ (ನ), ದ್ವಂದ್ವ (ನ)=ಗಂಡು ಹೆಣ್ಣುಗಳ ಜೋಡಿ. ಯುಗ್ಮ, ಯುಗಲ, ಯುಗ (ನ)=ಎರಡು, ಜೊತೆ.

೫೬೫-೫೬೬. ಸಮೂಹ, ನಿವಹ, ವ್ಯೂಹ, ಸಂದೋಹ, ವಿಸರ, ವ್ರಜ, ಸ್ತೋಮ, ಓಘ, ನಿಕರ, ವ್ರಾತ, ವಾರ, ಸಂಘಾತ, ಸಂಚಯ, ಸಮುದಾಯ, ಸಮುದಯ, ಸಮವಾಯ, ಚಯ, ಗಣ (ಪು), ಸಂಹತಿ (ಸ್ತ್ರೀ), ವೃಂದ, ನಿಕುರಂಬ (ನಿಕುರಂಬ), ಕದಂಬಕ (ನ)=ಸಮುದಾಯ, ಗುಂಪು.

೫೬೭. ಮುಂದೆ ಹೇಳತಕ್ಕವು ಸಮೂಹಭೇದಗಳು. ವರ್ಗ (ಪು)=ಸಜಾತೀಯವಾದ ಪ್ರಾಣಿಗಳ ಅಥವಾ ಪ್ರಾಣೇತರವಸ್ತುಗಳ ಸಮೂಹ. ಉದಾ : ಮನುಷ್ಯವರ್ಗ, ವೃಕ್ಷವರ್ಗ. ಶಿಲಾವೃಕ್ಷವರ್ಗ ಎನ್ನುವುದು ಅಯುಕ್ತ. ಸಂಘ, ಸಾರ್ಥ (ನ)=ಸಜಾತೀಯವಾದ ಅಥವಾ ವಿಜಾತೀಯವಾದ ಪ್ರಾಣಿಗಳ ಸಮೂಹ. ಉದಾ : ವಿದ್ಯಾರ್ಥಿ ಸಂಘ, ಮೃಗಸಂಘ, ಮೃಗಪಕ್ಷಿ ಸಾರ್ಥ. ವೃಕ್ಷಸಂಘ ಎನ್ನುವುದು ಅಯುಕ್ತ. ಕುಲ (ನ)=ಸಜಾತೀಯ ಪ್ರಾಣಿಗಳ

[1] ಕೋಶಶಬ್ದವು ನಪುಂಸಕದಲ್ಲಿಯೂ ಇದೆ.



ಪಶೂನಾಂ ಸಮಜೋಽನ್ಯೇಷಾಂ ಸಮಾಜೋಽಥ ಸಧರ್ಮಿಣಾಮ್ ।
ಸ್ಯಾನ್ನಿಕಾಯಃ ಪುಂಜರಾಶೀ ತೂತ್ಕರಃ ಕೂಟಮಸ್ತ್ರಿಯಾಮ್ ॥ ೫೬೮
ಕಾಪೋತಶೌಕಮಾಯೂರತೈತ್ತಿರಾದೀನಿ ತದ್ಗಣೇ ।
ಗೃಹಾಸಕ್ತಾಃ ಪಕ್ಷಿಮೃಗಾಶ್ಛೇಕಾಃ ಸ್ಯುರ್ಗೃಹ್ಯಕಾಶ್ಚ ತೇ ॥ ೫೬೯

ಇತಿ ಸಿಂಹಾದಿವರ್ಗಃ

ಸಮೂಹ. ಉದಾ : ಮನುಷ್ಯಕುಲ, ಮನುಷ್ಯ ಮೃಗಕುಲ ಅಥವಾ ವೃಕ್ಷಕುಲ ಎನ್ನುವುದು ಅಯುಕ್ತ[1]. ಯೂಥ (ನ)=ತಿರ್ಯಗ್ಜಂತುಗಳ ಸಮೂಹ. ಉದಾ : ಗಜಯೂಥ. ಸ್ತ್ರೀಯೂಥ ಎನ್ನುವುದು ಅಯುಕ್ತ.

೫೬೮. ಸಮಜ (ಪು)=ಪಶುಗಳ ಸಮೂಹ. ಸಮಾಜ (ಪು)=ಪಶುಭಿನ್ನಗಳಾದ ಮನುಷ್ಯ ಪಕ್ಷಿ ಮುಂತಾದವುಗಳ ಸಮೂಹ. ನಿಕಾಯ (ಪು)=ಸಮಾನವಾದ ಅಭಿಪ್ರಾಯ ಗುಣಸ್ವಭಾವಗಳಿರತಕ್ಕವರ ಸಮೂಹ. ಉದಾ : ವಿದ್ವನ್ನಿಕಾಯ. ಒಂದಾನೊಂದು ವಿಷಯ ದಲ್ಲಿ ವಿದ್ವಾಂಸರೆಲ್ಲರೂ ಸಮಾನವಾದ ಅಭಿಪ್ರಾಯವನ್ನು ಹೊಂದಿದ್ದಾರೆಂದು ಈ ಶಬ್ದ ದಿಂದ ಪ್ರತೀತವಾಗುತ್ತದೆ. ಪುಂಜ, ರಾಶಿ, ಉತ್ಕರ (ಪು), ಕೂಟ (ಪು. ನ.)=ಧಾನ್ಯಾದಿಗಳ ರಾಶಿ (Heap, Mass).

೫೬೯. ಕಾಪೋತ (ನ)=ಪಾರಿವಾಳಗಳ ಗುಂಪು. ಶೌಕ (ನ)=ಗಿಳಿಗಳ ಹಿಂಡು, ಮಾಯೂರ (ನ)=ನವಿಲುಗಳ ಗುಂಪು. ತೈತ್ತಿರ (ನ)=ತಿತ್ತಿರಿಪಕ್ಷಿಗಳ ಸಮೂಹ. ಹೀಗೆಯೇ ಕಾಕ (ನ)=ಕಾಗೆಗಳ ಗುಂಪು, ಬಾಕ (ನ)=ಬಕಗಳ ಗುಂಪು, ಔಲೂಕ (ನ)=ಗೂಬೆಗಳ ಗುಂಪು ಇತ್ಯಾದಿ. ಛೇಕ, ಗೃಹ್ಯಕ (ಪು)=ಮನೆಯಲ್ಲಿ ಸಾಕಿದ ಪಕ್ಷಿ ಅಥವಾ ಮೃಗ.

[1] ಆದರೆ 'ಅವರ್ಣಕುಲಂ' ಎಂದು ಮಹಾಭಾಷ್ಯ ಪ್ರಯೋಗವಿದೆ.

## ೬. ಮನುಷ್ಯವರ್ಗಃ

ಮನುಷ್ಯಾ ಮಾನುಷಾ ಮರ್ತ್ಯಾ ಮನುಜಾ ಮಾನವಾ ನರಾಃ ।
ಸ್ಯುಃ ಪುಮಾಂಸಃ ಪಂಚಜನಾಃ ಪುರುಷಾಃ ಪೂರುಷಾ ನರಃ ॥ ೫೭೦
ಸ್ತ್ರೀ ಯೋಷಿದಬಲಾ ಯೋಷಾ ನಾರೀ ಸೀಮಂತಿನೀ ವಧೂಃ ।
ಪ್ರತೀಪದರ್ಶಿನೀ ವಾಮಾ ವನಿತಾ ಮಹಿಲಾ ತಥಾ ॥ ೫೭೧
ವಿಶೇಷಾಸ್ತ್ವಂಗನಾ ಭೀರುಃ ಕಾಮಿನೀ ವಾಮಲೋಚನಾ ।
ಪ್ರಮದಾ ಮಾನಿನೀ ಕಾಂತಾ ಲಲನಾ ಚ ನಿತಂಬಿನೀ ॥ ೫೭೨
ಸುಂದರೀ ರಮಣೀ ರಾಮಾ ಕೋಪನಾ ಸೈವ ಭಾಮಿನೀ ।
ವರಾರೋಹಾ ಮತ್ತಕಾಶಿನ್ಯುತ್ತಮಾ ವರವರ್ಣಿನೀ ॥ ೫೭೩
ಕೃತಾಭಿಷೇಕಾ ಮಹಿಷೀ ಭೋಗಿನ್ಯೋಽನ್ಯಾ ನೃಪಸ್ತ್ರಿಯಃ ।
ಪತ್ನೀ ಪಾಣಿಗೃಹೀತೀ ಚ ದ್ವಿತೀಯಾ ಸಹಧರ್ಮಿಣೀ ॥ ೫೭೪

### ಮನುಷ್ಯವರ್ಗಃ

೫೭೦. ಮನುಷ್ಯ, ಮಾನುಷ, ಮರ್ತ್ಯ, ಮನುಜ, ಮಾನವ, ನರ (ಪು)=ಮನುಷ್ಯ. ಪುಂಸ್, ಪಂಚಜನ, ಪುರುಷ, ಪೂರುಷ, ನೃ[1] (ಪು)=ಗಂಡಸು.

೫೭೧. ಸ್ತ್ರೀ, ಯೋಷಿತ್, ಅಬಲಾ, ಯೋಷಾ, ನಾರೀ, ಸೀಮಂತಿನೀ, ವಧೂ, ಪ್ರತೀಪದರ್ಶಿನೀ, ವಾಮಾ, ವನಿತಾ, ಮಹಿಲಾ[2] (ಸ್ತ್ರೀ)=ಸ್ತ್ರೀ, ಹೆಂಗಸು.

೫೭೨-೫೭೩. ಅಂಗನಾ, ಭೀರು, ಕಾಮಿನೀ, ವಾಮಲೋಚನಾ, ಪ್ರಮದಾ, ಮಾನಿನೀ, ಕಾಂತಾ, ಲಲನಾ, ನಿತಂಬಿನೀ, ಸುಂದರೀ, ರಮಣೀ, ರಾಮಾ, ಕೋಪನಾ, ಭಾಮಿನೀ, ವರಾರೋಹಾ, ಮತ್ತಕಾಶಿನೀ, ಉತ್ತಮಾ, ವರವರ್ಣಿನೀ (ಸ್ತ್ರೀ)=ವಿವಿಧ ಗುಣಗಳಿರುವ ಉತ್ತಮ ಸ್ತ್ರೀಯರು.

---

[1] ಮನುಷ್ಯ ಶಬ್ದದಿಂದ ನೃ ಶಬ್ದದವರೆಗೆ ೧೧ ಶಬ್ದಗಳೂ ಮನುಷ್ಯ ಸಾಮಾನ್ಯವಾಚಿಗಳೆಂದು ಕೆಲವರು ಹೇಳುತ್ತಾರೆ. ಮನುಷೀ, ಮಾನುಷೀ, ಮರ್ತ್ಯಾ, ಮನುಜಾ, ಮಾನವೀ, ನಾರೀ (ಸ್ತ್ರೀ)= ಇವು ಮನುಷ್ಯಜಾತಿ ಸ್ತ್ರೀವಾಚಕಗಳು. ಪುಂಸ್, ಪಂಚಜನ, ಪುರುಷ, ಪೂರುಷ—ಇವು ನಾಲ್ಕು ಗಂಡಸು ಎಂಬ ಅರ್ಥವನ್ನು ಮಾತ್ರ ಬೋಧಿಸುತ್ತವೆ ; ನೃ. ನರ - ಈ ಎರಡು ಶಬ್ದಗಳ ಸ್ತ್ರೀಲಿಂಗದ ರೂಪ ನಾರೀ.

[2] ಮಹೇಲಾ ಎಂಬ ಶಬ್ದವೂ ಇದೆ.



ಭಾರ್ಯಾ ಜಾಯಾಥ ಪುಂಭೂಮ್ನಿ ದಾರಾಃ ಸ್ಯಾತ್ತು ಕುಟುಂಬಿನೀ ।
ಪುರಂಧ್ರೀ ಸುಚರಿತ್ರಾ ತು ಸತೀ ಸಾಧ್ವೀ ಪತಿವ್ರತಾ ॥ ೫೭೫
ಕೃತಸಾಪತ್ನಿಕಾಧ್ಯೂಢಾಽಧಿವಿನ್ನಾಥ ಸ್ವಯಂವರಾ ।
ಪತಿಂವರಾ ಚ ವರ್ಯಾಥ ಕುಲಸ್ತ್ರೀ ಕುಲಪಾಲಿಕಾ ॥ ೫೭೬
ಕನ್ಯಾ ಕುಮಾರೀ ಗೌರೀ ತು ನಗ್ನಿಕಾನಾಗತಾರ್ತವಾ ।
ಸ್ಯಾನ್ಮಧ್ಯಮಾ ದೃಷ್ಟರಜಾಸ್ತರುಣೀ ಯುವತಿಸ್ಸಮೇ ॥ ೫೭೭
ಸಮಾಃ ಸ್ನುಷಾಜನೀವಧ್ವಶ್ಚಿರಂಟೀ ತು ಸುವಾಸಿನೀ ।
ಇಚ್ಛಾವತೀ ಕಾಮುಕಾ ಸ್ಯಾದ್ವೃಷಸ್ಯಂತೀ ತು ಕಾಮುಕೀ ॥ ೫೭೮

೫೭೪-೫೭೫. ಮಹಿಷೀ (ಸ್ತ್ರೀ)=ಪಟ್ಟಾಭಿಷಿಕ್ತಳಾದ ರಾಜಪತ್ನಿ, ಪಟ್ಟದ ರಾಣಿ. ಭೋಗಿನೀ (ಸ್ತ್ರೀ)=ರಾಜನ ಭೋಗಕ್ಕಾಗಿ ಇರುವ ಸ್ತ್ರೀ. ಪತ್ನೀ, ಪಾಣಿಗೃಹಿತೀ, ದ್ವಿತೀಯಾ, ಸಹಧರ್ಮಿಣೀ, ಭಾರ್ಯಾ, ಜಾಯಾ (ಸ್ತ್ರೀ), ದಾರ (ಪು. ನಿತ್ಯಬಹುವಚನ)=ಹೆಂಡತಿ. ಕುಟುಂಬಿನೀ, ಪುರಂಧ್ರೀ (ಪುರಂಧ್ರಿ) (ಸ್ತ್ರೀ)=ಮಕ್ಕಳಿರುವ ಮುತ್ತೈದೆ. ಸುಚರಿತ್ರಾ, ಸತೀ, ಸಾಧ್ವೀ, ಪತಿವ್ರತಾ (ಸ್ತ್ರೀ)=ಪತಿವ್ರತೆಯಾದ ಹೆಂಗಸು.

೫೭೬. ಕೃತಸಾಪತ್ನಿಕಾ, ಅಧ್ಯೂಢಾ, ಅಧಿವಿನ್ನಾ (ಸ್ತ್ರೀ)=ಅನೇಕ ಹೆಂಡತಿಯರಲ್ಲಿ ಮೊದಲು ಮದುವೆಯಾದವಳು, ಹಿರಿಯ ಹೆಂಡತಿ. ಸ್ವಯಂವರಾ, ಪತಿಂವರಾ, ವರ್ಯಾ (ಸ್ತ್ರೀ)=ತಾನಾಗಿ ಗಂಡನನ್ನು ವರಿಸಿದವಳು. ಕುಲಸ್ತ್ರೀ, ಕುಲಪಾಲಿಕಾ (ಸ್ತ್ರೀ)=ಪರಿಶುದ್ಧ ಚಾರಿತ್ರ ಳಾದ ಹೆಂಗಸು, ಗರತಿ.

೫೭೭. ಕನ್ಯಾ, ಕುಮಾರೀ (ಸ್ತ್ರೀ)=ಮದುವೆಯಾಗದ ಹುಡುಗಿ. ಗೌರೀ, ನಗ್ನಿಕಾ, ಅನಾಗತಾರ್ತವಾ (ಸ್ತ್ರೀ)=ಮೈನೆರೆಯದವಳು. ಮಧ್ಯಮಾ (ಸ್ತ್ರೀ)=ಹೊಸದಾಗಿ ಮೈನೆರೆದವಳು. ತರುಣೀ, ಯುವತಿ[1] (ಸ್ತ್ರೀ)=ಯುವತಿ.

೫೭೮. ಸ್ನುಷಾ, ಜನೀ, ವಧೂ (ಸ್ತ್ರೀ)=ಸೊಸೆ. ಚಿರಂಟೀ (ಚಿರಿಂಟೀ), ಸುವಾಸಿನೀ (ಸ್ತ್ರೀ)=ಸುಮಂಗಲಿ ; ಮುತ್ತೈದೆ. ಇಚ್ಛಾವತೀ, ಕಾಮುಕಾ (ಸ್ತ್ರೀ)=ಸಾಮಾನ್ಯವಾದ ಯಾವುದಾದರೊಂದು ಆಸೆಯುಳ್ಳವಳು. ವೃಷಸ್ಯಂತೀ, ಕಾಮುಕೀ (ಸ್ತ್ರೀ)=ಮೈಥುನೇಚ್ಛೆಯುಳ್ಳ ವಳು.

---

[1] ಯುವತೀ ಎಂಬ ದೀರ್ಘಾಂತವೂ ಉಂಟು.

ಕಾಂತಾರ್ಥಿನೀ ತು ಯಾ ಯಾತಿ ಸಂಕೇತಂ ಸಾಭಿಸಾರಿಕಾ ।
ಪುಂಶ್ಚಲೀ ಧರ್ಷಣೀ ಬಂಧಕ್ಯಸತೀ ಕುಲಟೇತ್ವರೀ ॥ ೫೭೯
ಸ್ವೈರಿಣೀ ಪಾಂಸುಲಾ ಚ ಸ್ಯಾದಶಿಶ್ವೀ ಶಿಶುನಾ ವಿನಾ ।
ಅವೀರಾ ನಿಷ್ಪತಿಸುತಾ ವಿಶ್ವಸ್ತಾ ವಿಧವೇ ಸಮೇ ॥ ೫೮೦
ಆಲಿಸ್ಸಖೀ ವಯಸ್ಯಾ ಚ ಪತಿವತ್ನೀ ಸಭರ್ತೃಕಾ ।
ವೃದ್ಧಾ ಪಲಿಕ್ನೀ ಪ್ರಾಜ್ಞೀ ತು ಪ್ರಜ್ಞಾ ಪ್ರಾಜ್ಞಾ ತು ಧೀಮತೀ ॥ ೫೮೧
ಶೂದ್ರೀ ಶೂದ್ರಸ್ಯ ಭಾರ್ಯಾ ಸ್ಯಾಚ್ಛೂದ್ರಾ ತಜ್ಜಾತಿರಂಗನಾ ।
ಆಭೀರೀ ತು ಮಹಾಶೂದ್ರೀ ಜಾತಿಪುಂಯೋಗಯೋಸ್ಸಮೇ ॥ ೫೮೨
ಅರ್ಯಾಣೀ ಸ್ವಯಮರ್ಯಾ ಸ್ಯಾತ್ ಕ್ಷತ್ರಿಯಾ ಕ್ಷತ್ರಿಯಾಣ್ಯಪಿ ।
ಉಪಾಧ್ಯಾಯಾಽಪ್ಯುಪಾಧ್ಯಾಯೀ ಸ್ಯಾದಾಚಾರ್ಯಾಪಿ ಚ ಸ್ವತಃ ॥ ೫೮೩

೫೭೯-೫೮೦. ಅಭಿಸಾರಿಕಾ (ಸ್ತ್ರೀ)=ಪ್ರಿಯನ ಬಯಕೆಯಿಂದ ಸಂಕೇತಸ್ಥಾನಕ್ಕೆ ಹೋಗುವವಳು. ಪುಂಶ್ಚಲೀ, ಧರ್ಷಣೀ (ಚರ್ಷಣೀ), ಬಂಧಕೀ, ಅಸತೀ, ಕುಲಟಾ, ಇತ್ವರೀ, ಸ್ವೈರಿಣೀ, ಪಾಂಸುಲಾ (ಸ್ತ್ರೀ)= ವ್ಯಭಿಚಾರಿಣಿ. ಅಶಿಶ್ವೀ (ಸ್ತ್ರೀ)=ಮಕ್ಕಳಿಲ್ಲದವಳು. ಅವೀರಾ (ಸ್ತ್ರೀ)=ಗಂಡನೂ ಮಕ್ಕಳೂ ಇಲ್ಲದವಳು. ವಿಶ್ವಸ್ತಾ, ವಿಧವಾ (ಸ್ತ್ರೀ)=ವಿಧವೆ.

೫೮೧. ಆಲಿ,[1] ಸಖೀ, ವಯಸ್ಯಾ (ಸ್ತ್ರೀ)=ಗೆಳತಿ. ಪತಿವತ್ನೀ, ಸಭರ್ತೃಕಾ (ಸ್ತ್ರೀ)= ಗಂಡನಿರುವ ಸ್ತ್ರೀ, ಮುತ್ತೈದೆ. ವೃದ್ಧಾ, ಪಲಿಕ್ನೀ (ಸ್ತ್ರೀ)=ಮುದುಕಿ. ಪ್ರಾಜ್ಞೀ, ಪ್ರಜ್ಞಾ (ಸ್ತ್ರೀ)=ತಿಳಿದವಳು, ವ್ಯವಹಾರಚತುರೆ. ಪ್ರಾಜ್ಞಾ, ಧೀಮತೀ (ಸ್ತ್ರೀ)=ಸೂಕ್ಷ್ಮಬುದ್ಧಿಯವಳು, ಮೇಧಾವಿನಿ, ಶಾಸ್ತ್ರಜ್ಞಾನವುಳ್ಳವಳು.

೫೮೨. ಶೂದ್ರೀ (ಸ್ತ್ರೀ)=ಶೂದ್ರನ ಹೆಂಡತಿ. ಶೂದ್ರಾ (ಸ್ತ್ರೀ)=ಶೂದ್ರಜಾತಿಯ ಹೆಂಗಸು. ಆಭೀರೀ, ಮಹಾಶೂದ್ರೀ (ಸ್ತ್ರೀ)=ಗೊಲ್ಲ ಜಾತಿಯ ಹೆಂಗಸು ; ಗೊಲ್ಲನ ಹೆಂಡತಿ ; ಆಭೀರ ಎಂಬ ಸಂಕರಜಾತಿಯ ಹೆಂಗಸು ; ಸಂಕರಜಾತಿಯವನ ಹೆಂಡತಿ.

೫೮೩. ಅರ್ಯಾಣೀ, ಅರ್ಯಾ (ಸ್ತ್ರೀ)=ವೈಶ್ಯಜಾತಿಯ ಹೆಂಗಸು. ಕ್ಷತ್ರಿಯಾ, ಕ್ಷತ್ರಿಯಾಣೀ (ಸ್ತ್ರೀ)=ಕ್ಷತ್ರಿಯಸ್ತ್ರೀ. ಉಪಾಧ್ಯಾಯಾ, ಉಪಾಧ್ಯಾಯೀ (ಸ್ತ್ರೀ)=ಕಲಿಸುವವಳು, ಅಧ್ಯಾಪಿಕೆ. ಆಚಾರ್ಯಾ (ಸ್ತ್ರೀ)=ಮಂತ್ರವ್ಯಾಖ್ಯಾನ ಮಾಡತಕ್ಕವಳು, ವೇದಶಾಸ್ತ್ರಗಳನ್ನು ಕಲಿಸುವವಳು.

[1] ಆಲೀ ಎಂಬ ದೀರ್ಘಾಂತವೂ ಉಂಟು.



ಆಚಾರ್ಯಾನೀ ತು ಪುಂಯೋಗೇ ಸ್ಯಾದರ್ಯೀ ಕ್ಷತ್ರಿಯೀ ತಥಾ ।
ಉಪಾಧ್ಯಾಯಾನ್ಯುಪಾಧ್ಯಾಯೀ ಪೋಟಾ ಸ್ತ್ರೀಪುಂಸಲಕ್ಷಣಾ ॥ ೫೮೪
ವೀರಪತ್ನೀ ವೀರಭಾರ್ಯಾ ವೀರಮಾತಾ ತು ವೀರಸೂಃ ।
ಜಾತಾಪತ್ಯಾ ಪ್ರಜಾತಾ ಚ ಪ್ರಸೂತಾ ಚ ಪ್ರಸೂತಿಕಾ ॥ ೫೮೫
ಸ್ತ್ರೀ ನಗ್ನಿಕಾ ಕೋಟವೀ ಸ್ಯಾದ್ದೂತೀಸಂಚಾರಿಕೇ ಸಮೇ ।
ಕಾತ್ಯಾಯನ್ಯರ್ಧವೃದ್ಧಾ ಯಾ ಕಾಷಾಯವಸನಾಧವಾ ॥ ೫೮೬
ಸೈರಂಧ್ರೀ ಪರವೇಶ್ಮಸ್ಥಾ ಸ್ವವಶಾ ಶಿಲ್ಪಕಾರಿಕಾ ।
ಅಸಿಕ್ನೀ ಸ್ಯಾದವೃದ್ಧಾ ಯಾ ಪ್ರೇಷ್ಯಾಂತಃಪುರಚಾರಿಣೀ ॥ ೫೮೭
ವಾರಸ್ತ್ರೀ ಗಣಿಕಾ ವೇಶ್ಯಾ ರೂಪಾಜೀವಾಥ ಸಾ ಜನೈಃ ।
ಸತ್ಕೃತಾ ವಾರಮುಖ್ಯಾ ಸ್ಯಾತ್ಕುಟ್ಟನೀ ಶಂಭಲೀ ಸಮೇ ॥ ೫೮೮

೫೮೪. ಆಚಾರ್ಯಾನೀ (ಸ್ತ್ರೀ)=ಆಚಾರ್ಯನ ಪತ್ನಿ. ಅರ್ಯೀ (ಸ್ತ್ರೀ)=ವೈಶ್ಯನ ಹೆಂಡತಿ. ಕ್ಷತ್ರಿಯೀ (ಸ್ತ್ರೀ)=ಕ್ಷತ್ರಿಯನ ಹೆಂಡತಿ. ಉಪಾಧ್ಯಾಯಾನೀ, ಉಪಾಧ್ಯಾಯೀ (ಸ್ತ್ರೀ)=ಉಪಾಧ್ಯಾಯನ ಪತ್ನಿ. ಪೋಟಾ (ಸ್ತ್ರೀ)=ಮೀಸೆ ಮುಂತಾದ ಪುರುಷಲಕ್ಷಣವುಳ್ಳ ಹೆಂಗಸು.

೫೮೫. ವೀರಪತ್ನೀ, ವೀರಭಾರ್ಯಾ (ಸ್ತ್ರೀ)=ವೀರನ ಪತ್ನಿ. ವೀರಮಾತೃ, ವೀರಸೂ (ಸ್ತ್ರೀ)=ವೀರನ ತಾಯಿ. ಜಾತಾಪತ್ಯಾ, ಪ್ರಜಾತಾ, ಪ್ರಸೂತಾ, ಪ್ರಸೂತಿಕಾ (ಸ್ತ್ರೀ)=ಬಾಣಂತಿ.

೫೮೬. ನಗ್ನಿಕಾ, ಕೋಟವೀ (ಸ್ತ್ರೀ)=ಬೆತ್ತಲೆಯಾದ ಹೆಂಗಸು. ದೂತೀ, ಸಂಚಾರಿಕಾ (ಸ್ತ್ರೀ)=ದೂತಿ (Handmaid). ಕಾತ್ಯಾಯನೀ (ಸ್ತ್ರೀ)=ಕಾಷಾಯವಸ್ತ್ರವನ್ನುಟ್ಟಿರುವ ವಯಸ್ಸಾದ ವಿಧವೆ.

೫೮೭. ಸೈರಂಧ್ರೀ (ಸ್ತ್ರೀ)=ಪರಗೃಹದಲ್ಲಿದ್ದು ಕುಶಲಕಲೆಗಳನ್ನು ಮಾಡುವ ಸ್ವತಂತ್ರಳಾದ ಸ್ತ್ರೀ. ಅಸಿಕ್ನೀ (ಸ್ತ್ರೀ)=ಅಂತಃಪುರದಲ್ಲಿರುವ ಚಿಕ್ಕವಯಸ್ಸಿನ ದಾಸಿ.

೫೮೮. ವಾರಸ್ತ್ರೀ, ಗಣಿಕಾ, ವೇಶ್ಯಾ, ರೂಪಾಜೀವಾ (ಸ್ತ್ರೀ)=ಸೂಳೆ. ವಾರಮುಖ್ಯಾ (ಸ್ತ್ರೀ)=ಜನರಿಂದ ಸತ್ಕೃತಳಾದ ಸೂಳೆ. ಕುಟ್ಟನೀ[1], ಶಂಭಲೀ (ಸ್ತ್ರೀ)=ತಲೆಹಿಡುಕಿ (Procuress).

೫೮೯-೫೯೦. ವಿಪ್ರಶ್ನಿಕಾ, ಈಕ್ಷಣಿಕಾ, ದೈವಜ್ಞಾ (ಸ್ತ್ರೀ)=ಕಣಿ, ಶಕುನಫಲ—ಮುಂತಾದ್ದನ್ನು ಹೇಳತಕ್ಕವಳು. ರಜಸ್ವಲಾ, ಸ್ತ್ರೀಧರ್ಮಿಣೀ, ಅವಿ, ಆತ್ರೇಯೀ, ಮಲಿನೀ,

[1] ಕುಟ್ಟಿನೀ ಎಂಬ ರೂಪವೂ ಉಂಟು.

ವಿಪ್ರುಶ್ನಿಕಾ ತ್ರೀಕ್ಷಣಿಕಾ ದೈವಜ್ಞಾಥ ರಜಸ್ವಲಾ ।
ಸ್ತ್ರೀಧರ್ಮಿಣ್ಯವಿರಾತ್ರೇಯೀ ಮಲಿನೀ ಪುಷ್ಪವತ್ಯಪಿ ॥ ೫೬೯
ಋತುಮತ್ಯಪ್ಯುದಕ್ಯಾಪಿ ಸ್ಯಾದ್ರಜಃ ಪುಷ್ಪಮಾರ್ತವಮ್ ।
ಶ್ರದ್ಧಾಲುರ್ದೋಹದವತೀ ನಿಷ್ಕಲಾ ವಿಗತಾರ್ತವಾ ॥ ೫೭೦
ಆಪನ್ನಸತ್ತ್ವಾ ಸ್ಯಾದ್ಗುರ್ವಿಣ್ಯಂತರ್ವತ್ನೀ ಚ ಗರ್ಭಿಣೀ ।
ಗಣಿಕಾದೇಸ್ತು ಗಾಣಿಕ್ಯಂ ಗಾರ್ಭಿಣಂ ಯೌವತಂ ಗಣೇ ॥ ೫೭೧
ಪುನರ್ಭೂರ್ದಿಧಿಷೂರೂಢಾ ದ್ವಿಸ್ತಸ್ಯಾ ದಿಧಿಷುಃ ಪತಿಃ ।
ಸ ತು ದ್ವಿಜೋಽಗ್ರೇದಿಧಿಷೂಸ್ಸೈವ ಯಸ್ಯ ಕುಟುಂಬಿನೀ ॥ ೫೭೨
ಕಾನೀನಃ ಕನ್ಯಕಾಜಾತಸ್ಸುತೋಽಥ ಸುಭಗಾಸುತಃ ।
ಸೌಭಾಗಿನೇಯಃ ಸ್ಯಾತ್ಪಾರಸ್ತ್ರೈಣೇಯಸ್ತು ಪರಸ್ತ್ರಿಯಾಃ ॥ ೫೭೩

ಪುಷ್ಪವತೀ, ಋತುಮತೀ, ಉದಕ್ಯಾ (ಸ್ತ್ರೀ)=ಮುಟ್ಟಾದವಳು. ರಜಸ್, ಪುಷ್ಪ, ಆರ್ತವ (ನ)=ಮುಟ್ಟು. ಶ್ರದ್ಧಾಲು, ದೋಹದವತೀ (ಸ್ತ್ರೀ)=ಗರ್ಭಿಣಿಯಾಗಿ ಬಯಕೆಯುಳ್ಳವಳು. ನಿಷ್ಕಲಾ, ವಿಗತಾರ್ತವಾ (ಸ್ತ್ರೀ)=ಮುಟ್ಟು ನಿಂತವಳು.

೫೭೧. ಆಪನ್ನಸತ್ತ್ವಾ, ಗುರ್ವಿಣೀ, ಅಂತರ್ವತ್ನೀ, ಗರ್ಭಿಣೀ (ಸ್ತ್ರೀ)=ಗರ್ಭಿಣಿ. ಗಾಣಿಕ್ಯ (ನ)=ಸೂಳೆಯರ ಸಮೂಹ. ಗಾರ್ಭಿಣ (ನ)=ಗರ್ಭಿಣಿಯರ ಸಮೂಹ. ಯೌವತ[1] (ನ)=ಯುವತಿಯರ ಸಮೂಹ.

೫೭೨. ಪುನರ್ಭೂ, ದಿಧಿಷೂ (ಸ್ತ್ರೀ)=ಪುನರ್ವಿವಾಹವನ್ನು ಮಾಡಿಕೊಂಡವಳು. ದಿಧಿಷು (ದಿಧಿಷೂ) (ಪು)=ಪುನರ್ವಿವಾಹವನ್ನು ಮಾಡಿಕೊಂಡವಳ ಗಂಡ. ಅಗ್ರೇದಿಧಿಷೂ[2] (ಪು)=ಪುನರ್ವಿವಾಹವಾದವಳು ಯಾವನ ಮನೆಯಲ್ಲಿ ಗೃಹಕೃತ್ಯವನ್ನು ಸಾಗಿಸುವಳೋ ಅವನು.

೫೭೩. ಕಾನೀನ (ಪು)=ಮದುವೆಯಾಗದವಳು ಹೆತ್ತ ಮಗ. ಸೌಭಾಗಿನೇಯ (ಪು)=ಭಾಗ್ಯವಂತೆಯ ಮಗ. ಪಾರಸ್ತ್ರೈಣೇಯ (ಪು)=ಪರಸ್ತ್ರೀಯರಲ್ಲಿ ಪಡೆದ ಮಗ.

---

[1] ಯೌವನ ಎಂಬ ರೂಪವೂ ಉಂಟು.

[2] ಅಗ್ರೇದಿಧಿಷೂ (ಪು)=ಜ್ಯೇಷ್ಠಸಹೋದರನ ಮರಣಾನಂತರ ಅವನ ಪತ್ನಿಯನ್ನು ಮದುವೆ ಯಾದವನು. (ಸ್ತ್ರೀ)= ಜ್ಯೇಷ್ಠಸಹೋದರಿಯು ಮದುವೆಯಾಗುವುದಕ್ಕೆ ಮೊದಲು ಮದುವೆ ಯಾದವಳು—ಎಂಬ ಅರ್ಥಾಂತರಗಳೂ ಉಂಟು.



ಪೈತೃಷ್ವಸೇಯಃ ಸ್ಯಾತ್ಪೈತೃಷ್ವಸ್ರೀಯಶ್ಚ ಪಿತೃಷ್ವಸುಃ ।
ಸುತೋ ಮಾತೃಷ್ವಸುಶ್ಚೈವಂ ವೈಮಾತ್ರೇಯೋ ವಿಮಾತೃಜಃ ॥ ೫೭೪
ಅಥ ಬಾಂಧಕಿನೇಯಃ ಸ್ಯಾದ್ಬಂಧುಲಶ್ಚಾಸತೀಸುತಃ ।
ಕೌಲಟೇರಃ ಕೌಲಟೇಯೋ ಭಿಕ್ಷುಕೀ ತು ಸತೀ ಯದಿ ॥ ೫೭೫
ತದಾ ಕೌಲಟಿನೇಯೋಽಸ್ಯಾಃ ಕೌಲಟೇಯೋಽಪಿ ಚಾತ್ಮಜೇ ।
ಆತ್ಮಜಸ್ತನಯಸ್ಸೂನುಸ್ಸುತಃ ಪುತ್ರಃ ಸ್ತ್ರಿಯಾಂ ತ್ವಮೀ ॥ ೫೭೬
ಆಹುರ್ದುಹಿತರಂ ಸರ್ವೇಽಪತ್ಯಂ ತೋಕಂ ತಯೋಸ್ಸಮೇ ।
ಸ್ವಜಾತೇ ತ್ವೌರಸೋರಸ್ಯೌ ತಾತಸ್ತು ಜನಕಃ ಪಿತಾ ॥ ೫೭೭
ಜನಯಿತ್ರೀ ಪ್ರಸೂರ್ಮಾತಾ ಜನನೀ ಭಗಿನೀ ಸ್ವಸಾ ।
ನನಾಂದಾ ತು ಸ್ವಸಾ ಪತ್ಯುರ್ನಪ್ತ್ರೀ ಪೌತ್ರೀ ಸುತಾತ್ಮಜಾ ॥ ೫೭೮
ಭಾರ್ಯಾಸ್ತು ಭ್ರಾತೃವರ್ಗಸ್ಯ ಯಾತರಃ ಸ್ಯುಃ ಪರಸ್ಪರಮ್ ।
ಪ್ರಜಾವತೀ ಭ್ರಾತೃಜಾಯಾ ಮಾತುಲಾನೀ ತು ಮಾತುಲೀ ॥ ೫೭೯

೫೭೪. ಪೈತೃಷ್ವಸೇಯ, ಪೈತೃಷ್ವಸ್ರೀಯ (ಪು)=ಸೋದರತ್ತೆಯ (ತಂದೆಯ ಸಹೋದರಿಯ) ಮಗ. ಮಾತೃಷ್ವಸೇಯ, ಮಾತೃಷ್ವಸ್ರೀಯ (ಪು)=ತಾಯಿಯ ಸಹೋದರಿಯ ಮಗ. (ಸ್ತ್ರೀ. ಮಾತೃಷ್ವಸೇಯೀ, ಮಾತೃಷ್ವಸ್ರೀಯಾ) ವೈಮಾತ್ರೇಯ (ಪು)=ಮಲತಾಯಿಯ ಮಗ.

೫೭೫-೫೭೬. ಬಾಂಧಕಿನೇಯ, ಬಂಧುಲ, ಅಸತೀಸುತ, ಕೌಲಟೇರ, ಕೌಲಟೇಯ (ಪು)=ವ್ಯಭಿಚಾರಿಣಿಯ ಮಗ. ಕೌಲಟಿನೇಯ, ಕೌಲಟೇಯ (ಪು)=ಶೀಲವಂತೆಯಾದ ಭಿಕ್ಷುಕಿಯ ಮಗ.

೫೭೬-೫೭೭. ಆತ್ಮಜ, ತನಯ, ಸೂನು, ಸುತ, ಪುತ್ರ (ಪು)=ಮಗ. ಈ ಶಬ್ದಗಳೇ ಸ್ತ್ರೀಲಿಂಗದಲ್ಲಿದ್ದರೆ- ಆತ್ಮಜಾ, ತನಯಾ, ಸೂನು, ಸುತಾ, ಪುತ್ರೀ ಮತ್ತು ದುಹಿತೃ (ಸ್ತ್ರೀ)=ಮಗಳು. ಅಪತ್ಯ, ತೋಕ (ನ)=ಮಗ ಅಥವಾ ಮಗಳು (Child). ಔರಸ, ಔರಸ್ಯ (ಪು)=ಹೊಟ್ಟೆಯಲ್ಲಿ ಹುಟ್ಟಿದ ಮಗ (Legitimate Son.) ತಾತ, ಜನಕ, ಪಿತೃ (ಪು)=ತಂದೆ.

೫೭೮. ಜನಯಿತ್ರೀ, ಪ್ರಸೂ, ಮಾತೃ, ಜನನೀ (ಸ್ತ್ರೀ)=ತಾಯಿ. ಭಗಿನೀ, ಸ್ವಸೃ (ಸ್ತ್ರೀ)=ಸಹೋದರಿ. ನನಾಂದೃ (ಸ್ತ್ರೀ)=ಗಂಡನ ಒಡಹುಟ್ಟಿದವಳು, ನಾದಿನಿ. ನಪ್ತ್ರೀ, ಪೌತ್ರೀ, ಸುತಾತ್ಮಜಾ (ಸ್ತ್ರೀ)=ಮಗನ ಅಥವಾ ಮಗಳ ಮಗಳು.

ಪತಿಪತ್ನ್ಯೋಃ ಪ್ರಸೂಃ ಶ್ವಶ್ರೂಃ ಶ್ವಶುರಸ್ತು ಪಿತಾ ತಯೋಃ ।
ಪಿತುರ್ಭ್ರಾತಾ ಪಿತೃವ್ಯಃ ಸ್ಯಾತ್ ಮಾತುರ್ಭ್ರಾತಾ ತು ಮಾತುಲಃ ॥ ೬೦೦
ಶ್ಯಾಲಾಸ್ಸ್ಯುರ್ಭ್ರಾತರಃ ಪತ್ನ್ಯಾಃ ಸ್ವಾಮಿನೋ ದೇವೃದೇವರೌ ।
ಸ್ವಸ್ರೀಯೋ ಭಾಗಿನೇಯಃ ಸ್ಯಾಜ್ಜಾಮಾತಾ ದುಹಿತುಃ ಪತಿಃ ॥ ೬೦೧
ಪಿತಾಮಹಃ ಪಿತೃಪಿತಾ ತತ್ಪಿತಾ ಪ್ರಪಿತಾಮಹಃ ।
ಮಾತುರ್ಮಾತಾಮಹಾದ್ಯೇವಂ ಸಪಿಂಡಾಸ್ತು ಸನಾಭಯಃ ॥ ೬೦೨
ಸಮಾನೋದರ್ಯಸೋದರ್ಯಸಗರ್ಭ್ಯಸಹಜಾಸ್ಸಮಾಃ ।
ಸಗೋತ್ರಬಾಂಧವಜ್ಞಾತಿಬಂಧುಸ್ವಸ್ವಜನಾಸ್ಸಮಾಃ ॥ ೬೦೩

---

೫೯೯. ಯಾತೃ (ಸ್ತ್ರೀ)=ಗಂಡನ ಸೋದರರ ಪತ್ನಿ, ಓರಗಿತ್ತಿ. ಪ್ರಜಾವತೀ, ಭ್ರಾತೃಜಾಯಾ (ಸ್ತ್ರೀ)=ಸೋದರರ ಹೆಂಡತಿ, ಅತ್ತಿಗೆ. ಮಾತುಲಾನೀ, ಮಾತುಲೀ (ಸ್ತ್ರೀ)=ಸೋದರಮಾವನ ಹೆಂಡತಿ.

೬೦೦. ಶ್ವಶ್ರೂ (ಸ್ತ್ರೀ)=ಗಂಡನ ಅಥವಾ ಹೆಂಡತಿಯ ತಾಯಿ, ಅತ್ತೆ, ಶ್ವಶುರ (ಪು)=ಗಂಡನ ಅಥವಾ ಹೆಂಡತಿಯ ತಂದೆ, ಮಾವ. ಪಿತೃವ್ಯ (ಪು)=ತಂದೆಯ ಸೋದರ, ಚಿಕ್ಕಪ್ಪ, ದೊಡ್ಡಪ್ಪ. ಮಾತುಲ(ಪು)=ತಾಯಿಯ ಸಹೋದರ, ಸೋದರಮಾವ.

೬೦೧. ಶ್ಯಾಲ (ಸ್ಯಾಲ) (ಪು)= ಹೆಂಡತಿಯ ಸೋದರ. ದೇವೃ, ದೇವರ[1] (ಪು)=ಗಂಡನ ಸೋದರ, ಮೈದುನ. ಸ್ವಸ್ರೀಯ, ಭಾಗಿನೇಯ (ಪು)=ಸೋದರಿಯ ಮಗ, ಸೋದರಳಿಯ. ಜಾಮಾತೃ (ಪು)=ಮಗಳ ಗಂಡ, ಅಳಿಯ.

೬೦೨. ಪಿತಾಮಹ (ಪು)=ತಂದೆಯ ತಂದೆ, ಅಜ್ಜ. ಪ್ರಪಿತಾಮಹ (ಪು)=ಅಜ್ಜನ ತಂದೆ, ಮುತ್ತಜ್ಜ. ಮಾತಾಮಹ (ಪು)=ತಾಯಿಯ ತಂದೆ. ಪ್ರಮಾತಾಮಹ (ಪು)=ಮಾತಾಮಹನ ತಂದೆ. ಸಪಿಂಡ, ಸನಾಭಿ (ಪು)=ಮೂಲಪುರುಷನಿಂದ ಏಳು ತಲೆಯವರೆಗಿನ ಜ್ಞಾತಿ, ದಾಯಾದಿ.

೬೦೩. ಸಮಾನೋದರ್ಯ, ಸೋದರ್ಯ,[2] ಸಗರ್ಭ್ಯ, ಸಹಜ (ಪು)=ಸಹೋದರ. ಸಗೋತ್ರ, ಬಾಂಧವ, ಜ್ಞಾತಿ, ಬಂಧು, ಸ್ವ, ಸ್ವಜನ (ಪು)=ಒಂದೇ ಕುಲದಲ್ಲಿ ಹುಟ್ಟಿದವನು ; ನೆಂಟ.

---

[1] ದೇವನ್ ಎಂಬ ನಕಾರಾಂತವೂ ಇದೆ.
[2] ಸಹೋದರ, ಸೋದರ ಶಬ್ದಗಳೂ ಇವೆ.



ಜ್ಞಾತೇಯಂ ಬಂಧುತಾ ತೇಷಾಂ ಕ್ರಮಾದ್ಭಾವಸಮೂಹಯೋಃ ।
ಧವಃ ಪ್ರಿಯಃ ಪತಿರ್ಭರ್ತಾ ಜಾರಸ್ತೂಪಪತಿಸ್ಸಮೌ ॥ ೬೦೪
ಅಮೃತೇ ಜಾರಜಃ ಕುಂಡೋ ಮೃತೇ ಭರ್ತರಿ ಗೋಲಕಃ ।
ಭ್ರಾತ್ರೀಯೋ ಭ್ರಾತೃಜೋ ಭ್ರಾತೃಭಗಿನ್ಯೌ ಭ್ರಾತರಾವುಭೌ ॥ ೬೦೫
ಮಾತಾಪಿತರೌ ಪಿತರೌ ಮಾತರಪಿತರೌ ಪ್ರಸೂಜನಯಿತಾರೌ ।
ಶ್ವಶ್ರೂಶ್ವಶುರೌ ಶ್ವಶುರೌ ಪುತ್ರೌ ಪುತ್ರಶ್ಚ ದುಹಿತಾ ಚ ॥ ೬೦೬
ದಂಪತೀ ಜಂಪತೀ ಜಾಯಾಪತೀ ಭಾರ್ಯಾಪತೀ ಚ ತೌ ।
ಗರ್ಭಾಶಯೋ ಜರಾಯುಃ ಸ್ಯಾದುಲ್ಬಂ ಚ ಕಲಲೋऽಸ್ತ್ರಿಯಾಮ್ ॥ ೬೦೭
ಸೂತಿಮಾಸೋ ವೈಜನನೋ ಗರ್ಭೋ ಭ್ರೂಣ ಇಮೌ ಸಮೌ ।
ತೃತೀಯಾ ಪ್ರಕೃತಿಃ ಷಂಡಃ ಕ್ಲೀಬಃ ಪಂಡೋ ನಪುಂಸಕಮ್ ॥ ೬೦೮

---

೬೦೪. ಜ್ಞಾತೇಯ (ನ)=ನೆಂಟತನ, ಬಾಂಧವ್ಯ. ಬಂಧುತಾ[1] (ಸ್ತ್ರೀ)=ಬಂಧುಗಳ ಸಮೂಹ. ಧವ, ಪ್ರಿಯ, ಪತಿ, ಭರ್ತೃ (ಪು)=ಗಂಡ. ಜಾರ, ಉಪಪತಿ (ಪು)=ಮಿಂಡ.

೬೦೫. ಕುಂಡ (ಪು)=ಗಂಡನಿರುವಾಗ ವ್ಯಭಿಚಾರದಿಂದ ಹುಟ್ಟಿದವನು. ಗೋಲಕ (ಪು)=ಗಂಡನು ಸತ್ತಮೇಲೆ ವ್ಯಭಿಚಾರದಿಂದ ಹುಟ್ಟಿದವನು. ಭ್ರಾತ್ರೀಯ, ಭ್ರಾತೃಜ (ಪು)=ಸೋದರನ ಮಗ. ಭ್ರಾತೃಭಗಿನೀ (ಸ್ತ್ರೀ), ಭ್ರಾತೃ (ಪು)=(ಈ ಎರಡು ಶಬ್ದಗಳೂ ದ್ವಿವಚನ ಅಥವಾ ಬಹುವಚನದಲ್ಲಿರುವಾಗ) ಸೋದರ ಸೋದರಿಯರು, ಅಣ್ಣತಂಗಿಯರು, ಅಕ್ಕತಮ್ಮಂದಿರು.

೬೦೬. ಮಾತಾಪಿತೃ, ಪಿತೃ, ಮಾತರಪಿತೃ (ಪು. ದ್ವಿವಚನ ಅಥವಾ ಬಹುವಚನ)=ತಂದೆ ತಾಯಿಗಳು. ಶ್ವಶ್ರೂಶ್ವಶುರ, ಶ್ವಶುರ (ಪು. ದ್ವಿವಚನ ಅಥವಾ ಬಹುವಚನ)=ಅತ್ತೆ ಮಾವಂದಿರು. ಪುತ್ರ (ಪು. ದ್ವಿವಚನ ಅಥವಾ ಬಹುವಚನ)=ಮಗ ಮತ್ತು ಮಗಳು.

೬೦೭. ದಂಪತಿ, ಜಂಪತಿ, ಜಾಯಾಪತಿ, ಭಾರ್ಯಾಪತಿ (ಪು.) (ಸ್ವಾಭಾವಿಕವಾಗಿ ದ್ವಿವಚನ. ಅನೇಕ ದಂಪತಿಗಳು ಎಂಬ ಅರ್ಥದಲ್ಲಿ ಬಹುವಚನವೂ ಬರಬಹುದು)=ಗಂಡ ಹೆಂಡಿರು, ದಂಪತಿಗಳು. ಗರ್ಭಾಶಯ, ಜರಾಯು (ಪು), ಉಲ್ಬ (ನ)=ಗರ್ಭವನ್ನು ಸುತ್ತಿರುವ ಚೀಲ, ಮಾಸು. ಕಲಲ (ಪು. ನ)=ಗರ್ಭದ ಪ್ರಥಮಾವಸ್ಥೆ, ಶುಕ್ಲಶೋಣಿತಗಳ ಸಂಪಾತ.

---

[1] ಇದಕ್ಕೆ ಬಾಂಧವ್ಯ, ನೆಂಟತನ ಎಂಬ ಅರ್ಥವೂ ಇದೆ.

ಶಿಶುತ್ವಂ ಶೈಶವಂ ಬಾಲ್ಯಂ ತಾರುಣ್ಯಂ ಯೌವನಂ ಸಮೇ ।
ಸ್ಯಾತ್‌ಸ್ಥಾವಿರಂ ತು ವೃದ್ಧತ್ವಂ ವೃದ್ಧಸಂಘೇಽಪಿ ವಾರ್ಧಕಮ್ ॥ ೬೦೯
ಪಲಿತಂ ಜರಸಾ ಶೌಕ್ಲ್ಯಂ ಕೇಶಾದೌ ವಿಸ್ರಸಾ ಜರಾ ।
ಸ್ಯಾದುತ್ತಾನಶಯಾ ಡಿಂಭಾ ಸ್ತನಪಾ ಚ ಸ್ತನಂಧಯೀ ॥ ೬೧೦
ಬಾಲಸ್ತು ಸ್ಯಾನ್ಮಾಣವಕೋ ವಯಸ್ಥಸ್ತರುಣೋ ಯುವಾ ।
ಪ್ರವಯಾಃ ಸ್ಥವಿರೋ ವೃದ್ಧೋ ಜೀನೋ ಜೀರ್ಣೋ ಜರನ್ನಪಿ ॥ ೬೧೧
ವರ್ಷೀಯಾನ್ ದಶಮೀ ಜ್ಯಾಯಾನ್ ಪೂರ್ವಜಸ್ತ್ವಗ್ರಿಯೋಽಗ್ರಜಃ ।
ಜಘನ್ಯಜೇ ಸ್ಯುಃ ಕನಿಷ್ಠಯವೀಯೋಽವರಜಾನುಜಾಃ ॥ ೬೧೨

---

೬೦೮. ಸೂತಿಮಾಸ, ವೈಜನನ (ಪು)=ಹೆರಿಗೆಯ ತಿಂಗಳು. ಗರ್ಭ, ಭ್ರೂಣ (ಪು)=ಗರ್ಭ. ತೃತೀಯಪ್ರಕೃತಿ (ಸ್ತ್ರೀ), ಷಂಡ,[1] ಕ್ಲೀಬ, ಪಂಡ (ಪು), ನಪುಂಸಕ[2] (ನ)=ನಪುಂಸಕ.

೬೦೯. ಶಿಶುತ್ವ, ಶೈಶವ, ಬಾಲ್ಯ (ನ)=ಹುಡುಗತನ. ತಾರುಣ್ಯ, ಯೌವನ (ನ)=ಪ್ರಾಯ. ಸ್ಥಾವಿರ, ವೃದ್ಧತ್ವ, ವಾರ್ಧಕ[3] (ನ)=ಮುಪ್ಪು. ವಾರ್ಧಕ (ನ)=ಮುದುಕರ ಗುಂಪು.

೬೧೦. ಪಲಿತ (ನ)=ಮುಪ್ಪಿನಿಂದಾದ ಕೂದಲಿನ ಬಿಳುಪು, ನರೆ. ವಿಸ್ರಸಾ, ಜರಾ (ಸ್ತ್ರೀ)=ಬಹಳ ಮುಪ್ಪು. ಉತ್ತಾನಶಯಾ, ಡಿಂಭಾ, ಸ್ತನಪಾ, ಸ್ತನಂಧಯೀ (ಸ್ತ್ರೀ)=ಹೆಣ್ಣು ಶಿಶು, ಎಳೆಯ ಮಗು. (ಮುಂದೆ ೬೧೮ನೆಯ ಶ್ಲೋಕದಲ್ಲಿ 'ತ್ರಿಷು ಜರಾವರಾ' ಎಂದು ಹೇಳಿರುವುದರಿಂದ ಉತ್ತಾನಶಯಾ ಮುಂತಾದ ಶಬ್ದಗಳು ವಿಶೇಷ್ಯನಿಘ್ನವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಉದಾ : ಉತ್ತಾನಶಯಃ ಪುತ್ರಃ, ಉತ್ತಾನಶಯಾ ಪುತ್ರೀ, ಉತ್ತಾನಶಯಮಪತ್ಯಮ್. ಉತ್ತಾನಶಯ, ಡಿಂಭ, ಸ್ತನಪ, ಸ್ತನಂಧಯ (ಪು) ನಪುಂಸಕದಲ್ಲಿ ಪುಲ್ಲಿಂಗ ಪ್ರಕೃತಿರೂಪಗಳೇ ಇರುತ್ತವೆ.)

೬೧೧. ಬಾಲ, ಮಾಣವಕ (ಪು) (-ಸ್ತ್ರೀ. ಮಾಣವಿಕಾ)=ಹುಡುಗ. ವಯಸ್ಥ, ತರುಣ, ಯುವನ್ (ಪು) (-ಸ್ತ್ರೀ. ತರುಣೀ, ಯುವತಿ)=ಯುವಕ. ಪ್ರವಯಸ್,. ಸ್ಥವಿರ, ವೃದ್ಧ, ಜೀನ, ಜೀರ್ಣ, ಜರತ್ (ಪು) (- ಸ್ತ್ರೀ. ಜರತೀ)=ಮುದುಕ.

೬೧೨. ವರ್ಷೀಯಸ್, ದಶಮಿನ್, ಜ್ಯಾಯಸ್ (ಪು) (ಸ್ತ್ರೀ. ವರ್ಷೀಯಸೀ, ದಶಮಿನೀ,

---

[1] ಶಂಡ, ಶಂಢ ಎಂಬ ರೂಪಗಳೂ ಇವೆ.
[2] ಇದು ಪುಲ್ಲಿಂಗದಲ್ಲಿಯೂ ಇದೆ.
[3] ವಾರ್ಧಕ್ಯ ಎಂಬ ಶಬ್ದವೂ ಇದೆ.



ಅಮಾಂಸೋ ದುರ್ಬಲಶ್ಛಾತೋ ಬಲವಾನ್ ಮಾಂಸಲೋಽಂಸಲಃ ।
ತುಂದಿಲಸ್ತುಂದಿಭಸ್ತುಂದೀ ಬೃಹತ್ಕುಕ್ಷಿಃ ಪಿಚಂಡಿಲಃ ॥ ೬೧೩
ಅವಟೀಟೋಽವನಾಟಶ್ಚಾವಭ್ರಟೋ ನತನಾಸಿಕೇ ।
ಕೇಶವಃ ಕೇಶಿಕಃ ಕೇಶೀ ವಲಿನೋ ವಲಿಭಸ್ಸಮೌ ॥ ೬೧೪
ವಿಕಲಾಂಗಸ್ತು ಪೋಗಂಡಃ ಖರ್ವೋ ಹ್ರಸ್ವಶ್ಚ ವಾಮನಃ ।
ಖರಣಾಸ್ಸ್ಯಾತ್ಖರಣಸೋ ವಿಗ್ರಸ್ತು ಗತನಾಸಿಕಃ ॥ ೬೧೫
ಖುರಣಾಸ್ಸ್ಯಾತ್ಖುರಣಸಃ ಪ್ರಜ್ಞುಃ ಪ್ರಗತಜಾನುಕಃ ।
ಊರ್ಧ್ವಜ್ಞುರೂರ್ಧ್ವಜಾನುಃ ಸ್ಯಾತ್ ಸಂಜ್ಞುಸ್ಸಂಹತಜಾನುಕಃ ॥ ೬೧೬

---

ಜ್ಯಾಯಸೀ)=ಹಣ್ಣುಮುದುಕ. ಪೂರ್ವಜ, ಅಗ್ರಿಯ, ಅಗ್ರಜ (ಪು)=ಹಿರಿಯ ಸೋದರ, ಅಣ್ಣ. ಜಘನ್ಯಜ, ಕನಿಷ್ಠ, ಯವೀಯಸ್, ಅವರಜ, ಅನುಜ (ಪು) (-ಸ್ತ್ರೀ. ಯವೀಯಸೀ)= ಕಿರಿಯಸೋದರ, ತಮ್ಮ.

೬೧೩. ಅಮಾಂಸ, ದುರ್ಬಲ, ಛಾತ (ಪು)=ಬಡಕಲು ಮೈಯವನು, ಅಶಕ್ತ. ಬಲವತ್, ಮಾಂಸಲ, ಅಂಸಲ (ಪು) (-ಸ್ತ್ರೀ. ಬಲವತೀ)=ದೇಹಪುಷ್ಟಿಯುಳ್ಳವನು, ಬಲಶಾಲಿ. ತುಂದಿಲ, ತುಂದಿಭ, (ತುಂದಿಕ), ತುಂದಿನ್, ಬೃಹತ್ಕುಕ್ಷಿ, ಪಿಚಂಡಿಲ (ಪಿಚಿಂಡಿಲ) (ಪು.) (ಸ್ತ್ರೀ.- ತುಂದಿನೀ)=ಡೊಳ್ಳುಹೊಟ್ಟೆಯವನು.

೬೧೪. ಅವಟೀಟ, ಅವನಾಟ, ಅವಭ್ರಟ, ನತನಾಸಿಕ (ಪು)=ಚಪ್ಪಟೆ ಮೂಗುಳ್ಳವನು. ಕೇಶವ, ಕೇಶಿಕ, ಕೇಶಿನ್ (ಪು) (—ಸ್ತ್ರೀ. ಕೇಶಿನೀ)=ಸುಂದರವಾದ ತಲೆ ಕೂದಲುಳ್ಳವನು. ವಲಿನ, ವಲಿಭ (ಪು)=ಸುಕ್ಕುಗಟ್ಟಿದ ಚರ್ಮ ಉಳ್ಳವನು.

೬೧೫. ವಿಕಲಾಂಗ, ಪೋಗಂಡ[1] (ಪು) (ಸ್ತ್ರೀ. ವಿಕಲಾಂಗೀ, ವಿಕಲಾಂಗಾ)=ಅಂಗಹೀನ. ಖರ್ವ, ಹ್ರಸ್ವ, ವಾಮನ (ಪು)=ಕುಳ್ಳ. ಖರಣಸ್, ಖರಣಸ (ಪು)=ಚೂಪಾದ ಮೂಗುಳ್ಳವನು, ಗಿಣಿಮೂಗ. ವಿಗ್ರ[2], ಗತನಾಸಿಕ (ಪು)=ಮೂಗಿಲ್ಲದವನು.

೬೧೬. ಖುರಣಸ್, ಖುರಣಸ (ಪು)=ಗೊರಸಿನಂತಹ ಮೂಗುಳ್ಳವನು, ಚಪ್ಪಟೆಮೂಗ. ಪ್ರಜ್ಞು, ಪ್ರಗತಜಾನುಕ (ಪು)=ಒಂದಕ್ಕೊಂದು ದೂರವಾದ ಮೊಳಕಾಲುಳ್ಳವನು, ಕಿಸಿಗಾಲಿನವನು. ಊರ್ಧ್ವಜ್ಞು, ಊರ್ಧ್ವಜಾನು(ಪು)=ಉದ್ದವಾದ ಮೊಳಕಾಲುಳ್ಳವನು, ಮಾರುಗಾಲಿನವನು. ಸಂಜ್ಞು, ಸಂಹತಜಾನುಕ (ಪು)=ಒಂದಕ್ಕೊಂದು ತಗಲುವ ಮೊಣಕಾಲುಳ್ಳವನು.

---

[1] ಅಪೋಗಂಡ ಎಂಬ ರೂಪಾಂತರವೂ, ಬಾಲಕ ಎಂಬ ಅರ್ಥಾಂತರವೂ ಉಂಟು.
[2] ವಿಖ್ಯ ಎಂಬ ರೂಪಾಂತರವೂ ಉಂಟು.

ಸ್ಯಾದೇಡೇ ಬಧಿರಃ ಕುಬ್ಜೇ ಗಡುಲಃ ಕುಕರೇ ಕುಣಿಃ ।
ಪೃಶ್ನಿರಲ್ಪತನೌ ಶ್ರೋಣಃ ಪಂಗೌ ಮುಂಡಸ್ತು ಮುಂಡಿತೇ ॥ ೬೧೭
ವಲಿರಃ ಕೇಕರೇ ಖೋಡೇ ಖಂಜಸ್ತ್ರಿಷು ಜರಾವರಾಃ ।
ಜಟುಲಃ ಕಾಲಕಃ ಪಿಪ್ಲುಸ್ತಿಲಕಸ್ತಿಲಕಾಲಕಃ ॥ ೬೧೮
ಅನಾಮಯಂ ಸ್ಯಾದಾರೋಗ್ಯಂ ಚಿಕಿತ್ಸಾ ರುಕ್ಪ್ರತಿಕ್ರಿಯಾ ।
ಭೇಷಜೌಷಧಭೈಷಜ್ಯಾನ್ಯಗದೋ ಜಾಯುರಿತ್ಯಪಿ ॥ ೬೧೯
ಸ್ತ್ರೀ ರುಗ್ರುಜಾ ಚೋಪತಾಪರೋಗವ್ಯಾಧಿಗದಾಮಯಾಃ ।
ಕ್ಷಯಃ ಶೋಷಶ್ಚ ಯಕ್ಷ್ಮಾ ಚ ಪ್ರತಿಶ್ಯಾಯಸ್ತು ಪೀನಸಃ ॥ ೬೨೦

---

೬೧೭. ಏಡ, ಬಧಿರ (ಪು)=ಕಿವುಡ. ಕುಬ್ಜ, ಗಡುಲ (ಪು)=ಗೂನುಬೆನ್ನಿನವ, ಗುಜ್ಜಾರಿ. ಕುಕರ, ಕುಣಿ[1] (ಪು)=ಕೈ ಇಲ್ಲದವನು ; ಸೊಟ್ಟ ಕೈಯವನು. ಪೃಶ್ನಿ, ಅಲ್ಪತನು (ಪು)=ಚಿಕ್ಕ ಮೈಕಟ್ಟುಳ್ಳವನು. ಶ್ರೋಣ, ಪಂಗು (ಪು) (-ಸ್ತ್ರೀ. ಪಂಗೂ)=ಕುಂಟ. ಮುಂಡ, ಮುಂಡಿತ (ಪು)= ಕೂದಲನ್ನು ಬೋಳಿಸಿಕೊಂಡ ತಲೆಯವನು.

೬೧೮. ವಲಿರ, ಕೇಕರ (ಪು)=ಮೆಳ್ಳಗಣ್ಣಿನವನು. ಖೋಡ, ಖಂಜ (ಪು)=ಹೆಳವ, ಕಾಲಿಲ್ಲದವನು. ೬೧೦ನೆಯ ಶ್ಲೋಕದ ಉತ್ತಾನಶಯ ಶಬ್ದದಿಂದ ಖಂಜ ಶಬ್ದದವರೆಗಿರುವ ಶಬ್ದಗಳು ಮೂರು ಲಿಂಗಗಳಲ್ಲಿಯೂ ಅರ್ಥಾನುಸಾರವಾಗಿ ಬರುತ್ತವೆ. ಜಟುಲ (ಜಡುಲ), ಕಾಲಕ, ಪಿಪ್ಲು, ತಿಲಕ, ತಿಲಕಾಲಕ (ಪು)=ದೇಹದಮೇಲಿರುವ ಕರಿಯ ಮಚ್ಚೆ.

೬೧೯. ಅನಾಮಯ, ಆರೋಗ್ಯ (ನ)=ಆರೋಗ್ಯ. ಚಿಕಿತ್ಸಾ, ರುಕ್ಪ್ರತಿಕ್ರಿಯಾ (ಸ್ತ್ರೀ)=ರೋಗದ ಚಿಕಿತ್ಸೆ. ಭೇಷಜ, ಔಷಧ, ಭೈಷಜ್ಯ (ನ), ಅಗದ, ಜಾಯು (ಪು)=ಔಷಧ, ಮದ್ದು.

೬೨೦. ರುಜ್, ರುಜಾ, (ಸ್ತ್ರೀ), ಉಪತಾಪ, ರೋಗ, ವ್ಯಾಧಿ, ಗದ, ಆಮಯ (ಪು)=ರೋಗ, ಕಾಹಿಲೆ. ಕ್ಷಯ, ಶೋಷ, ಯಕ್ಷ್ಮನ್ (ಪು)=ಕ್ಷಯರೋಗ. ಪ್ರತಿಶ್ಯಾ[2]ಯ, ಪೀನಸ (ಪು)=ನೆಗಡಿ. (ವೈದ್ಯಶಾಸ್ತ್ರದಲ್ಲಿ ಪೀನಸವೆಂದರೆ ಮೂಗಿನ ಒಂದು ರೋಗ ಭೇದ).

---

1 ಕೂಣಿ ಎಂಬ ರೂಪಾಂತರವೂ ಇದೆ.
2 ಪ್ರತಿಶ್ಯಾ ಎಂಬ ಆಕಾರಾಂತವೂ ಇದೆ.



ಸ್ತ್ರೀಕ್ಷುತ್ಕ್ಷುತಂ ಕ್ಷವಃ ಪುಂಸಿ ಕಾಸಸ್ತು ಕ್ಷವಥುಃ ಪುಮಾನ್ ।
ಶೋಫಸ್ತು ಶ್ವಯಥುಶ್ಶೋಥಃ ಪಾದಸ್ಫೋಟೋ ವಿಪಾದಿಕಾ ॥ ೬೨೧
ಕಿಲಾಸಸಿಧ್ಮೇ ಕಚ್ಛ್ವಾಂ ತು ಪಾಮಪಾಮೇ ವಿಚರ್ಚಿಕಾ ।
ಕಂಡೂಃ ಖರ್ಜೂಶ್ಚ ಕಂಡೂಯಾ ವಿಸ್ಫೋಟಃ ಪಿಟಕಸ್ತ್ರಿಷು ॥ ೬೨೨
ವ್ರಣೋಽಸ್ತ್ರಿಯಾಮೀರ್ಮಮರುಃ ಕ್ಲೀಬೇ ನಾಡೀವ್ರಣಃ ಪುಮಾನ್ ।
ಕೋಠೋ ಮಂಡಲಕಂ ಕುಷ್ಠಶ್ವಿತ್ರೇ ದುರ್ನಾಮಕಾರ್ಶಸೀ ॥ ೬೨೩
ಆನಾಹಸ್ತು ನಿಬಂಧಃ ಸ್ಯಾತ್ ಗ್ರಹಣೀ ರುಕ್ಪ್ರವಾಹಿಕಾ ।
ಪ್ರಚ್ಛರ್ದಿಕಾ ವಮಿಶ್ಚ ಸ್ತ್ರೀ ಪುಮಾಂಸ್ತು ವಮಥುಃ ಸಮಾಃ ॥ ೬೨೪
ವ್ಯಾಧಿಭೇದಾ ವಿದ್ರಧಿಃ ಸ್ತ್ರೀ ಜ್ವರಮೇಹಭಗಂದರಾಃ ।
ಅಶ್ಮರೀ ಮೂತ್ರಕೃಚ್ಛ್ರಂ ಸ್ಯಾತ್ ಪೂರ್ವೇ ಶುಕ್ರಾವಧೇಸ್ತ್ರಿಷು ॥ ೬೨೫

---

೬೨೧. ಕ್ಷುತ್ (ಸ್ತ್ರೀ), ಕ್ಷುತ (ನ), ಕ್ಷವ (ಪು)=ಸೀನು (Sneezing). ಕಾಸ ಕ್ಷವಥು (ಪು)=ಕೆಮ್ಮು. ಶೋಫ, ಶ್ವಯಥು, ಶೋಥ (ಪು)=ಊತ (Swelling). ಪಾದಸ್ಫೋಟ (ಪು), ವಿಪಾದಿಕಾ (ಸ್ತ್ರೀ) ಕಾಲೊಡೆಯುವುದು, ಕಾಲುಬಿರಿತ.

೬೨೨. ಕಿಲಾಸ, ಸಿಧ್ಮ (ನ)=ಚಿಬ್ಬು, ಬಿಳಿಯ ಚಿಬ್ಬು (Scab). ಕಚ್ಛೂ (ಸ್ತ್ರೀ), ಪಾಮನ್ (ನ), ಪಾಮಾ, ವಿಚರ್ಚಿಕಾ (ಸ್ತ್ರೀ)=ಕಜ್ಜಿ. ಕಂಡೂ, ಖರ್ಜೂ, ಕಂಡೂಯಾ (ಸ್ತ್ರೀ)=ನವೆ (Itching). ವಿಸ್ಫೋಟ (ಪು), ಪಿಟಕ (ಪು. ಸ್ತ್ರೀ. ನ)=ಕುರು ; ಗುಳ್ಳೆ.

೬೨೩. ವ್ರಣ (ಪು. ನ), ಈರ್ಮ, ಅರುಸ್ (ನ)=ಗಾಯ, ಹುಣ್ಣು. ನಾಡೀವ್ರಣ (ಪು)=ನಾರು ಹುಣ್ಣು. ಕೋಠ (ಪು),ಮಂಡಲಕ (ನ)=ಮಂಡಲಾಕಾರವಾಗಿ ಏಳುವ ಚರ್ಮವ್ಯಾಧಿ, ಹುಳುಕಡ್ಡಿ, ತದ್ದು. ಕುಷ್ಠ, ಶ್ವಿತ್ರ (ನ)=ತೊನ್ನು. ದುರ್ನಾಮಕ, ಅರ್ಶಸ್ (ನ)=ಮೂಲವ್ಯಾಧಿ, ಮೊಳೆರೋಗ.

೬೨೪. ಆನಾಹ, ನಿಬಂಧ (ವಿಬಂಧ) (ಪು)=ಮಲಮೂತ್ರಗಳು ಕಟ್ಟಿಕೊಳ್ಳುವುದು. ಗ್ರಹಣೀ, ಪ್ರವಾಹಿಕಾ (ಸ್ತ್ರೀ)=ಅತಿಸಾರ (Diarrhoea). ಪ್ರಚ್ಛರ್ದಿಕಾ, ವಮಿ (ಸ್ತ್ರೀ), ವಮಥು (ಸ್ತ್ರೀ)=ವಾಂತಿರೋಗ.

೬೨೫. ವಿದ್ರಧಿ (ಸ್ತ್ರೀ)=ಬಾವು, (Abscess). ಜ್ವರ (ಪು)=ಜ್ವರ. ಮೇಹ (ಪು)=ಮೇಹ ರೋಗ. ಭಗಂದರ (ಪು)=ಗುದದ್ವಾರದಲ್ಲಿ ಸಂಭವಿಸುವ ಒಂದು ವ್ರಣ. ಅಶ್ಮರೀ (ಸ್ತ್ರೀ), ಮೂತ್ರಕೃಚ್ಛ್ರ (ನ)=ಮೂತ್ರರೋಗ (Stone in the bladder) ಇಲ್ಲಿಂದ ಮುಂದೆ

ರೋಗಹಾರ್ಯಗಂದಕಾರೋ ಭಿಷಗ್ವೈದ್ಯಶ್ಚಿಕಿತ್ಸಕೇ ।
ವಾರ್ತೋ ನಿರಾಮಯಃ ಕಲ್ಯಉಲ್ಲಾಘೋ ನಿರ್ಗತೋ ಗದಾತ್ ॥ ೬೨೬
ಗ್ಲಾನಗ್ಲಾಸ್ನೂ ಆಮಯಾವೀ ವಿಕೃತೋ ವ್ಯಾಧಿತೋಽಪಟುಃ ।
ಆತುರೋಽಭ್ಯಮಿತೋಽಭ್ಯಾಂತಃ ಸಮೌ ಪಾಮನಕಚ್ಛುರೌ ॥ ೬೨೭
ದದ್ರುಣೋ ದದ್ರುರೋಗೀ ಸ್ಯಾದರ್ಶೋರೋಗಯುತೋಽರ್ಶಸಃ ।
ವಾತಕೀ ವಾತರೋಗೀ ಸ್ಯಾತ್ಸಾತಿಸಾರೋಽತಿಸಾರಕೀ ॥ ೬೨೮
ಸ್ಯುಃ ಕ್ಲಿನ್ನಾಕ್ಷೇ ಚುಲ್ಲಚಿಲ್ಲಿಪಿಲ್ಲಾಃ ಕ್ಲಿನ್ನೇಽಕ್ಷ್ಣಿ ಚಾಪ್ಯಮೀ ।
ಉನ್ಮತ್ತ ಉನ್ಮಾದವತಿ ಶ್ಲೇಷ್ಮಲಃ ಶ್ಲೇಷ್ಮಣಃ ಕಫೀ ॥ ೬೨೯
ನ್ಯುಬ್ಜೋ ಭುಗ್ನೇ ರುಜಾ ವೃದ್ಧನಾಭೌ ತುಂಡಿಲ ತುಂಡಿಭೌ ।
ಕಿಲಾಸೀ ಸಿಧ್ಮಲೋಽಂಧೋಽದೃಙ್ಮೂರ್ಛಾಲೇ ಮೂರ್ತಮೂರ್ಛಿತೌ ॥

೬೩೧ನೆಯ ಶ್ಲೋಕದ ಶುಕ್ರ ಶಬ್ದದವರೆಗೆ-ಮೂರ್ಛಿತ ಶಬ್ದ ಪರ್ಯಂತ- ಶಬ್ದಗಳು ಅರ್ಥಾನುಸಾರವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ.

೬೨೬. ರೋಗಹಾರಿನ್, ಅಗದಂಕಾರ, ಭಿಷಜ್, ವೈದ್ಯ, ಚಿಕಿತ್ಸಕ (ಪು) (-ಸ್ತ್ರೀ. ರೋಗಹಾರಿಣೀ, ಅಗದಂಕಾರೀ, ಚಿಕಿತ್ಸಿಕಾ)=ವೈದ್ಯ. ವಾರ್ತ, ನಿರಾಮಯ, ಕಲ್ಯ, ಉಲ್ಲಾಘ, (ಪ)=ಆರೋಗ್ಯಶಾಲಿ.

೬೨೭. ಗ್ಲಾನ, ಗ್ಲಾಸ್ನು (ಪು)=ರೋಗದಿಂದ ದುರ್ಬಲನಾದವನು. ಆಮಯಾವಿನ್, ವಿಕೃತ, ವ್ಯಾಧಿತ, ಅಪಟು, ಆತುರ, ಅಭ್ಯಮಿತ, ಅಭ್ಯಾಂತ (ಪು) (-ಸ್ತ್ರೀ. ಆಮಯಾವಿನೀ, ಅಪಟು-ಅಪಟ್ವೀ)=ರೋಗಿ. ಪಾಮನ, ಕಚ್ಛುರ (ಪು)=ಕಜ್ಜಿಯುಳ್ಳವನು, ಕಜ್ಜಿಬುರುಕ.

೬೨೮. ದದ್ರುಣ (ಪು)=ತದ್ದುರೋಗಿ. ಅರ್ಶಸ (ಪು)=ಮೂಲವ್ಯಾಧಿಯುಳ್ಳವನು. ವಾತಕಿನ್ (ಪು) (-ಸ್ತ್ರೀ. ವಾತಕಿನೀ)=ವಾತರೋಗಿ. ಅತಿಸಾರಕಿನ್ (ಪು) (-ಸ್ತ್ರೀ. ಅತಿಸಾರಕಿನೀ)=ಅತಿಸಾರರೋಗ ಉಳ್ಳವನು.

೬೨೯. ಚುಲ್ಲ, ಚಿಲ್ಲ, ಪಿಲ್ಲ (ಪು)=ನೀರು ಸುರಿಯುವ ಕಣ್ಣುಳ್ಳವನು ; ನೀರು ಸುರಿಯುವ ಕಣ್ಣು. ಉನ್ಮತ್ತ, ಉನ್ಮಾದವತ್ (ಪು) (-ಸ್ತ್ರೀ. ಉನ್ಮಾದವತೀ)=ಹುಚ್ಚ. ಶ್ಲೇಷ್ಮಲ, ಶ್ಲೇಷ್ಮಣ, ಕಫಿನ್ (ಪು) (-ಸ್ತ್ರೀ. ಕಫಿನೀ)=ಕಫರೋಗಿ.

೬೩೦. ನ್ಯುಬ್ಜ (ಪು)=ವಾತ ಮುಂತಾದ ರೋಗದಿಂದ ಬಗ್ಗಿದವನು. ತುಂಡಿಲ, ತುಂಡಿಭ (ಪು) ದೊಡ್ಡ ಹೊಕ್ಕಳುಳ್ಳವನು. ಕಿಲಾಸಿನ್, ಸಿಧ್ಮಲ (ಪು) (ಸ್ತ್ರೀ. ಕಿಲಾಸಿನೀ)=ಚಿಬ್ಬು



ಶುಕ್ರಂ ತೇಜೋರೇತಸೀ ಚ ಬೀಜವೀರ್ಯೇಂದ್ರಿಯಾಣಿ ಚ ।
ಮಾಯುಃ ಪಿತ್ತಂ ಕಫಃ ಶ್ಲೇಷ್ಮಾ ಸ್ತ್ರಿಯಾಂ ತು ತ್ವಗಸೃಗ್ಧರಾ ॥ ೬೩೧
ಪಿಶಿತಂ ತರಸಂ ಮಾಂಸಂ ಪಲಲಂ ಕ್ರವ್ಯಮಾಮಿಷಮ್ ।
ಉತ್ತಪ್ತಂ ಶುಷ್ಕಮಾಂಸಂ ಸ್ಯಾತ್ತದ್ವಲ್ಲೂರಂ ತ್ರಿಲಿಂಗಕಮ್ ॥ ೬೩೨
ರುಧಿರೇಽಸೃಗ್ಲೋಹಿತಾಸ್ರರಕ್ತಕ್ಷತಜಶೋಣಿತಮ್ ।
ವುಕ್ಕಾಗ್ರಮಾಂಸಂ ಹೃದಯಂ ಹೃನ್ಮೇದಸ್ತು ವಸಾ ವಪಾ ॥ ೬೩೩
ಪಶ್ಚಾದ್ಗ್ರೀವಾ ಸಿರಾ ಮನ್ಯಾ ನಾಡೀ ತು ಧಮನಿಸ್ಸಿರಾ ।
ತಿಲಕಂ ಕ್ಲೋಮ ಮಸ್ತಿಷ್ಕಂ ಗೋರ್ದಂ ಕಿಟ್ಟಂ ಮಲೋಽಸ್ತ್ರಿಯಾಮ್ ॥ ೬೩೪

ಹಿಡಿದವನು. ಅಂಧ, ಅದೃಶ್ (ಪು)=ಕುರುಡ. ಮೂರ್ಛಾಲ, ಮೂರ್ತ, ಮೂರ್ಛಿತ (ಪು)=ಮೂರ್ಛೆರೋಗ ಉಳ್ಳವನು ; ಮೂರ್ಛೆ ಹೋದವನು.

೬೩೧. ಶುಕ್ರ, ತೇಜಸ್, ರೇತಸ್, ಬೀಜ, ವೀರ್ಯ, ಇಂದ್ರಿಯ (ನ)=ರೇತಸ್ಸು. ಮಾಯು (ಪು) ಪಿತ್ತ (ನ)=ಪಿತ್ತ. ಕಫ, ಶ್ಲೇಷ್ಮನ್ (ಪು)=ಕಫ. ತ್ವಚ್,[1] ಅಸೃಗ್ಧರಾ (ಸ್ತ್ರೀ)=ಚರ್ಮ.

೬೩೨. ಪಿಶಿತ, ತರಸ, ಮಾಂಸ, ಪಲಲ, ಕ್ರವ್ಯ, ಆಮಿಷ[2] (ನ)=ಮಾಂಸ. ಉತ್ತಪ್ತ, ಶುಷ್ಕಮಾಂಸ (ನ), ವಲ್ಲೂರ (ಪು. ಸ್ತ್ರೀ. ನ)=ಒಣಗಿದ ಮಾಂಸ.

೬೩೩. ರುಧಿರ, ಅಸೃಜ್, ಲೋಹಿತ, ಅಸ್ರ, ರಕ್ತ, ಕ್ಷತಜ, ಶೋಣಿತ (ನ)=ರಕ್ತ. ವುಕ್ಕಾ[3] (ಸ್ತ್ರೀ), ಅಗ್ರಮಾಂಸ (ನ) ಎದೆಯ ಭಾಗದಲ್ಲಿರುವ ಮಾಂಸ. ಹೃದಯ, ಹೃದ್ (ನ)=ಎದೆಯ ಕೋಶ (Heart). ವುಕ್ಕಾ ಮುಂತಾದ ನಾಲ್ಕು ಶಬ್ದಗಳೂ ಹೃದಯವಾಚಿಗಳೆಂದು ಕೆಲವರು. ಮೇದ (ಪು),ಮೇದಸ್ (ನ), ವಸಾ (ಸ್ತ್ರೀ)=ಕೊಬ್ಬು. ವಪಾ (ಸ್ತ್ರೀ)=ನಾಭಿಯ ಕೆಳಗೆ ಇರುವ ಪೊರೆ. ವಪೆಯೆಂದರೂ ಕೊಬ್ಬು ಎಂದು ಕೆಲವರು.

೬೩೪. ಮನ್ಯಾ (ಸ್ತ್ರೀ)=ಕತ್ತಿನ ಹಿಂದಿರುವ ರಕ್ತನಾಳ. ನಾಡೀ, ಧಮನಿ (ಧಮನೀ), ಸಿರಾ (ಶಿರಾ) (ಸ್ತ್ರೀ)=ರಕ್ತನಾಳ. ತಿಲಕ, ಕ್ಲೋಮನ್ (ನ)=ಮೂತ್ರಕೋಶ. ಮಸ್ತಿಷ್ಕ, ಗೋರ್ದ (ನ)=ಮೆದುಳು. ಕಿಟ್ಟ (ನ), ಮಲ (ಪು.ನ)=ದೇಹದ ಕೊಳೆ.

[1] ತ್ವಚ ಎಂಬ ಅಕಾರಾಂತ ನಪುಂಸಕ ಶಬ್ದವೂ ಉಂಟು.
[2] ಮಾಂಸ, ಆಮಿಷ ಶಬ್ದಗಳು ಪುಲ್ಲಿಂಗದಲ್ಲಿಯೂ ಉಂಟು.
[3] ವೃಕ್ಕಾ, ವೃಕ್ಕಾ (ಸ್ತ್ರೀ), ವುಕ್ಕ, ವೃಕ್ಕ, ವೃಕ್ಕ (ಪು.ನ) ಎಂಬ ರೂಪಾಂತರಗಳೂ ಉಂಟು.

ಅಂತ್ರಂ ಪುರೀತದ್ಗುಲ್ಮಸ್ತು ಪ್ಲೀಹಾ ಪುಂಸ್ಯಥ ವಸ್ನಸಾ ।
ಸ್ನಾಯುಃ ಸ್ತ್ರಿಯಾಂ ಕಾಲಖಂಡಯಕೃತೀ ತು ಸಮೇ ಇಮೇ ॥ ೬೩೫
ಸ್ಪಣಿಕಾ ಸ್ಯಂದಿನೀ ಲಾಲಾ ದೂಷಿಕಾ ನೇತ್ರಯೋರ್ಮಲಮ್ ।
ಮೂತ್ರಂ ಪ್ರಸ್ರಾವ ಉಚ್ಚಾರಾವಸ್ಕರೌ ಶಮಲಂ ಶಕೃತ್ ॥ ೬೩೬
ಪುರೀಷಂ ಗೂಥವರ್ಚಸ್ಕಮಸ್ತ್ರೀ ವಿಷ್ಠಾವಿಷೌ ಸ್ತ್ರಿಯೌ ।
ಸ್ಯಾತ್ಕರ್ಪರಃ ಕಪಾಲೋಽಸೀ ಕೀಕಸಂ ಕುಲ್ಯಮಸ್ಥಿ ಚ ॥ ೬೩೭
ಸ್ಯಾಚ್ಛರೀರಾಸ್ಥಿ ಕಂಕಾಲಃ ಪೃಷ್ಠಾಸ್ಥಿ ತು ಕಶೇರುಕಾ ।
ಶಿರೋಽಸ್ಥನಿ ಕರೋಟಿಃ ಸ್ತ್ರೀ ಪಾರ್ಶ್ವಾಸ್ಥನಿ ತು ಪರ್ಶುಕಾ ॥ ೬೩೮
ಅಂಗಂ ಪ್ರತೀಕೋಽವಯವೋಽಪಘನೋಽಥ ಕಲೇವರಮ್ ।
ಗಾತ್ರಂ ವಪುಸ್ಸಂಹನನಂ ಶರೀರಂ ವರ್ಷ್ಮ ವಿಗ್ರಹಃ ॥ ೬೩೯

---

೬೩೫. ಅಂತ್ರ, ಪುರೀತತ್[1] (ನ)=ಕರುಳು. ಗುಲ್ಮ, ಪ್ಲೀಹನ್[2] (ಪು)=ಹೊಟ್ಟೆಯ ಎಡಭಾಗದ ಒಂದು ಮಾಂಸಖಂಡ (Spleen)ವಸ್ನಸಾ, ಸ್ನಾಯು (ಸ್ತ್ರೀ)=ನರ (Tendon) ಕಾಲಖಂಡ, ಯಕೃತ್ (ನ)=ಪಿತ್ತಕೋಶ (Lever)

೬೩೬-೬೩೭. ಸ್ಪಣಿಕಾ, ಸ್ಯಂದಿನೀ, ಲಾಲಾ (ಸ್ತ್ರೀ)=ಜೊಲ್ಲು. ದೂಷಿಕಾ (ಸ್ತ್ರೀ)=ಕಣ್ಣಿನ ಪಿಸಿರು, ಗೀಜು1 ಮೂತ್ರ (ನ), ಪ್ರಸ್ರಾವ (ಪು)=ಮೂತ್ರ. ಉಚ್ಚಾರ, ಅವಸ್ಕರ (ಪು),ಶಮಲ, ಶಕೃತ್, ಪುರೀಷ (ನ), ಗೂಥ, ವರ್ಚಸ್ಕ (ಪು. ನ), ವಿಷ್ಠಾ, ವಿಷ್ (ವಿಶ್) (ಸ್ತ್ರೀ)=ಮಲ, 'ಪಾಯಖಾನೆ.' ಕರ್ಪರ (ಪು),ಕಪಾಲ (ಪು. ನ)= ತಲೆಯ ಚಿಪ್ಪು, ತಲೆ ಮೂಳೆಯ ಅರ್ಧಭಾಗ. ಕೀಕಸ, ಕುಲ್ಯ, ಅಸ್ಥಿ (ನ)=ಮೂಳೆ, ಎಲುಬು.

೬೩೮. ಕಂಕಾಲ (ಪು)=ಮೈಯೆಲುಬು, ಅಸ್ಥಿಪಂಜರ (Skeleton) ಕಶೇರುಕಾ (ಸ್ತ್ರೀ)=ಬೆನ್ನುಮೂಳೆ. ಕರೋಟ (ಸ್ತ್ರೀ)=ತಲೆಮೂಳೆ (Skull). ಪರ್ಶುಕಾ (ಸ್ತ್ರೀ)=ಪಕ್ಕೆ, ಪಾರ್ಶ್ವದ ಮೂಳೆ (Rib).

೬೩೯-೬೪೯. ಅಂಗ (ನ), ಪ್ರತೀಕ, ಅವಯವ, ಅಪಘನ (ಪು)=ಕೈಕಾಲು ಮುಂತಾದ ಅವಯವ. ಕಲೇವರ, ಗಾತ್ರ, ವಪುಸ್, ಸಂಹನನ, ಶರೀರ, ವರ್ಷ್ಮನ್ (ನ),ವಿಗ್ರಹ,

---

[1] ಪುರೀತತಂ=ನಾಡೀವಿಶೇಷವೆಂಬ ಅರ್ಥವೂ ಇದೆ. ಇದು ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿಯೂ ಇದೆ.
[2] ಪ್ಲೀಹಾ ಎಂಬ ಆಕಾರಾಂತ ಸ್ತ್ರೀಲಿಂಗವೂ ಇದೆ.
[1] ಇಲ್ಲಿ 'ನಾಸಾಮಲಂ ತು ಶಿಂಘಾಣಂ ಶಿಂಜೂಷಂ ಕರ್ಣಯೋರ್ಮಲಂ' ಎಂದು ಪಾಠಾಂತರವಿದೆ. ಶಿಂಘಾಣ (ನ)=ಸಿಂಬಳ. ಶಿಂಜೂಷ (ನ)=ಕಿವಿಯ ಕುಗ್ಗೆ.



ಕಾಯೋ ದೇಹಃ ಕ್ಲೀಬಪುಂಸೋಃ ಸ್ತ್ರಿಯಾಂ ಮೂರ್ತಿಸ್ತನುಸ್ತನೂಃ ।
ಪಾದಾಗ್ರಂ ಪ್ರಪದಂ ಪಾದಃ ಪದಂಘ್ರಿಶ್ಚರಣೋಽಸ್ತ್ರಿಯಾಮ್ ॥ ೬೪೦
ತದ್ಗ್ರಂಥೀ ಘುಟಿಕೇ ಗುಲ್ಫೌ ಪುಮಾನ್ ಪಾರ್ಷ್ಣಿಸ್ತಯೋರಧಃ ।
ಜಂಘಾ ತು ಪ್ರಸೃತಾ ಜಾನೂರುಪರ್ವಾಷ್ಠೀವದಸ್ತ್ರಿಯಾಮ್ ॥ ೬೪೧
ಸಕ್ಥಿ ಕ್ಲೀಬೇ ಪುಮಾನೂರುಸ್ತತ್ಸಂಧಿಃ ಪುಂಸಿ ವಂಕ್ಷಣಃ ।
ಗುದಂ ತ್ವಪಾನಂ ಪಾಯುರ್ನಾ ವಸ್ತಿರ್ನಾಭೇರಧೋ ದ್ವಯೋಃ ॥ ೬೪೨
ಕಟೋ ನಾ ಶ್ರೋಣಿಫಲಕಂ ಕಟಿಶ್ರೋಣಿಃ ಕಕುದ್ಮತೀ ।
ಪಶ್ಚಾನ್ನಿತಂಬಃ ಸ್ತ್ರೀಕಟ್ಯಾಃ ಕ್ಲೀಬೇ ತು ಜಘನಂ ಪುರಃ ॥ ೬೪೩
ಕೂಪಕೌ ತು ನಿತಂಬಸ್ಥೌ ದ್ವಯಹೀನೇ ಕುಕುಂದರೇ ।
ಸ್ತ್ರಿಯಾಂ ಸ್ಫಿಚೌ ಕಟಿಪ್ರೋಥಾವುಪಸ್ಥೋ ವಕ್ಷ್ಯಮಾಣಯೋಃ ॥ ೬೪೪

---

ಕಾಯ (ಪು),ದೇಹ (ಪು.ನ),ಮೂರ್ತಿ, ತನು, ತನೂ (ಸ್ತ್ರೀ)=ದೇಹ. ಪಾದಾಗ್ರ, ಪ್ರಪದ (ನ)=ತುದಿಗಾಲು. ಪಾದ, ಪದ್, ಅಂಘ್ರಿ (ಪು),ಚರಣ (ಪು.ನ)=ಕಾಲು (Leg) ; ಹೆಜ್ಜೆ(Foot).

೬೪೧. ಘುಟಿಕಾ (ಸ್ತ್ರೀ), ಗುಲ್ಫ (ಪು)=ಹೆಜ್ಜೆಯ ಗಂಟು (Ankle). ಪಾರ್ಷ್ಣಿ (ಪು)=ಹಿಮ್ಮಡಿ, (Heel) ಜಂಘಾ, ಪ್ರಸೃತಾ (ಸ್ತ್ರೀ)=ಮೊಳಕಾಲು. ಜಾನು (ನ), ಊರುಪರ್ವನ್ (ನ), ಅಷ್ಠೀವತ್ (ಪು. ನ)=ಮಂಡಿ (Knee).

೬೪೨. ಸಕ್ಥಿ (ನ)ಊರು (ಪು)=ವಂಕ್ಷಣ (ಪು)=ತೊಡೆಯ ಸಂಧಿ (Groin). ಗುದ, ಅಪಾನ (ನ), ಪಾಯು (ಪು)=ಗುದಸ್ಥಾನ (Anus). ವಸ್ತಿ (ಪು. ಸ್ತ್ರೀ)= ಕಿಬ್ಬೊಟ್ಟೆ (Abdomen) ; ಮೂತ್ರಾಶಯ.

೬೪೩. ಕಟ (ಪು), ಶ್ರೋಣಿಫಲಕ (ನ)=ಸೊಂಟ (Hip). ಕಟಿ, ಶ್ರೋಣಿ, ಕಕುದ್ಮತೀ (ಸ್ತ್ರೀ)=ಪಿರ್ರೆ, ಅಂಡು. (ಕಟ ಮುಂತಾದ ಐದು ಶಬ್ದಗಳೂ ಪರ್ಯಾಯಗಳೆಂದು ಕೆಲವರು). ನಿತಂಬ (ಪು)=ಸ್ತ್ರೀಯ ಸೊಂಟದ ಹಿಂಭಾಗ, ಸ್ತ್ರೀಯರ ಪಿರ್ರೆ. ಜಘನ (ನ)=ಸ್ತ್ರೀಯರ ಸೊಂಟದ ಮುಂಭಾಗ, ಸ್ತ್ರೀಯರ ನಾಭಿಯ ಕೆಳಗಿರುವ ಮುಂಭಾಗ, ಕಟಿಯ ಮುಂಭಾಗ.

೬೪೪. ಕೂಪಕ (ಪು) ಕುಕುಂದರ (ನ)=ಸ್ತ್ರೀಯರ ನಿತಂಬದಲ್ಲಿರುವ ಗುಳಿ. ಸ್ಫಿಚ್ (ಸ್ತ್ರೀ), ಕಟಿ, ಪ್ರೋಥ, ಕಟಿಪ್ರೋಥ (ಪು)=ಅಂಡಿನ ಒಂದೊಂದು ಪಾರ್ಶ್ವ. ಉಪಸ್ಥ (ಪು)=ಸ್ತ್ರೀಪುರುಷರ ಜನನೇಂದ್ರಿಯ.

ಭಗಂ ಯೋನಿರ್ದ್ವಯೋಃ ಶಿಶ್ನೋ ಮೇಢ್ರೋ ಮೇಹನಶೇಫಸೀ ।
ಮುಷ್ಕೋಽಂಡಕೋಶೋ ವೃಷಣಃ ಪೃಷ್ಠವಂಶಾಧರೇ ತ್ರಿಕಮ್ ॥ ೬೪೫
ಪಿಚಂಡಕುಕ್ಷೀ ಜಠರೋದರತುಂದಂ ಸ್ತನೌ ಕುಚೌ ।
ಚೂಚುಕಂ ತು ಕುಚಾಗ್ರಂ ಸ್ಯಾನ್ನನಾ ಕ್ರೋಡಂ ಭುಜಾಂತರಮ್ ॥ ೬೪೬
ಉರೋ ವತ್ಸಂ ಚ ವಕ್ಷಶ್ಚ ಪೃಷ್ಠಂ ತು ಚರಮಂ ತನೋಃ ।
ಸ್ಕಂಧೋ ಭುಜಶಿರೋಂಽಸೋಽಸ್ತ್ರೀ ಸಂಧೀ ತಸ್ಯೈವ ಜತ್ರುಣೀ ॥ ೬೪೭
ಬಾಹುಮೂಲೇ ಉಭೇ ಕಕ್ಷೌ ಪಾರ್ಶ್ವಮಸ್ತ್ರೀ ತಯೋರಧಃ ।
ಮಧ್ಯಮಂ ಚಾವಲಗ್ನಂ ಚ ಮಧ್ಯೋ ಽಸ್ತ್ರೀ ದ್ವೌಪರೌ ದ್ವಯೋಃ ॥ ೬೪೮
ಭುಜಬಾಹೂ ಪ್ರವೇಷ್ಟೋ ದೋಃ ಸ್ಯಾತ್ ಕಫೋಣಿಸ್ತು ಕೂರ್ಪರಃ ।
ಅಸ್ಯೋಪರಿ ಪ್ರಗಂಡಸ್ಯಾತ್ ಪ್ರಕೋಷ್ಠಸ್ತಸ್ಯ ಚಾಪ್ಯಧಃ ॥ ೬೪೯

೬೪೫. ಭಗ (ನ), ಯೋನಿ (ಪು. ಸ್ತ್ರೀ)=ಸ್ತ್ರೀಜನನೇಂದ್ರಿಯ. ಶಿಶ್ನ, ಮೇಢ್ರ (ಪು), ಮೇಹನ, ಶೇಫ[1]ಸ್ (ನ)=ಪುರುಷಜನನೇಂದ್ರಿಯ. ಮುಷ್ಕ, ಅಂಡಕೋಶ, ವೃಷಣ (ಪು)=ವೃಷಣ (Testicle). ತ್ರಿಕ (ನ)=ಬೆನ್ನುಮೂಳೆಯ ಕೆಳಭಾಗ.

೬೪೬ -೬೪೭. ಪಿಚಂಡ, ಕುಕ್ಷಿ (ಪು), ಜಠರ, ಉದರ, ತುಂದ (ನ)=ಹೊಟ್ಟೆ. ಸ್ತನ, ಕುಚ (ಪು)=ಮೊಲೆ. ಚೂಚುಕ, ಕುಚಾಗ್ರ (ನ)=ಮೊಲೆಯ ತೊಟ್ಟು. ಕ್ರೋಡ (ಸ್ತ್ರೀ.ನ),ಭುಜಾಂತರ (ನ),ಉರಸ್, ವತ್ಸ, ವಕ್ಷಸ್ (ನ)=ಎದೆ. ಪೃಷ್ಠ(ನ)=ಬೆನ್ನು. ಸ್ಕಂಧ (ಪು), ಭುಜಶಿರಸ್ (ನ), ಅಂಸ (ಪು. ನ)=ಹೆಗಲು. ಜತ್ರು (ನ)=ಹೆಗಲಸಂದು, ಹೆಗಲ ದಡ.

೬೪೮. ಕಕ್ಷ (ಪು)=ಕಂಕಳು. ಪಾರ್ಶ್ವ (ಪು. ನ)=ಪಕ್ಕೆ. ಮಧ್ಯಮ, ಅವಲಗ್ನ, ಮಧ್ಯ (ಪು. ನ)= ನಡು, ಕಟಿಯ ಮೇಲಿನ ಕೃಶವಾದ ಭಾಗ.

೬೪೯. ಭುಜ, ಬಾಹು[2] (ಪು. ಸ್ತ್ರೀ)ಪ್ರವೇಷ್ಟ, ದೋಸ್[1] (ಪು)=ತೋಳು. ಕಫೋಣಿ (ಪು)=ಮೊಳಕೈ ಕೀಲು (Elbow). ಪ್ರಗಂಡ (ಪು)=ಮೊಳಕೈ ಕೀಲಿನ ಮೇಲ್ಭಾಗ. ಪ್ರಕೋಷ್ಠ (ಪು)=ಮೊಳಕೈ (Fore-arm).

[1] ಶೇಪಸ್ ಎಂಬ ರೂಪಾಂತರವೂ ಶೇಪ, ಶೇಫ ಎಂಬ ಅಕಾರಾಂತ ಪುಲ್ಲಿಂಗಗಳೂ ಉಂಟು.
[2] ಬಾಹಾ, ದೋಷಾ ಎಂಬ ಅಕಾರಾಂತ ಸ್ತ್ರೀಲಿಂಗಗಳೂ ಉಂಟು.



ಮಣಿಬಂಧಾದಾಕನಿಷ್ಠಂ ಕರಸ್ಯ ಕರಭೋ ಬಹಿಃ ।
ಪಂಚಶಾಖಃ ಶಯಃ ಪಾಣಿಸ್ತರ್ಜನೀ ಸ್ಯಾತ್ ಪ್ರದೇಶಿನೀ ॥ ೬೫೦
ಅಂಗುಲ್ಯಃ ಕರಶಾಖಾಃ ಸ್ಯುಃ ಪುಂಸ್ಯಂಗುಷ್ಠಃ ಪ್ರದೇಶಿನೀ ।
ಮಧ್ಯಮಾನಾಮಿಕಾ ಚಾಪಿ ಕನಿಷ್ಠಾ ಚೇತಿ ತಾಃ ಕ್ರಮಾತ್ ॥ ೬೫೧
ಪುನರ್ಭವಃ ಕರುರುಹೋ ನಖೋಽಸ್ತ್ರೀ ನಖರೋಽಸ್ತ್ರಿಯಾಮ್ ।
ಪ್ರಾದೇಶತಾಲಗೋಕರ್ಣಾಸ್ತರ್ಜನ್ಯಾದಿಯುತೇ ತತೇ ॥ ೬೫೨
ಅಂಗುಷ್ಠೇ ಸಕನಿಷ್ಠೇ ಸ್ಯಾದ್ವಿತಸ್ತಿರ್ದ್ವಾದಶಾಂಗುಲಃ ।
ಪಾಣೌ ಚಪೇಟಪ್ರತರಪ್ರಹಸ್ತಾ ವಿಸ್ತೃತಾಂಗುಲೌ ॥ ೬೫೩
ದ್ವೌ ಸಂಹತೌ ಸಂಹತಲಃ ಪ್ರತಲೌ ವಾಮದಕ್ಷಿಣೌ ।
ಪಾಣಿರ್ನಿಕುಬ್ಜಃ ಪ್ರಸೃತಿಸ್ತೌ ಯುತಾವಂಜಲಿಃ ಪುಮಾನ್ ॥ ೬೫೪

೬೫೦. ಕರಭ (ಪು)=ಮಣಿಕಟ್ಟಿನಿಂದ ಕಿರುಬೆರಳಿನವರೆಗಿರುವ ಹಸ್ತದ ಹೊರಭಾಗ. ಪಂಚಶಾಖ, ಶಯ, ಪಾಣಿ (ಪು)=ಕೈ. ತರ್ಜನೀ, ಪ್ರದೇಶಿನೀ (ಸ್ತ್ರೀ)=ಹೆಬ್ಬೆರಳಿನ ಒತ್ತಿಗಿರುವ ಬೆರಳು, ತೋರ್ಬೆರಳು.

೬೫೧. ಅಂಗು[1]ಲೀ, ಕರಶಾಖಾ (ಸ್ತ್ರೀ)=ಬೆರಳು. ಅಂಗುಷ್ಠ (ಪು)=ಹೆಬ್ಬೆರಳು. ಪ್ರದೇಶಿನೀ (ಸ್ತ್ರೀ)=ತೋರ್ಬೆರಳು. ಮಧ್ಯಮಾ (ಸ್ತ್ರೀ)=ನಡುಬೆರಳು. ಅನಾಮಿಕಾ (ಸ್ತ್ರೀ)=ಉಂಗುರದ ಬೆರಳು. ಕನಿಷ್ಠಾ (ಸ್ತ್ರೀ)=ಕಿರಿಬೆರಳು.ಇವು ಕ್ರಮವಾಗಿ ಐದು ಬೆರಳುಗಳು.

೬೫೨. ಪುನರ್ಭವ, ಕರರುಹ (ಪು), ನಖ, ನಖರ (ಪು. ನ)=ಉಗುರು. ಪ್ರಾದೇ[2]ಶ (ಪು)= ಹೆಬ್ಬೆರಳು ಮತ್ತು ತರ್ಜನಿಯನ್ನು ನೀಡಿದಾಗ ಬರುವ ಅಳತೆ, ಚೋಟು. ತಾಲ (ಪು)=ಹೆಬ್ಬೆರಳು ಮತ್ತು ನಡುಬೆರಳನ್ನು ನೀಡಿದಾಗ ಬರುವ ಅಳತೆ. ಗೋಕರ್ಣ (ಪು)=ಹೆಬ್ಬೆರಳು ಮತ್ತು ಉಂಗುರದ ಬೆರಳನ್ನು ನೀಡಿದಾಗ ಬರುವ ಅಳತೆ.

೬೫೩. ವಿತಸ್ತಿ, ದ್ವಾದಶಾಂಗುಲ (ಪು)=ಹೆಬ್ಬೆರಳು ಮತ್ತು ಕಿರುಬೆರಳನ್ನು ನೀಡಿದಾಗ ಬರುವ ಅಳತೆ, ಗೇಣು. ಚಪೇಟ, ಪ್ರತಲ, ಪ್ರಹಸ್ತ (ಪು)=ಎಲ್ಲ ಬೆರಳುಗಳನ್ನೂ ನೀಡಿದ ಅಂಗೈ.

[1] ಅಂಗುಲಿ ಎಂಬ ಇಕಾರಾಂತವೂ ಇದೆ.
[2] ಪ್ರದೇಶ ಎಂಬ ರೂಪಾಂತರವೂ ಇದೆ.

ಪ್ರಕೋಷ್ಠೇ ವಿಸ್ತೃತಕರೇ ಹಸ್ತೋ ಮುಷ್ಟ್ಯಾ ತು ಬದ್ಧಯಾ ।
ಸ ರತ್ನಿ ಸ್ಸ್ಯಾದರತ್ನಿಸ್ತು ನಿಷ್ಕನಿಷ್ಠೇನ ಮುಷ್ಟಿನಾ ॥ ೬೫೫

ವ್ಯಾಮೋ ಬಾಹ್ವೋಸ್ಸಕರಯೋಸ್ತತಯೋಸ್ತಿರ್ಯಗಂತರಮ್ ।
ಊರ್ಧ್ವವಿಸ್ತೃತದೋಃ ಪಾಣಿನೃಮಾನೇ ಪೌರುಷಂ ತ್ರಿಷು ॥ ೬೫೬

ಕಂಠೋ ಗಲೋಽಥ ಗ್ರೀವಾಯಾಂ ಶಿರೋಧಿಃ ಕಂಧರೇತ್ಯಪಿ ।
ಕಂಬುಗ್ರೀವಾ ತ್ರಿರೇಖಾ ಸಾಽವಟುರ್ಘಾಟಾ ಕೃಕಾಟಿಕಾ ॥ ೬೫೭

ವಕ್ತ್ರಾಸ್ಯೇ ವದನಂ ತುಂಡಮಾನನಂ ಲಪನಂ ಮುಖಮ್ ।
ಕ್ಲೀಬೇ ಘ್ರಾಣಂ ಗಂಧವಹಾ ಘೋಣಾ ನಾಸಾ ಚ ನಾಸಿಕಾ ॥ ೬೫೮

---

೬೫೪. ಸಂಹತಲ (ಸಿಂಹತಲ) (ಪು)=ಎಲ್ಲ ಬೆರಳುಗಳನ್ನೂ ನೀಡಿ ಕೂಡಿಸಿಕೊಂಡಿರುವ ಎರಡು ಅಂಗೈಗಳು. ಪ್ರಸೃತಿ (ಸ್ತ್ರೀ)=ಸೆರೆ. ಅಂಜಲಿ (ಪು)=ಕೂಡಿಸಿಕೊಂಡ ಎರಡು ಸೆರೆಗಳು, ಬೊಗಸೆ, ಜೋಡಿಸಿದ ಕೈಗಳ ಸಂಪುಟ.

೬೫೫. ಹಸ್ತ (ಪು)=ಮೊಳ. ರತ್ನಿ[1](ಪು)=ಗುದ್ದುಮೊಳ. ಅರ[1]ತ್ನಿ (ಪು)=ಕಿರುಬೆರಳನ್ನು ನೀಡಿದ ಗುದ್ದುಮೊಳ, ಮೊಳಕೈ ಕೀಲಿನಿಂದ ಕಿರುಬೆರಳಿನ ತುದಿಯವರೆಗಿನ ಅಳತೆ.

೬೫೬. ವ್ಯಾಮ (ಪು)=ಮಾರು. ಪೌರುಷ (ಪು. ಸ್ತ್ರೀ. ನ) (-ಸ್ತ್ರೀ. ಪೌರುಷೀ)=ಮೇಲೆ ಕೈ ಎತ್ತಿದ ಪುರುಷನ ಪ್ರಮಾಣ, ಆಳೆತ್ತರ. ಉದಾ : ಪೌರುಷಃ ಸೇತುಃ, ಪೌರುಷೀ ಲತಾ, ಪೌರುಷಂ ಜಲಮ್.

೬೫೭. ಕಂಠ, ಗಲ (ಪು)=ಕುತ್ತಿಗೆ, ಕತ್ತು, ಕೊರಳಿನ ಮುಂಭಾಗ (Throat). ಗ್ರೀವಾ, ಶಿರೋಧಿ, ಕಂಧರಾ (ಸ್ತ್ರೀ) ಕೊರಳು (Neck). ಕಂಬುಗ್ರೀವಾ (ಸ್ತ್ರೀ)=ಮೂರು ರೇಖೆಯುಳ್ಳ ಶಂಖದಂತಹ ಕೊರಳು. ಅವಟು, ಘಾಟಾ, ಕೃಕಾಟಿಕಾ (ಸ್ತ್ರೀ)=ಕೊರಳಿನಲ್ಲಿ ಮುಂದೆ ಚಾಚಿಕೊಂಡಿರುವ ಗಂಟು, ಗ್ವಾಕೆ. ಹೆಡದಲೆ (Nape of the neck)ಎಂದು ಕೆಲವರು.

೬೫೮. ವಕ್ತ್ರ, ಆಸ್ಯ, ವದನ, ತುಂಡ, ಆನನ, ಲಪನ, ಮುಖ (ನ)=ಬಾಯಿ ; ಮುಖ, ಮೋರೆ. ಘ್ರಾಣ (ನ)ಗಂಧವಹಾ, ಘೋಣಾ, ನಾಸಾ, ನಾಸಿಕಾ (ಸ್ತ್ರೀ)=ಮೂಗು.

---

[1] ರತ್ನಿ, ಅರತ್ನಿ ಶಬ್ದಗಳು ಸ್ತ್ರೀಲಿಂಗದಲ್ಲಿಯೂ ಇವೆ.



ಓಷ್ಠಾಧರೌ ತು ರದನಚ್ಛದೌ ದಶನವಾಸಸೀ ।
ಅಧಸ್ತಾತ್ ಚಿಬುಕಂ ಗಂಡೌ ಕಪೋಲೌ ತತ್ಪರಾ ಹನುಃ ॥ ೬೫೯

ರದನಾ ದಶನಾ ದಂತಾ ರದಾಸ್ತಾಲು ತು ಕಾಕುದಮ್ ।
ರಸಜ್ಞಾ ರಸನಾ ಜಿಹ್ವಾ ಪ್ರಾಂತಾವೋಷ್ಠಸ್ಯ ಸೃಕ್ಕಣೀ ॥ ೬೬೦

ಲಲಾಟಮಲಿಕಂ ಗೋಧಿರೂರ್ಧ್ವೇ ದೃಗ್ಭ್ಯಾಂ ಭ್ರುವೌ ಸ್ತ್ರಿಯೌ ।
ಕೂರ್ಚಮಸ್ತ್ರೀ ಭ್ರುವೋರ್ಮಧ್ಯಂ ತಾರಕಾಕ್ಷ್ಣಃ ಕನೀನಿಕಾ ॥ ೬೬೧

ಲೋಚನಂ ನಯನಂ ನೇತ್ರಮೀಕ್ಷಣಂ ಚಕ್ಷುರಕ್ಷಿಣೀ ।
ದೃಗ್ದೃಷ್ಟೀ ಚಾಸ್ರು ನೇತ್ರಾಂಬು ರೋದನಂ ಚಾಸ್ರಮಶ್ರು ಚ ॥ ೬೬೨

ಅಪಾಂಗೌ ನೇತ್ರಯೋರಂತೌ ಕಟಾಕ್ಷೋಽಪಾಂಗದರ್ಶನೇ ।
ಕರ್ಣಶಬ್ದಗ್ರಹೌ ಶ್ರೋತ್ರಂ ಶ್ರುತಿಃ ಸ್ತ್ರೀ ಶ್ರವಣಂ ಶ್ರವಃ ॥ ೬೬೩

---

೬೫೯. ಓಷ್ಠ, ಅಧರ (ಪು),ರದನಚ್ಛದ, ದಶನವಾಸಸ್ (ನ)=ತುಟಿ. (ಅಧರ ಶಬ್ದವು ಕೆಳದುಟಿ ಎಂಬ ಅರ್ಥದಲ್ಲಿದೆ.) ಚಿಬುಕ (ನ)=ಗದ್ದ (Chin) ಗಂಡ, ಕಪೋಲ (ಪು)=ಕೆನ್ನೆ. ಹನು[1] (ಸ್ತ್ರೀ)=ಕೆನ್ನೆಯ ಮೇಲ್ಭಾಗ.

೬೬೦. ರದನ, ದಶನ, ದಂತ, ರದ (ಪು)=ಹಲ್ಲು. ತಾಲು, ಕಾಕುದ (ನ)=ಹಲ್ಲುಗಳ ಹಿಂದೆ ಮೇಲ್ಗಡೆ ಇರುವ ಮಾಂಸಗ್ರಂಥಿ, ಚವರ್ಗವನ್ನು ಉಚ್ಚರಿಸುವಾಗ ನಾಲಿಗೆಯು ಸೋಕುವ ಸ್ಥಳ (Palate) ; ದವಡೆ. ರಸಜ್ಞಾ, ರಸನಾ, ಜಿಹ್ವಾ (ಸ್ತ್ರೀ)=ನಾಲಿಗೆ. ಸೃಕ್ಕನ್[2] (ನ)=ಕಟವಾಯಿ.

೬೬೧. ಲಲಾಟ, ಅಲಿಕ (ನ), ಗೋಧಿ (ಪು)=ಹಣೆ. ಭ್ರೂ (ಸ್ತ್ರೀ)=ಹುಬ್ಬು. ಕೂರ್ಚ (ಪು.ನ)=ಹುಬ್ಬುಗಳ ನಡು. ತಾರಕಾ, ಕನೀನಿಕಾ (ಸ್ತ್ರೀ)=ಕಣ್ಣುಗುಡ್ಡೆ.

೬೬೨. ಲೋಚನ, ನಯನ, ನೇತ್ರ, ಈಕ್ಷಣ, ಚಕ್ಷುಸ್, ಅಕ್ಷಿ (ನ), ದೃಶ್, ದೃಷ್ಟಿ (ಸ್ತ್ರೀ)=ಕಣ್ಣು. ಅಸ್ರು, ನೇತ್ರಾಂಬು, ರೋದನ, ಅಸ್ರ,[3] ಅಶ್ರು (ನ)=ಕಣ್ಣೀರು.

೬೬೩. ಅಪಾಂಗ (-ಪು)=ಕಡೆಗಣ್ಣು. ಕಟಾಕ್ಷ (ಪು)=ಕಡೆಗಣ್ಣಿನ ನೋಟ. ಕರ್ಣ, ಶಬ್ದಗ್ರಹ (ಪು), ಶ್ರೋತ್ರ (ನ), ಶ್ರುತಿ (ಸ್ತ್ರೀ), ಶ್ರವಣ, ಶ್ರವಸ್ (ನ)=ಕಿವಿ.

---

[1] ಇದು ಪುಲ್ಲಿಂಗದಲ್ಲಿಯೂ ಇದೆ.
[2] ಸೃಕ್ಕ, ಸೃಕ್ಕಿ ಎಂಬ ನಪುಂಸಕಲಿಂಗದ ರೂಪಾಂತರಗಳೂ ಉಂಟು.
[3] ಅಶ್ರ ಎಂಬ ರೂಪಾಂತರವೂ ಉಂಟು.

**ಉತ್ತಮಾಂಗಂ ಶಿರಶ್ಶೀರ್ಷಂ ಮೂರ್ಧಾ ನಾ ಮಸ್ತಕೋಽಸ್ತ್ರಿಯಾಮ್ ।**
**ಚಿಕುರಃ ಕುಂತಲೋ ವಾಲಃ ಕಚಃ ಕೇಶಃ ಶಿರೋರುಹಃ ॥ ೬೬೪**
**ತದ್ವೃಂದೇ ಕೈಶಿಕಂ ಕೈಶ್ಯಮಲಕಾಶ್ಚೂರ್ಣಕುಂತಲಾಃ ।**
**ತೇ ಲಲಾಟೇ ಭ್ರಮರಕಾಃ ಕಾಕಪಕ್ಷಶ್ಶಿಖಂಡಕಃ ॥ ೬೬೫**
**ಕಬರೀ ಕೇಶವೇಶೋಽಥ ಧಮ್ಮಿಲ್ಲಸ್ಸಂಯತಾಃ ಕಚಾಃ ।**
**ಶಿಖಾ ಚೂಡಾ ಕೇಶಪಾಶೇ ವ್ರತಿನಸ್ತು ಸಟಾ ಜಟಾ ॥ ೬೬೬**
**ವೇಣೀ ಪ್ರವೇಣೀ ಶೀರ್ಷಣ್ಯಶಿರಸ್ಯೌ ವಿಶದೇ ಕಚೇ ।**
**ಪಾಶಃ ಪಕ್ಷಶ್ಚ ಹಸ್ತಶ್ಚ ಕಲಾಪಾರ್ಥಾಃ ಕಚಾತ್ಪರೇ ॥ ೬೬೭**
**ತನೂರುಹಂ ರೋಮ ಲೋಮ ತದ್ವೃದ್ಧೌ ಶ್ಮಶ್ರು ಪುಂಮುಖೇ ।**
**ಆಕಲ್ಪವೇಷೌ ನೇಪಥ್ಯಂ ಪ್ರತಿಕರ್ಮ ಪ್ರಸಾಧನಮ್ ॥ ೬೬೮**

---

೬೬೪. ಉತ್ತಮಾಂಗ, ಶಿರಸ್, ಶೀರ್ಷ (ನ)ಮೂರ್ಧನ್ (ಪು),ಮಸ್ತಕ (ಪು. ನ)=ತಲೆ. ಚಿಕುರ, ಕುಂತಲ, ವಾಲ, ಕಚ, ಕೇಶ, ಶಿರೋರುಹ (ಪು)=ತಲೆಗೂದಲು, ಕೇಶ.

೬೬೫. ಕೈಶಿಕ, ಕೈಶ್ಯ (ನ)=ಕೇಶರಾಶಿ. ಅಲಕ, ಚೂರ್ಣ ಕುಂತಲ (ಪು)=ಗುಂಗುರು ಕೂದಲು. ಭ್ರಮರಕ (ಪು)=ಹಣೆಯ ಮೇಲೆ ಜಾರಿದ ಗುಂಗುರುಕೂದಲು. ಕಾಕಪಕ್ಷ, ಶಿಖಂಡಕ (ಪು)=ಬಾಲಕರ ಜುಟ್ಟು, ದೀರ್ಘವಾಗಿ ಬೆಳೆದಿರುವ (ಬಾಲಕರ) ಕೇಶ.

೬೬೬. ಕಬರೀ (ಸ್ತ್ರೀ), ಕೇಶವೇಶ (ಪು)=ತುರುಬು, ಹೆರಳು. ಧಮ್ಮಿಲ್ಲ (ಪು)=ಗಂಟುಹಾಕಿದ ಕೂದಲು, ಮುಡಿಗಂಟು. ಶಿಖಾ, ಚೂಡಾ (ಸ್ತ್ರೀ), ಕೇಶಪಾಶ (ಪು)=ಜುಟ್ಟು. ಸಟಾ, ಜಟಾ (ಸ್ತ್ರೀ)=ಋಷಿ ಮೊದಲಾದವರ ಜಟೆ.

೬೬೭. ವೇಣೀ, ಪ್ರವೇಣೀ (ಸ್ತ್ರೀ)=ಹೆಣೆಯಲ್ಪಟ್ಟು ನೀಳವಾಗಿ ಬಿಟ್ಟಿರುವ ಕೇಶ ; ಹೆಣೆಯದೆ ನೀಳವಾಗಿ ಬಿಟ್ಟು ಕಟ್ಟಿರುವ ಕೇಶ. ಶೀರ್ಷಣ್ಯ, ಶಿರಸ್ಯ (ಪು)=ಒಂದಕ್ಕೊಂದು ಕೂಡಿಕೊಳ್ಳದಂತೆ ಬಿಟ್ಟು ಕಟ್ಟಿರುವ ಕೇಶ. ಪಾಶ, ಪಕ್ಷ, ಹಸ್ತ (ಪು)=ಈ ಶಬ್ದಗಳು ಕೇಶವಾಚಕ ಪದಗಳ ಮುಂದೆ ಪ್ರಯುಕ್ತವಾದಾಗ ಸಮೂಹ ಎಂಬ ಅರ್ಥವನ್ನು ಬೋಧಿಸುತ್ತವೆ. ಉದಾ : ಕೇಶಪಾಶಃ, ಚಿಕುರಪಕ್ಷಃ, ಕಚಹಸ್ತಃ.

೬೬೮. ತನೂರುಹ, ರೋಮನ್, ಲೋಮನ್ (ನ)=ಮೈ ಕೂದಲು. ಶ್ಮಶ್ರು (ನ)=ಮೀಸೆ, ಗಡ್ಡ. ಆಕಲ್ಪ, ವೇಷ (ಪು), ನೇಪಥ್ಯ, ಪ್ರತಿಕರ್ಮನ್, ಪ್ರಸಾಧನ (ನ)=ವಸ್ತ್ರಾದಿಗಳಿಂದ ಅಲಂಕರಿಸಿಕೊಳ್ಳುವುದು.



**ದಶೈತೇ ತ್ರಿಷ್ವಲಂಕರ್ತ್ರಾಲಂಕರಿಷ್ಣುಶ್ಚ ಮಂಡಿತಃ ।**
**ಪ್ರಸಾಧಿತೋಽಲಂಕೃತಶ್ಚ ಭೂಷಿತಶ್ಚ ಪರಿಷ್ಕೃತಃ ॥ ೬೬೯**
**ವಿಭ್ರಾಡ್ಭ್ರಾಜಿಷ್ಣು ರೋಚಿಷ್ಣೂ ಭೂಷಾ ತು ಸ್ಯಾದಲಂಕ್ರಿಯಾ ।**
**ಅಲಂಕಾರಸ್ತ್ವಾಭರಣಂ ಪರಿಷ್ಕಾರೋ ವಿಭೂಷಣಮ್ ॥ ೬೭೦**
**ಮಂಡನಂ ಚಾಥ ಮುಕುಟಂ ಕಿರೀಟಂ ಪುನ್ನಪುಂಸಕಮ್ ।**
**ಚೂಡಾಮಣಿಶ್ಶಿರೋರತ್ನಂ ತರಲೋ ಹಾರಮಧ್ಯಗಃ ॥ ೬೭೧**
**ಬಾಲಪಾಶ್ಯಾ ಪಾರಿತಥ್ಯಾ ಪತ್ರಪಾಶ್ಯಾ ಲಲಾಟಿಕಾ ।**
**ಕರ್ಣಿಕಾ ತಾಲಪತ್ರಂ ಸ್ಯಾತ್ಕುಂಡಲಂ ಕರ್ಣವೇಷ್ಟನಮ್ ॥ ೬೭೨**
**ಗ್ರೈವೇಯಕಂ ಕಂಠಭೂಷಾ ಲಂಬನಂ ಸ್ಯಾಲ್ಲಲಂತಿಕಾ ।**
**ಸ್ವರ್ಣೈಃ ಪ್ರಾಲಂಬಿಕಾಥೋರಸ್ಸೂತ್ರಿಕಾ ಮೌಕ್ತಿಕೈಃ ಕೃತಾ ॥ ೬೭೩**

---

೬೬೯. ಮುಂದೆ ಹೇಳುವ ಹತ್ತು ಶಬ್ದಗಳು ಅರ್ಥಾನುರೋಧವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ : ಅಲಂಕರ್ತೃ, ಅಲಂಕರಿಷ್ಣು (ಪು. ಸ್ತ್ರೀ. ನ) (-ಸ್ತ್ರೀ. ಅಲಂಕರ್ತ್ರೀ)=ಅಲಂಕರಿಸತಕ್ಕವನು ; ಅಲಂಕರಿಸಿಕೊಳ್ಳುವ ಸ್ವಭಾವದವನು. ಮಂಡಿತ, ಪ್ರಸಾಧಿತ, ಅಲಂಕೃತ, ಭೂಷಿತ, ಪರಿಷ್ಕೃತ (ಪು. ಸ್ತ್ರೀ. ನ)=ಅಲಂಕೃತನಾದವನು.

೬೭೦-೬೭೧. ವಿಭ್ರಾಜ್, ಭ್ರಾಜಿಷ್ಣು, ರೋಚಿಷ್ಣು (ಪು. ಸ್ತ್ರೀ. ನ)=ಭೂಷಣಾದಿಗಳಿಂದ ಶೋಭಿಸತಕ್ಕವನು. ಭೂಷಾ, ಅಲಂಕ್ರಿಯಾ (ಸ್ತ್ರೀ)=ಅಲಂಕರಿಸುವಿಕೆ. ಅಲಂಕಾರ (ಪು), ಆಭರಣ (ನ), ಪರಿಷ್ಕಾರ (ಪು),ವಿಭೂಷಣ, ಮಂಡನ (ನ)=ಒಡವೆ. ಮುಕುಟ (ಮಕುಟ) (ನ ), ಕಿರೀಟ (ಪು.ನ)=ಕಿರೀಟ. ಚೂಡಾಮಣಿ (ಪು), ಶಿರೋರತ್ನ (ನ)=ತಲೆಯಲ್ಲಿ ಧರಿಸುವ ರತ್ನಖಚಿತವಾದ ಒಡವೆ. ತರಲ (ಪು)=ಹಾರಮಧ್ಯದಲ್ಲಿರುವ ನಾಯಕಮಣಿ.

೬೭೨. ಬಾಲಪಾಶ್ಯಾ, ಪಾರಿತಥ್ಯಾ (ಸ್ತ್ರೀ)=ಕೇಶದಲ್ಲಿ ಧರಿಸುವ ಜಡೆಬಿಲ್ಲೆ. ಪತ್ರಪಾಶ್ಯಾ, ಲಲಾಟಿಕಾ (ಸ್ತ್ರೀ)=ಹಣೆಯ ಮೇಲ್ಗಡೆ ತೂಗುವ ಆಭರಣ ; ಬಾಸಿಂಗ. ಕರ್ಣಿಕಾ (ಸ್ತ್ರೀ), ತಾಲಪತ್ರ (ನ)=ಸ್ತ್ರೀಯರು ಕಿವಿಯಲ್ಲಿ ಧರಿಸುವ ಓಲೆ ಮುಂತಾದ ಒಡವೆ. ಕುಂಡಲ, ಕರ್ಣವೇಷ್ಟನ (ನ)=ಕಿವಿಯುಂಗುರ, ಹತ್ತಕಡಕು ಇತ್ಯಾದಿ.

೬೭೩-೬೭೪. ಗ್ರೈವೇಯಕ (ನ), ಕಂಠಭೂಷಾ (ಸ್ತ್ರೀ)=ಅಡ್ಡಿಕೆ, ತಾಳಿ ಮುಂತಾದ ಕಂಠಾಭರಣ. ಪ್ರಾಲಂಬಿಕಾ (ಸ್ತ್ರೀ)=ಚಿನ್ನದ ಸರ. ಉರಸ್ಸೂತ್ರಿಕಾ (ಸ್ತ್ರೀ), ಹಾರ (ಪು), ಮುಕ್ತಾವಲೀ (ಸ್ತ್ರೀ)=ಮುತ್ತಿನ ಸರ. ದೇವಚ್ಛಂದ (ಪು)=ನೂರು ಎಳೆಗಳಿರುವ ಮುತ್ತಿನ ಸರ.

ಹಾರೋ ಮುಕ್ತಾವಲೀ ದೇವಚ್ಛಂದೋऽಸೌ ಶತಯಷ್ಟಿಕಃ ।
ಹಾರಭೇದಾ ಯಷ್ಟಿಭೇದಾದ್ಗುತ್ಸಗುತ್ಸಾರ್ಧಗೋಸ್ತನಾಃ ॥ ೬೭೪
ಅರ್ಧಹಾರೋ ಮಾಣವಕ ಏಕಾವಲ್ಯೇಕಯಷ್ಟಿಕಾ ।
ಸೈವ ನಕ್ಷತ್ರಮಾಲಾ ಸ್ಯಾತ್ಸಪ್ತವಿಂಶತಿಮೌಕ್ತಿಕೈಃ ॥ ೬೭೫
ಆವಾಪಕಃ ಪಾರಿಹಾರ್ಯಃ ಕಟಕೋ ವಲಯೋऽಸ್ತ್ರಿಯಾಮ್ ।
ಕೇಯೂರಮಂಗದಂ ತುಲ್ಯೇ ಅಂಗುಲೀಯಕಮೂರ್ಮಿಕಾ ॥ ೬೭೬
ಸಾಕ್ಷರಾಂಗುಲಿಮುದ್ರಾ ಸಾ ಕಂಕಣಂ ಕರಭೂಷಣಮ್ ।
ಸ್ತ್ರೀಕಟ್ಯಾಂ ಮೇಖಲಾ ಕಾಂಚೀ ಸಪ್ತಕೀ ರಶನಾ ತಥಾ ॥ ೬೭೭
ಕ್ಲೀಬೇ ಸಾರಸನಂ ಚಾಥ ಪುಂಸ್ಕಟ್ಯಾಂ ಶೃಂಖಲಂ ತ್ರಿಷು ।
ಪಾದಾಂಗದಂ ತುಲಾಕೋಟಿರ್ಮಂಜೀರೋ ನೂಪುರೋऽಸ್ತ್ರಿಯಾಮ್ ॥

---

೬೭೪-೬೭೫. ಮುಂದಿನವು ಎಳೆಗಳ ಸಂಖ್ಯಾಭೇದದಿಂದ ಆಗುವ ವಿವಿಧ ಮುತ್ತಿನ ಸರಗಳು : ಗುತ್ಸ(ಗುಚ್ಛ) (ಪು)=ಮೂವತ್ತೆರಡು ಎಳೆಗಳುಳ್ಳ ಹಾರ - ದ್ವಾತ್ರಿಂಶಲ್ಲತಿಕೋ ಗುಚ್ಛಃ. ಗುತ್ಸಾರ್ಧ(ಗುಚ್ಛಾರ್ಧ) (ಪು)=ಇಪ್ಪತ್ತುನಾಲ್ಕು ಎಳೆಗಳುಳ್ಳ ಹಾರ(ಗುಚ್ಛಾರ್ಧಸ್ತತ್ತ್ ಸಂಖ್ಯಕಃ). ಗೋಸ್ತನ (ಪು)=ಮೂವತ್ತುನಾಲ್ಕು ಎಳೆಗಳುಳ್ಳ ಹಾರ (ಚತುಸ್ತ್ರಿಂಶಲ್ಲತೋ ಹಾರಶ್ಚತುಃಸರಿಚ್ಚ ಗೋಸ್ತನಃ) ನಾಲ್ಕು ಎಳೆಗಳಿರುವ ಹಾರವೆಂದೂ ನಲವತ್ತು ಎಳೆಗಳಿರುವ ಹಾರವೆಂದೂ ಕೆಲವರು. ಅರ್ಧಹಾರ, ಮಾಣವಕ (ಪು)=ಇಪ್ಪತ್ತು ಎಳೆಗಳಿರುವ ಹಾರ (ವಿಂಶತಿಯಷ್ಟಿಕೋ ಹಾರೋ ಮಾಣವಃ ಪರಿಕೀರ್ತಿತಃ) ಏಕಾವಲೀ (ಸ್ತ್ರೀ)=ಒಂದು ಎಳೆಯ ಹಾರ. ನಕ್ಷತ್ರ ಮಾಲಾ (ಸ್ತ್ರೀ)=ಇಪ್ಪತ್ತೇಳು ಮುತ್ತುಗಳಿಂದ ರಚಿತವಾದ ಒಂದೆಳೆಯ ಹಾರ.

೬೭೬. ಆವಾಪಕ, ಪಾರಿಹಾರ್ಯ, ಕಟಕ (ಪು), ವಲಯ (ಪು. ನ)=ಕೈಬಳೆ, ಕಡಗ. ಕೇಯೂರ, ಅಂಗದ (ನ)=ತೋಳಿನ ಒಡವೆ, ವಂಕಿ. ಅಂಗುಲೀಯಕ (ನ), ಊರ್ಮಿಕಾ (ಸ್ತ್ರೀ)=ಉಂಗುರ.

೬೭೭-೬೭೯. ಅಂಗುಲಿಮುದ್ರಾ (ಸ್ತ್ರೀ)=ಅಕ್ಷರಗಳನ್ನು ಕೆತ್ತಿದ ಉಂಗುರ. ಕಂಕಣ, ಕರಭೂಷಣ (ನ)=ಮಣಿಬಂಧದಲ್ಲಿ ಧರಿಸುವ ಹಸ್ತಾಭರಣ. ಮೇಖಲಾ, ಕಾಂಚಿ, ಸಪ್ತಕೀ, ರಶನಾ (ಸ್ತ್ರೀ),ಸಾರಸನ (ನ)=ಹೆಂಗಸರ ಸೊಂಟದ ಆಭರಣ, ಡಾಬು, ಒಡ್ಯಾಣ. ಶೃಂಖಲ (ಪು. ಸ್ತ್ರೀ. ನ.)=ಗಂಡಸರ ಸೊಂಟದ ಆಭರಣ, ನೇವಳ. ಪಾದಾಂಗದ (ನ),ತುಲಾಕೋಟಿ (ಸ್ತ್ರೀ)=ಮಂಜೀರ (ಪು),ನೂಪುರ (ಪು. ನ), ಹಂಸಕ, ಪಾದಕಟಕ (ಪು)=ಕಾಲಂದಿಗೆ, ಕಾಲ್ಕಡಗ, ಕಿಂಕಿಣೀ, ಕ್ಷುದ್ರಘಂಟಿಕಾ (ಸ್ತ್ರೀ)=ಗೆಜ್ಜೆ, ಕಿರುಗಂಟೆ.



ಹಂಸಕಃ ಪಾದಕಟಕಃ ಕಿಂಕಿಣೀ ಕ್ಷುದ್ರಘಂಟಿಕಾ ।
ತ್ವಕ್‌ಫಲಕ್ರಿಮಿರೋಮಾಣಿ ವಸ್ತ್ರಯೋನಿರ್ದಶ ತ್ರಿಷು ॥ ೬೭೯
ವಾಲ್ಕಂ ಕ್ಷೌಮಾದಿ ಫಾಲಂ ತು ಕಾರ್ಪಾಸಂ ಬಾದರಂ ಚ ತತ್ ।
ಕೌಶೇಯಂ ಕ್ರಿಮಿಕೋಶೋತ್ಥಂ ರಾಂಕವಂ ಮೃಗರೋಮಜಮ್ ॥ ೬೮೦
ಅನಾಹತಂ ನಿಷ್ಪ್ರವಾಣಿ ತಂತ್ರಕಂ ಚ ನವಾಂಬರೇ ।
ತತ್ಸ್ಯಾದುದ್ಗಮನೀಯಂ ಯದ್ಧೌತಯೋರ್ವಸ್ತ್ರಯೋರ್ಯುಗಮ್ ॥ ೬೮೧
ಪತ್ರೋರ್ಣಂ ಧೌತಕೌಶೇಯಂ ಬಹುಮೂಲ್ಯಂ ಮಹಾಧನಮ್ ।
ಕ್ಷೌಮಂ ದುಕೂಲಂ ಸ್ಯಾದ್ದ್ವೇ ತು ನಿವೀತಂ ಪ್ರಾವೃತಂ ತ್ರಿಷು ॥ ೬೮೨
ಸ್ತ್ರಿಯಾಂ ಬಹುತ್ವೇ ವಸ್ತ್ರಸ್ಯ ದಶಾಸ್ಸ್ಯುರ್ವಸ್ತ್ರಯೋರ್ದ್ವಯೋಃ ।
ದೈರ್ಘ್ಯಮಾಯಾಮ ಆರೋಹಃ ಪರಿಣಾಹೋ ವಿಶಾಲತಾ ॥ ೬೮೩

---

೬೭೯-೬೮೧. ವಸ್ತ್ರಯೋನಿ (ಸ್ತ್ರೀ)=ಬಟ್ಟೆಗೆ ಕಾರಣವಾದ ಮರದ ತೊಗಟೆ, ಕಾಯಿ, ಕ್ರಿಮಿ ಮತ್ತು ರೋಮಗಳು. ಮುಂದೆ ಹೇಳುವ ವಾಲ್ಕ, ಕ್ಷೌಮ, ಫಾಲ, ಕಾರ್ಪಾಸ, ಬಾದರ, ಕೌಶೇಯ, ರಾಂಕವ, ಅನಾಹತ, ನಿಷ್ಪ್ರವಾಣಿ ಮತ್ತು ತಂತ್ರಕ ಎಂಬ ಹತ್ತು ಶಬ್ದಗಳು ಮೂರು ಲಿಂಗಗಳಲ್ಲಿಯೂ ಅರ್ಥಾನುಸಾರವಾಗಿ ವರ್ತಿಸುತ್ತವೆ. ಉದಾ- ವಾಲ್ಕಃ ಪಟಃ, ವಾಲ್ಕೀ ಪಟೀ, ವಾಲ್ಕಂ ವಸ್ತ್ರಂ.

ವಾಲ್ಕ(-(ಸ್ತ್ರೀ. ವಾಲ್ಕೀ)=ನಾರು ಬಟ್ಟೆ. ಕ್ಷೌಮ (-ಸ್ತ್ರೀ. ಕ್ಷೌಮೀ)=ಅಗಸೆನಾರಿನ ಬಟ್ಟೆ. ಫಾಲ (-ಸ್ತ್ರೀಫಾಲೀ)=ಹತ್ತಿಯ ಕಾಯಿ ಮೊದಲಾದ ಫಲದಿಂದ ಆದ ಬಟ್ಟೆ. ಕಾರ್ಪಾಸ, ಬಾದರ (-ಸ್ತ್ರೀ. ಕಾರ್ಪಾಸೀ, ಬಾದರೀ)=ಹತ್ತಿಯ ಬಟ್ಟೆ. ಕೌಶೇಯ (-ಸ್ತ್ರೀ. ಕೌಶೇಯೀ)=ರೇಶ್ಮೆಯ ಬಟ್ಟೆ. ರಾಂಕವ (-ಸ್ತ್ರೀ. ರಾಂಕವೀ)=ರೋಮಗಳಿಂದಾದ ಕಂಬಳಿ ಮೊದಲಾದ್ದು, ಉಣ್ಣೆಬಟ್ಟೆ. ಅನಾಹತ, ನಿಷ್ಪ್ರವಾಣಿ, ತಂತ್ರಕ (-ಸ್ತ್ರೀ. ತಂತ್ರಿಕಾ)=ಹೊಸ ಬಟ್ಟೆ. ಉದ್ಗಮನೀಯ (ನ)=ಒಗೆದ ಬಟ್ಟೆಗಳ ಜೊತೆ.

೬೮೨. ಪತ್ರೋರ್ಣ (ನ)=ಒಗೆದ ರೇಶ್ಮೆಯ ಬಟ್ಟೆ. ಬಹುಮೂಲ್ಯ, ಮಹಾಧನ (ನ)=ಬೆಲೆಬಾಳುವ ಉತ್ತಮವಸ್ತ್ರ. ಕ್ಷೌಮ, ದುಕೂಲ (ನ )=ಪಟ್ಟೆವಸ್ತ್ರ, ಪೀತಾಂಬರ. ನಿವೀತ, ಪ್ರಾವೃತ (ಪು. ಸ್ತ್ರೀ. ನ)=ಹೊದೆಯುವ ಶಲ್ಯ.

೬೮೩. ದಶಾ (ಸ್ತ್ರೀ. ನಿತ್ಯ ಬಹುವಚನ), ವಸ್ತಿ (ಪು. ಸ್ತ್ರೀ)=ವಸ್ತ್ರದ ಅಂಚು, ದಡಿ, ಕಂಬಿ. ದೈರ್ಘ್ಯ (ನ), ಆಯಾಮ, ಆನಾಹ (ಪು)=ಉದ್ದ. ಪರಿಣಾಹ (ಪು), ವಿಶಾಲತಾ (ಸ್ತ್ರೀ)=ಅಗಲ.

ಪಟಚ್ಚರಂ ಜೀರ್ಣವಸ್ತ್ರಂ ಸಮೌ ನಕ್ತಕಕರ್ಪಟೌ ।
ವಸ್ತ್ರಮಾಚ್ಛಾದನಂ ವಾಸಶ್ಚೇಲಂ ವಸನಮಂಶುಕಮ್ ॥ ೬೮೪
ಸುಚೇಲಕಃ ಪಟೋऽಸ್ತ್ರೀ ಸ್ಯಾದ್ವರಾಶಿಃ ಸ್ಥೂಲಶಾಟಕಃ ।
ನಿಚೋಲಃ ಪ್ರಚ್ಛದಪಟಃ ಸಮೌ ರಲ್ಲಕಕಂಬಲೌ ॥ ೬೮೫
ಅಂತರೀಯೋಪಸಂವ್ಯಾನಪರಿಧಾನಾನ್ಯಧೋಂऽಶುಕೇ ।
ದ್ವೌ ಪ್ರಾವಾರೋತ್ತರಾಸಂಗೌ ಸಮೌ ಬೃಹತಿಕಾ ತಥಾ ॥ ೬೮೬
ಸಂವ್ಯಾನಮುತ್ತರೀಯಂ ಚ ಚೋಲಃ ಕೂರ್ಪಾಸಕೋऽಸ್ತ್ರಿಯಾಮ್ ।
ನೀಶಾರಃ ಸ್ಯಾತ್ಪ್ರಾವರಣೇ ಹಿಮಾನಿಲನಿವಾರಣೇ ॥ ೬೮೭
ಅರ್ಧೋರುಕಂ ವರಸ್ತ್ರೀಣಾಂ ಸ್ಯಾಚ್ಚಂಡಾತಕಮಂಶುಕಮ್ ।
ಸ್ಯಾತ್ತ್ರಿಷ್ವಾಪ್ರಪದೀನಂ ತತ್ಪ್ರಾಪ್ನೋತ್ಯಾಪ್ರಪದಂ ಹಿ ಯತ್ ॥ ೬೮೮

---

೬೮೪. ಪಟಚ್ಚರ, ಜೀರ್ಣವಸ್ತ್ರ (ನ)=ಹರಕುಬಟ್ಟೆ. ನಕ್ತಕ (ಲಕ್ತಕ), ಕರ್ಪಟ (ಪು)=ಕರವಸ್ತ್ರ ; ಕೊಳೆ ಬಟ್ಟೆ. ವಸ್ತ್ರ, ಆಚ್ಛಾದನ, ವಾಸಸ್, ಚೇಲ, ವಸನ, ಅಂಶುಕ (ನ)=ಬಟ್ಟೆ.

೬೮೫. ಸುಚೇಲಕ (ಪು) ಪಟ[1] (ಪು. ನ)=ನಯವಾದ ಬಟ್ಟೆ, ತೆಳುವಾದ ಬಟ್ಟೆ. ವರಾಶಿ (ವರಾಸಿ), ಸ್ಥೂಲಶಾಟಕ (ಪು)=ದಪ್ಪವಾದ ಬಟ್ಟೆ, ಒರಟು ಬಟ್ಟೆ. ನಿಚೋಲ, ಪ್ರಚ್ಛದಪಟ (ಪು)=ಹಾಸುವ ಬಟ್ಟೆ, ಮೇಲು ಹಾಸಿಗೆ. ರಲ್ಲಕ, ಕಂಬಲ (ಪು)=ಕಂಬಳಿ, ರಗ್ಗು, ಶಾಲು.

೬೮೬-೬೮೭. ಅಂತರೀಯ, ಉಪಸಂವ್ಯಾನ, ಪರಿಧಾನ, ಅಧೋಂಶುಕ (ನ)= ಕೆಳವಸ್ತ್ರ, ಉಡುವ ಬಟ್ಟೆ, ಪಂಚೆ ಅಥವಾ ಸೀರೆ. ಪ್ರಾವಾರ, ಉತ್ತರಾಸಂಗ (ಪು), ಬೃಹತಿಕಾ (ಸ್ತ್ರೀ), ಸಂವ್ಯಾನ,[2] ಉತ್ತರೀಯ (ನ)=ಹೊದೆಯುವ ಬಟ್ಟೆ, ಶಲ್ಯ. ಚೋಲ, ಕೂರ್ಪಾಸಕ[3] (ಪು.ನ)=ಸಾಮಾನ್ಯವಾಗಿ ಹೆಂಗಸರ ಕುಪ್ಪಸ, ರವಿಕೆ. ಗಂಡಸರ ಅಂಗಿಯೂ ಆಗಬಹುದೆಂದು ಮಕುಟನ ಮತ. ನೀಶಾರ (ಪು)=ಚಳಿಗಾಳಿಗಳ ನಿವಾರಣೆಗಾಗಿ ಹೊದೆಯುವ ಬಟ್ಟೆ- ಕಂಬಳಿ ಮೊದಲಾದದ್ದು.

೬೮೮. ಅರ್ಧೋರುಕ, ಚಂಡಾತಕ (ನ)=ಹೆಂಗಸರ ಲಂಗ, ಚಡ್ಡಿ. ಆಪ್ರಪದೀನ (ಪು. ಸ್ತ್ರೀ. ನ)=ತುದಿಗಾಲಿನವರೆಗೆ ಇರುವ ಬಟ್ಟೆ, ನಿಲುವಂಗಿ ಮೊದಲಾದದ್ದು.

---

1 ಬಟ್ಟೆ ಎಂಬ ಅರ್ಥದಲ್ಲಿ ಪಟೀ, ಅಪಟೀ- ಎಂಬ ಈ ಕಾರಾಂತ ಸ್ತ್ರೀಲಿಂಗ ಉಂಟು.
2 ಉಪಸಂವ್ಯಾನ ಎಂಬ ರೂಪವೂ ಇದೆ.
3 ಕೂರ್ಪಾಸ ಎಂಬ ರೂಪವೂ ಇದೆ.



ಅಸ್ತ್ರೀ ವಿತಾನಮುಲ್ಲೋಚೋ ದೂಷ್ಯಾದ್ಯಂ ವಸ್ತ್ರವೇಶ್ಮನಿ ।
ಪ್ರತಿಸೀರಾ ಜವನಿಕಾ ಸ್ಯಾತ್ತಿರಸ್ಕರಣೀ ಚ ಸಾ ॥ ೬೮೯
ಪರಿಕರ್ಮಾಂಗಸಂಸ್ಕಾರಃ ಸ್ಯಾನ್ಮಾರ್ಷ್ಟಿರ್ಮಾರ್ಜನಾ ಮೃಜಾ ।
ಉದ್ವರ್ತನೋತ್ಸಾದನೇ ದ್ವೇ ಸಮೇ ಆಪ್ಲಾವ ಆಪ್ಲವಃ ॥ ೬೯೦
ಸ್ನಾನಂ ಚರ್ಚಾ ತು ಚಾರ್ಚಿಕ್ಯಂ ಸ್ಥಾಸಕೋऽಥ ಪ್ರಬೋಧನಮ್ ।
ಅನುಬೋಧಃ ಪತ್ರಲೇಖಾ ಪತ್ರಾಂಗುಲಿರಿಮೇ ಸಮೇ ॥ ೬೯೧
ತಮಾಲಪತ್ರತಿಲಕಚಿತ್ರಕಾಣಿ ವಿಶೇಷಕಮ್ ।
ದ್ವಿತೀಯಂ ಚ ತುರೀಯಂ ಚ ನ ಸ್ತ್ರಿಯಾಮಥ ಕುಂಕುಮಮ್ ॥ ೬೯೨
ಕಾಶ್ಮೀರಜನ್ಮಾಗ್ನಿಶಿಖಂ ವರಂ ಬಾಹ್ಲೀಕಪೀತನೇ ।
ರಕ್ತಸಂಕೋಚಪಿಶುನಂ ಧೀರಲೋಹಿತಚಂದನಮ್ ॥ ೬೯೩

---

೬೮೯. ವಿತಾನ (ಪು. ನ), ಉಲ್ಲೋಚ (ಪು)=ಸಿಂಹಾಸನ ಹಾಸಿಗೆ ಚಪ್ಪರ ಮುಂತಾದ್ದರ ಮೇಲ್ಕಟ್ಟು (Canopy). ದೂಷ್ಯ (ನ)ಮೊದಲಾದದ್ದು ಎಂದರೆ-ಕುಟರ (ಪು. ನ), ಪಟಕುಟೀ (ಸ್ತ್ರೀ), ಪಟವಾಸ (ಪು)=ಡೇರೆ, ಗುಡಾರ (Tent). ಪ್ರತಿಸೀರಾ, ಜವನಿಕಾ, ತಿರಸ್ಕರಣೀ (ತಿರಸ್ಕರಿಣೀ)(ಸ್ತ್ರೀ)=ಪರದೆ, ತೆರೆ.

೬೯೦-೬೯೧. ಪರಿಕರ್ಮನ್ (ನ), ಅಂಗಸಂಸ್ಕಾರ (ಪು)=ಸ್ನಾನಾದಿಗಳಿಂದ ದೇಹವನ್ನು ಅಲಂಕರಿಸಿಕೊಳ್ಳುವುದು. ಮಾರ್ಷ್ಟಿ, ಮಾರ್ಜನಾ, ಮೃಜಾ (ಸ್ತ್ರೀ)=ಸ್ವಚ್ಛಗೊಳಿಸುವುದು, ನಿರ್ಮಲೀಕರಣ. ಉದ್ವರ್ತನ, ಉತ್ಸಾದನ (ನ)=ಮೈ ಉಜ್ಜುವುದು ; ಉಜ್ಜುವ ಶೀಗೆಪುಡಿ ಮೊದಲಾದ್ದು. ಆಪ್ಲಾವ, ಆಪ್ಲವ (ಪು), ಸ್ನಾನ (ನ)=ಸ್ನಾನ. ಚರ್ಚಾ (ಸ್ತ್ರೀ), ಚಾರ್ಚಿಕ್ಯ (ನ), ಸ್ಥಾಸಕ (ಪು)=ಗಂಧಾದಿದ್ರವ್ಯ ; ಗಂಧಾದಿದ್ರವ್ಯವನ್ನು ಲೇಪಿಸಿಕೊಳ್ಳುವುದು. ಪ್ರಬೋಧನ (ನ), ಅನುಬೋಧ (ಪು)=ಅಡಗಿರುವ ಗಂಧವನ್ನು ಉಜ್ಜ್ವಲಗೊಳಿಸುವುದು ಧೂಪಕ್ಕೆ ಬೆಂಕಿಯನ್ನಿಡುವುದು ; ಉಜ್ಜುವುದು. ಪತ್ರಲೇಖಾ, ಪತ್ರಾಂಗುಲಿ (ಸ್ತ್ರೀ)=ಹೆಂಗಸರ ಕೆನ್ನೆ ಕೈ ಮುಂತಾದ ಸ್ಥಳಗಳಲ್ಲಿ ಅಲಂಕಾರಕ್ಕಾಗಿ ಬರೆವ ಚಿತ್ರರೇಖೆ, ಹಚ್ಚೆ.

೬೯೨-೬೯೩. ತಮಾಲಪತ್ರ (ನ),ತಿಲಕ (ಪು. ನ) ಚಿತ್ರಕ (ನ), ವಿಶೇಷಕ (ಪುನ.)=ಹಣೆಯ ಮೇಲೆ ಇಟ್ಟುಕೊಳ್ಳುವ ಬಟ್ಟು, ತಿಲಕ. ಕುಂಕುಮ, ಕಾಶ್ಮೀರ ಜನ್ಮನ್, ಅಗ್ನಿಶಿಖ, ವರ, ಬಾಹ್ಲೀಕ, ಪೀತನ, ರಕ್ತ, ಸಂಕೋಚ, ಪಿಶುನ, ಧೀರ, ಲೋಹಿತ, ಲೋಹಿತಚಂದನ, ಚಂದನ (ನ)=ಕೇಸರಿ (Saffron).

ಲಾಕ್ಷಾ ರಾಕ್ಷಾ ಜತು ಕ್ಲೀಬೇ ಯಾವೋಽಲಕ್ತೋ ದ್ರುಮಾಮಯಃ ।
ಲವಂಗಂ ದೇವಕುಸುಮಂ ಶ್ರೀಸಂಜ್ಞಮಥ ಜಾಯಕಮ್ ॥ ೧೯೪
ಕಾಲೀಯಕಂ ಚ ಕಾಲಾನುಸಾರ್ಯಂ ಚಾಥ ಸಮಾರ್ಥಕಮ್ ।
ವಂಶಕಾಗುರುರಾಜಾರ್ಹಲೋಹಂ ಕೃಮಿಜಜೋಂಗಕಮ್ ॥ ೧೯೫
ಕಾಲಾಗುರ್ವಗುರು ಸ್ಯಾತ್ತು ಮಂಗಲ್ಯಂ ಮಲ್ಲಿಗಂಧಿ ಯತ್ ।
ಯಕ್ಷಧೂಪಸ್ಸರ್ಜರಸೋ ರಾಲಸರ್ವರಸಾವಪಿ ॥ ೧೯೬
ಬಹುರೂಪೋಽಪ್ಯಥ ವೃಕಧೂಪಕೃತ್ರಿಮಧೂಪಕೌ ।
ತುರುಷ್ಕಃ ಪಿಂಡಕಸ್ಸಿಲ್ಹೋ ಯಾವನೋಽಪ್ಯಥ ಪಾಯಸಃ ॥ ೧೯೭
ಶ್ರೀವಾಸೋ ವೃಕಧೂಪೋಽಪಿ ಶ್ರೀವೇಷ್ಟಸರಲದ್ರವೌ ।
ಮೃಗನಾಭಿರ್ಮೃಗಮದಃ ಕಸ್ತೂರೀ ಚಾಥ ಕೋಲಕಮ್ ॥ ೧೯೮
ಕಕ್ಕೋಲಕಂ ಕೋಶಫಲಮಥ ಕರ್ಪೂರಮಸ್ತ್ರಿಯಾಮ್ ।
ಘನಸಾರಶ್ಚಂದ್ರಸಂಜ್ಞಸ್ಸಿತಾಭ್ರೋ ಹಿಮವಾಲುಕಾ ॥ ೧೯೯

---

೧೯೪-೧೯೫. ಲಾಕ್ಷಾ, ರಾಕ್ಷಾ (ಸ್ತ್ರೀ), ಜತು (ನ), ಯಾವ, ಅಲಕ್ತ, ದ್ರುಮಾಮಯ (ಪು)=ಅರಗು, ಒಂದು ಮರದ ಅಂಟು. ಲವಂಗ, ದೇವಕುಸುಮ, ಶ್ರೀಸಂಜ್ಞ(ನ)=ಲವಂಗ. ಜಾಯಕ (ಚಾಪಕ),ಕಾಲೀಯಕ, ಕಾಲಾನುಸಾರ್ಯ (ನ)=ಒಂದು ಬಗೆಯ ಸುಗಂಧದ್ರವ್ಯ, ಜಾಯಿಕಾಯಿ. ವಂಶಕ, ಅಗುರು, ರಾಜಾರ್ಹ, ಲೋಹ, ಕೃಮಿಜ (ಕ್ರಿಮಿಜ), ಜೋಂಗಕ (ನ)=ಅಗರು, ಸುಗಂಧದ್ರವ್ಯ.

೧೯೬-೧೯೭. ಕಾಲಾಗುರು (ನ)=ಕಪ್ಪು ಅಗರು. ಮಂಗಲ್ಯ (ನ)=ಮಲ್ಲಿಗೆಯ ವಾಸನೆ ಇರುವ ಅಗರು. ಯಕ್ಷಧೂಪ, ಸರ್ಜರಸ, ರಾಲ, ಸರ್ವರಸ, ಬಹುರೂಪ (ಪು)=ರಾಳ. ವೃಕಧೂಪ, ಕೃತ್ರಿಮಧೂಪ (ಪು)=ಅನೇಕ ಸುವಾಸನಾದ್ರವ್ಯಗಳಿಂದ ಮಾಡಿದ ಧೂಪ, ದಶಾಂಗ.

೧೯೭-೧೯೮. ತುರುಷ್ಕ, ಪಿಂಡಕ, ಸಿಲ್ಹ, ಯಾವನ (ಪು)=ಲೋಬಾನ. ಪಾಯಸ, ಶ್ರೀವಾಸ, ವೃಕಧೂಪ, ಶ್ರೀವೇಷ್ಟ, ಸರಲದ್ರವ (ಪು)=ಸರಳ ವೃಕ್ಷದ ಹಾಲುಮಡ್ಡಿ.

೧೯೮-೧೯೯. ಮೃಗನಾಭಿ (ಪು. ಸ್ತ್ರೀ), ಮೃಗಮದ (ಪು), ಕಸ್ತೂರೀ (ಸ್ತ್ರೀ)=ಕಸ್ತೂರಿ. ಕೋಲಕ, ಕಕ್ಕೋಲಕ, ಕೋಶಫಲ (ನ)=ತಕ್ಕೋಲವೆಂಬ ಮರದಿಂದ ತೆಗೆದ ಪರಿಮಳದ್ರವ್ಯ. ಕರ್ಪೂರ (ಪು. ನ), ಘನಸಾರ, ಚಂದ್ರಸಂಜ್ಞ, ಸಿತಾಭ್ರ (ಪು), ಹಿಮವಾಲುಕಾ (ಸ್ತ್ರೀ)=ಕರ್ಪೂರ.



ಗಂಧಸಾರೋ ಮಲಯಜೋ ಭದ್ರಶ್ರೀಶ್ಚಂದ್ರನೋಽಸ್ತ್ರಿಯಾಮ್ ।
ತೈಲಪರ್ಣಿಕಗೋಶೀರ್ಷೇ ಹರಿಚಂದನಮಸ್ತ್ರಿಯಾಮ್ ॥ ೨೦೦
ತಿಲಪರ್ಣೀ ತು ಪತ್ರಾಂಗಂ ರಂಜನಂ ರಕ್ತಚಂದನಮ್ ।
ಕುಚಂದನಂ ಚಾಥ ಜಾತಿಕೋಶಜಾತಿ ಫಲೇ ಸಮೇ ॥ ೨೦೧
ಕರ್ಪೂರಾಗರುಕಸ್ತೂರೀಕಕ್ಕೋಲೈರ್ಯಕ್ಷಕರ್ದಮಃ ।
ಗಾತ್ರಾನುಲೇಪನೀ ವರ್ತಿರ್ವರ್ಣಕಂ ಸ್ಯಾದ್ವಿಲೇಪನಮ್ ॥ ೨೦೨
ಚೂರ್ಣಾನಿ ವಾಸಯೋಗಾಸ್ಸ್ಯುರ್ಭಾವಿತಂ ವಾಸಿತಂ ತ್ರಿಷು ।
ಸಂಸ್ಕಾರೋ ಗಂಧಮಾಲ್ಯಾದ್ಯೈರ್ಯಸ್ಸ್ಯಾತ್ತದಧಿವಾಸನಮ್ ॥ ೨೦೩
ಮಾಲ್ಯಂ ಮಾಲಾಸ್ರಜೌ ಮೂರ್ಧ್ನಿ ಕೇಶಮಧ್ಯೇ ತು ಗರ್ಭಕಃ ।
ಪ್ರಭ್ರಷ್ಟಕಂ ಶಿಖಾಲಂಬಿ ಪುರೋ ನ್ಯಸ್ತಂ ಲಲಾಮಕಮ್ ॥ ೨೦೪
ಪ್ರಾಲಂಬಮೃಜುಲಂಬಿ ಸ್ಯಾತ್ಕಂಠಾದ್ವೈಕಕ್ಷಕಂ ತು ತತ್ ।
ಯತ್ತಿರ್ಯಕ್ ಕ್ಷಿಪ್ತಮುರಸಿ ಶಿಖಾಸ್ವಾಪೀಡಶೇಖರೌ ॥ ೨೦೫

---

೨೦೦. ಗಂಧಸಾರ, ಮಲಯಜ, ಭದ್ರಶ್ರೀ (ಪು),ಚಂದನ (ಪು.ನ)=ಗಂಧದ ಮರ ; ಅದರಿಂದ ತೆಗೆದ ಗಂಧ. ತೈಲಪರ್ಣಿಕ, ಗೋಶೀರ್ಷ (ನ), ಹರಿಚಂದನ (ಪು. ನ)=ಬೇರೆ ಬೇರೆ ಜಾತಿಯ ಗಂಧದ ಮರ.

೨೦೧. ತಿಲಪರ್ಣೀ (ಸ್ತ್ರೀ),ಪತ್ರಾಂಗ, ರಂಜನ, ರಕ್ತಚಂದನ, ಕುಚಂದನ (ನ)=ಕೆಂಪು ಚಂದನ. ಜಾತಿಕೋಶ, ಜಾತಿಫಲ (ನ)=ಜಾಯಿಕಾಯಿ.

೨೦೨. ಯಕ್ಷಕರ್ದಮ (ಪು)=ಕರ್ಪೂರ, ಅಗರು, ಕಸ್ತೂರಿ, ತಕ್ಕೋಲ-ಇವುಗಳಿಂದ ಮಾಡಿದ ಸುಗಂಧದ್ರವ್ಯ. ಗಾತ್ರಾನುಲೇಪನೀ, ವರ್ತಿ (ಸ್ತ್ರೀ), ವರ್ಣಕ, ವಿಲೇಪನ (ನ)=ಮೈಗೆ ಹಚ್ಚಿ ಕೊಳ್ಳಲು ಸಿದ್ಧಪಡಿಸಿದ ಗಂಧದ್ರವ್ಯ, ಗಂಧದ ಬಿಲ್ಲೆ. ೨೦೩. ಚೂರ್ಣ (ನ), ವಾಸಯೋಗ (ಪು)=ಗಂಧದಪುಡಿ. ಭಾವಿತ, ವಾಸಿತ (ಪು. ಸ್ತ್ರೀ.ನ)=ಸುಗಂಧವನ್ನು ಲೇಪಿಸಿದ ವಸ್ತು. ಅಧಿವಾಸನ (ನ)=ಗಂಧಮಾಲ್ಯಗಳಿಂದ ಪರಿಷ್ಕಾರಗೊಳಿಸುವುದು.

೨೦೪. ಮಾಲ್ಯ (ನ),ಮಾಲಾ, ಸ್ರಜ್ (ಸ್ತ್ರೀ)=ತಲೆಯಲ್ಲಿ ಧರಿಸುವ ಹೂಮಾಲೆ. ಗರ್ಭಕ (ಪು)=ಕೇಶದೊಳಗೆ ಮುಡಿದಿರುವ ಹೂ. ಪ್ರಭ್ರಷ್ಟಕ (ನ)=ಕೂದಲಿನಲ್ಲಿ ನೇತಾಡುವ ಹೂಮಾಲೆ. ಲಲಾಮಕ (ನ)=ಹಣೆಯ ಮೇಲೆ ನೇತಾಡುವಂತೆ ಮುಡಿದ ಹೂಮಾಲೆ. ೨೦೫. ಪ್ರಾಲಂಬ (ನ)=ಕೊರಳಲ್ಲಿ ನೆಟ್ಟಗೆ ಜೋತಾಡುವ ಮಾಲೆ. ವೈಕಕ್ಷಕ (ನ)=ಜನಿವಾರದಂತೆ ಧರಿಸಿದ ಮಾಲೆ. ಆಪೀಡ, ಶೇಖರ (ಪು)=ಶಿಖೆಯ ಅಗ್ರಭಾಗದಲ್ಲಿ ಮುಡಿದ ಹೂ.

ರಚನಾ ಸ್ಯಾತ್ಪರಿಸ್ಪಂದ ಆಭೋಗಃ ಪರಿಪೂರ್ಣತಾ ।
ಉಪಧಾನಂ ತೂಪಬರ್ಹಃ ಶಯ್ಯಾಯಾಂ ಶಯನೀಯವತ್ ॥ ೨೦೬
ಶಯನಂ ಮಂಚಪರ್ಯಂಕಪಲ್ಯಂಕಾಃ ಖಟ್ವಯಾ ಸಮಾಃ ।
ಗೇಂದುಕಃ ಕಂದುಕೋ ದೀಪಃ ಪ್ರದೀಪಃ ಪೀಠಮಾಸನಮ್ ॥ ೨೦೭
ಸಮುದ್ಗಕಸ್ಸಂಪುಟಕಃ ಪ್ರತಿಗ್ರಾಹಃ ಪತದ್ಗ್ರಹಃ ।
ಪ್ರಸಾಧನೀ ಕಂಕತಿಕಾ ಪಿಷ್ಟಾತಃ ಪಟವಾಸಕಃ ॥ ೨೦೮
ದರ್ಪಣೇ ಮುಕುರಾದರ್ಶೌ ವ್ಯಜನಂ ತಾಲವೃಂತಕಮ್ ।

ಇತಿ ಮನುಷ್ಯವರ್ಗಃ

---

೨೦೬-೨೦೭. ರಚನಾ (ಸ್ತ್ರೀ),ಪರಿಸ್ಪಂದ (ಪು)=ವಸ್ತ್ರಾದ್ಯಲಂಕಾರಗಳಲ್ಲಿ ಕೌಶಲ ಪ್ರದರ್ಶನ. ಆಭೋಗ (ಪು), ಪರಿಪೂರ್ಣತಾ (ಸ್ತ್ರೀ)=ವಸ್ತುಗಳಲ್ಲಿ ಯಾವ ಕೊರತೆಯೂ ಇಲ್ಲದ ಪರಿಪೂರ್ಣತೆ. ಉಪಧಾನ (ನ), ಉಪಬರ್ಹ (ಪು)=ತಲೆದಿಂಬು. ಶಯ್ಯಾ (ಸ್ತ್ರೀ), ಶಯನೀಯ, ಶಯನ (ನ)=ಹಾಸಿಗೆ. ಮಂಚ, ಪರ್ಯಂಕ, ಪಲ್ಯಂಕ (ಪು), ಖಟ್ವಾ (ಸ್ತ್ರೀ)=ಮಂಚ. ಗೇಂದುಕ, ಕಂದುಕ (ಪು)=ಚೆಂಡು. ದೀಪ, ಪ್ರದೀಪ (ಪು)=ದೀವಿಗೆ. ಪೀಠ, ಆಸನ (ನ)=ಗದ್ದುಗೆ, ಮಣೆ ಮುಂತಾದ ಕುಳಿತುಕೊಳ್ಳುವ ಸಾಮಗ್ರಿ.

೨೦೮. ಸಮುದ್ಗಕ, ಸಂಪುಟಕ (ಪು)=ಕರಡಿಗೆ, ಭರಣಿ (Caset) ಪ್ರತಿಗ್ರಾಹ, ಪತದ್ಗ್ರಹ (ಪು)=ಪೀಕದಾನಿ. ಪ್ರಸಾಧನೀ, ಕಂಕತಿ[1]ಕಾ (ಸ್ತ್ರೀ)=ಬಾಚಣಿಗೆ. ಪಿಷ್ಟಾತ, ಪಟವಾಸಕ (ಪು)=ಬಟ್ಟೆಗಳಿಗೆ ಹಾಕುವ ಸುಗಂಧದ್ರವ್ಯ.

೨೦೯. ದರ್ಪಣ, ಮು[2]ಕುರ, ಆದರ್ಶ (ಪು)=ಕನ್ನಡಿ. ವ್ಯಜನ, ತಾಲವೃಂತಕ (ನ)=ಬೀಸಣಿಗೆ.

---

1 ಕಂಕತ ಎಂಬ ನಪುಂಸಕ ಲಿಂಗವೂ ಇದೆ.
2 ಮಕುರ ಎಂಬ ರೂಪವೂ ಇದೆ.

## ೭. ಬ್ರಹ್ಮವರ್ಗ

ಸಂತತಿರ್ಗೋತ್ರಜನನಕುಲಾನ್ಯಭಿಜನಾನ್ವಯೌ ॥ ೨೦೯
ವಂಶೋಽನ್ವವಾಯಃ ಸಂತಾನೋ ವರ್ಣಾಃ ಸ್ಯುರ್ಬ್ರಾಹ್ಮಣಾದಯಃ।
ವಿಪ್ರಕ್ಷತ್ರಿಯವಿಟ್ಛೂದ್ರಾಶ್ಚಾತುರ್ವರ್ಣ್ಯಮಿತಿ ಸ್ಮೃತಮ್ ॥ ೨೧೦
ರಾಜಬೀಜೀ ರಾಜವಂಶ್ಯೋ ಬೀಜ್ಯಸ್ತು ಕುಲಸಂಭವಃ ।
ಮಹಾಕುಲಕುಲೀನಾರ್ಯಸಭ್ಯ ಸಜ್ಜನಸಾಧವಃ ॥ ೨೧೧
ಬ್ರಹ್ಮಚಾರೀ ಗೃಹೀ ವಾನಪ್ರಸ್ಥೋ ಭಿಕ್ಷುಶ್ಚತುಷ್ಟಯೇ ।
ಆಶ್ರಮೋಽಸ್ತ್ರೀ ದ್ವಿಜಾತ್ಯಗ್ರಜನ್ಮಭೂದೇವವಾಡವಾಃ ॥ ೨೧೨
ವಿಪ್ರಶ್ಚ ಬ್ರಾಹ್ಮಣೋಽಸೌ ಷಟ್ಕರ್ಮಾ ಯಾಗಾದಿಭಿರ್ಯುತಃ ।
ವಿದ್ವಾನ್ ವಿಪಶ್ಚಿದ್ದೋಷಜ್ಞಃ ಸನ್ಸುಧೀಃ ಕೋವಿದೋ ಬುಧಃ ॥ ೨೧೩
ಧೀರೋ ಮನೀಷೀ ಜ್ಞಃ ಪ್ರಾಜ್ಞಸ್ಸಂಖ್ಯಾವಾನ್ಪಂಡಿತಃ ಕವಿಃ ।
ಧೀಮಾನ್ ಸೂರಿಃ ಕೃತೀ ಕೃಷ್ಟಿರ್ಲಬ್ಧವರ್ಣೋ ವಿಚಕ್ಷಣಃ ॥ ೨೧೪

---

## ೭. ಬ್ರಹ್ಮವರ್ಗ

೨೦೯-೨೧೦. ಸಂತತಿ (ಸ್ತ್ರೀ), ಗೋತ್ರ, ಜನನ, ಕುಲ (ನ), ಅಭಿಜನ, ಅನ್ವಯ, ವಂಶ, ಅನ್ವವಾಯ, ಸಂತಾನ (ಪು)=ಕುಲ, ಮನೆತನ. ವರ್ಣ (ಪು)=ಬ್ರಾಹ್ಮಣಾದಿ ಚತುಷ್ಟಯ. ಚಾತುರ್ವರ್ಣ್ಯ (ನ)=ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ನಾಲ್ಕು ವರ್ಣಗಳು.

೨೧೧. ರಾಜಬೀಜಿನ್, ರಾಜವಂಶ್ಯ (ಪು)=ರಾಜವಂಶದಲ್ಲಿ ಹುಟ್ಟಿದವನು. ಬೀಜ್ಯ, ಕುಲಸಂಭವ (ಪು)=ಕುಲದಲ್ಲಿ ಜನಿಸಿದವನು. ಮಹಾಕುಲ, ಕುಲೀನ, ಆರ್ಯ, ಸಭ್ಯ, ಸಜ್ಜನ, ಸಾಧು (ಪು)=ಸತ್ಕುಲದಲ್ಲಿ ಹುಟ್ಟಿದವನು.

೨೧೨-೨೧೩. ಬ್ರಹ್ಮಚಾರಿನ್ (ಪು)=ಉಪನಯನವಾದವನು, ವೇದಾಧ್ಯಯನವ್ರತದಲ್ಲಿ ತೊಡಗಿದವನು. ಗೃಹಿನ್ (ಪು)=ಮದುವೆಯಾದವನು. ವಾನಪ್ರಸ್ಥ (ಪು)=ವನದಲ್ಲಿ ತಪಸ್ಸನ್ನಾಚರಿಸುವವನು. ಭಿಕ್ಷು (ಪು)=ಸಂನ್ಯಾಸಿ. ಆಶ್ರಮ (ಪು)=ಬ್ರಹ್ಮಚಾರಿ ಮೊದಲಾದ ನಾಲ್ವರ ಅವಸ್ಥಾ ಧರ್ಮ. ದ್ವಿಜಾತಿ, ಅಗ್ರಜನ್ಮನ್, ಭೂದೇವ, ವಾಡವ, ವಿಪ್ರ, ಬ್ರಾಹ್ಮಣ (ಪು)=ಬ್ರಾಹ್ಮಣ. ಷಟ್ಕರ್ಮನ್ (ಪು)=ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹ- ಎಂಬ ಆರು ಕರ್ತವ್ಯಗಳನ್ನು ನೆರವೇರಿಸುವ ಬ್ರಾಹ್ಮಣ.

ದೂರದರ್ಶೀ ದೀರ್ಘದರ್ಶೀ ಶ್ರೋತ್ರಿಯಚ್ಛಾಂದಸೌ ಸಮೌ ।
ಉಪಾಧ್ಯಾಯೋಽಧ್ಯಾಪಕೋಽಥ ಸ್ಯಾನ್ನಿಷೇಕಾದಿಕೃದ್ಗುರುಃ ॥ ೭೧೫
ಮಂತ್ರವ್ಯಾಖ್ಯಾಕೃದಾಚಾರ್ಯಃ ಆದೇಷ್ಟಾ ತ್ವಧ್ವರೇ ವ್ರತೀ ।
ಯಷ್ಟಾ ಚ ಯಜಮಾನಶ್ಚ ಸ ಸೋಮವತಿ ದೀಕ್ಷಿತಃ ॥ ೭೧೬
ಇಜ್ಯಾಶೀಲೋ ಯಾಯಜೂಕೋ ಯಜ್ವಾ ತು ವಿಧಿನೇಷ್ಟವಾನ್ ।
ಸ ಗೀಷ್ಪತೀಷ್ಟ್ಯಾ ಸ್ಥಪತಿಃ ಸೋಮಪೀಥೀ ತು ಸೋಮಪಃ ॥ ೭೧೭
ಸರ್ವವೇದಾಃ ಸ ಯೇನೇಷ್ಟೋ ಯಾಗಸ್ಸರ್ವಸ್ವದಕ್ಷಿಣಃ ।
ಅನೂಚಾನಃ ಪ್ರವಚನೇ ಸಾಂಗೇಽಧೀತೀ ಗುರೋಸ್ತು ಯಃ ॥ ೭೧೮

೭೧೩-೭೧೪. ವಿದ್ವಸ್, ವಿಪಶ್ಚಿತ್, ದೋಷಜ್ಞ, ಸತ್, ಸುಧೀ, ಕೋವಿದ, ಬುಧ, ಧೀರ, ಮನೀಷಿನ್, ಜ್ಞ, ಪ್ರಾಜ್ಞ, ಸಂಖ್ಯಾವತ್, ಪಂಡಿತ, ಕವಿ, ಧೀಮತ್, ಸೂರಿ, ಕೃತಿನ್, ಕೃಷ್ಟಿ, ಲಬ್ಧವರ್ಣ, ವಿಚಕ್ಷಣ[1] (ಪು)=ವಿದ್ವಾಂಸ.

೭೧೫. ದೂರದರ್ಶಿನ್, ದೀರ್ಘದರ್ಶಿನ್ (ಪು)=ದೀರ್ಘಾಲೋಚನೆಯುಳ್ಳವನು. ಶ್ರೋತ್ರಿಯ, ಛಾಂದಸ (ಪು)=ವೇದಾಧ್ಯಯನ ಮಾಡಿದವನು. ಉಪಾಧ್ಯಾಯ, ಅಧ್ಯಾಪಕ (ಪು)=ವೇದ ಅಥವಾ ವೇದಾಂಗವನ್ನು ಕಲಿಸತಕ್ಕವನು ; ಉಪಾಧ್ಯಾಯ. ಗುರು (ಪು)=ನಿಷೇಕಾದಿ ಸಂಸ್ಕಾರಗಳನ್ನು ಮಾಡಿಸಿದವನು.

೭೧೬. ಆಚಾರ್ಯ (ಪು)=ವೇದಾರ್ಥವನ್ನು ಬೋಧಿಸುವವನು. ಆದೇಷ್ಟೃ (ಆದಿಷ್ಟಿನ್), ವ್ರತಿನ್, ಯಷ್ಟೃ, ಯಜಮಾನ (ಪು)=ಯಜ್ಞಕರ್ತೃ. ದೀಕ್ಷಿತ (ಪು)=ಸೋಮಯಾಗಕರ್ತೃ.

೭೧೭. ಇಜ್ಯಾಶೀಲ, ಯಾಯಜೂಕ (ಪು)=ಆಗಾಗ ಯಜ್ಞಮಾಡತಕ್ಕವನು. ಯಜ್ವನ್ (ಪು)=ವಿಧಿಪೂರ್ವಕವಾಗಿ ಯಜ್ಞಮಾಡಿದವನು. ಸ್ಥಪತಿ (ಪು)=ಬೃಹಸ್ಪತಿಯಾಗವನ್ನು ಮಾಡಿದವನು. ಸೋಮಪೀಥಿನ್, ಸೋಮಪ (ಪು)=ಯಜ್ಞದಲ್ಲಿ ಸೋಮಪಾನವನ್ನು ಮಾಡಿದವನು.

೭೧೮. ಸರ್ವವೇದಸ್ (ಪು)=ಸರ್ವಸ್ವವೂ ದಕ್ಷಿಣೆಯಾಗಿರುವ ವಿಶ್ವಜಿತ್ ಮುಂತಾದ ಯಾಗವನ್ನು ಮಾಡಿದವನು. ಅನೂಚಾನ (ಪು)=ವೇದ-ವೇದಾಂಗಗಳನ್ನು ಕಲಿತವನು.

1 ಅರ್ಥಾನುಸಾರವಾಗಿ ಇವು ಸ್ತ್ರೀಲಿಂಗವನ್ನು ಪಡೆಯುತ್ತವೆ : ವಿದುಷೀ, ಸತೀ, ಮನೀಷಿಣೀ, ಸಂಖ್ಯಾವತೀ, ಧೀಮತೀ, ಕೃತಿನೀ.



ಲಬ್ಧಾನುಜ್ಞಸ್ಸಮಾವೃತ್ತಃ ಸುತ್ವಾ ತ್ವಭಿಷವೇ ಕೃತೀ ।
ಛಾತ್ರಾಂತೇವಾಸಿನೌ ಶಿಷ್ಯೇ ಶೈಕ್ಷಾಃ ಪ್ರಾಥಮಕಲ್ಪಿಕಾಃ ॥ ೭೧೯
ಏಕಬ್ರಹ್ಮವ್ರತಾಚಾರಾ ಮಿಥಃ ಸಬ್ರಹ್ಮಚಾರಿಣಃ ।
ಸತೀರ್ಥ್ಯಾಸ್ತ್ವೇಕ ಗುರುವಶ್ಚಿತವಾನಗ್ನಿಮಗ್ನಿಚಿತ್ ॥ ೭೨೦
ಪಾರಂಪರ್ಯೋಪದೇಶೇ ಸ್ಯಾದೈತಿಹ್ಯಮಿತಿಹಾವ್ಯಯಮ್ ।
ಉಪಜ್ಞಾ ಜ್ಞಾನಮಾದ್ಯಂ ಸ್ಯಾತ್ ಜ್ಞಾತ್ವಾರಂಭ ಉಪಕ್ರಮಃ ॥ ೭೨೧
ಯಜ್ಞಸ್ಸವೋಽಧ್ವರೋ ಯಾಗಸ್ಸಪ್ತತಂತುರ್ಮಖಃ ಕ್ರತುಃ ।
ಪಾಠೋ ಹೋಮಶ್ಚಾತಿಥೀನಾಂ ಸಪರ್ಯಾತರ್ಪಣಂ ಬಲಿಃ ॥ ೭೨೨
ಏತೇ ಪಂಚ ಮಹಾಯಜ್ಞಾ ಬ್ರಹ್ಮಯಜ್ಞಾದಿನಾಮಕಾಃ ।
ಸಮಜ್ಯಾ ಪರಿಷದ್ಗೋಷ್ಠೀ ಸಭಾಸಮಿತಿಸಂಸದಃ ॥ ೭೨೩

೭೧೯. ಸಮಾವೃತ್ತ (ಪು)=ಅಧ್ಯಯನವನ್ನು ಮುಗಿಸಿ ಗುರುವಿನ ಅನುಜ್ಞೆಯನ್ನು ಪಡೆದು ಗುರುಕುಲದಿಂದ ನಿವೃತ್ತನಾದವನು. ಸುತ್ವನ್ (ಪು)=ಅವಭೃಥಸ್ನಾನವನ್ನು ಮಾಡಿದವನು ; ಸೋಮಲತೆಯನ್ನು ಕುಟ್ಟಿ ರಸವನ್ನು ತೆಗೆಯುವುದರಲ್ಲಿ ಕುಶಲ. ಛಾತ್ರ, ಅಂತೇವಾಸಿನ್, ಶಿಷ್ಯ (ಪು)=ಶಿಷ್ಯ. ಶೈಕ್ಷ, ಪ್ರಾಥಮಕಲ್ಪಿಕ (ಪು)=ಹೊಸದಾಗಿ ಅಧ್ಯಯನವನ್ನು ಆರಂಭಿಸಿದ ವಿದ್ಯಾರ್ಥಿ.

೭೨೦. ಸಬ್ರಹ್ಮಚಾರಿನ್ (ಪು)=ಪರಸ್ಪರ ಒಂದೇ ವೇದಶಾಖೆಯನ್ನೋದುವ ವಿದ್ಯಾರ್ಥಿ. ಸತೀರ್ಥ್ಯ (ಪು)=ಒಬ್ಬನೇ ಗುರುವಾಗಿ ಉಳ್ಳ ಸಹಾಧ್ಯಾಯಿ. ಅಗ್ನಿಚಿತ್ (ಪು)=ಅಗ್ನಿಚಯನ ಮಾಡಿದವನು, ಆಹಿತಾಗ್ನಿ.

೭೨೧. ಐತಿಹ್ಯ (ನ), ಇತಿಹ (ಅವ್ಯಯ)=ಪರಂಪರೆಯಿಂದ ಬಂದ ಜನರ ಹೇಳಿಕೆ. ಉಪಜ್ಞಾ (ಸ್ತ್ರೀ)=ಆದ್ಯಜ್ಞಾನ, ತಾನಾಗಿ ಹೊಳೆದ ಜ್ಞಾನ ; (ಅಂಥ ಜ್ಞಾನಕ್ಕೆ ಗೋಚರವಾದದ್ದು (ನ) : ಉದಾ : ಪ್ರಾಚೇತಸೋಪಜ್ಞಂ ರಾಮಾಯಣಂ, ಪಾಣಿನ್ಯುಪಜ್ಞಂ ವ್ಯಾಕರಣಂ). ಉಪಕ್ರಮ (ಪು)=ಜ್ಞಾನಪೂರ್ವಕವಾದ ಪ್ರಥಮಾರಂಭ ; (ಅಂತಹ ಉಪಕ್ರಮಕ್ಕೆ ವಿಷಯವಾದದ್ದು (ನ) : ನಂದೋಪಕ್ರಮಂ ದ್ರೋಣಃ).

೭೨೨-೭೨೩. ಯಜ್ಞ, ಸವ, ಅಧ್ವರ, ಯಾಗ, ಸಪ್ತತಂತು, ಮಖ, ಕ್ರತು (ಪು)=ಯಜ್ಞ. ಪಾಠ (ಪು)=ವೇದಪಾಠ, ಬ್ರಹ್ಮಯಜ್ಞ. ಹೋಮ (ಪು)=ಹವನ, ದೇವಯಜ್ಞ. ಅತಿಥಿ ಸಪರ್ಯಾ (ಸ್ತ್ರೀ)=ಅತಿಥಿಸತ್ಕಾರ, ಮನುಷ್ಯಯಜ್ಞ. ತರ್ಪಣ (ನ)=ಪಿತೃತರ್ಪಣ, ಪಿತೃಯಜ್ಞ. ಬಲಿ (ಪು)=ಭೂತಬಲಿ, ಭೂತಯಜ್ಞ. ಈ ವೇದಪಾಠಾದಿಗಳು ಪಂಚಮಹಾಯಜ್ಞಗಳು.

ಆಸ್ಥಾನೀ ಕ್ಲೀಬಮಾಸ್ಥಾನಂ ಸ್ತ್ರೀನಪುಂಸಕಯೋಸ್ಸದಃ ।
ಪ್ರಾಗ್ವಂಶಃ ಪ್ರಾಗ್ಘವಿರ್ಗೇಹಾತ್ಸದಸ್ಯಾ ವಿಧಿದರ್ಶಿನಃ ॥ ೭೨೪
ಸಭಾಸದಸ್ಸಭಾಸ್ತಾರಾಸ್ಸಭ್ಯಾಸ್ಸಾಮಾಜಿಕಾಶ್ಚ ತೇ ।
ಅಧ್ವರ್ಯೂದ್ಗಾತೃಹೋತಾರೋ ಯಜುಸ್ಸಾಮರ್ಗ್ವಿದಃ ಕ್ರಮಾತ್ ॥ ೭೨೫
ಆಗ್ನೀಧ್ರಾದ್ಯಾ ಧಿಷ್ಣ್ಯೈರ್ವಾರ್ಯಾ ಋತ್ವಿಜೋ ಯಾಜಕಾಶ್ಚ ತೇ ।
ವೇದಿಃ ಪರಿಷ್ಕೃತಾ ಭೂಮಿಃ ಸಮೇ ಸ್ಥಂಡಿಲಚತ್ವರೇ ॥ ೭೨೬
ಚಷಾಲೋ ಯೂಪಕಟಕಃ ಕುಂಬಾ ಸುಗಹನಾ ವೃತಿಃ ।
ಯೂಪಾಗ್ರಂ ತರ್ಮ ನಿರ್ಮಂಥ್ಯದಾರುಣಿ ತ್ವರಣಿರ್ದ್ವಯೋಃ ॥ ೭೨೭

೭೨೩-೭೨೪. ಸಮಜ್ಯಾ, ಪರಿಷದ್, ಗೋಷ್ಠೀ, ಸಭಾ, ಸಮಿತಿ, ಸಂಸದ್, ಆಸ್ಥಾನೀ (ಸ್ತ್ರೀ), ಆಸ್ಥಾನ (ನ), ಸದಸ್ (ಸ್ತ್ರೀ. ನ)=ಸಭೆ. ಪ್ರಾಗ್ವಂಶ (ಪು)=ಹೋಮದ್ರವ್ಯಶಾಲೆಯ ಪೂರ್ವ ದಿಕ್ಕಿನಲ್ಲಿ ಯಜಮಾನಾದಿಗಳು ಇರುವ ಸ್ಥಳ. ಸದಸ್ಯ, ವಿಧಿದರ್ಶಿನ್ (ಪು)=ಯಾಗದಲ್ಲಿ ನ್ಯೂನಾತಿರೇಕಗಳು ಬಾರದಂತೆ ನೋಡಿಕೊಳ್ಳುವ ಋತ್ವಿಜನು.

೭೨೫. ಸಭಾಸದ್, ಸಭಾಸ್ತಾರ, ಸಭ್ಯ, ಸಾಮಾಜಿಕ (ಪು)=ಸಭೆಯಲ್ಲಿರುವವನು. ಅಧ್ವರ್ಯು (ಪು)= ಯಜುರ್ವೇದವನ್ನು ಬಲ್ಲ ಋತ್ವಿಜ. ಉದ್ಗಾತೃ (ಪು)=ಸಾಮವೇದವನ್ನು ಬಲ್ಲ ಋತ್ವಿಜ. ಹೋತೃ (ಪು)=ಋಗ್ವೇದವನ್ನು ಬಲ್ಲ ಋತ್ವಿಜ.

೭೨೬. ಋತ್ವಿಜ್, ಯಾಜಕ (ಪು)=ಯಜಮಾನನಿಂದ ದಕ್ಷಿಣೆ ಮೊದಲಾದ್ದನ್ನು ಪಡೆದು ಯಜ್ಞವನ್ನು ನಿರ್ವಹಿತಕ್ಕ ಆಗ್ನೀಧ್ರಾ[1]ದಿಗಳು. ವೇದಿ (ಸ್ತ್ರೀ)=ಯಾಗಕ್ಕಾಗಿ ಚತುರಸ್ರವಾಗಿ ಸಂಸ್ಕರಿಸಲ್ಪಟ್ಟ ಸ್ಥಳ. ಸ್ಥಂಡಿಲ, ಚತ್ವರ (ನ)=ಅಗ್ನಿಹೋತ್ರವನ್ನಿಡುವುದಕ್ಕಾಗಿ ಸಂಸ್ಕರಿಸಲ್ಪಟ್ಟ ಸ್ಥಳ.

೭೨೭. ಚಷಾಲ. ಯೂಪಕಟಕ (ಪು)=ಯೂಪಸ್ತಂಭದ ಶಿರೋಭಾಗದಲ್ಲಿರುವ ಮರದ ಬಳೆ. ಕುಂಬಾ (ಸ್ತ್ರೀ)=ಯಜ್ಞಶಾಲೆಯ ಸುತ್ತಲೂ ಕಟ್ಟಿದ ಬೇಲಿ. ತರ್ಮನ್ (ನ)=ಯೂಪ ಸ್ತಂಭದ ತುದಿ. ಅರಣಿ (ಪು.ಸ್ತ್ರೀ)=ಯಾಗಾಗ್ನಿಯನ್ನು ಮಥಿಸಿ ತೆಗೆಯುವ ಶಮೀವೃಕ್ಷದ ತುಂಡು.

---

1 ಒಟ್ಟು ಋತ್ವಿಜರ ಸಂಖ್ಯೆ ಹದಿನಾರು : ಆಗ್ನೀಧ್ರ, ಬ್ರಹ್ಮನ್, ಉದ್ಗಾತೃ, ಹೋತೃ, ಅಧ್ವರ್ಯು, ಬ್ರಾಹ್ಮಣಾಚ್ಛಂಸಿನ್, ಅಚ್ಛಾವಾಕ, ನೇಷ್ಟೃ, ಪೋತೃ, ಪ್ರಸ್ತೋತೃ, ಪ್ರತಿಹರ್ತೃ, ಪ್ರತಿಪ್ರಸ್ಥಾತೃ, ಉನ್ನೇತೃ, ಗ್ರಾವಸ್ತುತ್, ಮೈತ್ರಾವರುಣೆ ಮತ್ತು ಸುಬ್ರಹ್ಮಣ್ಯ (ಪು).



ದಕ್ಷಿಣಾಗ್ನಿರ್ಗಾರ್ಹಪತ್ಯಾಹವನೀಯೌ ತ್ರಯೋಽಗ್ನಯಃ ।
ಅಗ್ನಿತ್ರಯಮಿದಂ ತ್ರೇತಾ ಪ್ರಣೀತಃ ಸಂಸ್ಕೃತೋಽನಲಃ ॥ ೭೨೮
ಸಮೂಹ್ಯಃ ಪರಿಚಾಯ್ಯೋಪಚಾಯ್ಯಾವಗ್ನೌ ಪ್ರಯೋಗಿಣಃ ।
ಯೋ ಗಾರ್ಹಪತ್ಯಾದಾನೀಯ ದಕ್ಷಿಣಾಗ್ನಿಃ ಪ್ರಣೀಯತೇ ॥ ೭೨೯
ತಸ್ಮಿನ್ ಆನಾಯ್ಯೋಽಥಾಗ್ನಾಯೀ ಸ್ವಾಹಾ ಚ ಹುತಭುಕ್ಪ್ರಿಯಾ ।
ಋಕ್ಸಾಮಿಧೇನೀ ಧಾಯ್ಯಾ ಚ ಯಾ ಸ್ಯಾದಗ್ನಿಸಮಿಂಧನೇ ॥ ೭೩೦
ಗಾಯತ್ರೀಪ್ರಮುಖಂ ಛಂದೋ ಹವ್ಯಪಾಕೇ ಚರುಃ ಪುಮಾನ್ ।
ಆಮಿಕ್ಷಾ ಸಾ ಶೃತೋಷ್ಣೇ ಯಾ ಕ್ಷೀರೇ ಸ್ಯಾದ್ದಧಿಯೋಗತಃ ॥ ೭೩೧
ಧವಿತ್ರಂ ವ್ಯಜನಂ ತದ್ಯದ್ರಚಿತಂ ಮೃಗಚರ್ಮಣಾ ।
ಪೃಷದಾಜ್ಯಂ ಸದಧ್ಯಾಜ್ಯೇ ಪರಮಾನ್ನಂ ತು ಪಾಯಸಮ್ ॥ ೭೩೨

೭೨೮. ದಕ್ಷಿಣಾಗ್ನಿ (ಪು)=ವೇದಿಯ ದಕ್ಷಿಣದಲ್ಲಿ ಪ್ರತಿಷ್ಠಿತವಾಗುವ ಅಗ್ನಿ. ಗಾರ್ಹಪತ್ಯ (ಪು)=ಯಜಮಾನನಿಂದ ಮೊದಲೇ ಸಂಸ್ಕೃತವಾದ ಅಗ್ನಿ, ಆಹವನೀಯ (ಪು)=ಯಜ್ಞ ಸಮಾಪ್ತಿಪರ್ಯಂತವೂ ಉಪಯುಕ್ತವಾದ ಅಗ್ನಿ. ತ್ರೇತಾ (ಸ್ತ್ರೀ)=ದಕ್ಷಿಣಾಗ್ನಿ ಮುಂತಾದ ಮೂರು ಅಗ್ನಿಗಳು. ಪ್ರಣೀತ (ಪು)=ಸಂಸ್ಕೃತವಾದ ಅಗ್ನಿ.

೭೨೯. -೭೩೦. ಸಮೂಹ್ಯ, ಪರಿಚಾಯ್ಯ, ಉಪಚಾಯ್ಯ (ಪು)=ಅಗ್ನಿವಿಶೇಷ ; ಅಗ್ನಿವಿಶೇಷವನ್ನಿಡುವ ಸ್ಥಳ. ಆನಾಯ್ಯ (ಪು)=ಗಾರ್ಹಪತ್ಯಾಗ್ನಿಯಿಂದ ತೆಗೆದು ದಕ್ಷಿಣಾಗ್ನಿಯಾಗಿ ಸಂಸ್ಕರಿಸಲ್ಪಡುವ ಅಗ್ನಿ. ಅಗ್ನಾಯೀ, ಸ್ವಾಹಾ, ಹುತಭುಕ್ ಪ್ರಿಯಾ (ಸ್ತ್ರೀ)=ಅಗ್ನಿಯ ಪತ್ನಿ. ಸಾಮಿಧೇನೀ, ಧಾಯ್ಯಾ (ಸ್ತ್ರೀ)=ಅಗ್ನಿಯನ್ನು ಪ್ರಜ್ವಲಿಸುವುದಕ್ಕಾಗಿ ಹೇಳಬೇಕಾದ ಋಕ್ಕು.

೭೩೧. ಛಂದಸ್ (ನ)=ಗಾಯತ್ರೀ ಜಗತೀ ಮುಂತಾದ ಛಂದಸ್ಸು. ಚರು (ಪು)=ಹೋಮ ಯೋಗ್ಯವಾದ ಪಕ್ವಾನ್ನ. ಆಮಿಕ್ಷಾ (ಸ್ತ್ರೀ)=ಬಿಸಿ ಹಾಲಿಗೆ ಮೊಸರನ್ನು ಸೇರಿಸಿದಾಗ ಒಡೆದು ಗಟ್ಟಿಯಾಗಿ ಉಳಿಯುವ ಭಾಗ.

೭೩೨. ಧವಿತ್ರ (ನ)=ಅಗ್ನಿಯನ್ನು ಪ್ರಜ್ವಲಿಸುವುದಕ್ಕಾಗಿ ಕೃಷ್ಣಾಜಿನದಿಂದ ರಚಿಸಿದ ಬೀಸಣಿಗೆ. ಪೃಷದಾ[1]ಜ್ಯ (ನ) ಮೊಸರು ಬೆರೆತ ತುಪ್ಪ. ಪರಮಾನ್ನ, ಪಾಯಸ (ನ)=ಹಾಲನ್ನು ಸೇರಿಸಿ ಪಕ್ವಮಾಡಿದ ಅನ್ನ.

---

1 ಪೃಷಾತಕ (ನ) ಎಂಬ ಶಬ್ದಾಂತರವೂ ಇದೆ.

ಹವ್ಯಕವ್ಯೇ ದೈವಪಿತ್ರ್ಯೇ ತ್ವನ್ನೇ ಪಾತ್ರಂ ಸ್ರುವಾದಿಕಮ್ ।
ಧ್ರುವೋಪಭೃಜ್ಜುಹೂರ್ನಾ ತು ಸ್ರುವೋ ಭೇದಾಸ್ಸ್ರುಚಃ ಸ್ತ್ರಿಯಃ ॥ ೭೩೩
ಉಪಾಕೃತಃ ಪಶುರಸೌ ಯೋಽಭಿಮಂತ್ರ್ಯ ಕ್ರತೌ ಹತಃ ।
ಪರಂಪರಾಕಂ ಶಮನಂ ಪ್ರೋಕ್ಷಣಂ ಚ ವಧಾರ್ಥಕಮ್ ॥ ೭೩೪
ವಾಚ್ಯಲಿಂಗಾಃ ಪ್ರಮೀತೋಪಸಂಪನ್ನಪ್ರೋಕ್ಷಿತಾ ಹತೇ ।
ಸಾಂನಾಯ್ಯಂ ಹವಿರಗ್ನೌ ತು ಹುತಂ ತ್ರಿಷು ವಷಟ್ಕೃತಮ್ ॥ ೭೩೫
ದೀಕ್ಷಾಂತೋಽವಭೃಥೋ ಯಜ್ಞೇ ತತ್ಕರ್ಮಾರ್ಹಂ ತು ಯಜ್ಞಿಯಮ್ ।
ತ್ರಿಷ್ವಥ ಕ್ರತುಕರ್ಮೇಷ್ಟಂ ಪೂರ್ತಂ ಖಾತಾದಿಕರ್ಮ ಯತ್ ॥ ೭೩೬
ಅಮೃತಂ ವಿಘಸೋ ಯಜ್ಞಶೇಷಭೋಜನಶೇಷಯೋಃ ।
ತ್ಯಾಗೋ ವಿಹಾಪಿತಂ ದಾನಮುತ್ಸರ್ಜನವಿಸರ್ಜನೇ ॥ ೭೩೭
ವಿಶ್ರಾಣನಂ ವಿತರಣಂ ಸ್ಪರ್ಶನಂ ಪ್ರತಿಪಾದನಮ್ ।
ಪ್ರಾದೇಶನಂ ನಿರ್ವಪಣಮಪವರ್ಜನಮಂಹತಿಃ ॥ ೭೩೮

---

೭೩೩. ಹವ್ಯ (ನ)=ದೇವತೆಗಳಿಗೆ ಅರ್ಪಿಸಬೇಕಾದ ಅನ್ನ. ಕವ್ಯ (ನ)=ಪಿತೃಗಳಿಗೆ ಅರ್ಪಿಸಬೇಕಾದ ಅನ್ನ. ಪಾತ್ರ (ನ)=ಯಜ್ಞೋಪಯೋಗಿಯಾದ ಸ್ರುವಾದಿ ಸಲಕರಣೆ. ಮುಂದೆ ಹೇಳತಕ್ಕವು ವಿಭಿನ್ನ ಯಜ್ಞ ಪಾತ್ರೆಗಳು : ಧ್ರುವಾ, ಉಪಭೃತ್, ಜುಹೂ (ಸ್ತ್ರೀ), ಸ್ರುವ, (ಪು), ಸ್ರುಚ್ (ಸ್ತ್ರೀ).

೭೩೪. ಉಪಾಕೃತ (ಪು)=ಯಜ್ಞದಲ್ಲಿ ಮಂತ್ರಪೂರ್ವಕವಾಗಿ ವಧಿಸಲ್ಪಡುವ ಪಶು. ಪರಂಪರಾಕ, ಶಮನ (ಶಸನ), ಪ್ರೋಕ್ಷಣ (ನ)=ಯಜ್ಞಾರ್ಥವಾಗಿ ಪಶುವಧೆ.

೭೩೫. ಪ್ರಮೀತ, ಉಪಸಂಪನ್ನ, ಪ್ರೋಕ್ಷಿತ (ಪು. ಸ್ತ್ರೀ. ನ. ವಿಶೇಷ್ಯ ನಿಘ್ನ)=ಯಜ್ಞದಲ್ಲಿ ಹತವಾದ ಪಶು. ಸಾಂನಾಯ್ಯ, ಹವಿಸ್ (ನ)=ಹವಿಸ್ಸು. ಹುತ, ವಷಟ್ಕೃತ (ಪು. ಸ್ತ್ರೀ.ನ)=ಹೋಮಮಾಡಲ್ಪಟ್ಟದ್ದು.

೭೩೬. ಅವಭೃಥ (ಪು)=ಯಜ್ಞ ಸಮಾಪ್ತಿಯಲ್ಲಿ ಮಾಡಬೇಕಾದ ಸ್ನಾನ. ಯಜ್ಞಿಯ (ಪು. ಸ್ತ್ರೀ. ನ)=ಯಜ್ಞಯೋಗ್ಯವಾದ ವಸ್ತು. ಇಷ್ಟ (ನ)=ಯಜ್ಞದಲ್ಲಿ ಹೋಮದಾನಾದಿ ಕ್ರಿಯೆ. ಪೂರ್ತ (ನ)=ಭಾವಿ ಕೆರೆ ದೇವಾಲಯಗಳ ನಿರ್ಮಾಣ-ಮುಂತಾದ ಪುಣ್ಯಕರ್ಮ.

೭೩೭-೭೩೮. ಅಮೃತ (ನ)=ಯಜ್ಞದಲ್ಲಿ ಅವಶಿಷ್ಟವಾದ ಹವಿಸ್ಸು. ವಿಘಸ (ಪು)=ಯಜ್ಞದಲ್ಲಿ ಅತಿಥಿಗಳು ಭುಂಜಿಸಿದಮೇಲೆ ಅವಶಿಷ್ಟವಾದ ಅನ್ನ. ತ್ಯಾಗ (ಪು), ವಿಹಾಪಿತ



ಮೃತಾರ್ಥಂ ತದಹೇ ದಾನಂ ತ್ರಿಷು ಸ್ಯಾದೌರ್ಧ್ವದೈಹಿಕಮ್ ।
ಪಿತೃದಾನಂ ನಿವಾಪಸ್ಸ್ಯಾತ್ ಶ್ರಾದ್ಧಂ ತತ್ಕರ್ಮ ಶಾಸ್ತ್ರತಃ ॥ ೭೩೯
ಅನ್ವಾಹಾರ್ಯಂ ಮಾಸಿಕೇಂಽಶೋಽಷ್ಟಮೋಽಹ್ನಃ ಕುತಪೋ ಽಸ್ತ್ರಿಯಾಂ ।
ಪರ್ಯೇಷಣಾ ಪರೀಷ್ಟಿಶ್ಚಾನ್ವೇಷಣಾ ಚ ಗವೇಷಣಾ ॥ ೭೪೦
ಸನಿಸ್ತ್ವಧ್ಯೇಷಣಾ ಯಾಚ್ಞಾಭಿಶಸ್ತಿರ್ಯಾಚನಾರ್ಥನಾ ।
ಷಟ್ತು ತ್ರಿಷ್ವರ್ಘ್ಯಮರ್ಘಾರ್ಥೇ ಪಾದ್ಯಂ ಪಾದಾಯ ವಾರಿಣಿ ॥ ೭೪೧
ಕ್ರಮಾದಾತಿಥ್ಯಾತಿಥೇಯೇ ಅತಿಥ್ಯರ್ಥೇಽತ್ರ ಸಾಧುನಿ ।
ಸ್ಯುರಾವೇಶಿಕ ಆಗಂತುರತಿಥಿರ್ನಾ ಗೃಹಾಗತೇ ॥ ೭೪೨

---

(ವಿಹಾಯಿತ), ದಾನ, ಉತ್ಸರ್ಜನ, ವಿಸರ್ಜನ, ವಿಶ್ರಾಣನ, ವಿತರಣ, ಸ್ಪರ್ಶನ, ಪ್ರತಿಪಾದನ, ಪ್ರಾದೇಶನ, ನಿರ್ವಪಣ, ಅಪವರ್ಜನ (ನ), ಅಂಹತಿ (ಸ್ತ್ರೀ)=ದಾನ.

೭೩೯. ಔರ್ಧ್ವದೈಹಿಕ (ಪು.ಸ್ತ್ರೀ.ನ) (-ಸ್ತ್ರೀ. ಔರ್ಧ್ವದೈಹಿಕೀ)=ಮೃತನಿಗೋಸ್ಕರ ಸಪಿಂಡೀಕರಣದವರೆಗೆ ಮಾಡುವ ಜಲಪಿಂಡಾದಿ ದಾನ. ಪಿತೃದಾನ (ನ, ನಿವಾಪ (ಪು)=ಸಪಿಂಡವಾದಮೇಲೆ ಪಿತೃಗಳಿಗೋಸ್ಕರ ಮಾಡುವ ದಾನ. ಶ್ರಾದ್ಧ (ನ)=ವಿಧಿಪೂರ್ವಕವಾಗಿ ಗೊತ್ತಾದ ದೇಶಕಾಲಗಳಲ್ಲಿ ಮಾಡುವ ಪಿತೃಕರ್ಮ.

೭೪೦. ಅನ್ವಾಹಾರ್ಯ, ಮಾಸಿಕ (ನ)=ಪ್ರತಿಮಾಸದಲ್ಲಿಯೂ ಮಾಡುವ ಪಿತೃಶ್ರಾದ್ಧ. ಕುತಪ (ಪು. ನ)=ಹಗಲಿನ ಪ್ರಮಾಣವನ್ನು ಹದಿನೈದುಭಾಗಗಳಾಗಿ ಮಾಡಿದಾಗ ಎಂಟನೆಯ ಭಾಗದ ಕಾಲ. ಪರ್ಯೇಷಣಾ, ಪರೀಷ್ಟಿ, ಅನ್ವೇಷಣಾ, ಗವೇಷಣಾ (ಸ್ತ್ರೀ)= ವಿಹಿತಕಾರ್ಯಕ್ಕಾಗಿ ಬ್ರಾಹ್ಮಣಾದಿಗಳನ್ನು ಹುಡುಕುವುದು.

೭೪೧. ಸನಿ, ಅಧ್ಯೇಷಣಾ (ಸ್ತ್ರೀ)=ವಿಜ್ಞಾಪನೆ, ಕಾರ್ಯವನ್ನು ನಡೆಸಿಕೊಡುವಂತೆ ಹಿರಿಯರನ್ನು ಕೇಳಿಕೊಳ್ಳುವುದು. ಯಾಚ್ಞಾ, ಅಭಿಶಸ್ತಿ, ಯಾಚನಾ, ಅರ್ಥನಾ (ಸ್ತ್ರೀ)=ಪ್ರಾರ್ಥನೆ, ಬೇಡಿಕೆ. ಮುಂದೆ ಹೇಳುವ ಅರ್ಘ್ಯಶಬ್ದದಿಂದ ಆಗಂತು ಶಬ್ದದವರೆಗೆ ಆರು ಶಬ್ದಗಳು ಅರ್ಥಾನುಸಾರವಾಗಿ ಮೂರು ಲಿಂಗಗಳಲ್ಲಿ ಇರುತ್ತವೆ. ಅರ್ಘ್ಯ (ನ)=ಪೂಜಾರ್ಥವಾದ ಜಲ ; ಪತ್ರ ಪುಷ್ಪ ಮುಂತಾದ ಪೂಜಾದ್ರವ್ಯ. ಪಾದ್ಯ (ನ)=ಕಾಲನ್ನು ತೊಳೆಯುವುದಕ್ಕಾಗಿ ಕೊಡುವ ನೀರು.

೭೪೨. ಆತಿಥ್ಯ (ನ)=ಅತಿಥಿಗೋಸ್ಕರ ಕಲ್ಪಿಸುವ ಅನ್ನಾದಿದ್ರವ್ಯ. ಆತಿಥೇಯ (ನ) (ಸ್ತ್ರೀ. ಆತಿಥೇಯೀ)= ಅತಿಥಿಗೆ ಹಿತಕರವಾದ ಸತ್ಕಾರ ; ಅತಿಥಿಯನ್ನು ಸತ್ಕರಿಸತಕ್ಕವನು. ಆವೇಶಿಕ, ಆಗಂತು (ಪು) (-ಸ್ತ್ರೀ.ಆವೇಶಿಕೀ), ಅತಿಥಿ (ಪು)=ಮನೆಗೆ ಬಂದವನು.

ಪೂಜಾ ನಮಸ್ಯಾಪಚಿತಿಸ್ಸಪರ್ಯಾರ್ಚಾರ್ಹಣಾಸ್ಸಮಾಃ ।
ವರಿವಸ್ಯಾ ತು ಶುಶ್ರೂಷಾ ಪರಿಚರ್ಯಾಪ್ಯುಪಾಸನಾ ॥ ೭೪೩
ವ್ರಜ್ಯಾಟಾಟ್ಯಾ ಪರ್ಯಟನಂ ಚರ್ಯಾತ್ವೀರ್ಯಾಪಥಿ ಸ್ಥಿತಿಃ ।
ಉಪಸ್ಪರ್ಶಸ್ತ್ವಾಚಮನಮಥ ಮೌನಮಭಾಷಣಮ್ ॥ ೭೪೪
ಆನುಪೂರ್ವೀ ಸ್ತ್ರಿರಾಯಮಾವೃತ್ಪರಿಪಾಟಿ[1]ರನುಕ್ರಮಃ ।
ಪರ್ಯಾಯಶ್ಚಾತಿಪಾತಸ್ತು ಸ್ಯಾತ್ಪರ್ಯಯ ಉಪಾತ್ಯಯಃ ॥ ೭೪೫
ನಿಯಮೋ ವ್ರತಮಸ್ತ್ರೀ ತಚ್ಚೋಪವಾಸಾದಿ ಪುಣ್ಯಕಮ್ ।
ಔಪವಸ್ತಂ ತೂಪವಾಸೋ[2] ವಿವೇಕಃ ಪೃಥಗಾತ್ಮತಾ ॥ ೭೪೬
ಸ್ಯಾದ್ಬ್ರಹ್ಮವರ್ಚಸಂ ವೃತ್ತಾಧ್ಯಯನರ್ದ್ಧಿರಥಾಂಜಲಿಃ ।
ಪಾಠೇ ಬ್ರಹ್ಮಾಂಜಲಿಃ ಪಾಠೇ ವಿಪ್ರುಷೋ ಬ್ರಹ್ಮಬಿಂದವಃ ॥ ೭೪೭

---

೭೪೩. ಪೂಜಾ, ನಮಸ್ಯಾ, ಅಪಚಿತಿ, ಸಪರ್ಯಾ, ಅರ್ಚಾ, ಅರ್ಹಣಾ (ಸ್ತ್ರೀ)=ಪೂಜೆ, ಸತ್ಕಾರ. ವರಿವಸ್ಯಾ, ಶುಶ್ರೂಷಾ, ಪರಿಚರ್ಯಾ, ಉಪಾಸನಾ (ಸ್ತ್ರೀ)=ಸೇವೆ.

೭೪೪. ವ್ರಜ್ಯಾ, ಅಟಾಟ್ಯಾ (ಸ್ತ್ರೀ), ಪರ್ಯಟನ (ನ)=ತಿರುಗಾಟ. ಚರ್ಯಾ, ಈರ್ಯಾ (ಸ್ತ್ರೀ)=ಸನ್ಮಾರ್ಗದಲ್ಲಿ ಇರುವುದು. ಉಪಸ್ಪರ್ಶ (ಪು), ಆಚಮನ (ನ)=ಆಚಮನ. ಮೌನ, ಅಭಾಷಣ (ನ)=ಮಾತಾಡದಿರುವುದು.

೭೪೫. ಆನುಪೂರ್ವೀ (ಸ್ತ್ರೀ. ನ) (-ನ. ಆನುಪೂರ್ವ್ಯ), ಆವೃತ್, ಪರಿಪಾಟಿ[1] (ಸ್ತ್ರೀ), ಅನುಕ್ರಮ, ಪರ್ಯಾಯ (ಪು)=ಕ್ರಮ (Regular Succession). ಅತಿಪಾತ, ಪರ್ಯಯ, ಉಪಾತ್ಯಯ (ಪು)=ಕ್ರಮದ ಉಲ್ಲಂಘನೆ.

೭೪೬. ನಿಯಮ (ಪು), ವ್ರತ (ಪು. ನ)=ಶಾಸ್ತ್ರೋಕ್ತವಾದ ಆಚರಣೆ. ಪುಣ್ಯಕ (ನ)=ಉಪವಾಸಾದಿಪುಣ್ಯವ್ರತ. ಔಪವಸ್ತ(ನ), ಉಪವಾ[2]ಸ (ನ)=ಊಟಮಾಡದಿರುವುದು. ವಿವೇಕ (ಪು)=ಪ್ರಕೃತಿಪುರುಷರ ವಿವೇಚನಾಜ್ಞಾನ.

೭೪೭. ಬ್ರಹ್ಮವರ್ಚಸ (ನ)=ಅನುಷ್ಠಾನ ಮತ್ತು ವೇದಾಧ್ಯಯನದಿಂದುಂಟಾದ ತೇಜಸ್ಸು. ಬ್ರಹ್ಮಾಂಜಲಿ (ಪು)=ವೇದಾಧ್ಯಯನ ಮಾಡುವಾಗ ಜೋಡಿಸಿದ ಕೈ. ಬ್ರಹ್ಮಬಿಂದು (ಪು)= ವೇದಪಾಠದ ಸಮಯದಲ್ಲಿ ಬಾಯಿಂದ ಹೊರಡುವ ತುಂತುರು.

---

[1] ಪರಿಪಾಟೀ ಎಂಬ ಈಕಾರಾಂತರವೂ ಇದೆ.

[2] ಉಪೋಷಿತ, ಉಪೋಷಣ (ನ) ಎಂಬ ಶಬ್ದಾಂತರಗಳೂ ಇವೆ.



ಧ್ಯಾನಯೋಗಾಸನೇ ಬ್ರಹ್ಮಾಸನಂ ಕಲ್ಪೇ ವಿಧಿಕ್ರಮೌ ।
ಮುಖ್ಯಃ ಸ್ಯಾತ್ಪ್ರಥಮಃ ಕಲ್ಪೋಽನುಕಲ್ಪಸ್ತು ತತೋಽಧಮಃ ॥ ೭೪೮
ಸಂಸ್ಕಾರಪೂರ್ವಂ ಗ್ರಹಣಂ ಸ್ಯಾದುಪಾಕರಣಂ ಶ್ರುತೇಃ ।
ಸಮೇ ತು ಪಾದಗ್ರಹಣಮಭಿವಾದನಮಿತ್ಯುಭೇ ॥ ೭೪೯
ಭಿಕ್ಷುಃ ಪರಿವ್ರಾಟ್ಕರ್ಮಂದೀ ಪಾರಾಶರ್ಯಪಿ ಮಸ್ಕರೀ ।
ತಪಸ್ವೀ ತಾಪಸಃ ಪಾರಿಕಾಂಕ್ಷೀ ವಾಚಂಯಮೋ ಮುನಿಃ ॥ ೭೫೦
ತಪಃ ಕ್ಲೇಶಸಹೋ ದಾಂತೋ ವರ್ಣಿನೋ ಬ್ರಹ್ಮಚಾರಿಣಃ ।
ಋಷಯಸ್ಸತ್ಯವಚಸಃ ಸ್ನಾತಕಸ್ತ್ವಾಪ್ಲುತವ್ರತೀ ॥ ೭೫೧
ಯೇ ನಿರ್ಜಿತೇಂದ್ರಿಯಗ್ರಾಮಾ ಯತಿನೋ ಯತಯಶ್ಚ ತೇ ।
ಯಃ ಸ್ಥಂಡಿಲೇ ವ್ರತವಶಾಚ್ಛೇತೇ ಸ್ಥಂಡಿಲಶಾಯ್ಯಸೌ ॥ ೭೫೨

---

೭೪೮. ಬ್ರಹ್ಮಾಸನ (ನ)=ವೇದಾಧ್ಯಯನಮಾಡುವಾಗ ಕುಳಿತುಕೊಳ್ಳುವ ಸ್ಥಿತಿ, ಸ್ವಸ್ತಿಕಾದ್ಯಾಸನ. ಕಲ್ಪ, ವಿಧಿ, ಕ್ರಮ (ಪು)=ಶಾಸ್ತ್ರೋಕ್ತವಾದ ವಿಧಾನ. ಮುಖ್ಯಕಲ್ಪ (ಪು)=ಮೊದಲು ಹೇಳಿದ ಪ್ರಧಾನವಿಧಿ. ಅನುಕಲ್ಪ (ಪು)=ಮುಖ್ಯವು ಇಲ್ಲದಾಗ ಹೇಳಿದ ಗೌಣವಿಧಿ.

೭೪೯. ಉಪಾಕರಣ (ನ)=ಉಪನಯನಪೂರ್ವಕವಾಗಿ ವೇದಪಾಠದ ಆರಂಭ. ಪಾದಗ್ರಹಣ, ಅಭಿವಾದನ (ನ)=ಕಾಲಮುಟ್ಟಿ ವಿಧಿವತ್ತಾಗಿ ನಮಸ್ಕರಿಸುವುದು.

೭೫೦. ಭಿಕ್ಷು, ಪರಿವ್ರಾಜ್, ಕರ್ಮಂದಿನ್, ಪಾರಾಶರಿನ್, ಮಸ್ಕರಿನ್ (ಪು)=ಸಂನ್ಯಾಸಿ. ತಪಸ್ವಿನ್, ತಾಪಸ, ಪಾರಿಕಾಂಕ್ಷಿನ್, ವಾಚಂಯಮ, ಮುನಿ (ಪು)=ತಪಸ್ವಿ. ಭಿಕ್ಷು ಮೊದಲಾದ ಹತ್ತು ಶಬ್ದಗಳು ಸಂನ್ಯಾಸಿ ವಾಚಕಗಳೆಂದು ಕೆಲವರು.

೭೫೧. ದಾಂತ (ಪು)=ತಪಸ್ಸಿನ ಕಷ್ಟವನ್ನು ಸಹಿಸಿಕೊಳ್ಳುವವನು. ವರ್ಣಿನ್, ಬ್ರಹ್ಮಚಾರಿನ್ (ಪು)=ಬ್ರಹ್ಮಚಾರಿ. ಋಷಿ, ಸತ್ಯವಚಸ್ (ಪು)=ಋಷಿ. ಸ್ನಾತಕ, ಆಪ್ಲುತವ್ರತಿನ್ (ಪು)=ವೇದವ್ರತವನ್ನು ಸಮಾಪ್ತಿಗೊಳಿಸಿ ಇನ್ನೂ ಆಶ್ರಮಾಂತರವನ್ನು ಸ್ವೀಕರಿಸದೆ ಇರತಕ್ಕವನು.

೭೫೨-೭೫೩. ಯತಿನ್, ಯತಿ (ಪು)=ಇಂದ್ರಿಯಗಳನ್ನು ಜಯಿಸಿದವನು. ಸ್ಥಂಡಿಲ ಶಾಯಿನ್, ಸ್ಥಾಂಡಿಲ (ಪು)=ವ್ರತಕ್ಕಾಗಿ ಬರಿಯ ನೆಲದಮೇಲೆ ಮಲಗತಕ್ಕವನು. ವಿರಜಸ್ತ

ಸ್ಥಾಂಡಿಲಶ್ಚಾಥ ವಿರಜಸ್ತಮಸಃ ಸ್ಯುರ್ದ್ವಯಾತಿಗಾಃ ।
ಪವಿತ್ರಃ ಪ್ರಯತಃ ಪೂತಃ ಪಾಷಂಡಾಸ್ಸರ್ವಲಿಂಗಿನಃ ॥ ೭೫೩
ಪಾಲಾಶೋ ದಂಡ ಆಷಾಢೋ ವ್ರತೇ ರಾಂಭಸ್ತು ವೈಣವಃ ।
ಅಸ್ತ್ರೀ ಕಮಂಡಲುಃ ಕುಂಡೀ ವ್ರತಿನಾಮಾಸನಂ ಬೃಸೀ ॥ ೭೫೪
ಅಜಿನಂ ಚರ್ಮ ಕೃತ್ತಿಃ ಸ್ತ್ರೀ ಭೈಕ್ಷಂ ಭಿಕ್ಷಾಕದಂಬಕಮ್ ।
ಸ್ವಾಧ್ಯಾಯಸ್ಸ್ಯಾಜ್ಜಪಸ್ಸುತ್ಯಾಭಿಷವಸ್ಸವನಂ ಚ ಸಾ ॥ ೭೫೫
ಸರ್ವೈನಸಾಮಪಧ್ವಂಸಿ ಜಪ್ಯಂ ತ್ರಿಷ್ವಘಮರ್ಷಣಮ್ ।
ದರ್ಶಶ್ಚ ಪೌರ್ಣಮಾಸಶ್ಚ ಯಾಗೌ ಪಕ್ಷಾಂತಯೋಃ ಪೃಥಕ್ ॥ ೭೫೬
ಶರೀರಸಾಧನಾಪೇಕ್ಷಂ ನಿತ್ಯಂ ಯತ್ಕರ್ಮ ತದ್ ಯಮಃ ।
ನಿಯಮಸ್ತು ಸ ಯತ್ಕರ್ಮ ನಿತ್ಯಮಾಗಂತುಸಾಧನಮ್ ॥ ೭೫೭

---

ಮಸ್ (ಪು)=ರಜಸ್ತಮೋಗುಣಗಳನ್ನು ದಾಟಿದ ಸಾತ್ತ್ವಿಕ. ಪವಿತ್ರ, ಪ್ರಯತ, ಪೂತ (ಪು)=ಪರಿಶುದ್ಧ. ಪಾಷಂಡ (ಪಾಖಂಡ), ಸರ್ವಲಿಂಗಿನ್ (ಪು)=ವೇದಬಾಹ್ಯವಾದ ಮತವನ್ನು ನಂಬಿದವನು.

೭೫೪. ಆಷಾಢ (ಪು)=ಬ್ರಹ್ಮಚರ್ಯವ್ರತದಲ್ಲಿ ಹಿಡಿಯುವ ಮುತ್ತುಗದ ದಂಡ. ರಾಂಭ (ಪು)=ವ್ರತಸಮಯದಲ್ಲಿ ಹಿಡಿಯುವ ಬಿದಿರಿನ ದಂಡ. ಕಮಂಡಲು (ಪು. ನ), ಕುಂಡೀ (ಸ್ತ್ರೀ)=ವ್ರತನಿಷ್ಠರ ಜಲಪಾತ್ರೆ. ಬೃಸೀ (ಸ್ತ್ರೀ)=ವ್ರತನಿಷ್ಠರು ಕುಳಿತುಕೊಳ್ಳುವ ಆಸನ.

೭೫೫. ಅಜಿನ, ಚರ್ಮನ್ (ನ), ಕೃತ್ತಿ (ಸ್ತ್ರೀ)=ಚರ್ಮ. ಭೈಕ್ಷ (ನ)= ಭಿಕ್ಷೆಗಳ ಸಮೂಹ. ಸ್ವಾಧ್ಯಾಯ, ಜಪ (ಪು)=ವೇದಪಾಠ. ಸುತ್ಯಾ (ಸ್ತ್ರೀ), ಅಭಿಷವ (ಪು), ಸವನ (ನ)=ಕೋಮಲತೆಯಿಂದ ರಸವನ್ನು ಹಿಂಡುವುದು.

೭೫೬. ಅಘಮರ್ಷಣ (ಪು. ಸ್ತ್ರೀ. ನ) (-ಸ್ತ್ರೀ. ಅಘಮರ್ಷಣೀ)=ಸಕಲಪಾಪಗಳನ್ನು ಪರಿಹರಿಸುವ ಮಂತ್ರವಿಶೇಷ. ದರ್ಶ (ಪು)=ಅಮಾವಾಸ್ಯೆಯಲ್ಲಿ ಮಾಡಬೇಕಾದ ಯಾಗ. ಪೌರ್ಣಮಾಸ (ಪು)=ಹುಣ್ಣಿಮೆಯಲ್ಲಿ ಮಾಡಬೇಕಾದ ಯಾಗ.

೭೫೭. ಯಮ (ಪು)=ಯಾವಜ್ಜೀವವೂ ಮಾಡಬೇಕಾದ ಶರೀರಸಾಧ್ಯವಾದ ಕರ್ಮ - 'ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ' (ಪಾತಂ- ಸೂತ್ರ. ೨.೩೦). ನಿಯಮ (ಪು)=ನಿಮಿತ್ತವಿಶೇಷಗಳಿಂದ ಆಗಾಗ ಮಾಡಬೇಕಾದ ಕರ್ಮ—'ಶೌಚ ಸಂತೋಷತಪಃ ಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ' (ಪಾತಂ. ಸೂತ್ರ ೨.೩೨).



ಕ್ಷೌರಂ ತು ಭದ್ರಾಕರಣಂ ಮುಂಡನಂ ವಪನಂ ತಥಾ ।
ಉಪವೀತಂ ಯಜ್ಞಸೂತ್ರಂ ಪ್ರೋದ್ಧೃತೇ ದಕ್ಷಿಣೇ ಕರೇ ॥ ೭೫೮
ಪ್ರಾಚೀನಾವೀತಮನ್ಯಸ್ಮಿನ್ನಿವೀತಂ ಕಂಠಲಂಬಿತಮ್ ।
ಅಂಗುಲ್ಯಗ್ರೇ ತೀರ್ಥಂ ದೈವಂ ಸ್ವಲ್ಪಾಂಗುಲ್ಯೋರ್ಮೂಲೇ ಕಾಯಮ್ ॥ ೭೫೯
ಮಧ್ಯೇಽಙ್ಗುಷ್ಠಾಂಗುಲ್ಯೋಃ ಪಿತ್ರ್ಯಂ ಮೂಲೇ ತ್ವಂಗುಷ್ಠಸ್ಯ ಬ್ರಾಹ್ಮಮ್ ।
ಸ್ಯಾದ್ಬ್ರಹ್ಮಭೂಯಂ ಬ್ರಹ್ಮತ್ವಂ ಬ್ರಹ್ಮಸಾಯುಜ್ಯಮಿತ್ಯಪಿ ॥ ೭೬೦
ದೇವಭೂಯಾದಿಕಂ ತದ್ವತ್ ಕೃಚ್ಛ್ರಂ ಸಾಂತಪನಾದಿಕಮ್ ।
ಸಂನ್ಯಾಸವತ್ಯನಶನೇ ಪುಮಾನ್ ಪ್ರಾಯೋಽಥ ವೀರಹಾ ॥ ೭೬೧

---

೭೫೮. ಕ್ಷೌರ, ಭದ್ರಾಕರಣ, ಮುಂಡನ, ವಪನ (ನ)=ಕ್ಷೌರ. ಉಪವೀತ (ನ) ಬಲಗೈಯನ್ನು ಹೊರಗೆ ಚಾಚಿ ಎಡಹೆಗಲಿನಮೇಲೆ ಬರುವಂತೆ ಧರಿಸಿದ ಜನಿವಾರ.

೭೫೯. ಪ್ರಾಚೀನಾವೀತ (ನ)=ಎಡಗೈಯನ್ನು ಹೊರಗೆ ಚಾಚಿ ಬಲಹೆಗಲಿನ ಮೇಲೆ ಬರುವಂತೆ ಧರಿಸಿದ ಜನಿವಾರ. ನಿವೀತ (ನ)=ಕೊರಳಲ್ಲಿ ಮಾಲಾಕಾರವಾಗಿ ಧರಿಸಿದ ಜನಿವಾರ. ದೈವ (ನ)=ದೇವತೀರ್ಥ-ಬೆರಳುಗಳ ತುದಿಯಲ್ಲಿರುವ ತೀರ್ಥ (ಇದರಿಂದ ದೇವತರ್ಪಣವನ್ನು ಮಾಡತಕ್ಕದ್ದು. ಕಾಯ (ನ)=ಪ್ರಜಾಪತಿದೇವತಾಕವಾದ ತೀರ್ಥ-ಕಿರಿಬೆರಳು ಮತ್ತು ಅನಾಮಿಕೆಗಳ ಮೂಲದಲ್ಲಿರುವ ತೀರ್ಥ (ಇದರಿಂದ ಋಷಿತರ್ಪಣವನ್ನು ಮಾಡತಕ್ಕದ್ದು.)

೭೬೦. ಪಿತ್ರ್ಯ (ನ)=ಪಿತೃತೀರ್ಥ-ಅಂಗುಷ್ಠ ಮತ್ತು ತರ್ಜನೀ ಬೆರಳುಗಳ ಮಧ್ಯದಲ್ಲಿರುವ ತೀರ್ಥ (ಇದರಿಂದ ಪಿತೃತರ್ಪಣವನ್ನು ಮಾಡತಕ್ಕದ್ದು.) ಬ್ರಾಹ್ಮ (ನ)=ಬ್ರಹ್ಮತೀರ್ಥ-ಅಂಗುಷ್ಠದ ಮೂಲದಲ್ಲಿರುವ ತೀರ್ಥ(ಇದರಿಂದ ಬ್ರಹ್ಮತರ್ಪಣವನ್ನು ಮಾಡತಕ್ಕದ್ದು. ಬ್ರಹ್ಮಭೂಯ (ನ)—ಬ್ರಹ್ಮತ್ವ, ಬ್ರಹ್ಮಸಾಯುಜ್ಯ (ನ)=ಬ್ರಹ್ಮವಾಗುವುದು, ಸಾಯುಜ್ಯ ಮೋಕ್ಷ.

೭೭೧-೬೭೨. ದೇವಭೂಯ, ದೇವತ್ವ, ದೇವಸಾಯುಜ್ಯ (ನ)=ದೇವನಾಗುವುದು, ದೇವನಲ್ಲಿ ಸೇರಿಕೊಳ್ಳುವುದು. ಕೃಚ್ಛ್ರ (ನ)=ಸಾಂತಪನ ಚಾಂದ್ರಾಯಣ ಮುಂತಾದ ಪ್ರಾಯಶ್ಚಿತ್ತ. ಪ್ರಾಯ (ಪು)=ಸರ್ವಸಂಗತ್ಯಾಗಪೂರ್ವಕವಾಗಿ ಮರಣಪರ್ಯಂತ ಮಾಡುವ ಉಪವಾಸ. ವೀರಹನ್, ನಷ್ಟಾಗ್ನಿ (ಪು)=ಅಗ್ನಿಹೋತ್ರವನ್ನು ಬಿಟ್ಟವನು. ಕುಹನಾ (ಸ್ತ್ರೀ)=ಧನಾದಿಲೋಭದಿಂದ ನಟಿಸುವ ಧ್ಯಾನಮೌನಾದ್ಯಾಚರಣೆ. ವ್ರಾತ್ಯ, ಸಂಸ್ಕಾರಹೀನ

ನಷ್ಟಾಗ್ನಿಃ ಕುಹನಾ ಲೋಭಾನ್ಮಿಥ್ಯೇರ್ಯಾಪಥಕಲ್ಪನಾ ।
ವ್ರಾತ್ಯಸ್ಸಂಸ್ಕಾರಹೀನಸ್ಸ್ಯಾದಸ್ವಾಧ್ಯಾಯೋ ನಿರಾಕೃತಿಃ ॥ ೭೬೨
ಧರ್ಮಧ್ವಜೀ ಲಿಂಗವೃತ್ತಿರವಕೀರ್ಣೀ ಕ್ಷತವ್ರತಃ ।
ಸುಪ್ತೇ ಯಸ್ಮಿನ್ನಸ್ತಮೇತಿ ಸುಪ್ತೇ ಯಸ್ಮಿನ್ನುದೇತಿ ಚ ॥ ೭೬೩
ಅಂಶುಮಾನಭಿನಿರ್ಮುಕ್ತಾಭ್ಯುದಿತೌ ಚ ಯಥಾಕ್ರಮಮ್ ।
ಪರಿವೇತ್ತಾನುಜೋಽನೂಢೇ ಜ್ಯೇಷ್ಠೇ ದಾರಪರಿಗ್ರಹಾತ್ ॥ ೭೬೪
ಪರಿವಿತ್ತಿಸ್ತು ತಜ್ಜ್ಯಾಯಾನ್ ವಿವಾಹೋಪಯಮೌ ಸಮೌ ।
ತಥಾ ಪರಿಣಯೋದ್ವಾಹೋಪಯಮಾಃ ಪಾಣಿಪೀಡನಮ್ ॥ ೭೬೫
ವ್ಯವಾಯೋ ಗ್ರಾಮ್ಯಧರ್ಮೋ ಮೈಥುನಂ ನಿಧುವನಂ ರತಮ್ ।
ತ್ರಿವರ್ಗೋ ಧರ್ಮಕಾಮಾರ್ಥೈಶ್ಚತುರ್ವರ್ಗಃ ಸಮೋಕ್ಷಕೈಃ ॥ ೭೬೬
ಸಬಲೈಸ್ತೈಶ್ಚತುರ್ಭದ್ರಂ ಜನ್ಯಾಸ್ಸ್ನಿಗ್ಧಾ ವರಸ್ಯ ಯೇ ॥

ಇತಿ ಬ್ರಹ್ಮವರ್ಗಃ

(ಪು)=ಉಪನಯನಾದಿ ಸಂಸ್ಕಾರಹೀನ. ಅಸ್ವಾಧ್ಯಾಯ, ನಿರಾಕೃತಿ (ಪು)=ವೇದಾಭ್ಯಾಸಮಾಡದವನು.

೭೬೩-೭೬೪. ಧರ್ಮಧ್ವಜಿನ್, ಲಿಂಗವೃತ್ತಿ (ಪು)=ಜೀವನಾರ್ಥವಾಗಿ ಧಾರ್ಮಿಕ ವೇಷವನ್ನು ಧರಿಸಿದವನು. ಅವಕೀರ್ಣಿನ್, ಕ್ಷತವ್ರತ (ಪು)=ವ್ರತಭ್ರಷ್ಟ. ಅಭಿನಿರ್ಮುಕ್ತ (ಪು)=ಸೂರ್ಯನು ಮುಳುಗುವಾಗ ನಿದ್ರಿಸತಕ್ಕವನು. ಅಭ್ಯುದಿತ (ಪು)=ಸೂರ್ಯನು ಹುಟ್ಟುವಾಗ ನಿದ್ರಿಸತಕ್ಕವನು. ಪರಿವೇತ್ತೃ (ಪು)=ಅಣ್ಣನು ಮದುವೆಯಾಗದಿರುವಾಗ ಮದುವೆಯಾದ ತಮ್ಮ.

೭೬೫. ಪರಿವಿತ್ತಿ (ಪು)=ಪರಿವೇತ್ತೃವಿನ ಅಣ್ಣ. ವಿವಾಹ, ಉಪಯಮ, ಪರಿಣಯ, ಉದ್ವಾಹ, ಉಪಯಾಮ (ಪು), ಪಾಣಿಪೀಡನ (ನ)=ಮದುವೆ.

೭೬೬-೭೬೭. ವ್ಯವಾಯ, ಗ್ರಾಮ್ಯಧರ್ಮ (ಪು), ಮೈಥುನ, ನಿಧುವನ, ರತ (ನ)=ಸಂಭೋಗ. ತ್ರಿವರ್ಗ (ಪು)=ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳು. ಚತುರ್ವರ್ಗ (ಪು)=ಧರ್ಮಾರ್ಥಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು. ಚತುರ್ಭದ್ರ (ನ)=ಸಮಾನಬಲಗಳಾದ ಚತುರ್ವರ್ಗಗಳು. ಜನ್ಯ (ಪು)=ವರನ ಮಿತ್ರ. (ವಧುವಿನ ಗೆಳತಿಯೂ ಆಗಬಹುದು. ಆಗ ಜನ್ಯಾ ಎಂಬುದು ಸ್ತ್ರೀಲಿಂಗ).

## ೮. ಕ್ಷತ್ರಿಯವರ್ಗ

ಮೂರ್ಧಾಭಿಷಿಕ್ತೋ ರಾಜನ್ಯೋ ಬಾಹುಜಃ ಕ್ಷತ್ರಿಯೋ ವಿರಾಟ್ ॥ ೭೬೭
ರಾಜಾ ರಾಟ್ ಪಾರ್ಥಿವಕ್ಷ್ಮಾಭೃನ್ನೃಪಭೂಪಮಹೀಕ್ಷಿತಃ ।
ರಾಜಾ ತು ಪ್ರಣತಾಶೇಷಸಾಮಂತಸ್ಸ್ಯಾ ದಧೀಶ್ವರಃ ॥ ೭೬೮
ಚಕ್ರವರ್ತೀ ಸಾರ್ವಭೌಮೋ ನೃಪೋಽನ್ಯೋ ಮಂಡಲೇಶ್ವರಃ ।
ಯೇನೇಷ್ಟಂ ರಾಜಸೂಯೇನ ಮಂಡಲಸ್ಯೇಶ್ವರಶ್ಚ ಯಃ ॥ ೭೬೯
ಶಾಸ್ತಿ ಯಶ್ಚಾಜ್ಞಯಾ ರಾಜ್ಞಸ್ಸ ಸಮ್ರಾಡಥ ರಾಜಕಮ್ ।
ರಾಜನ್ಯಕಂ ಚ ನೃಪತಿಕ್ಷತ್ರಿಯಾಣಾಂ ಗಣೇ ಕ್ರಮಾತ್ ॥ ೭೭೦
ಮಂತ್ರೀ ಧೀಸಚಿವೋಽಮಾತ್ಯೋಽನ್ಯೇ ಕರ್ಮಸಚಿವಾಸ್ತತಃ ।
ಮಹಾಮಾತ್ರಾಃ ಪ್ರಧಾನಾನಿ ಪುರೋಧಾಸ್ತು ಪುರೋಹಿತಃ ॥ ೭೭೧

### ಕ್ಷತ್ರಿಯವರ್ಗ

೭೬೭-೭೬೮. ಮೂರ್ಧಾಭಿಷಿಕ್ತ, ರಾಜನ್ಯ ಬಾಹಜ, ಕ್ಷತ್ರಿಯ, ವಿರಾಜ್ (ಪು)=ಕ್ಷತ್ರಿಯ ಜಾತಿಯವನು. ರಾಜನ್, ರಾಜ್, ಪಾರ್ಥಿವ, ಕ್ಷ್ಮಾಭೃತ್, ನೃಪ, ಭೂಪ, ಮಹೀಕ್ಷಿತ್ (ಪು)=ರಾಜ. ಅಧೀಶ್ವರ (ಪು)=ಅನೇಕ ಸಾಮಂತರಾಜರನ್ನು ಗೆದ್ದು ವಶಪಡಿಸಿಕೊಂಡಿರುವ ರಾಜ.

೭೬೯-೭೭೦. ಚಕ್ರವರ್ತಿನ್, ಸಾರ್ವಭೌಮ (ಪು)=ಸಮುದ್ರಪರ್ಯಂತವಾದ ಭೂಮಿಗೆ ಒಡೆಯ, ಮಂಡಲೇಶ್ವರ (ಪು)=ಒಂದು ಪ್ರಾಂತದ ಒಡೆಯ, ಮಾಂಡಲಿಕ. ಸಮ್ರಾಜ್ (ಪು)=ರಾಜಸೂಯ ಯಾಗವನ್ನು ಮಾಡಿ ಅನೇಕ ರಾಜರುಗಳ ಮೇಲೆ ಅಧಿಕಾರವನ್ನು ನಡೆಸುವ ರಾಜ. ರಾಜಕ (ನ)=ರಾಜರ ಗುಂಪು. ರಾಜನ್ಯಕ (ನ)=ಕ್ಷತ್ರಿಯರ ಗುಂಪು.

೭೭೧. ಮಂತ್ರಿನ್, ಧೀಸಚಿವ, ಅಮಾತ್ಯ (ಪು)=ರಾಜಕಾರ್ಯದ ಆಲೋಚನೆಯನ್ನು ಹೇಳತಕ್ಕವನು, ಮಂತ್ರಿ. ಕರ್ಮಸಚಿವ= ಕಾರ್ಯವನ್ನು ಜಾರಿಗೆ ತರುವ ಸಚಿವ. ಮಹಾಮಾತ್ರ (ಪು), ಪ್ರಧಾನ[1] (ನ)=ರಾಜನಿಗೆ ಸಹಾಯಕನಾದ ಮುಖ್ಯಾಧಿಕಾರಿ. ಪುರೋಧಸ್, ಪುರೋಹಿತ (ಪು)=ಪುರೋಹಿತ.

[1] ಪ್ರಧಾನ ಶಬ್ದವು ಪುಲ್ಲಿಂಗದಲ್ಲಿಯೇ ಇದೆ.

ದ್ರಷ್ಟರಿ ವ್ಯವಹಾರಾಣಾಂ ಪ್ರಾಡ್ವಿವಾಕಾಕ್ಷದರ್ಶಕೌ ।
ಪ್ರತೀಹಾರೋ ದ್ವಾರಪಾಲದ್ವಾಃಸ್ಥದ್ವಾಃಸ್ಥಿತದರ್ಶಕಾಃ ॥ ೭೭೨
ರಕ್ಷಿವರ್ಗಸ್ತ್ವನೀಕಸ್ಥೋಽಥಾಧ್ಯಕ್ಷಾಧಿಕೃತೌ ಸಮೌ ।
ಸ್ಥಾಯುಕೋಽಧಿಕೃತೋ ಗ್ರಾಮೇ ಗೋಪೋ ಗ್ರಾಮೇಷು ಭೂರಿಷು ॥ ೭೭೩
ಭೌರಿಕಃ ಕನಕಾಧ್ಯಕ್ಷೋ ರೂಪ್ಯಾಧ್ಯಕ್ಷಸ್ತು ನೈಷ್ಕಿಕಃ ।
ಅಂತಃಪುರೇ ತ್ವಧಿಕೃತಃ ಸ್ಯಾದಂತರ್ವಂಶಿಕೋ ಜನಃ ॥ ೭೭೪
ಸೌವಿದಲ್ಲಾಃ ಕಂಚುಕಿನಃ ಸ್ಥಾಪತ್ಯಾಸ್ಸೌವಿದಾಶ್ಚ ತೇ ।
ಷಂಢೋ ವರ್ಷವರಸ್ತುಲ್ಯೌ ಸೇವಕಾರ್ಥ್ಯನುಜೀವಿನಃ ॥ ೭೭೫
ವಿಷಯಾನಂತರೋ ರಾಜಾ ಶತ್ರುರ್ಮಿತ್ರಮತಃ ಪರಮ್ ।
ಉದಾಸೀನಃ ಪರತರಃ ಪಾರ್ಷ್ಣಿಗ್ರಾಹಸ್ತು ಪೃಷ್ಠತಃ ॥ ೭೭೬

---

೭೭೨. ಪ್ರಾಡ್ವಿವಾಕ, ಅಕ್ಷದರ್ಶಕ (ಪು)=ನ್ಯಾಯಾಧಿಕಾರಿ. ಪ್ರತೀಹಾರ, ದ್ವಾರಪಾಲ, ದ್ವಾಃಸ್ಥ, ದ್ವಾಃಸ್ಥಿತ, ದರ್ಶಕ (ಪು)=ಬಾಗಿಲು ಕಾಯುವವನು.

೭೭೩. ರಕ್ಷಿವರ್ಗ, ಅನೀಕಸ್ಥ=ಅಂಗರಕ್ಷಕ. ಅಧ್ಯಕ್ಷ, ಅಧಿಕೃತ, (ಪು)=ಅಧಿಕಾರಿ. ಸ್ಥಾಯುಕ (ಪು)=ಗ್ರಾಮಾಧಿಕಾರಿ. ಗೋಪ (ಪು)=ಅನೇಕ ಗ್ರಾಮಗಳ ಅಧಿಕಾರಿ.

೭೭೪. ಭೌರಿಕ, ಕನಕಾಧ್ಯಕ್ಷ (ಪು)=ಖಜಾನೆಯ ಅಧಿಕಾರಿ. ರೂಪ್ಯಾಧ್ಯಕ್ಷ, ನೈಷ್ಕಿಕ (ಪು)=ಟಂಕಸಾಲೆಯ ಅಧಿಕಾರಿ. ಅಂತರ್ವಂಶಿಕ (ಪು)=ಅಂತಃಪುರಾಧಿಕಾರಿ.

೭೭೫. ಸೌವಿದಲ್ಲ, ಕಂಚುಕಿನ್, ಸ್ಥಾಪತ್ಯ, ಸೌವಿದ (ಪು)=ಅಂತಃಪುರದ ಕಾವಲುಗಾರ., ಷಂಢ (ಶಂಢ), ವರ್ಷವರ (ಪು)=ನಪುಂಸಕನಾದ ಅಂತಃಪುರಸೇವಕ. ಸೇವಕ, ಅರ್ಥಿನ್, ಅನುಜೀವಿನ್ (ಪು)=ಸೇವಕ.

೭೭೬. ಶತ್ರು (ಪು)=ತನ್ನ ರಾಜ್ಯದ ಪಕ್ಕದಲ್ಲಿರುವ ರಾಜ್ಯದ ದೊರೆ. ಇವನು ಪ್ರಾಕೃತ ಶತ್ರು. ಮಿತ್ರ (ನ)=ಪ್ರಾಕೃತಶತ್ರುವಿನ ಆಚೆಯ ರಾಜ್ಯದ ದೊರೆ. ಇವನು ಪ್ರಾಕೃತಮಿತ್ರ. ಉದಾಸೀನ (ಪು)=ಪ್ರಾಕೃತಮಿತ್ರನ ಆಚೆಯ ರಾಜ್ಯದ ದೊರೆ. ಪಾರ್ಷ್ಣಿಗ್ರಾಹ (ಪು)=ದಿಗ್ವಿಜಯಾರ್ಥವಾಗಿ ಹೊರಟ ರಾಜನ ಹಿಂದುಗಡೆ ಇರತಕ್ಕ ಶತ್ರು ಅಥವಾ ಮಿತ್ರ.

೭೭೭-೭೭೮. ರಿಪು, ವೈರಿನ್, ಸಪತ್ನ, ಅರಿ, ದ್ವಿಷತ್, ದ್ವೇಷಣ, ದುರ್ಹೃದ್, ದ್ವಿಷ್, ವಿಪಕ್ಷ, ಅಹಿತ, ಅಮಿತ್ರ, ದಸ್ಯು, ಶಾತ್ರವ, ಶತ್ರು, ಅಭಿಘಾತಿನ್, ಪರ, ಅರಾತಿ, ಪ್ರತ್ಯರ್ಥಿನ್, ಪರಿಪಂಥಿನ್ (ಪು)=ವೈರಿ. ಸ್ನಿಗ್ಧ, ವಯಸ್ಯ, ಸವಯಸ್ (ಪು)=ಸಮಾನ ವಯಸ್ಸುಳ್ಳವನು, ಸ್ನೇಹಿತ. ಮಿತ್ರ (ನ), ಸಖಿ, ಸುಹೃದ್ (ಪು)=ಗೆಳೆಯ, ಸ್ನೇಹಿತ.



ರಿಪೌ ವೈರಿಸಪತ್ನಾರಿದ್ವಿಷದ್ದ್ವೇಷಣದುರ್ಹೃದಃ ।
ದ್ವಿಡ್ವಿಪಕ್ಷಾಹಿತಾಮಿತ್ರದಸ್ಯುಶಾತ್ರವಶತ್ರವಃ ॥ ೭೭೭
ಅಭಿಘಾತಿಪರಾರಾತಿಪ್ರತ್ಯರ್ಥಿಪರಿಪಂಥಿನಃ ।
ಸ್ನಿಗ್ಧೋ ವಯಸ್ಯಃ ಸವಯಾ ಅಥ ಮಿತ್ರಂ ಸಖಾ ಸುಹೃತ್ ॥ ೭೭೮
ಸಖ್ಯಂ ಸಾಪ್ತಪದೀನಂ ಸ್ಯಾದನುರೋಧೋಽನುವರ್ತನಮ್ ।
ಯಥಾರ್ಹವರ್ಣಃ ಪ್ರಣಿಧಿರಪಸರ್ಪಶ್ಚರಃ ಸ್ಪಶಃ ॥ ೭೭೯
ಚಾರಶ್ಚ ಗೂಢಪುರುಷಶ್ಚಾಪ್ತಪ್ರತ್ಯಯಿತೌ ಸಮೌ ।
ಸಾಂವತ್ಸರೋ ಜ್ಯಾತಿಷಿಕೋ ದೈವಜ್ಞಗಣಕಾವಪಿ ॥ ೭೮೦
ಸ್ಯುರ್ಮೌಹೂರ್ತಿಕಮೌಹೂರ್ತಜ್ಞಾನಿಕಾರ್ತಾಂತಿಕಾ ಅಪಿ ।
ತಾಂತ್ರಿಕೋ ಜ್ಞಾತಸಿದ್ಧಾಂತಸ್ಸತ್ರೀ ಗೃಹಪತಿಸ್ಸಮೌ ॥ ೭೮೧
ಲಿಪಿಕರೋಽಕ್ಷರಚಣೋಽಕ್ಷರಚುಂಚುಶ್ಚ ಲೇಖಕೇ ।
ಲಿಖಿತಾಕ್ಷರವಿನ್ಯಾಸೇ ಲಿಪಿರ್ಲಿಬಿರುಭೇ ಸ್ತ್ರಿಯೌ ॥ ೭೮೨

---

೭೭೯-೭೮೦. ಸಖ್ಯ, ಸಾಪ್ತಪದೀನ (ನ)=ಸ್ನೇಹ. ಅನುರೋಧ (ಪು), ಅನುವರ್ತನ (ನ)=ಅನ್ಯರ ಇಷ್ಟದಂತೆ ವರ್ತಿಸುವುದು. ಯಥಾರ್ಹವರ್ಣ, ಪ್ರಣಿಧಿ, ಅಪಸರ್ಪ, ಚರ, ಸ್ಪಶ, ಚಾರ, ಗೂಢಪುರುಷ (ಪು)=ಗೂಢಚಾರ. ಆಪ್ತ, ಪ್ರತ್ಯಯಿತ (ಪು)=ವಿಶ್ವಾಸಪಾತ್ರ.

೭೮೦-೭೮೧. ಸಾಂವತ್ಸರ, ಜ್ಯೌತಿಷಿಕ, ದೈವಜ್ಞ, ಗಣಕ, ಮೌಹೂರ್ತಿಕ, ಮೌಹೂರ್ತ, ಜ್ಞಾನಿನ್, ಕಾರ್ತಾಂತಿಕ (ಪು)=ಜ್ಯೋತಿಃಶಾಸ್ತ್ರವನ್ನು ಬಲ್ಲವನು, ಜೋಯಿಸ. ತಾಂತ್ರಿಕ, ಜ್ಞಾತ ಸಿದ್ಧಾಂತ (ಪು)=ಶಾಸ್ತ್ರಜ್ಞ. ಸತ್ರಿನ್, ಗೃಹಪತಿ (ಪು)=ದಾನಧರ್ಮಗಳನ್ನು ಮಾಡುವ ಗೃಹಸ್ಥ.

೭೮೨. ಲಿಪಿಕರ[1]ರ, ಅಕ್ಷರಚಣ, ಅಕ್ಷರಚುಂಚು, ಲೇಖಕ (ಪು)=ಬರೆಯುವವನು. ಲಿಪಿ, ಲಿಬಿ (ಸ್ತ್ರೀ)=ಬರೆಹ, ಲೇಖನ.

೭೮೩. ಸಂದೇಶಹರ, ದೂತ (ಪು)=ಹೇಳಿಕೆಯನ್ನು ಒಯ್ಯುವವನು (Messenger). ದೌತ್ಯ (ನ)=ದೂತನ ಧರ್ಮ ; ದೂತನ ಕರ್ತವ್ಯ. ಅಧ್ವನೀನ, ಅಧ್ವಗ, ಅಧ್ವನ್ಯ, ಪಾಂಥ, ಪಥಿಕ (ಪು)=ದಾರಿಗ, ಪ್ರಯಾಣಿಕ.

---

1 ಲಿಪಿಕಾರ, ಲಿಪಿಂಕರ ಎಂಬ ಶಬ್ದಾಂತರಗಳೂ ಉಂಟು.

ಸ್ಯಾತ್ ಸಂದೇಶಹರೋ ದೂತೋ ದೌತ್ಯಂ ತದ್ಭಾವಕರ್ಮಣೀ ।
ಅಧ್ವನೀನೋಽಧ್ವಗೋಽಧ್ವನ್ಯಃ ಪಾಂಥಃ ಪಥಿಕ ಇತ್ಯಪಿ ॥ ೭೮೩
ಸ್ವಾಮ್ಯಮಾತ್ಯಸುಹೃತ್ಕೋಶರಾಷ್ಟ್ರದುರ್ಗಬಲಾನಿ ಚ ।
ರಾಜ್ಯಾಂಗಾನಿ ಪ್ರಕೃತಯಃ ಪೌರಾಣಾಂ ಶ್ರೇಣಯೋಽಪಿ ಚ ॥ ೭೮೪
ಸಂಧಿರ್ನಾ ವಿಗ್ರಹೋ ಯಾನಮಾಸನಂ ದ್ವೈಧಮಾಶ್ರಯಃ ।
ಷಡ್ಗುಣಾಶ್ಶಕ್ತಯಸ್ತಿಸ್ರಃ ಪ್ರಭಾವೋತ್ಸಾಹಮಂತ್ರಜಾಃ ॥ ೭೮೫
ಕ್ಷಯಸ್ಸ್ಥಾನಂ ಚ ವೃದ್ಧಿಶ್ಚ ತ್ರಿವರ್ಗೋ ನೀತಿವೇದಿನಾಮ್ ।
ಸ ಪ್ರತಾಪಃ ಪ್ರಭಾವಶ್ಚ ಯತ್ತೇಜಃ ಕೋಶದಂಡಜಮ್ ॥ ೭೮೬

೭೮೪. ಸ್ವಾಮಿನ್ (ಪು)=ರಾಜ, ಅಮಾತ್ಯ (ಪು)=ಮಂತ್ರಿ, ಸುಹೃದ್ (ಪು)=ಮಿತ್ರ, ಕೋಶ (ಕೋಷ) (ಪು)=ಭಂಡಾರ, ರಾಷ್ಟ್ರ (ನ)=ರಾಜ್ಯ, ದುರ್ಗ (ಪು)=ಕೋಟೆ, ಬಲ (ನ)=ಸೈನ್ಯ—ಈ ಏಳು ವಸ್ತುಗಳಿಗೆ ರಾಜ್ಯಾಂಗ (ನ), ಪ್ರಕೃತಿ (ಸ್ತ್ರೀ)=ರಾಜ್ಯಾಂಗಗಳೆಂದೂ ಪ್ರಕೃತಿಗಳೆಂದೂ ಹೆಸರು. ಪೌರಾಣಾಂ ಶ್ರೇಣಯಃ (ಸ್ತ್ರೀ)=ಪ್ರಜೆಗಳ ಸಮುದಾಯಗಳಿಗೂ ಪ್ರಕೃತಿಯೆಂದು ಹೆಸರು. ಪ್ರಜೆಗಳೂ ಸೇರಿ ಅಷ್ಟಾಂಗ ರಾಜ್ಯ ಎಂಬ ವ್ಯವಹಾರವೂ ಉಂಟು.

೭೮೫. ಸಂಧಿ (ಪು)=ಶತ್ರುವಿನೊಡನೆ ಮಾಡಿಕೊಳ್ಳುವ ಒಂದು ವ್ಯವಸ್ಥೆ, ಸಂಧಾನ. ವಿಗ್ರಹ (ಪು)=ಯುದ್ಧ. ಯಾನ (ನ)= ದಂಡೆತ್ತಿಹೋಗುವುದು. ಆಸನ (ನ)=ಸಮಯಪ್ರತೀಕ್ಷೆಯಿಂದ ಯುದ್ಧಮಾಡದೆ ಸುಮ್ಮನಿರುವುದು. ದ್ವೈಧ (ನ)=ಯಾವ ಪಕ್ಷಕ್ಕೆ ಸೇರಿದ್ದಾನೆ ಎಂಬುದನ್ನು ತೋರಿಸಿಕೊಳ್ಳದೆ ಮಧ್ಯವರ್ತಿಯಂತೆ ನಡೆದುಕೊಳ್ಳುವುದು. ಆಶ್ರಯ (ಪು)=ಬಲಶಾಲಿಯನ್ನು ಆಶ್ರಯಿಸುವುದು. ಇವು ಷಡ್ಗುಣಾಃ=ರಾಜನೀತಿಯ ಆರು ಗುಣಗಳು. ಶಕ್ತಯಸ್ತಿಸ್ರಃ =ಮುಂದೆ ಹೇಳತಕ್ಕವು ರಾಜನೀತಿಯಲ್ಲಿರಬೇಕಾದ ಮೂರು ಶಕ್ತಿಗಳು. ಯಾವುವೆಂದರೆ : ಪ್ರಭಾವ ಶಕ್ತಿ (ಸ್ತ್ರೀ)=ಕೋಶದಂಡಗಳ ಪ್ರಾಬಲ್ಯ. ಇದಕ್ಕೆ ಪ್ರಭುಶಕ್ತಿ ಎಂದೂ ಹೆಸರು. ಉತ್ಸಾಹಶಕ್ತಿ=ಕಾರ್ಯವನ್ನು ಸಾಧಿಸುವೆನೆಂಬ ಉತ್ಸಾಹ. ಮಂತ್ರಜಶಕ್ತಿ=ಸರಿಯಾದ ಮಂತ್ರಾಲೋಚನೆಯಿಂದ ಬಂದ ವಿವೇಚನಾಶಕ್ತಿ.

೭೮೬. ಕ್ಷಯ (ಪು)=ಶತ್ರುಗಳಿಗಿಂತ ತಾನು ಕಡಿಮೆಯಾಗಿರುವುದು, ಸ್ಥಾನ (ನ)=ಶತ್ರುವಿಗೆ ಸಮಬಲನಾಗಿರುವುದು, ವೃದ್ಧಿ (ಸ್ತ್ರೀ)=ಶತ್ರುವಿಗಿಂತ ಅಧಿಕನಾಗಿರುವುದು- ಈ ಮೂರು ತ್ರಿವರ್ಗ (ಪು)=ರಾಜನೀತಿಯನ್ನು ಬಲ್ಲವರಿಗೆ ತ್ರಿವರ್ಗವೆನಿಸುತ್ತವೆ. ಪ್ರತಾಪ, ಪ್ರಭಾವ (ಪು)=ಕೋಶದಂಡಗಳ ಬಲದಿಂದುಂಟಾಗುವ ತೇಜಸ್ಸು.



ಸಾಮದಾನೇ ಭೇಧದಂಡಾವಿತ್ಯುಪಾಯಚತುಷ್ಟಯಮ್ ।
ಸಾಹಸಂ ತು ದಮೋ ದಂಡಸ್ಸಾಮ ಸಾಂತ್ವಮಥೋ ಸಮೌ ॥ ೭೮೭
ಭೇದೋಪಜಾಪಾವುಪಧಾ ಧರ್ಮಾದ್ಯೈರ್ಯತ್ಪರೀಕ್ಷಣಮ್ ।
ಪಂಚ ತ್ರಿಷ್ವಷಡಕ್ಷೀಣೋ ಯಸ್ತೃತೀಯಾದ್ಯಗೋಚರಃ ॥ ೭೮೮
ವಿವಿಕ್ತವಿಜನಚ್ಛನ್ನನಿಶ್ಶಲಾಕಾಸ್ತಥಾ ರಹಃ ।
ರಹಶ್ಚೋಪಾಂಶು ಚಾಲಿಂಗೇ ರಹಸ್ಯಂ ತದ್ಭವೇ ತ್ರಿಷು ॥ ೭೮೯
ಸಮೌ ವಿಸ್ರಂಭವಿಶ್ವಾಸೌ ಭ್ರೇಷೋ ಭ್ರಂಶೋ ಯಥೋಚಿತಾತ್ ।
ಅಭ್ರೇಷನ್ಯಾಯಕಲ್ಪಾಸ್ತು ದೇಶರೂಪಂ ಸಮಂಜಸಮ್ ॥ ೭೯೦

೭೮೭. ಸಾಮನ್, ದಾನ (ನ), ಭೇದ, ದಂಡ (ಪು)=ಈ ನಾಲ್ಕು ಉಪಾಯ ಚತುಷ್ಟಯವೆನಿಸಿಕೊಳ್ಳುತ್ತವೆ. ಸಾಹಸ (ನ), ದಮ, ದಂಡ (ಪು)=ಬಲಪ್ರಯೋಗ. ಸಾಮನ್, ಸಾಂತ್ವ (ನ)=ಸಾಮೋಪಾಯ.

೭೮೮. ಭೇದ, ಉಪಜಾಪ (ಪು)=ಒಡಕು ಹುಟ್ಟಿಸುವುದು. ಉಪಧಾ (ಸ್ತ್ರೀ)=ಧರ್ಮಾರ್ಥಕಾಮಗಳ ನೆವದಿಂದ ರಾಜನು ತನ್ನ ಮಂತ್ರಿಗಳನ್ನು ಪರೀಕ್ಷಿಸುವುದು. ಅಷಡಕ್ಷೀಣ (ಪು. ಸ್ತ್ರೀ. ನ-ವಿ. ನಿಘ್ನ)= ಮೂರನೆಯವನಿಗೆ ತಿಳಿಯದ ಇಬ್ಬರ ಮಂತ್ರಾಲೋಚನೆ-ರಹಸ್ಯವಾದ ಆಲೋಚನೆ.

೭೮೯. ವಿವಿಕ್ತ, ವಿಜನ, ಛನ್ನ, ನಿಶ್ಶಲಾಕ (ಪು. ಸ್ತ್ರೀ. ನ- ವಿ. ನಿಘ್ನ) ರಹಸ್ (ನ), ರಹಸ್, ಉಪಾಂಶು (ಅವ್ಯಯ)=ಏಕಾಂತಸ್ಥಳ. ರಹಸ್ಯ (ಪು. ಸ್ತ್ರೀ. ನ-ವಿ. ನಿಘ್ನ)=ಏಕಾಂತದಲ್ಲಿ ನಡೆದದ್ದು.

೭೯೦. ವಿಸ್ರಂಭ, ವಿಶ್ವಾಸ (ಪು)=ನಂಬಿಕೆ. ಭ್ರೇಷ, ಭ್ರಂಶ (ಪು)=ಔಚಿತ್ಯದಿಂದ ತಪ್ಪುವುದು, ಔಚಿತ್ಯದ ಕೊರತೆ. ಅಭ್ರೇಷ, ನ್ಯಾಯ, ಕಲ್ಪ (ಪು), ದೇಶರೂಪ, ಸಮಂಜಸ[1] (ನ)=ಸರಿ, ಔಚಿತ್ಯ.

೭೯೧. ಯುಕ್ತ, ಔಪಯಿಕ, ಲಭ್ಯ, ಭಜಮಾನ, ಅಭಿನೀತ, ನ್ಯಾಯ್ಯ (ಪು.ಸ್ತ್ರೀ.ನ-ವಿ. ನಿಘ್ನ) (-ಸ್ತ್ರೀ. ಔಪಯಿಕೀ)=ಯುಕ್ತ, ನ್ಯಾಯಪ್ರಾಪ್ತ. ಸಂಪ್ರಧಾರಣಾ (ಸ್ತ್ರೀ), ಸಮರ್ಥನ (ನ)=ಇದು ಸರಿಯೆಂಬ ನಿಶ್ಚಯ.

[1] ದೇಶರೂಪ, ಸಮಂಜಸ ಶಬ್ದಗಳು ಯುಕ್ತ, ಉಚಿತ—ಎಂಬ ಅರ್ಥದಲ್ಲಿ ವಿಶೇಷ್ಯನಿಘ್ನಗಳಾಗಿ ತ್ರಿಲಿಂಗಗಳಲ್ಲಿಯೂ ಇರುತ್ತವೆ.

ಯುಕ್ತಮೌಪಯಿಕಂ ಲಭ್ಯಂ ಭಜಮಾನಾಭಿನೀತವತ್ ।
ನ್ಯಾಯ್ಯಂ ಚ ತ್ರಿಷು ಷಟ್ ಸಂಪ್ರಧಾರಣಾ ತು ಸಮರ್ಥನಮ್ ॥ ೭೯೧
ಅವವಾದಸ್ತು ನಿರ್ದೇಶೋ ನಿದೇಶಶ್ಶಾಸನಂ ಚ ಸಃ ।
ಶಿಷ್ಟಿಶ್ಚಾಜ್ಞಾ ಚ ಸಂಸ್ಥಾ ತು ಮರ್ಯಾದಾ ಧಾರಣಾ ಸ್ಥಿತಿಃ ॥ ೭೯೨
ಆಗೋಽಪರಾಧೋ ಮಂತುಶ್ಚ ಸಮೇ ತೂದ್ದಾನಬಂಧನೇ ।
ದ್ವಿಪಾದ್ಯೋ ದ್ವಿಗುಣೋ ದಂಡೋ ಭಾಗಧೇಯಃ ಕರೋ ಬಲಿಃ ॥ ೭೯೩
ಘಟ್ಟಾದಿದೇಯಂ ಶುಲ್ಕೋಽಸ್ತ್ರೀ ಪ್ರಾಭೃತಂ ತು ಪ್ರದೇಶನಮ್ ।
ಉಪಾಯನಮುಪಗ್ರಾಹ್ಯಮುಪಹಾರಸ್ತಥೋಪದಾ ॥ ೭೯೪
ಯೌತಕಾದಿ ತು ಯದ್ದೇಯಂ ಸುದಾಯೋ ಹರಣಂ ಚ ತತ್ ।
ತತ್ಕಾಲಸ್ತು ತದಾತ್ವಂ ಸ್ಯಾದುತ್ತರಃ ಕಾಲ ಆಯತಿಃ ॥ ೭೯೫

೭೯೨. ಅವವಾದ, ನಿರ್ದೇಶ, ನಿದೇಶ, (ಪು), ಶಾಸನ (ನ), ಶಿಷ್ಟಿ, ಆಜ್ಞಾ (ಸ್ತ್ರೀ)=ಅಪ್ಪಣೆ. ಸಂಸ್ಥಾ, ಮರ್ಯಾದಾ, ಧಾರಣಾ, ಸ್ಥಿತಿ (ಸ್ತ್ರೀ)=ನ್ಯಾಯಮಾರ್ಗಸ್ಥಿತಿ, ಮರ್ಯಾದೆ.

೭೯೩. ಆಗಸ್ (ನ), ಅಪರಾಧ, ಮಂತು (ಪು)=ತಪ್ಪು. ಉದ್ದಾನ, ಬಂಧನ (ನ)=ಕಟ್ಟುವುದು (Arrest). ದ್ವಿಪಾದ್ಯ (ಪು)=ವಿಹಿತವಾದ್ದಕ್ಕಿಂತ ಎರಡರಷ್ಟು ದಂಡನೆ. ಭಾಗಧೇಯ, ಕರ, ಬಲಿ (ಪು)=ರಾಜನಿಗೆ ಕೊಡಬೇಕಾದ ತೆರ, ಕಂದಾಯ.

೭೯೪. ಶುಲ್ಕ (ಪು. ನ)=ಸುಂಕದ ಕಟ್ಟೆ ಮೊದಲಾದ್ದರಲ್ಲಿ ಕೊಡಬೇಕಾದ ಸುಂಕ. ಪ್ರಾಭೃತ, ಪ್ರದೇಶನ, ಉಪಾಯನ, ಉಪಗ್ರಾಹ್ಯ (ನ), ಉಪಹಾರ (ಪು), ಉಪದಾ (ಸ್ತ್ರೀ)=ಕಾಣಿಕೆ.

೭೯೫. ಯೌತಕ1 (ನ), ಸುದಾಯ (ಪು), ಹರಣ (ನ)=ಮದುವೆಯಲ್ಲಿ ಕೊಡತಕ್ಕ ಬಳುವಳಿ. ತತ್ಕಾಲ (ಪು), ತದಾತ್ವ (ನ)=ಪ್ರಕೃತವಾದ ಕಾಲ, ವರ್ತಮಾನಕಾಲ. ಆಯತಿ (ಸ್ತ್ರೀ)=ಮುಂದಿನ ಕಾಲ, ಭವಿಷ್ಯತ್ಕಾಲ.

೭೯೬. ಸಾಂದೃಷ್ಟಿಕ (ನ)=ತತ್ಕಾಲದಲ್ಲಿ ಆಗುವ ಫಲ. ಉದರ್ಕ (ಪು)=ಮುಂದೆ ಆಗುವ ಫಲ. ಅದೃಷ್ಟ (ನ)=ಬೆಂಕಿ, ನೀರು ಮುಂತಾದವುಗಳಿಂದ ಅನಿರೀಕ್ಷಿತವಾಗಿ ಸಂಭವಿಸುವ ಭಯ. ದೃಷ್ಟ (ನ)=ರಾಜರಿಗೆ ಸ್ವಪಕ್ಷ ಪರಪಕ್ಷಗಳಿಂದ ಸಂಭವಿಸುವ ಭಯ.

[2] ಯುತಕ, ಯೌತುಕ (ನ) ಎಂಬ ರೂಪಾಂತರಗಳೂ ಇವೆ.



ಸಾಂದೃಷ್ಟಿಕಂ ಫಲಂ ಸದ್ಯಃ ಉದರ್ಕಃ ಫಲಮುತ್ತರಮ್ ।
ಅದೃಷ್ಟಂ ವಹ್ನಿತೋಯಾದಿ ದೃಷ್ಟಂ ಸ್ವಪರಚಕ್ರಜಮ್ ॥ ೭೯೬
ಮಹೀಭುಜಾಮಹಿಭಯಂ ಸ್ವಪಕ್ಷಪ್ರಭವಂ ಭಯಮ್ ।
ಪ್ರಕ್ರಿಯಾ ತ್ವಧಿಕಾರಸ್ಸ್ಯಾಚ್ಚಾಮರಂ ತು ಪ್ರಕೀರ್ಣಕಮ್ ॥ ೭೯೭
ನೃಪಾಸನಂ ತು ಯದ್ಭದ್ರಾಸನಂ ಸಿಂಹಾಸನಂ ತು ತತ್ ।
ಹೈಮಂ ಛತ್ರಂ ತ್ವಾತಪತ್ರಂ ರಾಜ್ಞಸ್ತು ನೃಪಲಕ್ಷ್ಮ ತತ್ ॥ ೭೯೮
ಭದ್ರಕುಂಭಃ ಪೂರ್ಣಕುಂಭೋ ಭೃಂಗಾರಃ ಕನಕಾಲುಕಾ ।
ನಿವೇಶಃ ಶಿಬಿರಂ ಷಂಢೇ ಸಜ್ಜನಂ ತೂಪರಕ್ಷಣಮ್ ॥ ೭೯೯
ಹಸ್ತ್ಯಶ್ವರಥಪಾದಾತಂ ಸೇನಾಂಗಂ ಸ್ಯಾಚ್ಚತುಷ್ಟಯಮ್ ।
ದಂತೀ ದಂತಾವಲೋ ಹಸ್ತೀ ದ್ವಿರದೋಽನೇಕಪೋ ದ್ವಿಪಃ ॥ ೮೦೦

೭೯೭. ಅಹಿಭಯ (ನ)=ಸ್ವಪಕ್ಷದಿಂದ ಸಂಭವಿಸುವ ಭಯ. ಪ್ರಕ್ರಿಯಾ (ಸ್ತ್ರೀ), ಅಧಿಕಾರ (ಪು)=ಅಧಿಕಾರ (Power). ಚಾಮರ,[1] ಪ್ರಕೀರ್ಣಕ (ನ)=ಚಾಮರ.

೭೯೮. ನೃಪಾಸನ, ಭದ್ರಾಸನ (ನ)=ರಾಜನ ಗದ್ದುಗೆ. ಸಿಂಹಾಸನ (ನ)=ಸುವರ್ಣಭೂಷಿತವಾದ ರಾಜಪೀಠ. ಛತ್ರ, ಆತಪತ್ರ (ನ)=ಕೊಡೆ, ಛತ್ರಿ. ನೃಪಲಕ್ಷ್ಮನ್ (ನ)=ರಾಜಚಿಹ್ನೆಯೆನಿಸಿದ ಕೊಡೆ, ಶ್ವೇತಚ್ಛತ್ರ.

೭೯೯. ಭದ್ರಕುಂಭ, ಪೂರ್ಣಕುಂಭ (ಪು)=ಪೂರ್ಣಕಲಶ. ಭೃಂಗಾರ (ಪು), ಕನಕಾಲುಕಾ=ಚಿನ್ನದ ಗಿಂಡಿ. ನಿವೇಶ (ಪು), ಶಿಬಿರ (ನ)=ಸೈನ್ಯದ ಬಿಡಾರ. ಸಜ್ಜನ, ಉಪರಕ್ಷಣ (ನ)=ಬಿಡಾರದ ಸುತ್ತಲೂ ಇರುವ ಕಾವಲು, ಪಹರೆ.

೮೦೦-೮೦೧. ಸೇನಾಂಗ (ನ)=ಆನೆ ಕುದುರೆ ರಥ ಕಾಲಾಳು ಎಂಬ ನಾಲ್ಕು ಬಗೆಯ ಸೇನೆ. ದಂತಿನ್, ದಂತಾವಲ, ಹಸ್ತಿನ್, ದ್ವಿರದ, ಅನೇಕಪ, ದ್ವಿಪ, ಮತಂಗಜ, ಗಜ, ನಾಗ, ಕುಂಜರ, ವಾರಣ, ಕರಿನ್, ಇಭ, ಸ್ತಂಬೇರಮ, ಪದ್ಮಿನ್.[1] (ಪು)=ಆನೆ. ಯೂಥನಾಥ, ಯೂಥಪ (ಪು)=ಸಲಗ.

[1] ಚಮರ (ಪು) ಚಾಮರಾ (ಸ್ತ್ರೀ) ಎಂಬ ರೂಪಾಂತರಗಳೂ ಇವೆ.

ಮತಂಗಜೋ ಗಜೋ ನಾಗಃ ಕುಂಜರೋ ವಾರಣಃ ಕರೀ ।
ಇಭಃ ಸ್ತಂಬೇರಮಃ ಪದ್ಮೀ ಯೂಥನಾಥಸ್ತು ಯೂಥಪಃ ॥ ೮೧
ಮದೋತ್ಕಟೋ ಮದಕಲಃ ಕಲಭಃ ಕರಿಶಾವಕಃ ।
ಪ್ರಭಿನ್ನೋ ಗರ್ಜಿತೋ ಮತ್ತಸ್ಸಮಾವುದ್ವಾಂತನಿರ್ಮದೌ ॥ ೮೨
ಹಾಸ್ತಿಕಂ ಗಜತಾ ವೃಂದೇ ಕರಿಣೀ ಧೇನುಕಾ ವಶಾ ।
ಗಂಡಃ ಕಟೋ ಮದೋ ದಾನಂ ವಮಥುಃ ಕರಶೀಕರಃ ॥ ೮೩
ಕುಂಭೌ ತು ಪಿಂಡೌ ಶಿರಸಸ್ತಯೋರ್ಮಧ್ಯೇ ವಿದುಃ ಪುಮಾನ್ ।
ಅವಗ್ರಹೋ ಲಲಾಟಂ ಸ್ಯಾದಿಷೀಕಾ ತ್ವಕ್ಷಿಕೂಟಕಮ್ ॥ ೮೪
ಅಪಾಂಗದೇಶೋ ನಿರ್ಯಾಣಂ ಕರ್ಣಮೂಲಂ ತು ಚೂಲಿಕಾ ।
ಅಧಃ ಕುಂಭಸ್ಯ ವಾಹಿತ್ಥಂ ಪ್ರತಿಮಾನಮಧೋಽಸ್ಯ ಯತ್ ॥ ೮೫

---

೮೨. ಮದೋತ್ಕಟ, ಮದಕಲ (ಪು)=ಮದಿಸಿದ ಆನೆ. ಕಲಭ, ಕರಿಶಾವಕ (ಪು)=ಆನೆಯ ಮರಿ. ಪ್ರಭಿನ್ನ, ಗರ್ಜಿತ, ಮತ್ತ (ಪು)=ಮದೋದಕವನ್ನು ಸುರಿಸುತ್ತಿರುವ ಆನೆ. ಉದ್ವಾಂತ, ನಿರ್ಮದ (ಪು)=ಮದವಿಳಿದ ಆನೆ.

೮೩. ಹಾಸ್ತಿಕ (ನ),ಗಜತಾ (ಸ್ತ್ರೀ)=ಆನೆಗಳ ಗುಂಪು. ಕರಿಣೀ, ಧೇನುಕಾ, ವಶಾ (ಸ್ತ್ರೀ)=ಹೆಣ್ಣಾನೆ. ಗಂಡ, ಕಟ (ಪು)=ಆನೆಯ ಕೆನ್ನೆ. ಮದ (ಪು), ದಾನ (ನ)=ಮದೋದಕ. ವಮಥು, ಕರಶೀಕರ (ಪು)=ಸೊಂಡಿಲಿನಿಂದ ಬರುವ ತುಂತುರು.

೮೪. ಕುಂಭ (ಪು)=ಆನೆಯ ತಲೆಯ ಕುಂಭ. ವಿದು (ಪು)=ಆನೆಯ ಎರಡು ಕುಂಭಗಳ ಮಧ್ಯಭಾಗ. ಅವಗ್ರಹ (ಪು)=ಆನೆಯ ಹಣೆ. ಇಷೀಕಾ (ಈಷಿಕಾ) (ಸ್ತ್ರೀ)=ಆನೆಯ ಕಣ್ಣುಗುಡ್ಡೆ.

೮೫. ನಿರ್ಯಾಣ (ನ)=ಆನೆಯ ಕಡೆಗಣ್ಣು. ಚೂಲಿಕಾ (ಸ್ತ್ರೀ)=ಆನೆಯ ಕಿವಿಯ ಬುಡ. ವಾಹಿತ್ಥ (ನ)=ಕುಂಭಸ್ಥಳದ ಕೆಳಭಾಗ. ಪ್ರತಿಮಾನ (ನ)=ವಾಹಿತ್ಥದ ಕೆಳಭಾಗ.

---

[1] ಸಿಂಧುರಃ ಸಾಮಜಃ ಕುಂಭೀ ಮಾತಂಗಶ್ಚ ಮದಾವಲಃ-ಎಂದು ಅಧಿಕ ಪಾಠವಿದೆ-ಕುಂಭಿನ್ (ಪು).



ಆಸನಂ ಸ್ಕಂಧದೇಶಸ್ಸ್ಯಾತ್ ಪದ್ಮಕಂ ಬಿಂದುಜಾಲಕಮ್ ।
ಪಕ್ಷಭಾಗಃ ಪಾರ್ಶ್ವಭಾಗೋ ದಂತಭಾಗಸ್ತು ಯೋಽಗ್ರತಃ ॥ ೮೬
ದ್ವೌ ಪೂರ್ವಪಶ್ಚಾಜ್ಜಂಘಾದಿದೇಶೌ ಗಾತ್ರಾವರೇ ಕ್ರಮಾತ್ ।
ತೋತ್ರಂ ವೈಣುಕಮಾಲಾನಂ ಬಂಧಸ್ತಂಭೇಽಥ ಶೃಂಖಲಾ ॥ ೮೭
ಅಂದುಕೋ ನಿಗಡೋಽಸ್ತ್ರೀ ಸ್ಯಾದಂಕುಶೋಽಸ್ತ್ರೀ ಸೃಣಿಃ ಸ್ತ್ರಿಯಾಮ್ ।
ದೂಷ್ಯಾ ಕಕ್ಷ್ಯಾ ವರತ್ರಾ ಸ್ಯಾತ್ಕಲ್ಪನಾ ಸಜ್ಜನಾ ಸಮೇ ॥ ೮೮
ಪ್ರವೇಣ್ಯಾಸ್ತರಣಂ ವರ್ಣಃ ಪರಿಸ್ತೋಮಃ ಕುಥೋ ದ್ವಯೋಃ ।
ವೀತಂ ತ್ವಸಾರಂ ಹಸ್ತ್ಯಶ್ವಂ ವಾರೀ ತು ಗಜಬಂಧನೀ ॥ ೮೯
ಘೋಟಕೇ ವೀತಿತುರಗತುರಂಗಾಶ್ವತುರಂಗಮಾಃ ।
ವಾಜಿವಾಹಾರ್ವಗಂಧರ್ವಹಯಸೈಂಧವಸಪ್ತಯಃ ॥ ೯೦

---

೮೬. ಆಸನ (ನ)=ಆನೆಯ ಹೆಗಲು. ಪದ್ಮಕ, ಬಿಂದು ಜಾಲಕ (ನ)=ಪ್ರಾಯದ ಆನೆಯ ಮೈಮೇಲೆ ಕಾಣಿಸುವ ಪದ್ಮಾಕಾರದ ಚಿಹ್ನೆ. ಪಕ್ಷಭಾಗ (ಪು)=ಆನೆಯ ಪಕ್ಕೆ. ದಂತಭಾಗ (ಪು)=ಆನೆಯ ಮುಂಭಾಗ.

೮೭-೮೮. ಗಾತ್ರ (ನ)=ಆನೆಯ ಕೆಳಮೈಯಲ್ಲಿ ಮುಂಭಾಗ. ಅವರ (ನ)=ಆನೆಯ ಕೆಳಮೈಯಲ್ಲಿ ಹಿಂಭಾಗ. ತೋತ್ರ, ವೈಣುಕ (ನ)=ಆನೆಯನ್ನು ಹೊಡೆಯುವ ಕೋಲು. ಆಲಾನ (ನ)=ಆನೆಯನ್ನು ಕಟ್ಟುವ ಕಂಭ. ಶೃಂಖಲಾ (ಸ್ತ್ರೀ), ಅಂದುಕ (ಪು), ನಿಗಡ (ಪು.ನ)=ಕಟ್ಟಿಹಾಕುವ ಸರಪಳಿ. ಅಂಕುಶ (ಪು.ನ) ಸೃಣಿ[1] (ಸ್ತ್ರೀ)=ಅಂಕುಶ. ದೂಷ್ಯಾ, ಕಕ್ಷ್ಯಾ, ವರತ್ರಾ (ಸ್ತ್ರೀ)=ಆನೆಯ ಸೊಂಟಕ್ಕೆ ಕಟ್ಟುವ ಚರ್ಮದ ಪಟ್ಟಿ. ಕಲ್ಪನಾ, ಸಜ್ಜನಾ (ಸ್ತ್ರೀ)=ಹತ್ತುವುದಕ್ಕಾಗಿ ಆನೆಯನ್ನು ಸಜ್ಜುಗೊಳಿಸುವುದು.

೮೯. ಪ್ರವೇಣೀ (ಸ್ತ್ರೀ), ಆಸ್ತರಣ (ನ),ವರ್ಣ, ಪರಿಸ್ತೋಮ (ಪು), ಕುಥ[2] (ಪು.ಸ್ತ್ರೀ)=ಆನೆಯ ಮೇಲೆ ಹಾಸುವ ಚಿತ್ರವರ್ಣದ ಕಂಬಳಿ. ವೀತ (ನ)=ದುರ್ಬಲವಾದ ಆನೆ ಅಥವಾ ಕುದುರೆ. ವಾರೀ, ಗಜಬಂಧನೀ (ಸ್ತ್ರೀ)=ಆನೆಗಳನ್ನು ಕಟ್ಟುವ ಸ್ಥಳ ; ಖೆಡ್ಡ.

೯೦. ಘೋಟಕ, ವೀತಿ (ಪ್ರೀತಿ) ತುರಗ, ತುರಂಗ, ಅಶ್ವ, ತುರಂಗಮ, ವಾಜಿನ್, ವಾಹ, ಅರ್ವನ್, ಗಂಧರ್ವ, ಹಯ, ಸೈಂಧವ, ಸಪ್ತಿ (ಪು)=ಕುದುರೆ.

---

[1] ಸೃಣಿ ಎಂಬ ಶಬ್ದವು ಪುಲ್ಲಿಂಗದಲ್ಲಿಯೂ ಪ್ರಯುಕ್ತವಾಗಿದೆ : 'ಆರಕ್ಷಮಗ್ನಮವಮತ್ಯ ಸೃಣಿಂ ಶಿತಾಗ್ರಂ-ಮಾಘ. ೫—೫. ಅಂಕುಶೋಽಸ್ತ್ರೀ ಸೃಣಿರ್ದ್ವಯೋಃ' ಇತ್ಯಮರಃ- ಮಲ್ಲಿನಾಥವ್ಯಾಖ್ಯಾ.

[2] ಇದು ನಪುಂಸಕದಲ್ಲಿಯೂ ಇದೆ.

ಆಜಾನೇಯಾಃ ಕುಲೀನಾಸ್ಸ್ಯುರ್ವಿನೀತಾಃ ಸಾಧುವಾಹಿನಃ ।
ವನಾಯುಜಾಃ ಪಾರಸೀಕಾಃ ಕಾಂಬೋಜಾ ಬಾಹ್ಲಿಕಾ ಹಯಾಃ ॥ ೮೧೧
ಯಯುರಶ್ವೋಽಶ್ವಮೇಧೀಯೋ ಜವನಸ್ತು ಜವಾಧಿಕಃ ।
ಪೃಷ್ಠ್ಯಃ ಸ್ಥೌರೀ ಸಿತಃ ಕರ್ಕೋ ರಥ್ಯೋ ವೋಢಾ ರಥಸ್ಯ ಯಃ ॥ ೮೧೨
ಬಾಲಃ ಕಿಶೋರೋ ವಾಮ್ಯಶ್ವಾ ವಡವಾ ವಾಡವಂ ಗಣೇ ।
ತ್ರಿಷ್ವಾಶ್ವೀನಂ ಯದಶ್ವೇನ ದಿನೇನೈಕೇನ ಗಮ್ಯತೇ ॥ ೮೧೩
ಕಶ್ಯಂ ತು ಮಧ್ಯಮಶ್ವಾನಾಂ ಹೇಷಾ ಹ್ರೇಷಾ ಚ ನಿಸ್ವನಃ ।
ನಿಗಾಲಸ್ತು ಗಲೋದ್ದೇಶೇ ಬೃಂದೇ ತ್ವಾಶ್ವೀಯಮಾಶ್ವವತ್ ॥ ೮೧೪
ಆಸ್ಕಂದಿತಂ ಧೌರಿತಕಂ ರೇಚಿತಂ ವಲ್ಗಿತಂ ಪ್ಲುತಮ್ ।
ಗತಯೋಽಮೂಃ ಪಂಚ ಧಾರಾಃ ಘೋಣಾತು ಪ್ರೋಥಮಸ್ತ್ರಿಯಾಮ್ ॥ ೮೧೫

---

೮೧೧. ಆಜಾನೇಯ (ಪು)=ಜಾತಿಯ ಕುದುರೆ. ವಿನೀತ (ಪು)=ಪಳಗಿದ ಕುದುರೆ. ವನಾಯುಜ, ಪಾರಸೀಕ, ಕಾಂಬೋಜ, ಬಾಹ್ಲಿಕ (ಪು)=ವನಾಯು ಮುಂತಾದ ಬೇರೆ ಬೇರೆ ದೇಶದಲ್ಲಿ ಜನಿಸಿದ ಕುದುರೆಗಳು.

೮೧೨. ಯಯು (ಪು)=ಅಶ್ವಮೇಧಯಾಗಕ್ಕೆ ಯೋಗ್ಯವಾದ ಕುದುರೆ. ಜವನ (ಪು)=ವೇಗಶಾಲಿಯಾದ ಕುದುರೆ. ಪೃಷ್ಠ್ಯ, ಸ್ಥೌರಿನ್ (ಪು)=ಹೊರೆಯನ್ನು ಹೊರಬಲ್ಲ ಕುದುರೆ. ಕರ್ಕ (ಪು)=ಬಿಳಿಯ ಕುದುರೆ. ರಥ್ಯ (ಪು)=ರಥವನ್ನು ಎಳೆಯುವ ಕುದುರೆ.

೮೧೩. ಬಾಲ, ಕಿಶೋರ (ಪು)=ಕುದುರೆಮರಿ. ವಾಮೀ, ಅಶ್ವಾ, ವಡವಾ (ಸ್ತ್ರೀ)=ಹೆಣ್ಣು ಕುದುರೆ. ವಾಡವ (ನ)=ಹೆಣ್ಣು ಕುದುರೆಗಳ ಗುಂಪು. ಆಶ್ವೀನ (ಪು. ಸ್ತ್ರೀ.ನ)=ಕುದುರೆಯು ಒಂದು ದಿನದಲ್ಲಿ ಹೋಗಿ ಸೇರಬಹುದಾದ ಸ್ಥಳ.

೮೧೪. ಕಶ್ಯ (ನ)=ಕುದುರೆಯ ಬೆನ್ನಿನ ಮಧ್ಯಭಾಗ, ಚಾಟಿಯಿಂದ ಹೊಡೆಯುವ ಸ್ಥಳ. ಹೇಷಾ, ಹ್ರೇಷಾ (ಸ್ತ್ರೀ)=ಕುದುರೆಯ ಕೆನೆಯುವಿಕೆ. ನಿಗಾಲ (ಪು)=ಕುದುರೆಯ ಕತ್ತಿನ ಸಮೀಪಭಾಗ. ಆಶ್ವೀಯ, ಅಶ್ವ (ನ)=ಕುದುರೆಗಳ ಸಮೂಹ.

೮೧೫. ಆಸ್ಕಂದಿತ ಮುಂತಾದ ಐದು ಶಬ್ದಗಳು ಕುದುರೆಯ ಗತಿವಿಶೇಷದ ವಾಚಕಗಳು : ಆಸ್ಕಂದಿತ (ನ)=ಕುಪ್ಪಳಿಸುತ್ತ ಓಡುವುದು. ಧೌರಿತಕ, (ಧೋರಿತಕ) (ನ)=ನವಿಲಿನಂತೆ ಒಲೆಯುತ್ತ ಓಡುವುದು. ರೇಚಿತ (ನ)=ಮಧ್ಯಮವೇಗದಿಂದ ಓಡುವುದು. ವಲ್ಗಿತ (ನ)=ದೇಹದ ಮುಂಭಾಗವನ್ನು ಮೇಲೆತ್ತಿ ತಲೆಯನ್ನು ತಗ್ಗಿಸಿ ಓಡುವುದು. ಪ್ಲುತ (ನ)=ಅತಿವೇಗದಿಂದ ಹಕ್ಕಿಯಂತೆ ನೇರವಾಗಿ ಓಡುವುದು. ಧಾರಾ (ಸ್ತ್ರೀ)=ಕುದುರೆಯ ಎಲ್ಲಾ ಬಗೆಯ ಓಟ. ಘೋಣಾ (ಸ್ತ್ರೀ), ಪ್ರೋಥ (ಪು.ನ)=ಕುದುರೆಯ ಮೂಗು.



ಕವಿಕಾ ತು ಖಲೀನೋಽಸ್ತ್ರೀ ಶಫಂ ಕ್ಲೀಬೇ ಖುರಃ ಪುಮಾನ್ ।
ಪುಚ್ಛೋಽಸ್ತ್ರೀ ಲೂಮಲಾಂಗೂಲೇ ವಾಲಹಸ್ತಶ್ಚ ವಾಲಧಿಃ ॥ ೮೧೬
ತ್ರಿಷೂಪಾವೃತ್ತಲುಠಿತೌ ಪರಾವೃತ್ತೇ ಮುಹುರ್ಭುವಿ ।
ಯಾನೇ ಚಕ್ರಿಣಿ ಯುದ್ಧಾರ್ಥೇ ಶತಾಂಗಸ್ಸ್ಯಂದನೋ ರಥಃ ॥ ೮೧೭
ಅಸೌ ಪುಷ್ಯರಥಶ್ಚಕ್ರಯಾನಂ ನ ಸಮರಾಯ ಯತ್ ।
ಕರ್ಣೀರಥಃ ಪ್ರವಹಣಂ ಡಯನಂ ಚ ಸಮಂ ತ್ರಯಮ್ ॥ ೮೧೮
ಕ್ಲೀಬೇಽನಶ್ಶಕಟೋಽಸ್ತ್ರೀ ಸ್ಯಾದ್ಗಂತ್ರೀ ಕಂಬಲಿವಾಹ್ಯಕಮ್ ।
ಶಿಬಿಕಾ ಯಾಪ್ಯಯಾನಂ ಸ್ಯಾದ್ದೋಲಾ ಪ್ರೇಂಖಾದಿಕಾ ಸ್ತ್ರಿಯಾಮ್ ॥ ೮೧೯
ಉಭೌ ತು ದ್ವೈಪ ವೈಯಾಘ್ರೌ ದ್ವೀಪಿಚರ್ಮಾವೃತೇ ರಥೇ ।
ಪಾಂಡುಕಂಬಲಸಂವೀತಃ ಸ್ಯಂದನಃ ಪಾಂಡುಕಂಬಲೀ ॥ ೮೨೦

---

೮೧೬. ಕವಿಕಾ (ಸ್ತ್ರೀ), ಖಲೀನ (ಪು.ನ)=ಕಡಿವಾಣ. ಶಫ (ನ), ಖುರ (ಪು)=ಗೊರಸು. ಪುಚ್ಛ(ಪು. ನ). ಲೂಮ, ಲಾಂಗೂಲ (ನ)=ಬಾಲ. ವಾಲಹಸ್ತ, ವಾಲಧಿ (ಪು)=ಕೂದಲಿಂದ ಕೂಡಿದ ಬಾಲದ ತುದಿ.

೮೧೭. ಉಪಾವೃತ್ತ, ಲುಠಿತ, ಪರಾವೃತ್ತ (ಪು. ಸ್ತ್ರೀ. ನ- ವಿ. ನಿಘ್ನ)=ಆಯಾಸ ಪರಿಹಾರಕ್ಕಾಗಿ ನೆಲದಲ್ಲಿ ಹೊರಳಾಡಿದ ಕುದುರೆ. ಶತಾಂಗ, ಸ್ಯಂದನ, ರಥ (ಪು)=ಯುದ್ಧೋಪಯೋಗಿಯಾದ ರಥ.

೮೧೮. ಪುಷ್ಯರಥ (ಪುಷ್ಪರಥ) (ಪು)=ವಿಹಾರಾರ್ಥವಾದ ರಥ. ಕರ್ಣೀರಥ (ಪು), ಪ್ರವಹಣ, ಡಯನ (ನ)=ಪಲ್ಲಕ್ಕಿ, ಮೇನಾ.

೮೧೯. ಅನಸ್ (ನ), ಶಕಟ (ಪು.ನ)=ಬಂಡಿ, ಗಾಡಿ. ಗಂತ್ರೀ, ಕಂಬಲಿವಾಹ್ಯಕ (ನ)=ಎತ್ತುಗಳಿಂದ ಎಳೆಯಲ್ಪಡುವ ಬಂಡಿ. ದೋಲಾ, ಪ್ರೇಂಖಾ[1] (ಸ್ತ್ರೀ)=ಉಯ್ಯಾಲೆ, ತೂಗುಮಂಚ.

೮೨೦-೮೨೧. ದ್ವೈಪ, ವೈಯಾಘ್ರ (ಪು)=ಹುಲಿಯ ಚರ್ಮವನ್ನು ಹೊದಿಸಿದ ರಥ. ಪಾಂಡುಕಂಬಲಿನ್ (ಪು)=ಬಿಳಿಯ ಕಂಬಳಿಯನ್ನು ಹೊದಿಸಿದ ರಥ. ಕಾಂಬಲ (ಪು)=ಕಂಬಳಿ

---

1 ಪ್ರೇಂಖ (ಪು) ಎಂಬ ರೂಪವೂ ಉಂಟು.

ರಥೇ ಕಾಂಬಲವಾಸ್ತ್ರಾದ್ಯಾಃ ಕಂಬಲಾದಿಭಿರಾವೃತೇ ।
ತ್ರಿಷು ದ್ವೈಪಾದಯೋ ರಥ್ಯಾ ರಥಕಟ್ಯಾ ರಥವ್ರಜೇ ॥ ೬೨೧
ಧೂಃ ಸ್ತ್ರೀ ಕ್ಲೀಬೇ ಯಾನಮುಖಂ ಸ್ಯಾದ್ರಥಾಂಗಮಪಸ್ಕರಃ ।
ಚಕ್ರಂ ರಥಾಂಗಂ ತಸ್ಯಾಂತೇ ನೇಮಿಃ ಸ್ತ್ರೀ ಸ್ಯಾತ್ಪ್ರಧಿಃ ಪುಮಾನ್ ॥ ೬೨೨
ಪಿಂಡಿಕಾ ನಾಭಿರಕ್ಷಾಗ್ರಕೀಲಕೇ ತು ದ್ವಯೋರಣಿಃ ।
ರಥಗುಪ್ತಿರ್ವರೂಥೋ ನಾ ಕೂಬರಸ್ತು ಯುಗಂಧರಃ ॥ ೬೨೩
ಅನುಕರ್ಷೋ ದಾರ್ವಧಃಸ್ಥಂ ಪ್ರಾಸಂಗೋ ನಾ ಯುಗಾಂತರಮ್ ।
ಸರ್ವಂ ಸ್ಯಾದ್ವಾಹನಂ ಯಾನಂ ಯುಗ್ಯಂ ಪತ್ರಂ ಚ ಧೋರಣಮ್ ॥ ೬೨೪
ಪರಂಪರಾವಾಹನಂ ಯತ್ತದ್ವೈನೀತಕಮಸ್ತ್ರಿಯಾಮ್ ।
ಆಧೋರಣಾ ಹಸ್ತಿಪಕಾ ಹಸ್ತ್ಯಾರೋಹಾ ನಿಷಾದಿನಃ ॥ ೬೨೫

ಯನ್ನು ಹೊದಿಸಿದ ರಥ. ಹೀಗೆಯೇ ವಾಸ್ತ್ರ, ಚಾರ್ಮಣ, ಕ್ಷೌಮ, ದೌಕೂಲ ಮೊದಲಾದ ಶಬ್ದಗಳು ವಸ್ತ್ರಾದಿಗಳನ್ನು ಹೊದಿಸಿದ ರಥವನ್ನು ಬೋಧಿಸುತ್ತವೆ. ದ್ವೈಪಾದಿ ಶಬ್ದಗಳು ವಿಶೇಷ್ಯನಿಘ್ನವಾಗಿ ಮೂರು ಲಿಂಗಗಳಲ್ಲಿಯೂ ವರ್ತಿಸುತ್ತವೆ. ಉದಾ: ದ್ವೈಪಃ ರಥಃ, ದ್ವೈಪೀ ರಥಕಟ್ಯಾ, ದ್ವೈಪಂ ಸ್ಯಂದನಂ (-ಸ್ತ್ರೀ. ಪಾಂಡುಕಂಬಲಿನೀ. ಉಳಿದವು ಸ್ತ್ರೀಲಿಂಗದಲ್ಲಿ ಈಕಾರಾಂತಗಳು.) ರಥ್ಯಾ, ರಥಕಟ್ಯಾ (ಸ್ತ್ರೀ), ರಥವ್ರಜ (ಪು)=ರಥಗಳ ಸಮೂಹ.

೬೨೨. ಧುರ್ (ಸ್ತ್ರೀ), ಯಾನಮುಖ (ನ)=ರಥದ ಮುಂಭಾಗ, ಮೂತಿ. ಅಪಸ್ಕರ (ಪು)=ಅಚ್ಚು ಬಳೆ ಮುಂತಾದ ರಥಾವಯವ. ಚಕ್ರ, ರಥಾಂಗ (ನ)=ರಥದ ಚಕ್ರ, ಗಾಲಿ. ನೇಮಿ (ಸ್ತ್ರೀ), ಪ್ರಧಿ (ಪು)=ಗಾಲಿಯ ತುದಿಯಲ್ಲಿ ಸುತ್ತಲೂ ಇರುವ ಬಳೆ, ಹಳಿ (Tyre of a wheel).

೬೨೩. ಪಿಂಡಿಕಾ, ನಾಭಿ (ಸ್ತ್ರೀ)=ಚಕ್ರದ ಮಧ್ಯದಲ್ಲಿ ಅಚ್ಚನ್ನು ಸೇರಿಸುವ ತೂಬು, ಕುಂಬ. ಅಣಿ (ಪು. ಸ್ತ್ರೀ)=ಕೀಲು, ಕಡಾಣಿ. ರಥಗುಪ್ತಿ (ಸ್ತ್ರೀ), ವರೂಥ (ಪು)=ರಥದ ಸುತ್ತಲೂ ಇರುವ ರಕ್ಷಣಾರ್ಥವಾದ ಆವರಣ. ಕೂಬರ, ಯುಗಂಧರ (ಪು)= ನೊಗವನ್ನು ಹೇರುವ ಮೂಕಿ.

೬೨೪. ಅನುಕರ್ಷ (ಪು)=ಮೂಕಿಮರ. ಪ್ರಾಸಂಗ (ಪು)=ಹೋರಿಯನ್ನು ಪಳಗಿಸುವಾಗ ಕಟ್ಟತಕ್ಕ ನೊಗ (ಇದು ರಥದ ನೊಗವಲ್ಲ). ವಾಹನ, ಯಾನ, ಯುಗ್ಯ, ಪತ್ರ, ಧೋರಣ (ನ)=ಸಾಮಾನ್ಯವಾಗಿ ವಾಹನ.



ನಿಯಂತಾ ಪ್ರಾಜಿತಾ ಯಂತಾ ಸೂತಃ ಕ್ಷತ್ತಾ ಚ ಸಾರಥಿಃ ।
ಸವ್ಯೇಷ್ಠೃದಕ್ಷಿಣಸ್ಥೌ ಚ ಸಂಜ್ಞಾ ರಥಕುಟುಂಬಿನಃ ॥ ೬೨೬
ರಥಿನಸ್ಸ್ಯಂದನಾರೋಹಾ ಅಶ್ವಾರೋಹಾಸ್ತು ಸಾದಿನಃ ।
ಭಟಾ ಯೋಧಾಶ್ಚ ಯೋದ್ಧಾರಸ್ಸೇನಾರಕ್ಷಾಸ್ತು ಸೈನಿಕಾಃ ॥ ೬೨೭
ಸೇನಾಯಾಂ ಸಮವೇತಾ ಯೇ ಸೈನ್ಯಾಸ್ತೇ ಸೈನಿಕಾಶ್ಚ ತೇ ।
ಬಲಿನೋ ಯೇ ಸಹಸ್ರೇಣ ಸಾಹಸ್ರಾಸ್ತೇ ಸಹಸ್ರಿಣಃ ॥ ೬೨೮
ಪರಿಧಿಸ್ಥಃ ಪರಿಚರಃ ಸೇನಾನೀರ್ವಾಹಿನೀಪತಿಃ ।
ಕಂಚುಕೋ ವಾರಬಾಣೋಽಸ್ತ್ರೀ ಯತ್ತು ಮಧ್ಯೇ ಸಕಂಚಕಾಃ ॥ ೬೨೯
ಬಧ್ನಂತಿ ತತ್ಸಾರಸನಮಧಿಕಾಂಗೋಽಥ ಶೀರ್ಷಕಮ್ ।
ಶೀರ್ಷಣ್ಯಂ ಚ ಶಿರಸ್ತ್ರೇಽಥ ತನುತ್ರಂ ವರ್ಮ ದಂಶನಮ್ ॥ ೬೩೦

೬೨೫. ವೈನೀತಕ (ಪು.ನ)=ಪರಂಪರೆಯಿಂದ ಸಾಗಿಸುವ ವಾಹನ-ಎಂದರೆ ರಥ, ಪಲ್ಲಕ್ಕಿ ಮೊದಲಾದ್ದು. ಕುದುರೆ, ಪಲ್ಲಕ್ಕಿ ಹೊರುವವರು—ಮೊದಲಾದವರಿಂದ ಇದು ಭಾರವನ್ನು ಸಾಗಿಸುತ್ತದೆ. (ಕುದುರೆ, ಆನೆ ಮೊದಲಾದ ಪ್ರಾಣಿಗಳು ನೇರವಾದ ವಾಹನ) ಆಧೋರಣ, ಹಸ್ತಿಪಕ, ಹಸ್ತ್ಯಾರೋಹ, ನಿಷಾದಿನ್ (ಪು)=ಮಾವುತ, ಮಾವಟಿಗ.

೬೨೬. ನಿಯಂತೃ, ಪ್ರಾಜಿತೃ, ಯಂತೃ, ಸೂತ, ಕ್ಷತ್ತೃ, ಸಾರಥಿ, ಸವ್ಯೇಷ್ಠೃ[1], ದಕ್ಷಿಣಸ್ಥ, ರಥಕುಟುಂಬಿನ್ (ಪು)=ಸಾರಥಿ.

೬೨೭. ರಥಿನ್, ಸ್ಯಂದನಾರೋಹ (ಪು)=ರಥಿಕ. ಅಶ್ವಾರೋಹ, ಸಾದಿನ್ (ಪು)=ಕುದುರೆ ಸವಾರ. ಭಟ, ಯೋಧ, ಯೋದ್ಧೃ (ಪು)=ಯುದ್ಧಮಾಡುವವನು. ಸೇನಾರಕ್ಷ, ಸೈನಿಕ (ಪು)=ಸೇನೆಯನ್ನು ಕಾಯುವ ಪಹರೆಯವನು.

೬೨೮. ಸೈನ್ಯ, ಸೈನಿಕ (ಪು)=ಸೈನ್ಯಕ್ಕೆ ಸೇರಿದವನು. ಸಾಹಸ್ರ, ಸಹಸ್ರಿನ್ (ಪು)=ಒಂದು ಸಾವಿರ ಸೈನಿಕರನ್ನುಳ್ಳವನು.

೬೨೯-೬೩೦. ಪರಿಧಿಸ್ಥ, ಪರಿಚರ (ಪು)=ಅಂಗರಕ್ಷಕ. ಸೇನಾನೀ, ವಾಹಿನೀಪತಿ (ಪು)=ಸೇನಾಪತಿ. ಕಂಚುಕ (ಪು), ವಾರಬಾಣ (ವಾರವಾಣ) (ಪು. ನ)=ಯುದ್ಧೋಪಯೋಗಿಯಾದ ನಿಲುವಂಗಿ. ಸಾರಸನ (ನ), ಅಧಿಕಾಂಗ (ಅಧಿಪಾಂಗ) (ಪು)=ನಡುಕಟ್ಟು (Belt).

1 ಸವ್ಯೇಷ್ಠ ಎಂಬ ಅಕಾರಾಂತವೂ ಇದೆ.

ಉರಶ್ಛದಃ ಕಂಕಟಕೋ ಜಗರಃ ಕವಚೋಽಸ್ತ್ರಿಯಾಮ್ ।
ಆಮುಕ್ತಃ ಪ್ರತಿಮುಕ್ತಶ್ಚ ಪಿನದ್ಧಶ್ಚಾಪಿನದ್ಧವತ್ ॥ ೮೩೧

ಸನ್ನದ್ಧೋ ವರ್ಮಿತಸ್ಸಜ್ಜೋ ದಂಶಿತೋ ವ್ಯೂಢಕಂಕಟಃ ।
ತ್ರಿಷ್ವಾಮುಕ್ತಾದಯೋ ವರ್ಮಭೃತಾಂ ಕಾವಚಿಕಂ ಗಣೇ ॥ ೮೩೨

ಪದಾತಿಪತ್ತಿಪದಗಪಾದಾತಿಕಪದಾಜಯಃ ।
ಪದ್ಗಶ್ಚ ಪದಿಕಶ್ಚಾಥ ಪಾದಾತಂ ಪತ್ತಿಸಂಹತಿಃ ॥ ೮೩೩

ಶಸ್ತ್ರಾಜೀವೇ ಕಾಂಡಪೃಷ್ಠಾಯುಧೀಯಾಯುಧಿಕಾಸ್ಸಮಾಃ ।
ಕೃತಹಸ್ತಸ್ಸು ಪ್ರಯೋಗವಿಶಿಖಃ ಕೃತಪುಂಖವತ್ ॥ ೮೩೪

ಅಪರಾದ್ಧಪೃಷತ್ಕೋಽಸೌ ಲಕ್ಷ್ಯಾದಶ್ಚ್ಯುತಸಾಯಕಃ ।
ಧನ್ವೀ ಧನುಷ್ಮಾನ್ ಧಾನುಷ್ಕೋ ನಿಷಂಗ್ಯಸ್ತ್ರೀ ಧನುರ್ಧರಃ ॥ ೮೩೫

---

ಶೀರ್ಷಕ, ಶೀರ್ಷಣ್ಯ, ಶಿರಸ್ತ್ರ (ನ)=ಶಿರಸ್ತ್ರಾಣ (Helmet) ; ಟೋಪಿ ; ರುಮಾಲು. ತನುತ್ರ, ವರ್ಮನ್, ದಂಶನ (ನ), ಉರಶ್ಛದ, ಕಂಕಟಕ, ಜಗರ (ಪು) (ಪು.ನ)=ಎದೆಯ ರಕ್ಷಣಾಕವಚ.

೮೩೧-೮೩೨. ಆಮುಕ್ತ, ಪ್ರತಿಮುಕ್ತ, ಪಿನದ್ಧ, ಅಪಿನದ್ಧ (ಪು. ಸ್ತ್ರೀ. ನ-ವಿ. ನಿಘ್ನ)=ಧರಿಸಲ್ಪಟ್ಟ ವಸ್ತ್ರಕವಚ ಮುಂತಾದ್ದು. ಸಂನದ್ಧ, ವರ್ಮಿತ, ಸಜ್ಜ, ದಂಶಿತ, ವ್ಯೂಢಕಂಕಟ (ಪು. ಸ್ತ್ರೀ. ನ-ವಿ. ನಿಘ್ನ)=ಕವಚಾದಿಗಳನ್ನು ಧರಿಸಿ ಸಿದ್ಧನಾದವನು. ಕಾವಚಿಕ (ನ)=ಕವಚಧಾರಿಗಳ ಸಮೂಹ.

೮೩೩. ಪದಾತಿ, ಪತ್ತಿ, ಪದಗ, ಪಾದಾತಿಕ, ಪದಾಜಿ, ಪದ್ಗ, ಪದಿಕ (ಪು)=ಕಾಲಾಳು. ಪಾದಾತ (ನ)=ಕಾಲಾಳುಗಳ ಸಮೂಹ.

೮೩೪. ಮುಂದೆ ೮೪೪ನೆಯ ಶ್ಲೋಕದಲ್ಲಿ ಹೇಳಿದ 'ಸಾಂಯುಗೀನ' ಶಬ್ದದವರೆಗೆ ಹೇಳುವ ಶಬ್ದಗಳು ಅರ್ಥಾನುಸಾರವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಶಸ್ತ್ರಾಜೀವ, ಕಾಂಡಪೃಷ್ಠ, ಆಯುಧೀಯ, ಆಯುಧಿಕ (ಪು) (-ಸ್ತ್ರೀ. ಶಸ್ತ್ರಾಜೀವೀ)=ಆಯುಧವನ್ನು ಧರಿಸಿ ಅದರಿಂದ ಜೀವಿಸತಕ್ಕವನು. ಕೃತಹಸ್ತ, ಕೃತಪುಂಖ (ಪು)=ಅಸ್ತ್ರಪ್ರಯೋಗದಲ್ಲಿ ನುರಿತವನು.

೮೩೫. ಅಪರಾದ್ಧಪೃಷತ್ಕ (ಪು)=ಗುರಿತಪ್ಪಿ ಹೊಡೆಯುವವನು. ಧನ್ವಿನ್, ಧನುಷ್ಮತ್, ಧಾನುಷ್ಕ, ನಿಷಂಗಿನ್, ಅಸ್ತ್ರಿನ್, ಧನುರ್ಧರ (ಪು) (-ಸ್ತ್ರೀ. ಧನ್ವಿನೀ, ಧನುಷ್ಮತೀ, ಧಾನುಷ್ಕೀ, ನಿಷಂಗಿನೀ, ಅಸ್ತ್ರಿಣೀ)=ಧನುಸ್ಸನ್ನು ಹಿಡಿದವನು.



ಸ್ಯಾತ್ಕಂಡವಾಂಸ್ತು ಕಾಂಡೀರಶ್ಶಾಕ್ತೀಕಶ್ಶಕ್ತಿಹೇತಿಕಃ ।
ಯಾಷ್ಟೀಕಪಾರಶ್ವಧಿಕೌ ಯಷ್ಟಿಪರ್ಶ್ವಧಹೇತಿಕೌ ॥ ೮೩೬

ನೈಸ್ತ್ರಿಂಶಿಕೋಽಸಿಹೇತಿಸ್ಸ್ಯಾತ್ಸಮೌ ಪ್ರಾಸಿಕಕೌಂತಿಕೌ ।
ಚರ್ಮೀ ಫಲಕಪಾಣಿಃ ಸ್ಯಾತ್ ಪಾತಕೀ ವೈಜಯಂತಿಕಃ ॥ ೮೩೭

ಅನುಪ್ಲವಸ್ಸಹಾಯಶ್ಚಾನುಚರೋಽಭಿಚರಸ್ಸಮಾಃ ।
ಪುರೋಗಾಗ್ರೇಸರಪ್ರಷ್ಠಾಗ್ರತಸ್ಸರಪುರಸ್ಸರಾಃ ॥ ೮೩೮

ಪುರೋಗಮಃ ಪುರೋಗಾಮೀ ಮಂದಗಾಮೀ ತು ಮಂಥರಃ ।
ಜಂಘಾಲೋಽತಿಜವಸ್ತುಲ್ಯೌ ಜಂಘಾಕರಿಕಜಾಂಘಿಕೌ ॥ ೮೩೯

ತರಸ್ವೀ ತ್ವರಿತೋ ವೇಗೀ ಪ್ರಜವೀ ಜವನೋ ಜವಃ ।
ಜಯ್ಯೋ ಯಶ್ಶಕ್ಯತೇ ಜೇತುಂ ಜೇಯೋ ಜೇತವ್ಯಮಾತ್ರಕೇ ॥ ೮೪೦

---

೮೩೬. ಕಾಂಡವತ್, ಕಾಂಡೀರ (ಪು) (-ಸ್ತ್ರೀ. ಕಾಂಡವತೀ)=ಬಾಣಧಾರಿ. ಶಾಕ್ತೀಕ (ಪು) (-ಸ್ತ್ರೀ. ಶಾಕ್ತೀಕೀ)=ಶಕ್ತಿಯೆಂಬ ಆಯುಧವನ್ನು ಹಿಡಿದವನು. ಯಾಷ್ಟೀಕ (ಪು) (-ಸ್ತ್ರೀ. ಯಾಷ್ಟೀಕೀ)=ದೊಣ್ಣೆಯನ್ನು ಆಯುಧವಾಗಿ ಹಿಡಿದವನು. ಪಾರಶ್ವಧಿಕ (ಪು) (-ಸ್ತ್ರೀ. ಪಾರಶ್ವಧಿಕೀ)=ಕೊಡಲಿಯನ್ನು ಆಯುಧವಾಗಿ ಹಿಡಿದವನು.

೮೩೭. ನೈಸ್ತ್ರಿಂಶಿಕ (ಪು) (- ಸ್ತ್ರೀ. ನೈಸ್ತ್ರಿಂಶಿಕೀ)= ಕತ್ತಿಯನ್ನು ಹಿಡಿದವನು. ಪ್ರಾಸಿಕ (ಪು) (-ಸ್ತ್ರೀ. ಪ್ರಾಸಿಕೀ)=ಪ್ರಾಸವನ್ನು ಹಿಡಿದವನು. ಕೌಂತಿಕ (ಪು) (-ಸ್ತ್ರೀ. ಕೌಂತಿಕೀ)=ಕುಂತಾಯುಧಧಾರಿ. ಚರ್ಮಿನ್ (ಪು) (-ಸ್ತ್ರೀ. ಚರ್ಮಿಣೀ)=ಗುರಾಣಿಯನ್ನು ಹಿಡಿದವನು. ಪತಾಕಿನ್, ವೈಜಯಂತಿಕ (ಪು) (-ಸ್ತ್ರೀ. ಪತಾಕಿನೀ)=ಬಾವುಟವನ್ನು ಹಿಡಿದವನು.

೮೩೮-೮೩೯. ಅನುಪ್ಲವ, ಸಹಾಯ, ಅನುಚರ, ಅಭಿಸರ (ಪು) (-ಸ್ತ್ರೀ. ಅನುಚರೀ)=ನೆರವು ನೀಡಲು ಜೊತೆಯಲ್ಲಿ ಬರತಕ್ಕವನು. ಪುರೋಗ, ಅಗ್ರೇಸರ, ಪ್ರಷ್ಠ, ಅಗ್ರತಃಸರ, ಪುರಃಸರ, ಪುರೋಗಮ, ಪುರೋಗಾಮಿನ್ (ಪು) (-ಸ್ತ್ರೀ. ಅಗ್ರೇಸರೀ, ಅಗ್ರತಃಸರೀ, ಪುರಃಸರೀ, ಪುರೋಗಾಮಿನೀ)=ಮುಂದುಗಡೆ ಹೋಗತಕ್ಕವನು. ಮಂದಗಾಮಿನ್, ಮಂಥರ (ಪು) (-ಸ್ತ್ರೀ. ಮಂದಗಾಮಿನೀ)= ಮೆಲ್ಲಗೆ ಹೋಗತಕ್ಕವನು.

೮೩೯-೮೪೦. ಜಂಘಾಲ, ಅತಿಜವ (ಪು)=ಬೇಗನೆ ನಡೆಯತಕ್ಕವನು. ಜಂಘಾಕರಿಕ, ಜಾಂಘಿಕ (ಪು) (-ಸ್ತ್ರೀ. ಜಾಂಘಿಕೀ)=ಜಂಘಾಬಲದಿಂದ ಜೀವಿಸತಕ್ಕವನು, ಸುದ್ದಿಗಾರ, ದೂತವೃತ್ತಿಯವನು. ತರಸ್ವಿನ್, ತ್ವರಿತ, ವೇಗಿನ್, ಪ್ರಜವಿನ್, ಜವನ, ಜವ (ಪು)

ಜೈತ್ರಸ್ತು ಜೇತಾ ಯೋ ಗಚ್ಛತ್ಯಲಂ ವಿದ್ವಿಷತಃ ಪ್ರತಿ ।
ಸೋಽಭ್ಯಮಿತ್ರ್ಯೋಽಭ್ಯಮಿತ್ರೀಯೋಽಪ್ಯಭ್ಯಮಿತ್ರೀಣ ಇತ್ಯಪಿ ॥ ೮೪೧
ಊರ್ಜಸ್ವಲಸ್ಸ್ಯಾ ದೂರ್ಜಸ್ವೀ ಯ ಊರ್ಜಾತಿಶಯಾನ್ವಿತಃ ।
ಸ್ಯಾದುರಸ್ವಾನುರಸಿಲೋ ರಥಿಕೋ ರಥಿನೋ ರಥೀ ॥ ೮೪೨
ಕಾಮಂಗಾಮ್ಯನುಕಾಮೀನೋ ಹ್ಯತ್ಯಂತೀನಸ್ತಥಾ ಭೃಶಮ್ ।
ಶೂರೋ ವೀರಶ್ಚ ವಿಕ್ರಾಂತೋ ಜೇತಾ ಜಿಷ್ಣುಶ್ಚ ಜಿತ್ವರಃ ॥ ೮೪೩
ಸಾಂಯುಗೀನೋ ರಣೇ ಸಾಧುಃ ಶಾಸ್ತ್ರಾಜೀವಾದಯಸ್ತ್ರಿಷು ।
ಧ್ವಜಿನೀ ವಾಹಿನೀ ಸೇನಾ ಪೃತನಾನೀಕಿನೀ ಚಮೂಃ ॥ ೮೪೪
ವರೂಥಿನೀ ಬಲಂ ಸೈನ್ಯಂ ಚಕ್ರಂ ಚಾನೀಕಮಸ್ತ್ರಿಯಾಮ್ ।
ವ್ಯೂಹಸ್ತು ಬಲವಿನ್ಯಾಸೋ ಭೇದಾ ದಂಡಾದಯೋ ಯುಧಿ ॥ ೮೪೫

(-ಸ್ತ್ರೀ. ತರಸ್ವಿನೀ, ವೇಗಿನೀ, ಪ್ರಜವಿನೀ)=ವೇಗಶಾಲಿ, ಚುರುಕಿನ ಕೆಲಸಗಾರ (Sharp Active). ಜಯ್ಯ (ಪು)=ಗೆಲ್ಲಲು ಶಕ್ಯನಾದವನು. ಜೇಯ (ಪು)=ಗೆಲ್ಲಲ್ಪಡತಕ್ಕವನು.

೮೪೧. ಜೈತ್ರ, ಜೇತೃ (ಪು) (-ಸ್ತ್ರೀ. ಜೈತ್ರೀ, ಜೇತ್ರೀ)=ಜಯಶಾಲಿ. ಅಭ್ಯಮಿತ್ರ್ಯ, ಅಭ್ಯಮಿತ್ರೀಯ, ಅಭ್ಯಮಿತ್ರೀಣ (ಪು)=ಶತ್ರುಗಳಮೇಲೆ ದಂಡೆತ್ತಿ ಹೋಗತಕ್ಕವನು.

೮೪೨. ಊರ್ಜಸ್ವಲ, ಊರ್ಜಸ್ವಿನ್ (ಪು) (-ಸ್ತ್ರೀ. ಊರ್ಜಸ್ವಿನೀ)=ಅತ್ಯಂತ ಬಲಶಾಲಿ. ಉರಸ್ವತ್, ಉರಸಿಲ (ಪು) (-ಸ್ತ್ರೀ. ಉರಸ್ವತೀ)=ವಿಶಾಲವಾದ ಎದೆಯುಳ್ಳವನು ; ಎದೆಗಾರ, ಧೀರ. ರಥಿಕ, ರಥಿನ, ರಥಿನ (ರಥಿರ), ರಥಿನ್ (ಪು) (-ಸ್ತ್ರೀ. ರಥಿನೀ)=ರಥಾರೂಢ ; ರಥದ ಒಡೆಯ.

೮೪೩. ಅನುಕಾಮೀನ (ಪು)=ಇಷ್ಟಬಂದಂತೆ ಸಂಚರಿಸತಕ್ಕವನು. ಅತ್ಯಂತೀನ (ಪು)=ಅತಿಯಾಗಿ ತಿರುಗತಕ್ಕವನು. ಶೂರ, ವೀರ, ವಿಕ್ರಾಂತ (ಪು)=ಶೂರ, ಜೇತೃ, ಜಿಷ್ಣು, ಜಿತ್ವರ (ಪು)=(-ಸ್ತ್ರೀ, ಜೇತ್ರೀ, ಜಿತ್ವರೀ)= ಜಯಶೀಲ, ಜಯವನ್ನು ಪಡೆಯತಕ್ಕವನು.

೮೪೪. ಸಾಂಯುಗೀನ (ಪು)=ಯುದ್ಧದಲ್ಲಿ ನಿಪುಣ. `ಶಸ್ತ್ರಾಜೀವ' ಶಬ್ದದಿಂದ ಇದುವರೆಗೆ ಹೇಳಿದ ಶಬ್ದಗಳು ಮೂರು ಲಿಂಗಗಳಲ್ಲಿಯೂ ವರ್ತಿಸುತ್ತವೆ.

೮೪೪-೮೪೫. ಧ್ವಜಿನೀ, ವಾಹಿನೀ, ಸೇನಾ, ಪೃತನಾ, ಅನೀಕಿನೀ, ಚಮೂ, ವರೂಥಿನೀ (ಸ್ತ್ರೀ), ಬಲ, ಸೈನ್ಯ, ಚಕ್ರ, (ನ), ಅನೀಕ (ಪು.ನ)=ಸೇನೆ. ವ್ಯೂಹ, ಬಲವಿನ್ಯಾಸ (ಪು)=ಯುದ್ಧದಲ್ಲಿ ಸೇನೆಯನ್ನು ನಿಲ್ಲಿಸುವ ವಿಧಾನ. ದಂಡ ಮೊದಲಾದವು ವ್ಯೂಹಭೇದಗಳು :



ಪ್ರತ್ಯಾಸಾರೋ ವ್ಯೂಹಪಾರ್ಷ್ಣಿಃ ಸೈನ್ಯಪೃಷ್ಠೇ ಪ್ರತಿಗ್ರಹಃ ।
ಏಕೇಭೈಕರಥತ್ರ್ಯ ಶ್ವಾ ಪತ್ತಿಃ ಪಂಚಪದಾತಿಕಾ ॥ ೮೪೬
ಪತ್ತ್ಯಂಗೈಸ್ತ್ರಿಗುಣೈಃ ಸರ್ವೈಃ ಕ್ರಮಾದಾಖ್ಯಾ ಯಥೋತ್ತರಮ್ ।
ಸೇನಾಮುಖಂ ಗುಲ್ಮಗಣೌ ವಾಹಿನೀ ಪೃತನಾ ಚಮೂಃ ॥ ೮೪೭
ಅನೀಕಿನೀ ದಶಾನೀಕಿನ್ಯೋಽಕ್ಷೌಹಿಣ್ಯಥ ಸಂಪದಿ ।
ಸಂಪತ್ತಿಶ್ರೀಶ್ಚ ಲಕ್ಷ್ಮೀಶ್ಚ ವಿಪತ್ತ್ಯಾಂ ವಿಪದಾಪದೌ ॥ ೮೪೮

ದಂಡವ್ಯೂಹ, ಪದ್ಮವ್ಯೂಹ, ಚಕ್ರವ್ಯೂಹ - ಹೀಗೆಯೇ ಭೋಗ, ಮಂಡಲ, ಅಸಂಹತ, ಶಕಟ, ಮಕರ, ಪತಾಕಾ, ಸರ್ವತೋಭದ್ರ, ದುರ್ಜಯ ಇತ್ಯಾದಿ.

೮೪೬. ಪ್ರತ್ಯಾಸಾರ, ವ್ಯೂಹಪಾರ್ಷ್ಣಿ (ಪು)=ವ್ಯೂಹದ ಹಿಂಭಾಗದಲ್ಲಿ ರಕ್ಷಣಾರ್ಥವಾಗಿರುವ ಸೇನೆ. (Second line of Defence). ಪ್ರತಿಗ್ರಹ (ಪು)=ಕಾದಿರಿಸಿದ ಸೇನೆ (Reserve). ಪತ್ತಿ (ಸ್ತ್ರೀ)=ಒಂದು ಆನೆ, ಒಂದು ರಥ, ಮೂರು ಕುದುರೆ, ಐದು ಕಾಲಾಳುಗಳಿರುವ ಪಡೆ.

೮೪೭.ಸೇನಾಮುಖ[1] (ನ)=ಮೂರು ಪತ್ತಿಗಳಿರುವ ಪಡೆ. ಗುಲ್ಮ

| [1]ಸೇನೆ | ಪತ್ತಿ | ಸೇನಾಮುಖ | ಗುಲ್ಮ | ಗಣ | ವಾಹಿನೀ | ಪೃತನಾ | ಚಮೂ | ಅನೀಕಿನೀ | ಅಕ್ಷೌಹಿಣೀ |
|---|---|---|---|---|---|---|---|---|---|
| ೧. ಆನೆ | ೧ | ೩ | ೯ | ೨೭ | ೮೧ | ೨೪೩ | ೭೨೯ | ೨೧೮೭ | ೨೧೮೭೦ |
| ೨. ರಥ | ೧ | ೩ | ೯ | ೨೭ | ೮೧ | ೨೪೩ | ೭೨೯ | ೨೧೮೭ | ೨೧೮೭೦ |
| ೩. ಕುದುರೆ | ೩ | ೯ | ೨೭ | ೮೧ | ೨೪೩ | ೭೨೯ | ೨೧೮೭ | ೬೫೬೧ | ೬೫೬೧೦ |
| ೪. ಕಾಲಾಳು | ೫ | ೧೫ | ೪೫ | ೧೩೫ | ೪೦೫ | ೧೨೧೫ | ೩೬೪೫ | ೧೦೯೩೫ | ೧೦೯೩೫೦ |
| ಒಟ್ಟು | ೧೦ | ೩೦ | ೯೦ | ೨೭೦ | ೮೧೦ | ೨೪೩೦ | ೭೨೯೦ | ೨೧,೮೭೦ | ೨,೧೮,೭೦೦ |

(ಪು)=ಮೂರು ಸೇನಾಮುಖಗಳು. ಗಣ (ಪು)=ಮೂರು ಗುಲ್ಮಗಳು. ವಾಹಿನೀ (ಸ್ತ್ರೀ)=ಮೂರು ಗಣಗಳು. ಪೃತನಾ (ಸ್ತ್ರೀ)=ಮೂರು ವಾಹಿನಿಗಳು. ಚಮೂ (ಸ್ತ್ರೀ)=ಮೂರು ಪೃತನೆಗಳು.

೮೪೮. ಅನೀಕಿನೀ (ಸ್ತ್ರೀ)=ಮೂರು ಚಮೂಗಳು. ಅಕ್ಷೌಹಿಣೀ (ಸ್ತ್ರೀ)=ಹತ್ತು ಅನೀಕಿನಿಗಳು. ಸಂಪದ್, ಸಂಪತ್ತಿ, ಶ್ರೀ, ಲಕ್ಷ್ಮೀ (ಸ್ತ್ರೀ)=ಸಂಪತ್ತು. ವಿಪತ್ತಿ, ವಿಪದ್, ಆಪದ್ (ಸ್ತ್ರೀ)=ಆಪತ್ತು.

ಆಯುಧಂ ತು ಪ್ರಹರಣಂ ಶಸ್ತ್ರಮಸ್ತ್ರಮಥಾಸ್ತ್ರಿಯೌ ।
ಧನುಶ್ಚಾಪೌ ಧನ್ವಶರಾಸನಕೋದಂಡಕಾರ್ಮುಕಮ್ ॥ ೮೪೯
ಇಷ್ವಾಸೋಽಪ್ಯಥ ಕರ್ಣಸ್ಯ ಕಾಲಪೃಷ್ಠಂ ಶರಾಸನಮ್ ।
ಕಪಿಧ್ವಜಸ್ಯ ಗಾಂಡೀವಗಾಂಡಿವೌ ಪನ್ನಪುಂಸಕೌ ॥ ೮೫೦
ಕೋಟಿರಸ್ಯಾಟನೀ ಗೋಧೇ ತಲೇ ಜ್ಯಾಘಾತವಾರಣೇ ।
ಲಸ್ತಕಸ್ತು ಧನುರ್ಮಧ್ಯಂ ಮೌರ್ವೀ ಜ್ಯಾ ಶಿಂಜಿನೀ ಗುಣಃ ॥ ೮೫೧
ಸ್ಯಾತ್ ಪ್ರತ್ಯಾಲೀಢಮಾಲೀಢಮಿತ್ಯಾದಿ ಸ್ಥಾನಪಂಚಕಮ್ ।
ಲಕ್ಷ್ಯಂ ಲಕ್ಷ್ಯಂ ಶರವ್ಯಂ ಚ ಶರಾಭ್ಯಾಸ ಉಪಾಸನಮ್ ॥ ೮೫೨
ಪೃಷತ್ಕಬಾಣವಿಶಿಖಾ ಅಜಿಹ್ಮಗಖಗಾಶುಗಾಃ ।
ಕಲಂಬಮಾರ್ಗಣಶರಾಃ ಪತ್ರೀ ರೋಪ ಇಷುರ್ದ್ವಯೋಃ ॥ ೮೫೩

---

೮೪೯-೮೫೦. ಆಯುಧ, ಪ್ರಹರಣ, ಶಸ್ತ್ರ, ಅಸ್ತ್ರ (ನ)=ಆಯುಧ. ಧನುಸ್[1], ಚಾಪ (ಪು.ನ)= ಧನ್ವನ್, ಶರಾಸನ, ಕೋದಂಡ, ಕಾರ್ಮುಕ (ನ), ಇಷ್ವಾಸ (ಪು)=ಬಿಲ್ಲು, ಕಾಲಪೃಷ್ಠ=ಕರ್ಣನ ಧನುಸ್ಸು ಗಾಂಡೀವ, ಗಾಂಡಿವ (ಪು. ನ)=ಅರ್ಜುನನ ಧನುಸ್ಸು.

೮೫೧. ಕೋಟಿ, ಅಟನೀ (ಸ್ತ್ರೀ)= ಬಿಲ್ಲಿನ ತುದಿ. ಗೋಧಾ (ಸ್ತ್ರೀ), ತಲ (ನ)=ಬಿಲ್ಲಿನ ಹೆದೆಯಿಂದ ಪೆಟ್ಟಾಗದಂತೆ ಕೈಗೆ ಹಾಕಿಕೊಳ್ಳುವ ಚರ್ಮದ ಚೀಲ. ಲಸ್ತಕ (ಪು)=ಧನುಸ್ಸಿನ ಮಧ್ಯಭಾಗ, ಧನುಸ್ಸನ್ನುಹಿಡಿಯುವ ಸ್ಥಳ. ಮೌರ್ವೀ, ಜ್ಯಾ, ಶಿಂಜಿನೀ (ಸ್ತ್ರೀ), ಗುಣ (ಪು)=ಹೆದೆ, ನಾರಿ (Bow-string).

೮೫೨. ಪ್ರತ್ಯಾಲೀಢ ಮೊದಲಾದವು ಧನುರ್ಧಾರಿಯು ನಿಲ್ಲುವ ಐದು ವಿಧಾನಗಳು : ೧. ಪ್ರತ್ಯಾಲೀಢ (ನ)=ಎಡಗಾಲನ್ನು ಮುಂದಿಟ್ಟು ಬಲಗಾಲನ್ನು ಬಗ್ಗಿಸಿ ನಿಲ್ಲುವುದು. ೨. ಆಲೀಢ (ನ)=ಬಲಗಾಲನ್ನು ಮುಂದಿಟ್ಟು ಎಡಗಾಲನ್ನು ಬಗ್ಗಿಸಿ ನಿಲ್ಲುವುದು. ೩. ವೈಶಾಖ (ನ)=ಎರಡುಕಾಲುಗಳನ್ನೂ ದೂರಕ್ಕೆ ಅಗಲಿಸಿ ನಿಲ್ಲುವುದು. ೪. ಸಮಪದ(ನ)=ಎರಡು ಕಾಲುಗಳ್ನೂ ಸಮರೀತಿಯಲ್ಲಿಟ್ಟುನಿಲ್ಲುವುದು. ೫. ಮಂಡಲ (ನ)=ಕಾಲುಗಳನ್ನು ತೋರಣ ದಂತೆ ಬಾಗಿಸಿ ನಿಲ್ಲುವುದು. ಲಕ್ಷ್ಯ, ಲಕ್ಷ, ಶರವ್ಯ (ನ)=ಗುರಿ. ಶರಾಭ್ಯಾಸ (ಪು), ಉಪಾಸನ (ನ)=ಬಾಣ ಪ್ರಯೋಗದ ಅಭ್ಯಾಸ.

೮೫೩. ಪೃಷತ್ಕ, ಬಾಣ, ವಿಶಿಖ, ಅಜಿಹ್ಮಗ, ಖಗ, ಆಶುಗ, ಕಲಂಬ, ಮಾರ್ಗಣ, ಶರ, ಪತ್ರಿನ್, ರೋಪ (ಪು), ಇಷು (ಪು.ಸ್ತ್ರೀ)=ಬಾಣ.

[1] ಧನು (ಪು) ಎಂಬ ಉಕಾರಾಂತವೂ ಧನೂ (ಸ್ತ್ರೀ) ಎಂಬ ಊಕಾರಾಂತವೂ ಇವೆ.



ಪ್ರಕ್ಷ್ವೇಡನಾಸ್ತು ನಾರಾಚಾಃ ಪಕ್ಷೋ ವಾಜಸ್ತ್ರಿಷೂತ್ತರೇ ।
ನಿರಸ್ತಃ ಪ್ರಹಿತೇ ಬಾಣೇ ವಿಷಾಕ್ತೇ ದಿಗ್ಧಲಿಪ್ತಕೌ ॥ ೮೫೪
ತೂಣೋಪಾಸಂಗತೂಣೀರನಿಷಂಗಾ ಇಷುಧಿರ್ದ್ವಯೋಃ ।
ತೂಣ್ಯಾಂ ಖಡ್ಗೇ ತು ನಿಸ್ತ್ರಿಂಶಚಂದ್ರಹಾಸಾಸಿರಿಷ್ಟಯಃ ॥ ೮೫೫
ಕೌಕ್ಷೇಯಕೋ ಮಂಡಲಾಗ್ರಃ ಕರಪಾಲಃ ಕೃಪಾಣವತ್ ।
ತ್ಸರುಃ ಖಡ್ಗಾದಿಮುಷ್ಟೌ ಸ್ಯಾನ್ಮೇಖಲಾ ತನ್ನಿಬಂಧನಮ್ ॥ ೮೫೬
ಫಲಕೋಽಸ್ತ್ರೀ ಫಲಂ ಚರ್ಮ ಸಂಗ್ರಾಹೋ ಮುಷ್ಟಿರಸ್ಯ ಯಃ ।
ದ್ರುಘಣೇ ಮುದ್ಗರಘನೌ ಸ್ಯಾದೀಲೀ ಕರವಾಲಿಕಾ ॥ ೮೫೭
ಭಿಂದಿಪಾಲಃ ಸೃಗಸ್ತುಲ್ಯೌ ಪರಿಘಃ ಪರಿಘಾತನಃ ।
ದ್ವಯೋಃ ಕುಠಾರಃ ಸ್ವಧಿತಿಃ ಪರಶುಶ್ಚ ಪರಶ್ವಧಃ ॥ ೮೫೮

---

೮೫೪. ಪ್ರಕ್ಷ್ವೇಡನ, ನಾರಾಚ (ಪು)=ಎಲ್ಲವೂ ಲೋಹಮಯವಾಗಿರುವ ದೀರ್ಘವಾದ ಬಾಣ. ಪಕ್ಷ, ವಾಜ (ಪು)=ಬಾಣದ ರೆಕ್ಕೆ. ಮುಂದೆ 'ಲಿಪ್ತಕ' ಶಬ್ದವರೆಗೆತ್ರಿಲಿಂಗಗಳು. ನಿರಸ್ತ=ಪ್ರಯೋಗಿಸಲ್ಪಟ್ಟ ಬಾಣ. ವಿಷಾಕ್ತ, ದಿಗ್ಧ, ಲಿಪ್ತಕ, (ಸ್ತ್ರೀ. ಲಿಪ್ತಿಕಾ)= ವಿಷವನ್ನು ಬಳಿದ ಬಾಣ.

೮೫೫-೮೫೬. ತೂಣ, ಉಪಾಸಂಗ, ತೂಣೀರ, ನಿಷಂಗ (ಪು), ಇಷುಧಿ (ಪು. ಸ್ತ್ರೀ), ತೂಣೀ (ಸ್ತ್ರೀ)=ಬತ್ತಳಿಕೆ. ಖಡ್ಗ, ನಿಸ್ತ್ರಿಂಶ, ಚಂದ್ರಹಾಸ, ಅಸಿ, ರಿಷ್ಟಿ,[1] ಕೌಕ್ಷೇಯಕ, ಮಂಡಲಾಗ್ರ, ಕರಪಾಲ (ಕರವಾಲ) ಕೃಪಾಣ (ಪು)=ಕತ್ತಿ. ತ್ಸರು (ಪು)=ಆಯುಧಗಳ ಹಿಡಿ. ಮೇಖಲಾ (ಸ್ತ್ರೀ)=ಕತ್ತಿಯನ್ನು ಸಿಕ್ಕಿಸಿಕೊಳ್ಳುವ ಚರ್ಮದ ಪಟ್ಟಿ (Sword-belt).

೮೫೭. ಫಲಕ (ಪು. ನ), ಫಲ, ಚರ್ಮನ್ (ನ)=ಗುರಾಣಿ. ಸಂಗ್ರಾಹ (ಪು)=ಗುರಾಣಿಯ ಹಿಡಿ. ದ್ರುಘಣ, ಮುದ್ಗರ, ಘನ (ಪು)=ಕಬ್ಬಿಣದ ಗುದಿಗೆಯಂತಹ ಆಯುಧ. ಈಲೀ, ಕರವಾಲಿಕಾ (ಕರಪಾಲಿಕಾ) (ಸ್ತ್ರೀ)=ಬಾಗಿರುವ ಕತ್ತಿ, ಕುಡಗೋಲು.

೮೫೮. ಭಿಂದಿಪಾಲ, ಸೃಗ (ಪು)=ಕಲ್ಲನ್ನು ಎಸೆಯುವ ಸಾಧನ, ಕವಣೆ ; ನಾಳಿಕಾಸ್ತ್ರ. ಪರಿಘ, ಪರಿಘಾತನ (ಪು)=ಕಬ್ಬಿಣದ ಕಟ್ಟುಹಾಕಿರುವ ದೊಣ್ಣೆ. ಕುಠಾರ (ಪು. ನ), ಸ್ವಧಿತಿ, ಪರಶು, ಪರಶ್ವಧ (ಪು)=ಕೊಡಲಿ.

[1] ಋಷ್ಟಿ ಎಂಬ ರೂಪಾಂತರವೂ ಇದೆ.

ಸ್ಯಾಚ್ಛಸ್ತ್ರೀ ಚಾಸಿಪುತ್ರೀ ಚ ಛುರಿಕಾ ಚಾಸಿಧೇನುಕಾ ।
ವಾ ಪುಂಸಿ ಶಲ್ಯಂ ಶಂಕುರ್ನಾ ಸರ್ವಲಾ ತೋಮರೋಽಸ್ತ್ರಿಯಾಮ್ ॥ ೮೫೯
ಪ್ರಾಸಸ್ತು ಕುಂತಃ ಕೋಣಸ್ತು ಸ್ತ್ರಿಯಃ ಪಾಲ್ಯಶ್ರಿಕೋಟಯಃ ।
ಸರ್ವಾಭಿಸಾರಸ್ಸರ್ವೌಘಸ್ಸರ್ವಸನ್ನಹನಾರ್ಥಕಃ ॥ ೮೬೦
ಲೋಹಾಭಿಸಾರೋ ಽಸ್ತ್ರಭೃತಾಂ ರಾಜ್ಞಾಂ ನೀರಾಜನಾವಿಧಿಃ ।
ಯತ್ಸೇನಯಾಭಿಗಮನಮರೌ ತದಭಿಷೇಣನಮ್ ॥ ೮೬೧
ಯಾತ್ರಾ ವ್ರಜ್ಯಾಭಿನಿರ್ಯಾಣಂ ಪ್ರಸ್ಥಾನಂ ಗಮನಂ ಗಮಃ ।
ಸ್ಯಾದಾಸಾರಃ ಪ್ರಸರಣಂ ಪ್ರಚಕ್ರಂ ಚಲಿತಾರ್ಥಕಮ್ ॥ ೮೬೨
ಅಹಿತಾನ್ಪ್ರತ್ಯಭೀತಸ್ಯ ರಣೇ ಯಾನಮಭಿಕ್ರಮಃ ।
ವೈತಾಲಿಕಾ ಬೋಧಕರಾಶ್ಚಾಕ್ರಿಕಾ ಘಾಂಟಿಕಾರ್ಥಕಾಃ ॥ ೮೬೩

---

೮೫೯. ಶಸ್ತ್ರೀ, ಅಸಿಪುತ್ರೀ, ಛುರಿಕಾ, ಅಸಿಧೇನುಕಾ (ಸ್ತ್ರೀ)=ಚೂರಿ. ಶಲ್ಯ (ಪು. ನ), ಶಂಕು (ಪು)=ಬಾಣದ ಅಗ್ರಭಾಗ. ಸರ್ವಲಾ (ಶರ್ವಲಾ) (ಸ್ತ್ರೀ), ತೋಮರ (ಪು. ನ)=ಗಡಾರಿಯಂತಹ ಆಯುಧವಿಶೇಷ.

೮೬೦. ಪ್ರಾಸ, ಕುಂತ (ಪು)=ಈಟಿ, ಭಲ್ಲೆ. ಕೋಣ (ಪು), ಪಾಲಿ, ಅಶ್ರಿ, ಕೋಟಿ (ಸ್ತ್ರೀ)= ಹರಿತವಾದ ಅಗ್ರಭಾಗ. ಸರ್ವಾಭಿಸಾರ, ಸರ್ವೌಘ (ಪು), ಸರ್ವಸಂನಹನ (ನ)=ಸರ್ವಸಿದ್ಧತೆ.

೮೬೧. ಲೋಹಾಭಿಸಾರ (ಪು)=ಯುದ್ಧಕ್ಕೆ ಹೊರಡುವಾಗ ಶಸ್ತ್ರವಾಹನಾದಿಗಳನ್ನು ಪೂಜಿಸುವುದು ; ಯುದ್ಧಕ್ಕೆ ಹೊರಡುವಾಗ ರಕ್ಷಾರ್ಥವಾಗಿ ರಾಜರಿಗೆ ಆರತಿಯನ್ನು ನಿವಾಳಿಸುವುದು. ಅಭಿಷೇಣನ (ನ)=ದಂಡೆತ್ತಿಹೋಗುವುದು ; ದಂಡಯಾತ್ರೆ.

೮೬೨. ಯಾತ್ರಾ, ವ್ರಜ್ಯಾ (ಸ್ತ್ರೀ), ಅಭಿನಿರ್ಯಾಣ, ಪ್ರಸ್ಥಾನ, ಗಮನ (ನ) ಗಮ (ಪು)=ಪ್ರಯಾಣ. ಆಸಾರ (ಪು), ಪ್ರಸರಣ (ನ)=ಸರ್ವತ್ರ ವ್ಯಾಪಿಸುವುದು. ಪ್ರಚಕ್ರ, ಚಲಿತ (ನ)=ಚಲಿಸಿದ ಸೇನೆ.

೮೬೩. ಅಭಿಕ್ರಮ (ಪು)=ಭಯವಿಲ್ಲದೆ ಆಕ್ರಮಿಸುವುದು. ವೈತಾಲಿಕ, ಬೋಧಕರ (ಪು)=ಬೆಳಗ್ಗೆ ರಾಜರನ್ನು ಎಚ್ಚರಗೊಳಿಸುವ ಸ್ತುತಿಪಾಠಕ. ಚಾಕ್ರಿಕ, ಘಾಂಟಿಕ (ಪು)=ಘಂಟೆಯನ್ನು ಹೊಡೆದು ಹೊತ್ತನ್ನು ತಿಳಿಸತಕ್ಕವನು.



ಸ್ಯುರ್ಮಾಗಧಾಸ್ತು ಮಗಧಾ ವಂದಿನಃ ಸ್ತುತಿಪಾಠಕಾಃ ।
ಸಂಶಪ್ತಕಾಸ್ತು ಸಮಯಾತ್ಸಂಗ್ರಾಮಾದನಿವರ್ತಿನಃ ॥ ೮೬೪
ರೇಣುರ್ದ್ವಯೋಃ ಸ್ತ್ರಿಯಾಂ ಧೂಲಿಃ ಪಾಂಸುರ್ನಾ ನ ದ್ವಯೋಃ ರಜಃ ।
ಚೂರ್ಣೇ ಕ್ಷೋದಸ್ಸಮುತ್ಪಿಂಜಪಿಂಜಲೌ ಭೃಶಮಾಕುಲೇ ॥ ೮೬೫
ಪತಾಕಾ ವೈಜಯಂತೀ ಸ್ಯಾತ್ಕೇತನಂ ಧ್ವಜಮಸ್ತ್ರಿಯಾಮ್ ।
ಸಾ ವೀರಾಶಂಸನಂ ಯುದ್ಧಭೂಮಿರ್ಯಾತಿಭಯಪ್ರದಾ ॥ ೮೬೬
ಅಹಂ ಪೂರ್ವಮಹಂ ಪೂರ್ವ ಮಿತ್ಯಹಂಪೂರ್ವಿಕಾ ಸ್ತ್ರಿಯಾಮ್ ।
ಆಹೋಪುರುಷಿಕಾ ದರ್ಪಾದ್ಯಾ ಸ್ಯಾತ್ಸಂಭಾವನಾತ್ಮನಿ ॥ ೮೬೭
ಅಹಮಹಮಿಕಾ ತು ಸಾ ಸ್ಯಾತ್ಪರಸ್ಪರಂ ಯೋ ಭವತ್ಯಹಂಕಾರಃ ।
ದ್ರವಿಣಂ ತರಸ್ಸಹೋಬಲಶೌರ್ಯಾಣಿ ಸ್ಥಾಮ ಶುಷ್ಮಂ ಚ ॥ ೮೬೮
ಶಕ್ತಿಃ ಪರಾಕ್ರಮಪ್ರಾಣೌ ವಿಕ್ರಮಸ್ತ್ವತಿಶಕ್ತಿತಾ ।
ವೀರಪಾನಂ ತು ಯತ್ಪಾನಂ ವೃತ್ತೇ ಭಾವಿನಿ ವಾ ರಣೇ ॥ ೮೬೯

---

೮೬೪. ಮಾಗಧ, ಮಗಧ (ಪು)=ವಂಶಾವಳಿಯನ್ನು ಪಠಿಸತಕ್ಕವನು. ವಂದಿನ್, ಸ್ತುತಿಪಾಠಕ (ಪು)=ಹೊಗಳು ಭಟ. ಸಂಶಪ್ತಕ (ಪು)=ಹಿಮ್ಮೆಟ್ಟುವುದಿಲ್ಲವೆಂದು ಶಪಥವನ್ನು ಮಾಡಿ ಯುದ್ಧಕ್ಕೆ ನಿಂತವನು.

೮೬೫. ರೇಣು (ಪು. ಸ್ತ್ರೀ), ಧೂಲಿ (ಸ್ತ್ರೀ), ಪಾಂಸು (ಪು), ರಜಸ್ (ನ)= ಧೂಳಿ. ಚೂರ್ಣ, ಕ್ಷೋದ (ಪು)=ಪ್ರಯತ್ನದಿಂದ ಮಾಡಿದ ಪುಡಿ. ಸಮುತ್ಪಿಂಜ, ಪಿಂಜಲ[1] (ಪು)=ಬಹಳ ಕಳವಳಗೊಂಡವನು, ಉದ್ವಿಗ್ನನಾದವನು ; ಸಿಕ್ಕಾಪಟ್ಟೆ ಕೆದರಿಹೋದದ್ದು.

೮೬೬. ಪತಾಕಾ, ವೈಜಯಂತೀ (ಸ್ತ್ರೀ), ಕೇತನ (ನ),ಧ್ವಜ (ಪು. ನ)=ಬಾವುಟ. ವೀರಾಶಂಸನ (ನ)=ಭೀಕರವಾದ ರಣರಂಗ.

೮೬೭. ಅಹಂಪೂರ್ವಿಕಾ (ಸ್ತ್ರೀ)=ನಾನು ಮುಂದೆಂದು ಉತ್ಸಾಹದಿಂದ ಮಾಡುವ ಕೆಲಸ. ಆಹೋಪುರುಷಿಕಾ (ಸ್ತ್ರೀ)=ನನಗೆ ಸಮಾನರಿಲ್ಲವೆಂಬ ಅಹಂಭಾವ.

೮೬೮-೮೬೯. ಅಹಮಹಮಿಕಾ (ಸ್ತ್ರೀ)=ನಾನು ಗಟ್ಟಿಗ ನಾನುಗಟ್ಟಿಗ ಎಂಬ ಅನ್ಯೋನ್ಯವಾದ ಅಹಂಕಾರ. ದ್ರವಿಣ, ತರಸ್, ಸಹಸ್, ಬಲ, ಶೌರ್ಯ, ಸ್ಥಾಮನ್, ಶುಷ್ಮ (ನ),

---

[1] ಉತ್ಪಿಂಜಲ ಎಂಬ ರೂಪವೂ ಇದೆ.

ಯುದ್ಧಮಾಯೋಧನಂ ಜನ್ಯಂ ಪ್ರಧನಂ ಪ್ರವಿದಾರಣಮ್ ।
ಮೃಧಮಾಸ್ಕಂದನಂ ಸಂಖ್ಯಂ ಸಮೀಕಂ ಸಾಂಪರಾಯಿಕಮ್ ॥ ೮೭೦
ಅಸ್ತ್ರಿಯಾಂ ಸಮರಾನೀಕರಣಾಃ ಕಲಹವಿಗ್ರಹೌ ।
ಸಂಪ್ರಹಾರಾಭಿಸಂಪಾತಕಲಿಸಂಸ್ಫೋಟಸಂಯುಗಾಃ ॥ ೮೭೧
ಅಭ್ಯಾಮರ್ದಸಮಾಘಾತಸಂಗ್ರಾಮಾಭ್ಯಾಗಮಾಹವಾಃ ।
ಸಮುದಾಯಃ ಸ್ತ್ರಿಯಃ ಸಂಯತ್ ಸಮಿತ್ಯಾಜಿಸಮಿದ್ಯುಧಃ ॥ ೮೭೨
ನಿಯುದ್ಧಂ ಬಾಹುಯುದ್ಧೇಽಥ ತುಮುಲಂ ರಣಸಂಕುಲೇ ।
ಕ್ಷ್ವೇಡಾ ತು ಸಿಂಹನಾದಸ್ಸ್ಯಾತ್ ಕರಿಣಾಂ ಘಟನಾ ಘಟಾ ॥ ೮೭೩
ಕ್ರಂದನಂ ಯೋಧಸಂರಾವೋ ಬೃಂಹಿತಂ ಕರಿಗರ್ಜಿತಮ್ ।
ವಿಸ್ಫಾರೋ ಧನುಷಸ್ಸ್ವಾನಃ ಪಟಹಾಡಂಬರೌ ಸಮೌ ॥ ೮೭೪

---

ಶಕ್ತಿ (ಸ್ತ್ರೀ), ಪರಾಕ್ರಮ, ಪ್ರಾಣ (ಪು)=ಶಕ್ತಿ, ಬಲ, ವಿಕ್ರಮ (ಪು)= ಅತಿಯಾದ ಶಕ್ತಿ. ವೀರಪಾನ (ವೀರಪಾಣ) (ನ)=ಯುದ್ಧದ ಆರಂಭದಲ್ಲಿ ಅಥವಾ ಕೊನೆಯಲ್ಲಿ ವೀರರು ಮಾಡುವ ಪಾನ.

೮೭೦-೮೭೨. ಯುದ್ಧ, ಆಯೋಧನ, ಜನ್ಯ, ಪ್ರಧನ, ಪ್ರವಿದಾರಣ, ಮೃಧ, ಆಸ್ಕಂದನ, ಸಂಖ್ಯ, ಸಮೀಕ, ಸಾಂಪರಾಯಿಕ (ನ),ಸಮರ, ಅನೀಕ, ರಣ (ಪು. ನ), ಕಲಹ, ವಿಗ್ರಹ, ಸಂಪ್ರಹಾರ, ಅಭಿಸಂಪಾತ, ಕಲಿ, ಸಂಸ್ಫೋಟ, ಸಂಯುಗ, ಅಭ್ಯಾಮರ್ದ, ಸಮಾಘಾತ, ಸಂಗ್ರಾಮ, ಅಭ್ಯಾಗಮ, ಆಹವ, ಸಮುದಾಯ (ಸಮವಾಯ) (ಪು), ಸಂಯತ್, ಸಮಿತಿ, ಆಜಿ, ಸಮಿಧ್, ಯುಧ್ (ಸ್ತ್ರೀ)=ಯುದ್ಧ.

೮೭೩. ನಿಯುದ್ಧ (ನ)=ಬಾಹುಯುದ್ಧ, ಕುಸ್ತಿ. ತುಮುಲ, ರಣಸಂಕುಲ (ನ)=ಗದ್ದಲದ ಯುದ್ಧ ; ಭೀಕರ ಯುದ್ಧ. ಕ್ಷ್ವೇಡಾ (ಸ್ತ್ರೀ), ಸಿಂಹನಾದ (ಪು)=ವೀರಗರ್ಜನೆ. ಘಟನಾ, ಘಟಾ (ಸ್ತ್ರೀ)=ಆನೆಗಳ ಹಿಂಡು.

೮೭೪. ಕ್ರಂದನ (ನ), ಯೋಧಸಂರಾವ (ಪು)=ವೀರರ ಬೊಬ್ಬೆ. ಬೃಂಹಿತ (ನ)=ಆನೆಯ ಘೀಂಕಾರ. ವಿಸ್ಫಾರ (ಪು)=ಧನುಸ್ಸಿನ ಝುಂಕಾರ. ಪಟಹ, ಆಡಂಬರ (ಪು)=ಯುದ್ಧದಲ್ಲಿ ಬಾರಿಸುವ ತಮಟೆ.



ಪ್ರಸಭಂ ತು ಬಲಾತ್ಕಾರೋ ಹಠೋಽಥ ಸ್ಖಲಿತಂ ಛಲಮ್ ।
ಅಜನ್ಯಂ ಕ್ಲೀಬಮುತ್ಪಾತ ಉಪಸರ್ಗಸ್ಸಮಂ ತ್ರಯಮ್ ॥ ೮೭೫
ಮೂರ್ಛಾ ತು ಕಶ್ಮಲಂ ಮೋಹೋಽಪ್ಯವಮರ್ದಸ್ತು ಪೀಡನಮ್ ।
ಅಭ್ಯವಸ್ಕಂದನಂ ತ್ವಭ್ಯಾಸಾದನಂ ವಿಜಯೋ ಜಯಃ ॥ ೮೭೬
ವೈರಶುದ್ಧಿಃ ಪ್ರತೀಕಾರೋ ವೈರನಿರ್ಯಾತನಂ ಚ ಸಾ ।
ಪ್ರದ್ರಾವೋದ್ದ್ರಾವಸಂದ್ರಾವಸಂದಾವಾ ವಿದ್ರವೋ ದ್ರವಃ ॥ ೮೭೭
ಅಪಕ್ರಮೋಽಪಯಾನಂ ಚ ರಣೇ ಭಂಗಃ ಪರಾಜಯಃ ।
ಪರಾಜಿತಪರಾಭೂತೌ ತ್ರಿಷು ನಷ್ಟತಿರೋಹಿತೌ ॥ ೮೭೮
ಪ್ರಮಾಪಣಂ ನಿಬರ್ಹಣಂ ನಿಕಾರಣಂ ನಿಶಾರಣಮ್ ।
ಪ್ರವಾಸನಂ ಪರಾಸನಂ ನಿಷೂದನಂ ನಿಹಿಂಸನಮ್ ॥ ೮೭೯
ನಿರ್ವಾಸನಂ ಸಂಜ್ಞಪನಂ ನಿರ್ಗ್ರಂಥನಮಪಾಸನಮ್ ।
ನಿಸ್ತರ್ಹಣಂ ನಿಹನನಂ ಕ್ಷಣನಂ ಪರಿವರ್ಜನಮ್ ॥ ೮೮೦
ನಿರ್ವಾಪಣಂ ವಿಶಸನಂ ಮಾರಣಂ ಪ್ರತಿಘಾತನಮ್ ।
ಉದ್ವಾಸನಪ್ರಮಥನಕ್ರಥನೋಜ್ಜಾಸನಾನಿ ಚ ॥ ೮೮೧

---

೮೭೫. ಪ್ರಸಭ (ನ), ಬಲಾತ್ಕಾರ, ಹಠ (ಪು)=ಬಲಾತ್ಕಾರ. ಸ್ಖಲಿತ, ಛಲ (ನ)= ನಿಯಮೋಲ್ಲಂಘನೆ. ಅಜನ್ಯ (ನ), ಉತ್ಪಾತ, ಉಪಸರ್ಗ (ಪು)=ಅನಿಷ್ಟಸೂಚಕವಾದ ಶಕುನ.

೮೭೬. ಮೂರ್ಛಾ (ಸ್ತ್ರೀ), ಕಶ್ಮಲ (ನ), ಮೋಹ (ಪು)=ಎಚ್ಚರದಪ್ಪುವುದು. ಅವಮರ್ದ (ಪು), ಪೀಡನ (ನ)=ಪೀಡೆ. ಅಭ್ಯವಸ್ಕಂದನ, ಅಭ್ಯಾಸಾದನ (ನ)=ಮುತ್ತಿಗೆ, ಶತ್ರುಬಲದ ಆಕ್ರಮಣ. ವಿಜಯ, ಜಯ (ಪು)=ಜಯ.

೮೭೭-೮೭೮. ವೈರಶುದ್ಧಿ (ಸ್ತ್ರೀ), ಪ್ರತೀಕಾರ, (ಪು), ವೈರನಿರ್ಯಾತನ (ನ)=ಸೇಡು ತೀರಿಸಿಕೊಳ್ಳುವುದು. ಪ್ರದ್ರಾವ, ಉದ್ರಾವ, ಸಂದ್ರಾವ, ಸಂದಾವ, ವಿದ್ರವ, ದ್ರವ, ಅಪಕ್ರಮ (ಪು), ಅಪಯಾನ (ನ)= ಸೋತುಓಡಿಹೋಗುವುದು. ಪರಾಜಯ (ಪು)=ಸೋಲು. ಪರಾಜಿತ, ಪರಾಭೂತ (ಪು)=ಸೋತವನು. ನಷ್ಟ, ತಿರೋಹಿತ (ಪು)=ಅಡಗಿದವನು ; ಕಾಣೆಯಾದವನು.

೮೭೯-೮೮೨. ಪ್ರಮಾಪಣ, ನಿಬರ್ಹಣ, ನಿಕಾರಣ, ನಿಶಾರಣ, ಪ್ರವಾಸನ, ಪರಾಸನ, ನಿಷೂದನ, ನಿಹಿಂಸನ, ನಿರ್ವಾಸನ, ಸಂಜ್ಞಪನ, ನಿರ್ಗ್ರಂಥನ, ಅಪಾಸನ, ನಿಸ್ತರ್ಹಣ,

ಆಲಂಭಪಿಂಜವಿಶರಘಾತೋನ್ಮಾಥವಧಾ ಅಪಿ ।
ಸ್ಯಾತ್ ಪಂಚತಾ ಕಾಲಧರ್ಮೋ ದಿಷ್ಟಾಂತಃ ಪ್ರಲಯೋಽತ್ಯಯಃ ॥ ೮೮೨
ಅಂತೋ ನಾಶೋ ದ್ವಯೋರ್ಮೃತ್ಯುರ್ಮರಣಂ ನಿಧನೋಽಸ್ತ್ರಿಯಾಂ ।
ಪರಾಸುಃ ಪ್ರಾಪ್ತಪಂಚತ್ವಪರೇತಪ್ರೇತಸಂಸ್ಥಿತಾಃ ॥ ೮೮೩
ಮೃತಪ್ರಮೀತೌ ತ್ರಿಷ್ವೇತೇ ಚಿತಾ ಚಿತ್ಯಾ ಚಿತಿಃ ಸ್ತ್ರಿಯಾಮ್ ।
ಕಬಂಧೋಽಸ್ತ್ರೀ ಕ್ರಿಯಾಯುಕ್ತಮಪಮೂರ್ಧಕಲೇವರಮ್ ॥ ೮೮೪
ಶ್ಮಶಾನಂ ಸ್ಯಾತ್ ಪಿತೃವನಂ ಕುಣಪಶ್ಶವಮಸ್ತ್ರಿಯಾಮ್ ।
ಪ್ರಗ್ರಹೋಪಗ್ರಹೌ ಬಂದ್ಯಾಂ ಕಾರಾ ಸ್ಯಾತ್ ಬಂಧನಾಲಯೇ ॥ ೮೮೫
ಪುಂಸಿ ಭೂಮ್ನ್ಯಸವಃ ಪ್ರಾಣಾಶ್ಚೈವಂ ಜೀವೋಽಸುಧಾರಣಮ್ ।
ಆಯುರ್ಜೀವಿತಕಾಲೋ ನಾ ಜೀವಾತುರ್ಜೀವನೌಷಧಮ್ ॥ ೮೮೬

ಇತಿ ಕ್ಷತ್ರಿಯವರ್ಗಃ

---

ನಿಹನನ, ಕ್ಷಣನ, ಪರಿವರ್ಜನ, ನಿರ್ವಾಪಣ, ವಿಶಸನ, ಮಾರಣ, ಪ್ರತಿಘಾತನ, ಉದ್ವಾಸನ, ಪ್ರಮಥನ, ಕ್ರಥನ, ಉಜ್ಜಾಸನ (ನ), ಆಲಂಭ, ಪಿಂಜ, ವಿಶರ, ಘಾತ, ಉನ್ಮಾಥ, ವಧ (ಪು)=ಕೊಲ್ಲುವುದು, ವಧೆ.

೮೮೨-೮೮೩. ಪಂಚತಾ (ಸ್ತ್ರೀ), ಕಾಲಧರ್ಮ, ದಿಷ್ಟಾಂತ, ಪ್ರಲಯ, ಅತ್ಯಯ, ಅಂತ, ನಾಶ (ಪು),ಮೃತ್ಯು, (ಪು. ಸ್ತ್ರೀ), ಮರಣ (ನ), ನಿಧನ (ಪು. ನ)=ಸಾವು.

೮೮೩-೮೮೪. ಮೃತ, ಪ್ರಮೀತ (ಪು. ಸ್ತ್ರೀ. ನ-ವಿ. ನಿಘ್ನ)=ಸತ್ತವನು. ಚಿತಾ, ಚಿತ್ಯಾ, ಚಿತಿ (ಸ್ತ್ರೀ)=ಚಿತೆ. ಕಬಂಧ (ಪು. ನ)=ತಲೆಯಿಲ್ಲದೆ ಚಲಿಸುತ್ತಿರುವ ದೇಹ, ರುಂಡ.

೮೮೫. ಶ್ಮಶಾನ, ಪಿತೃವನ (ನ)=ಶ್ಮಶಾನ. ಕುಣಪ, ಶವ (ಪು. ನ)=ಹೆಣ. ಪ್ರಗ್ರಹ, ಉಪಗ್ರಹ, (ಪು), ಬಂದೀ (ಸ್ತ್ರೀ)=ಸೆರೆ. ಕಾರಾ (ಸ್ತ್ರೀ), ಬಂಧನಾಲಯ (ಪು)=ಸೆರೆಮನೆ.

೮೮೬. ಅಸು, ಪ್ರಾಣ (ಪು. ನಿತ್ಯಬಹುವಚನ)=ಪ್ರಾಣ. ಜೀವ (ಪು), ಅಸುಧಾರಣ (ನ)=ಬದುಕಿರುವುದು. ಆಯುಸ್ (ನ), ಜೀವಿತಕಾಲ (ಪು)=ಬದುಕಿರುವ ಕಾಲ. ಜೀವಾತು (ಪು), ಜೀವನೌಷಧ (ನ)=ಬದುಕಿಸುವ ಔಷಧ.

## ೯. ವೈಶ್ಯವರ್ಗಃ

ಊರವ್ಯಾ ಊರುಜಾ ಅರ್ಯಾ ವೈಶ್ಯಾ ಭೂಮಿಸ್ಪೃಶೋ ವಿಶಃ ।
ಆಜೀವೋ ಜೀವಿಕಾ ವಾರ್ತಾ ವೃತ್ತಿರ್ವರ್ತನಜೀವನೇ ॥ ೮೮೭
ಸ್ತ್ರಿಯಾಂ ಕೃಷಿಃ ಪಾಶುಪಾಲ್ಯಂ ವಾಣಿಜ್ಯಂ ಚೇತಿ ವೃತ್ತಯಃ ।
ಸೇವಾ ಶ್ವವೃತ್ತಿರನೃತಂ ಕೃಷಿರುಂಛಶಿಲಂ ತ್ವೃತಮ್ ॥ ೮೮೮
ದ್ವೇ ಯಾಚಿತಾಯಾಚಿತಯೋರ್ಯಥಾಸಂಖ್ಯಂ ಮೃತಾಮೃತೇ ।
ಸತ್ಯಾನೃತಂ ವಣಿಗ್ಭಾವಃ ಸ್ಯಾದೃಣಂ ಪರ್ಯುದಂಚನಮ್ ॥ ೮೮೯
ಉದ್ಧಾರೋಽರ್ಥ ಪ್ರಯೋಗಸ್ತು ಕುಸೀದಂ ವೃದ್ಧಿಜೀವಿಕಾ ।
ಯಾಚ್ಞಯಾಪ್ತಂ ಯಾಚಿತಕಂ ನಿಮಯಾದಾಪಮಿತ್ಯಕಮ್ ॥ ೮೯೦

---

## ವೈಶ್ಯವರ್ಗ

೮೮೭. ಊರವ್ಯ, ಊರುಜ, ಅರ್ಯ, ವೈಶ್ಯ, ಭೂಮಿಸ್ಪೃಶ್, ವಿಶ್ (ಪು)=ವೈಶ್ಯ. ಆಜೀವ (ಪು), ಜೀವಿಕಾ, ವಾರ್ತಾ, ವೃತ್ತಿ (ಸ್ತ್ರೀ), ವರ್ತನ, ಜೀವನ (ನ)=ಜೀವನೋಪಾಯ.

೮೮೮. ಕೃಷಿ (ಸ್ತ್ರೀ)=ಬೇಸಾಯ. ಪಾಶುಪಾಲ್ಯ (ನ)=ಪಶುಪಾಲನೆ. ವಾಣಿಜ್ಯ (ನ)=ಮಾರಾಟ—ಇವು ಮೂರು ವೈಶ್ಯರ ಜೀವನೋಪಾಯಗಳು. ಸೇವಾ, ಶ್ವವೃತ್ತಿ (ಸ್ತ್ರೀ)=ಸೇವೆ. ಅನೃತ (ನ), ಕೃಷಿ (ಸ್ತ್ರೀ)=ಬೇಸಾಯ. ಉಂಛಶಿಲ[1], ಋತ (ನ)=ಬಿದ್ದ ಕಾಳುಗಳನ್ನು ಆರಿಸಿ ಜೀವಿಸುವುದು.

೮೮೯-೮೯೦. ಯಾಚಿತ, ಮೃತ (ನ)=ಬೇಡಿತಂದದ್ದು. ಅಯಾಚಿತ, ಅಮೃತ (ನ)=ಬೇಡದೆ ತಾನಾಗಿ ಪ್ರಾಪ್ತವಾದದ್ದು. ಸತ್ಯಾನೃತ (ನ), ವಣಿಗ್ಭಾವ (ಪು)=ವ್ಯಾಪಾರ, ಮಾರಾಟ. ಋಣ, ಪರ್ಯುದಂಚನ (ನ), ಉದ್ಧಾರ (ಪು)= ಸಾಲ. ಅರ್ಥಪ್ರಯೋಗ

---

[1] ಉಂಛ (ಪು. ನ)=ಬೀದಿಯಲ್ಲಿ ಬಿದ್ದ ಕಾಳನ್ನು ಆರಿಸಿಕೊಳ್ಳುವುದು. ಶಿಲ (ನ)=ಹೊಲದಲ್ಲಿ ಉದುರಿದ ಕಾಳು, ತೆನೆಗಳನ್ನು ಆರಿಸಿಕೊಳ್ಳುವುದು. ಇವುಗಳಲ್ಲಿ ವಿಶೇಷ ಭೇದವಿಲ್ಲ. ಆದ್ದರಿಂದ ಉಂಛಶಿಲ ಎಂದು ಒಂದೇ ಪದವಾಗಿ ಪ್ರಯೋಗಿಸುವುದೂ ಉಂಟು.

ಋತಮುಂಛಶಿಲಂ ಜ್ಞೇಯಮಮೃತಂ ಸ್ಯಾದಯಾಚಿತಮ್ ।
ಮೃತಂ ತು ಯಾಚಿತಂ ಭೈಕ್ಷ್ಯಂ ಪ್ರಮೃತಂ ಕರ್ಷಣಂ ಸ್ಮೃತಮ್ ॥
ಸತ್ಯಾನೃತಂ ತು ವಾಣಿಜ್ಯಂ ತೇನ ಚೈವಾಪಿ ಜೀವ್ಯತೇ ।
ಸೇವಾ ಶ್ವವೃತ್ತಿರಾಖ್ಯಾತಾ ತಸ್ಮಾತ್ತಾಂ ಪರಿವರ್ಜಯೇತ್ ॥

—ಮನು ೪-೪, ೫.

ಉತ್ತಮರ್ಣಾಧಮರ್ಣೌ ದ್ವೌ ಪ್ರಯೋಕ್ತೃಗ್ರಾಹಕೌ ಕ್ರಮಾತ್ ।
ಕುಸೀದಿಕೋ ವಾರ್ಧುಷಿಕೋ ವೃದ್ಧ್ಯಾಜೀವಶ್ಚ ವಾರ್ಧುಷಿಃ ॥ ೮೯೧

ಕ್ಷೇತ್ರಾಜೀವಃ ಕರ್ಷಕಶ್ಚ ಕೃಷಕಶ್ಚ ಕೃಷೀವಲಃ ।
ಕ್ಷೇತ್ರಂ ವ್ರೈಹೇಯಶಾಲೇಯಂ ವ್ರೀಹಿಶಾಲ್ಯುದ್ಭವೋಚಿತಮ್ ॥ ೮೯೨

ಯವ್ಯಂ ಯವಕ್ಯಂ ಷಷ್ಟಿಕ್ಯಂ ಯವಾದಿಭವನಂ ಹಿ ಯತ್ ।
ತಿಲ್ಯತೈಲೀನವನ್ಮಾಷೋಮಾಣುಭಂಗಾದ್ದ್ವಿರೂಪತಾ ॥ ೮೯೩

ಮೌದ್ಗೀನಕೌದ್ರವೀಣಾದಿ ಶೇಷಧಾನ್ಯೋದ್ಭವೋಚಿತಮ್ ।
ಬೀಜಾಕೃತಂ ತೂಪ್ತಕೃಷ್ಟಂ ಸೀತ್ಯಂ ಕೃಷ್ಟಂ ಚ ಹಲ್ಯವತ್ ॥ ೮೯೪

---

(ಪು),ಕುಸೀದ (ನ), ವೃದ್ಧಿ ಜೀವಿಕಾ (ಸ್ತ್ರೀ)=ಬಡ್ಡಿಯ ಹಣದಿಂದ ಜೀವಿಸುವುದು. ಯಾಚಿತಕ (ನ)=ಯಾಚಿಸಿ ತಂದದ್ದು. ಆಪಮಿತ್ಯಕ (ನ)=ವಿನಿಮಯ ಮಾಡಿ ಸಂಪಾದಿಸಿದ್ದು (Received by barter or exchange).

೮೯೧. ಮುಂದೆ ೮೯೬ನೆಯ ಶ್ಲೋಕದಲ್ಲಿ ಖಾರೀಕ ಶಬ್ದದವರೆಗಿನವು ಅರ್ಥಾನುರೋಧವಾಗಿ ತ್ರಿಲಿಂಗಗಳು. ಉತ್ತಮರ್ಣ (ಪು)=ಸಾಲ ಕೊಟ್ಟವನು. ಅಧಮರ್ಣ (ಪು)= ಸಾಲ ತೆಗೆದುಕೊಂಡವನು. ಕುಸೀದಿಕ, ವಾರ್ಧುಷಿಕ, ವೃಧ್ಯಾಜೀವ, ವಾರ್ಧುಷಿ (ಪು)=ಬಡ್ಡಿಯಿಂದ ಜೀವಿಸತಕ್ಕವನು.

೮೯೨. ಕ್ಷೇತ್ರಾಜೀವ, ಕರ್ಷಕ, ಕೃಷಕ, ಕೃಷೀವಲ (ಪು) (=ಸ್ತ್ರೀ, ಕರ್ಷಿಕಾ, ಕೃಷಿಕಾ) ಬೇಸಾಯದಿಂದ ಜೀವಿಸತಕ್ಕವನು. ವ್ರೈಹೇಯ, ಶಾಲೇಯ (ನ) (ಸ್ತ್ರೀ. ವ್ರೈಹೇಯೀ, ಶಾಲೇಯೀ)= ಬತ್ತವು ಬೆಳೆಯುವ ಗದ್ದೆ. ವ್ರೀಹಿ, ಶಾಲಿ- ಎಂಬಿವು ಬತ್ತದ ಅಂತರ್ಭೇದಗಳು.

೮೯೩. ಯವ್ಯ. ಯವಕ್ಯ, ಷಷ್ಟಿಕ್ಯ (ನ)=ಕ್ರಮವಾಗಿ ಮೂರು ಬಗೆಯ ಧಾನ್ಯಗಳನ್ನು ಬೆಳೆಯುವ ಕ್ಷೇತ್ರ. (ಯವ, ಯವಕ=ಜವೆಗೋಧಿಯ ಭೇದ. ಷಷ್ಟಿಕ=೬೦ ದಿನಗಳಲ್ಲಿ ಫಲವನ್ನು ಕೊಡುವ ಒಂದು ಜಾತಿಯ ಭತ್ತ.) ತಿಲ್ಯ, ತೈಲೀನ (ನ)=ಎಳ್ಳಿನ ಹೊಲ. ಮಾಷ್ಯ, ಮಾಷೀಣ (ನ)=ಉದ್ದಿನ ಹೊಲ. ಉಮ್ಯ, ಔಮೀನ (ನ)=ಅಗಸೆ ಬೆಳೆಯುವ ಹೊಲ. ಅಣವ್ಯ, ಅಣವೀನ (ನ)=ಸಣ್ಣ ಬತ್ತ ಬೆಳೆಯುವ ಗದ್ದೆ. ಭಂಗ್ಯ, ಭಾಂಗೀನ (ನ)=ಸೆಣಬು ಬೆಳೆಯುವ ಕ್ಷೇತ್ರ.

೮೯೪. ಮೌದ್ಗೀನ (ನ)=ಹೆಸರು ಹೊಲ. ಕೌದ್ರವೀಣ (ನ)=ಹಾರಕದ ಹೊಲ. ಹೀಗೆಯೇ ಗೌಧೂಮೀನ= ಗೋಧಿಯ ಹೊಲ, ಕೌಲಿತ್ಥೀನ= ಹುರುಳಿ ಹೊಲ, ಚಾಣಕೀನ



ತ್ರಿಗುಣಾಕೃತಂ ತೃತೀಯಾಕೃತಂ ತ್ರಿಹಲ್ಯಂ ತ್ರಿಸೀತ್ಯಮಪಿ ತಸ್ಮಿನ್ ।
ದ್ವಿಗುಣಾಕೃತೇ ತು ಸರ್ವಂ ದ್ವಿಪೂರ್ವಂ ಶಂಬಾಕೃತಮಪೀಹ ॥ ೮೯೫

ದ್ರೋಣಾಢಕಾದಿ ವಾಪಾದೌ ದ್ರೌಣಿಕಾಢಕಿಕಾದಯಃ ।
ಖಾರೀವಾಪಸ್ತು ಖಾರೀಕ ಉತ್ತಮರ್ಣಾದಯಸ್ತ್ರಿಷು ॥ ೮೯೬

ಪುನ್ನಪುಂಸಕಯೋರ್ವಪ್ರಃ ಕೇದಾರಃ ಕ್ಷೇತ್ರಮಸ್ಯ ತು ।
ಕೈದಾರಕಂ ಸ್ಯಾತ್ ಕೈದಾರ್ಯಂ ಕ್ಷೈತ್ರಂ ಕೈದಾರಿಕಂ ಗಣೇ ॥ ೮೯೭

ಲೋಷ್ಟಾನಿ ಲೇಷ್ಟವಃ ಪುಂಸಿ ಕೋಟಿಶೋ ಲೋಷ್ಟಭೇದನಃ ।
ಪ್ರಾಜನಂ ತೋದನಂ ತೋತ್ರಂ ಖನಿತ್ರಮವದಾರಣಮ್ ॥ ೮೯೮

---

=ಕಡಲೆಯ ಹೊಲ ಮುಂತಾದ ಶಬ್ದಗಳು. ಬೀಜಾಕೃತ, ಉಪ್ತಕೃಷ್ಟ (ನ)=ಉತ್ತು ಬಿತ್ತನೆಮಾಡಿದ ಹೊಲ. ಸೀತ್ಯ, ಕೃಷ್ಟ, ಹಲ್ಯ (ನ)=ಉತ್ತ ಭೂಮಿ.

೮೯೫. ತ್ರಿಗುಣಾಕೃತ, ತೃತೀಯಾಕೃತ, ತ್ರಿಹಲ್ಯ, ತ್ರಿಸೀತ್ಯ (ನ)=ಮೂರು ಸಾರಿ ಉತ್ತ ಭೂಮಿ. ದ್ವಿಗುಣಾಕೃತ, ದ್ವಿತೀಯಾಕೃತ, ದ್ವಿಹಲ್ಯ, ದ್ವಿಸೀತ್ಯ, ಶಂಬಾಕೃತ (ನ)=ಎರಡು ಸಾರಿ ಉತ್ತ ಭೂಮಿ.

೮೯೬. ದ್ರೌಣಿಕ (ನ)=ಒಂದು ದ್ರೋಣ[1] ಪರಿಮಾಣದ ಧಾನ್ಯವನ್ನು ಬಿತ್ತಬಹುದಾದ ಹೊಲ ; ಒಂದು ದ್ರೋಣವು ಹಿಡಿಸುವಂತಹ ಪಾತ್ರೆ ; ಒಂದು ದ್ರೋಣಧಾನ್ಯವನ್ನು ಬೇಯಿಸಬಹುದಾದ ಪಾತ್ರೆ. ಹೀಗೆಯೇ ಆಢಕಿಕ, ಪ್ರಾಸ್ಥಿಕ, ಕೌಡವಿಕ (-ಸ್ತ್ರೀ. ದ್ರೌಣಿಕೀ) ಇತ್ಯಾದಿ. ಖಾರೀಕ[2] (ನ)=ಒಂದು ಖಾರಿಯನ್ನು ಬಿತ್ತಬಹುದಾದಹೊಲ ಇತ್ಯಾದಿ.

೮೯೭. ವಪ್ರ (ಪು. ನ), ಕೇದಾರ (ಪು), ಕ್ಷೇತ್ರ (ನ)=ಹೊಲ, ಗದ್ದೆ. ಕೈದಾರಕ, ಕೈದಾರ್ಯ, ಕ್ಷೈತ್ರ, ಕೈದಾರಿಕ (ನ)=ಹೊಲದ ಸಮೂಹ, ಗದ್ದೆಯ ಸಮೂಹ.

೮೯೮. ಲೋಷ್ಟ (ನ), ಲೇಷ್ಟು (ಪು)= ಮಣ್ಣು ಹೆಂಟೆ. ಕೋಟಿಶ, ಲೋಷ್ಟಭೇದನ (ಪು)=ಹೆಂಟೆಯನ್ನು ಒಡೆಯುವ ಕೊಡತಿ. ಪ್ರಾಜನ, ತೋದನ, ತೋತ್ರ (ನ)=ಎತ್ತುಗಳನ್ನು ಹೊಡೆಯುವ ಕೋಲು, ಚಾಟಿ. ಖನಿತ್ರ, ಅವದಾರಣ (ನ)=ಗುದ್ದಲಿ.

---

[1] ದ್ರೋಣ ಮುಂತಾದ ಶಬ್ದಗಳ ಅರ್ಥವನ್ನು ೯೭೫ನೆಯ ಶ್ಲೋಕದ ಕೆಳಗೆ ಬರೆದಿದೆ.

[2] ಖಾರೀ ಶಬ್ದವು ಮಾತ್ರ ಈ ಶ್ಲೋಕದಲ್ಲಿ ಹೇಳಿದ ಮೇಲ್ಕಂಡ ಎಲ್ಲ ಅರ್ಥಗಳಲ್ಲಿಯೂ ಖಾರೀಕ ಎಂಬ ಒಂದೇ ರೂಪವನ್ನು ಪಡೆಯುತ್ತದೆ. (ಸ್ತ್ರೀ. ಖಾರೀಕಾ). ದ್ರೋಣ ಶಬ್ದಕ್ಕೆ ದ್ರೌಣ (ಸ್ತ್ರೀ.ದ್ರೌಣೀ) ಎಂಬ ರೂಪಾಂತರವೂ ಇದೆ. ವಾಪ (ಪು) ಎಂಬ ಶಬ್ದಕ್ಕೆ ಬಿತ್ತುವ ಹೊಲ ಎಂದರ್ಥ. ದ್ರೋಣವಾಪ, ಖಾರೀವಾಪ, ಆಢಕವಾಪ (ಪು) ಇತ್ಯಾದಿ ರೂಪಾಂತರಗಳನ್ನೂ ಮಾಡಿಕೊಳ್ಳಬಹುದು.

ದಾತ್ರಂ ಲವಿತ್ರಮಾಬಂಧೋ ಯೋತ್ರಂ ಯೋಕ್ತ್ರಮಥೋ ಫಲಮ್ ।
ನಿರೀಷಂ ಕುಟಕಂ ಫಾಲಃ ಕೃಷಕೋ ಲಾಂಗಲಂ ಹಲಮ್ ॥ ೫೯೯
ಗೋದಾರಣಂ ಚ ಸೀರೋಽಥ ಶಮ್ಯಾ ಸ್ತ್ರೀ ಯುಗಕೀಲಕಃ ।
ಈಷಾ ಲಾಂಗಲದಂಡಸ್ಸ್ಯಾತ್ ಸೀತಾ ಲಾಂಗಲಪದ್ಧತಿಃ ॥ ೬೦೦
ಪುಂಸಿ ಮೇಧಿಃ ಖಲೇ ದಾರು ನ್ಯಸ್ತಂ ಯತ್ಪಶುಬಂಧನೇ ।
ಆಶುರ್ವ್ರೀಹಿಃ ಪಾಟಲಸ್ಸ್ಯಾಚ್ಛಿತಶೂಕಯವೌ ಸಮೌ ॥ ೬೦೧
ತೋಕ್ಮಸ್ತು ತತ್ರ ಹರಿತೇ ಕಲಾಯಸ್ತು ಸತೀನಕಃ ।
ಹರೇಣುಖಂಡಿಕೌ ಚಾಸ್ಮಿನ್ ಕೋರದೂಷಸ್ತು ಕೋದ್ರವಃ ॥ ೬೦೨
ಮಂಗಲ್ಯಕೋ ಮಸೂರೋಽಥ ಮಕುಷ್ಠಕಮಯುಷ್ಠಕೌ ।
ವನಮುದ್ಗೇ ಸರ್ಷಪೇ ತು ದ್ವೌ ತಂತುಭಕದಂಬಕೌ ॥ ೬೦೩

೫೯೯-೬೦೦. ದಾತ್ರ, ಲವಿತ್ರ (ನ)=ಕುಡಗೋಲು, ಕೊಯ್ಯುವ ಸಾಧನ. ಆಬಂಧ (ಪು), ಯೋತ್ರ, ಯೋಕ್ತ್ರ (ನ)=ಪಶುಗಳನ್ನು ಕಟ್ಟುವ ಹಗ್ಗ, ಕಣ್ಣಿ. ಫಲ, ನಿರೀಷ, (ನಿರೀಶ) ಕುಟಕ, (ಕೂಟಕ) (ನ), ಫಾಲ, ಕೃಷಕ (ಪು)=ನೇಗಿಲಿನ ತುದಿಯಲ್ಲಿರುವ ಲೋಹಭಾಗ, ಗುಳ. ಲಾಂಗಲ, ಹಲ, ಗೋದಾರಣ (ನ), ಸೀರ (ಪು)=ನೇಗಿಲು. ಶಮ್ಯಾ (ಸ್ತ್ರೀ), ಯುಗಕೀಲಕ (ಪು)=ನೇಗಿಲಿನ ಕಣ್ಣಿಗೆ ತಗುಲಿಸುವ ಮೊಳೆ. ಈಷಾ (ಈಶಾ) (ಸ್ತ್ರೀ)=ನೇಗಿಲಿನ ಮರ. ಸೀತಾ, ಲಾಂಗಲಪದ್ಧತಿ (ಸ್ತ್ರೀ)=ನೇಗಿಲು ಗೀಚಿದ ಸಾಲು.

೬೦೧. ಮೇಧಿ (ಪು)=ಕಣದಲ್ಲಿ ಹೂಡಿರುವ ಮೇಟಿಕಂಭ. ಆಶು, ವ್ರೀಹಿ, ಪಾಟಲ (ಪು)=ಕೆಂಪು ಬತ್ತ. ಶಿತ (ಸಿತ) ಶೂಕ, ಯವ (ಪು)= ಯವಧಾನ್ಯ (Barley).

೬೦೨. ತೋಕ್ಮ (ಪು)=ಪಕ್ವವಾಗದ ಯವಧಾನ್ಯ. ಕಲಾಯ, ಸತೀನಕ, ಹರೇಣು, ಖಂಡಿಕ (ಪು)=ಬಟಾಣಿ ; ನೆಲಗಡಲೆ. ಕೋರದೂಷ, ಕೋದ್ರವ (ಪು)=ಹಾರಕಧಾನ್ಯ.

೬೦೩. ಮಂಗಲ್ಯಕ, ಮಸೂರ (ಪು)=ಒಂದು ಬಗೆಯ ಧಾನ್ಯ; ವ್ರೀಹಿಭೇದ. ಮಕುಷ್ಠಕ, ಮಯುಷ್ಠಕ, ವನಮುದ್ಗ (ಪು)=ಕಾಡುಹೆಸರು. ಸರ್ಷಪ, ತಂತುಭ, ಕದಂಬಕ (ಪು)=ಸಾಸವೆ.



ಸಿದ್ಧಾರ್ಥಸ್ತ್ವೇಷ ಧವಲೋ ಗೋಧೂಮಃ ಸುಮನಸ್ಸಮೌ ।
ಸ್ಯಾದ್ಯಾವಕಸ್ತು ಕುಲ್ಮಾಷಶ್ಚಣಕೋ ಹರಿಮಂಥಕಃ ॥ ೬೦೪
ದ್ವೌ ತಿಲೇ ತಿಲಪಿಂಜಶ್ಚ ತಿಲಪೇಜಶ್ಚ ನಿಷ್ಫಲೇ ।
ಕ್ಷವಃ ಕ್ಷುತಾಭಿಜನನೋ ರಾಜಿಕಾ ಕೃಷ್ಣಿಕಾಸುರೀ ॥ ೬೦೫
ಸ್ತ್ರಿಯೌ ಕಂಗುಪ್ರಿಯಂಗೂ ದ್ವೇ ಅತಸೀ ಸ್ಯಾದುಮಾ ಕ್ಷುಮಾ ।
ಮಾತುಲಾನೀ ತು ಭಂಗಾಯಾಂ ವ್ರೀಹಿಭೇದಸ್ತ್ವಣುಃ ಪುಮಾನ್ ॥ ೬೦೬
ಕಿಂಶಾರುಸ್ಸಸ್ಯಶೂಕಂ ಸ್ಯಾತ್ಕಣಿಶಂ ಸಸ್ಯಮಂಜರೀ ।
ಧಾನ್ಯಂ ವ್ರೀಹಿಸ್ಸ್ತಂಬಕರಿಸ್ಸ್ತಂಬೋ ಗುಚ್ಛಸ್ತೃಣಾದಿನಃ ॥ ೬೦೭
ನಾಲೀ ನಾಲಂ ಚ ಕಾಂಡೋಽಸ್ಯ ಪಲಾಲೋಽಸ್ತ್ರೀ ಸ ನಿಷ್ಫಲಃ ।
ಕಡಂಗರೋ ಬುಸಂ ಕ್ಲೀಬೇ ಧಾನ್ಯತ್ವಚಿ ತುಷಃ ಪುಮಾನ್ ॥ ೬೦೮

೬೦೪. ಸಿದ್ಧಾರ್ಥ (ಪು)=ಬಿಳಿಯ ಸಾಸಿವೆ. ಗೋಧೂಮ, ಸುಮನ (ಪು)=ಗೋಧಿ. ಯಾವಕ, ಕುಲ್ಮಾಷ[1] (ಪು)=ಅಲಸಂದಿ. ಚಣಕ, ಹರಿಮಂಥಕ (ಪು)=ಕಡಲೆ.

೬೦೫. ತಿಲಪಿಂಜ, ತಿಲಪೇಜ (ಪು)=ಜಳ್ಳಾದ ಎಳ್ಳು. ಕ್ಷವ, ಕ್ಷುತಾ (ಧಾ) ಭಿಜನನ (ಪು), ರಾಜಿಕಾ, ಕೃಷ್ಣಿಕಾ, ಆಸುರೀ (ಸ್ತ್ರೀ)=ಕರಿಯ ಸಾಸವೆ.

೬೦೬. ಕಂಗು, ಪ್ರಿಯಂಗು (ಸ್ತ್ರೀ)=ನವಣೆ. ಅತಸೀ, ಉಮಾ, ಕ್ಷುಮಾ (ಸ್ತ್ರೀ)=ಅಗಸೆ. ಮಾತುಲಾನೀ, ಭಂಗಾ (ಸ್ತ್ರೀ)=ಸೆಣಬು. ಅಣು (ಪು)=ಸಣ್ಣ ಭತ್ತ, ಜೀರಿಗೆಸಂಬಾರ.

೬೦೭. ಕಿಂಶಾರು (ಪು), ಸಸ್ಯಶೂಕ (ನ)=ಧಾನ್ಯದ ಮುಳ್ಳು. ಕಣಿಶ (ನ), ಸಸ್ಯಮಂಜರೀ (ಸ್ತ್ರೀ)=ತೆನೆ. ಧಾನ್ಯ, ವ್ರೀಹಿ, ಸ್ತಂಬಕರಿ (ಪು)=ಯಾವುದಾದರೂ ಧಾನ್ಯ. ಸ್ತಂಬ, ಗುಚ್ಛ (ಗುತ್ಸ) (ಪು)=ಹುಲ್ಲು ಮುಂತಾದವುಗಳ ಬುಡ, ಗಡ್ಡೆ ; ಪೊದೆ.

೬೦೮. ನಾಲೀ (ನಾಡೀ), ನಾಲ (ನ), ಕಾಂಡ (ಪು)=ಹುಲ್ಲು ಮುಂತಾದವುಗಳ ಕಾಂಡ, ದಂಟು. ಪಲಾಲ (ಪು. ನ)=ಧಾನ್ಯವನ್ನು ಕಿತ್ತಮೇಲೆ ಉಳಿದ ಕಾಂಡ, ಹುಲ್ಲು. ಕಡಂಗರ (ಪು), ಬುಸ (ನ)=ಬೂಸ, ತೌಡು. ತುಷ (ಪು)=ಧಾನ್ಯದ ಸಿಪ್ಪೆ, ಹೊಟ್ಟು.

೬೦೯. ಶೂಕ (ಪು. ನ)=ಚೂಪಾದ ವಸ್ತು, ಮುಳ್ಳು. ಶಮೀ, ಶಿಂಬಾ (ಸ್ತ್ರೀ)=ಉದ್ದವಾದ ಬೀಜಕೋಶ (Pod). ಋದ್ಧ, ಆವಸಿತ (ನ. ವಿ. ನಿಷ್ಪ)=ಒಕ್ಕಿದ ಧಾನ್ಯ, ತುಳಿಸಿದ

[1] ಕುಲ್ಮಾಷ (ಪು)=ಅರ್ಧಬೆಂದಿರುವ ಯಾವುದಾದರೂ ಧಾನ್ಯ ಎಂಬ ಅರ್ಥವೂ ಇದೆ.

ಶೂಕೋಽಸ್ತ್ರೀಶ್ಲಕ್ಷ್ಣ ತೀಕ್ಷ್ಣಾಗ್ರೇ ಶಮೀ ಶಿಂಬಾ ತ್ರಿಷೂತ್ತರೇ ।
ಋದ್ಧಮಾವಸಿತಂ ಧಾನ್ಯಂ ಪೂತಂ ತು ಬಹುಲೀಕೃತಮ್॥ ೯೦೯
ಮಾಷಾದಯಶ್ಶಮೀಧಾನ್ಯೇ ಶೂಕಧಾನ್ಯೇ ಯವಾದಯಃ ।
ಶಾಲಯಃ ಕಲಮಾದ್ಯಾಶ್ಚ ಷಷ್ಟಿಕಾದ್ಯಾಶ್ಚ ಪುಂಸ್ಯಮೀ ॥ ೯೧೦
ತೃಣಧಾನ್ಯಾನಿ ನೀವಾರಾಃ ಸ್ತ್ರೀ ಗವೇಧುರ್ಗವೇಧುಕಾ ।
ಅಯೋಽಗ್ರಂ ಮುಸಲೋಽಸ್ತ್ರೀ ಸ್ಯಾದುದೂಖಲಮುಲೂಖಲಮ್ ॥ ೯೧೧
ಪ್ರಸ್ಫೋಟನಂ ಶೂರ್ಪಮಸ್ತ್ರೀ ಚಾಲನೀ ತಿತಉಃ ಪುಮಾನ್ ।
ಸ್ಯೂತಪ್ರಸೇವೌ ಕಂಡೋಲಪಿಟೌ ಕಟಕಿಲಿಂಜಕೌ ॥ ೯೧೨
ಸಮಾನೌ ರಸವತ್ಯಾಂ ತು ಪಾಕಸ್ಥಾನಮಹಾನಸೇ ।
ಪೌರೋಗವಸ್ತದಧ್ಯಕ್ಷಸ್ಸೂಪಕಾರಾಸ್ತು ವಲ್ಲವಾಃ ॥ ೯೧೩

---

ಧಾನ್ಯ. ಪೂತ, ಬಹುಲೀಕೃತ (ನ. ವಿ. ನಿಷ್ಪ)=ತೂರಿದ ಧಾನ್ಯ, ಶುದ್ಧಪಡಿಸಿದ ಧಾನ್ಯ.

೯೧೦. ಶಮೀಧಾನ್ಯ (ನ)=ಉದ್ದು, ಹೆಸರು, ಕಡಲೆ ಮೊದಲಾದ ಬೀಜ ಕೋಶವಿರುವ ಧಾನ್ಯ. ಶೂಕಧಾನ್ಯ (ನ)=ಭತ್ತ, ಗೋಧಿ ಮೊದಲಾದ ಮುಳ್ಳಿರುವ ಧಾನ್ಯ. ಕಲಮ (ಪು), ಷಷ್ಟಿಕ (ಪು)=ಮೊದಲಾದವು ಶಾಲಿ (ಪು)=ಬತ್ತ ಎನ್ನಲ್ಪಡುತ್ತವೆ. ಇವು ಪುಲ್ಲಿಂಗಗಳು.

೯೧೧. ತೃಣಧಾನ್ಯ (ನ), ನೀವಾರ (ಪು)=ತಾನಾಗಿ ಬೆಳೆದ ಬತ್ತ, ನವಣೆ ಮುಂತಾದ ಹುಲ್ಲುಧಾನ್ಯ. ಗವೇಧು, ಗವೇಧುಕಾ (ಸ್ತ್ರೀ)=ತಾನಾಗಿ ಬೆಳೆದ ಕಾಡುಗೋಧಿ. ಅಯೋಗ್ರ (ನ), ಮುಸಲ (ಪು. ನ)=ಒನಕೆ. ಉದೂಖಲ, ಉಲೂಖಲ (ನ)=ಒರಳು.[1]

೯೧೨. ಪ್ರಸ್ಫೋಟನ (ನ), ಶೂರ್ಪ (ಪು. ನ)= ಮೊರ. ಚಾಲನೀ (ಸ್ತ್ರೀ), ತಿತಉ (ಪು)= ಜರಡಿ, ವಂದರಿ. ಸ್ಯೂತ,[2] ಪ್ರಸೇವ (ಪು)=ಚೀಲ. ಕಂಡೋಲ, ಪಿಟ (ಪು)=ಬುಟ್ಟಿ, ಮಂಕರಿ. ಕಟ, ಕಿಲಿಂಜಕ (ಪು)=ಚಾಪೆ.

೯೧೩-೯೧೪. ರಸವತೀ (ಸ್ತ್ರೀ), ಪಾಕಸ್ಥಾನ, ಮಹಾನಸ[3] (ನ)=ಅಡಿಗೆಮನೆ. ಭಕ್ಷಕಾರ ಶಬ್ದವರೆಗೆ ಮುಂದಿನವು ಅರ್ಥಾನುಸಾರವಾಗಿ ಮೂರು ಲಿಂಗಗಳಲ್ಲಿರುತ್ತವೆ. ಪೌರೋಗವ

---

[1] ಇಲ್ಲಿ ಪಾಠವಿಶೇಷ-ಘುರಟ್ಟಶ್ಚಕ್ರಿಕಾಯಂತ್ರೇ ಪಟ್ಟಃ ಸ್ಯಾತ್ ಪೇಷಣಾಶ್ಮನಿ = ಘುರಟ್ಟ (ಪು)=ಬೀಸುವ ಕಲ್ಲು. ಪಟ್ಟ (ಪು)=ರುಬ್ಬುವ ಗುಂಡು; ಅರೆಯುವ ಕಲ್ಲು.

[2] ಸ್ಯೋನ (ಪು) ಎಂಬ ಶಬ್ದಾಂತರವೂ ಇದೆ.

[3] ಮಹಾನಸ ಶಬ್ದವು ಪುಲ್ಲಿಂಗದಲ್ಲಿಯೂ ಇದೆ.



ಆರಾಲಿಕಾ ಆಂಧಸಿಕಾಸ್ಸೂದಾ ಔದನಿಕಾ ಗುಣಾಃ ।
ಆಪೂಪಿಕಃ ಕಾಂದವಿಕೋ ಭಕ್ಷಕಾರ ಇಮೇ ತ್ರಿಷು ॥ ೯೧೪
ಅಶ್ಮಂತಮುದ್ಧಾನಮಧಿಶ್ರಯಣೀ ಚುಲ್ಲಿ ರಂತಿಕಾ ।
ಅಂಗಾರಧಾನಿಕಾಂಗಾರಶಕಟ್ಯಪಿ ಹಸಂತ್ಯಪಿ ॥ ೯೧೫
ಹಸನ್ಯಪ್ಯಥ ನ ಸ್ತ್ರೀ ಸ್ಯಾದಂಗಾರೋಽಲಾತಮುಲ್ಮುಕಮ್ ।
ಕ್ಲೀಬೇಽಂಬರೀಷಂ ಭ್ರಾಷ್ಟ್ರೋ ನಾ ಕಂದುರ್ವಾ ಸ್ವೇದನೀ ಸ್ತ್ರಿಯಾಂ ॥ ೯೧೬
ಅಲಿಂಜರಸ್ಸ್ಯಾನ್ಮಣಿಕಃ ಕರ್ಕರ್ಯಾಲುರ್ಗಲಂತಿಕಾ ।
ಪಿಠರಃ ಸ್ಥಾಲ್ಯುಖಾ ಕುಂಡಂ ಕಲಶಸ್ತು ತ್ರಿಷು ದ್ವಯೋಃ ॥ ೯೧೭
ಘಟಃ ಕುಟನಿಪಾವಸ್ತ್ರೀ ಶರಾವೋ ವರ್ಧಮಾನಕಃ ।
ಋಜೀಷಂ ಪಿಷ್ಟಪಚನಂ ಕಂಸೋಽಸ್ತ್ರೀ ಪಾನಭಾಜನಮ್ ॥ ೯೧೮

---

(ಪು) (-ಸ್ತ್ರೀ. ಪೌರೋಗವೀ)=ಅಡಿಗೆಮನೆಯ ಅಧಿಕಾರಿ. ಸೂಪಕಾರ, ವಲ್ಲವ, ಆರಾಲಿಕ, ಆಂಧಸಿಕ, ಸೂದ, ಔದನಿಕ, ಗುಣ (ಪು -ಸ್ತ್ರೀ. ಸೂಪಕಾರೀ, ಆರಾಲಿಕೀ, ಆಂಧಸಿಕೀ, ಔದನಿಕೀ)=ಅಡಿಗೆಮಾಡತಕ್ಕವನು. ಆಪೂಪಿಕ, ಕಾಂದವಿಕ, ಭಕ್ಷ (ಕ್ಷ್ಯ) ಕಾರ (ಪು.) (ಸ್ತ್ರೀ. ಆಪೂಪಿಕೀ, ಕಾಂದವಿಕೀ, ಭಕ್ಷಕಾರೀ)= ಭಕ್ಷ್ಯಗಳನ್ನು ಮಾಡತಕ್ಕವನು.

೯೧೫-೯೧೬. ಅಶ್ಮಂತ, ಉದ್ಧಾನ (ನ), ಅಧಿಶ್ರಯಣೀ, ಚುಲ್ಲಿ, ಅಂತಿಕಾ (ಸ್ತ್ರೀ)=ಒಲೆ. ಅಂಗಾರಧಾನಿಕಾ, ಅಂಗಾರಶಕಟೀ, ಹಸಂತೀ, ಹಸನೀ (ಸ್ತ್ರೀ)=ಅಗ್ಗಿಷ್ಟಿಕೆ. ಅಂಗಾರ (ಪು. ನ)=ಕೆಂಡ. ಅಲಾತ, ಉಲ್ಮುಕ (ನ)=ಕೊಳ್ಳಿ. ಅಂಬರೀಷ (ನ), ಭ್ರಾಷ್ಟ್ರ (ಪು)=ಬಾಣಲಿ. ಕಂದು (ಪು. ಸ್ತ್ರೀ), ಸ್ವೇದನೀ (ಸ್ತ್ರೀ)=ಕಡಾಯಿ, ಹಂಡೆ.

೯೧೭-೯೧೮. ಅಲಿಂಜರ, ಮಣಿಕ (ಪು)=ಗುಡಾಣ, ಬಾನಿ. ಕರ್ಕರೀ, ಆಲು, ಗಲಂತಿಕಾ (ಸ್ತ್ರೀ)=ಹೂಜಿ. ಪಿಠರ (ಪು), ಸ್ಥಾಲೀ, ಉಖಾ (ಸ್ತ್ರೀ), ಕುಂಡ (ನ)=ಅನ್ನಮಾಡುವ ಪಾತ್ರೆ, ಚರಿಗೆ ಇತ್ಯಾದಿ. ಕಲಶ (ಪು. ಸ್ತ್ರೀ. ನ) (-ಸ್ತ್ರೀ. ಕಲಶೀ), ಘಟ (ಪು. ಸ್ತ್ರೀ) (-ಸ್ತ್ರೀ. ಘಟೀ), ಕುಟ, ನಿಪ (ಪು)=ಗಡಿಗೆ ; ತಂಬಿಗೆ. ಶರಾವ (ಪು. ಸ್ತ್ರೀ) ವರ್ಧಮಾನಕ (ಪು)=ಮುಚ್ಚಳ ; ತಟ್ಟೆ (Plate). ಋಜೀಷ, ಪಿಷ್ಟಪಚನ (ನ)=ಕಾವಲಿ, ತವ. ಕಂಸ (ಪು. ನ), ಪಾನಭಾಜನ (ನ)=ಲೋಟ, ಬಟ್ಟಲು.

೯೧೯. ಕುತೂ (ಸ್ತ್ರೀ)=ಚರ್ಮದ ಎಣ್ಣೆ ಪಾತ್ರೆ. ಕುತುಪ (ಪು)=ಚರ್ಮದ ಚಿಕ್ಕಪಾತ್ರೆ. ಆವಪನ, ಭಾಂಡ, ಪಾತ್ರ, ಅಮತ್ರ, ಭಾಜನ (ನ)=ಸಾಮಾನ್ಯವಾಗಿ ಎಲ್ಲ ಬಗೆಯ ಪಾತ್ರೆ.

ಕುತೂಃ ಕೃತ್ತಿಸ್ನೇಹಪಾತ್ರೇ ಸೈವಾಲ್ಪಾ ಕುತುಪಃ ಪುಮಾನ್ ।
ಸರ್ವಮಾವಪನಂ ಭಾಂಡಂ ಪಾತ್ರಾಮತ್ರೇ ಚ ಭಾಜನಮ್ ॥ ೯೧೯
ದರ್ವೀ ಕಂಬಿಃ ಖಜಾಕಾ ಚ ಸ್ಯಾತ್ತರ್ದೂರ್ದಾರುಹಸ್ತಕಃ ।
ಅಸ್ತ್ರೀ ಶಾಕಂ ಹರಿತಕಂ ಶಿಗ್ರುರಸ್ಯ ತು ನಾಡಿಕಾ ॥ ೯೨೦
ಕಲಂಬಶ್ಚ ಕಡಂಬಶ್ಚ ವೇಶವಾರ ಉಪಸ್ಕರಃ ।
ತಿಂತಿಡೀಕಂ ಚ ಚುಕ್ರಂ ಚ ವೃಕ್ಷಾಮ್ಲಮಥ ವೇಲ್ಲಜಮ್ ॥ ೯೨೧
ಮರೀಚಂ ಕೋಲಕಂ ಕೃಷ್ಣಮೂಷಣಂ ಧರ್ಮಪತ್ತನಮ್ ।
ಜೀರಕೋ ಜರಣೋऽಜಾಜೀ ಕಣಾ ಕೃಷ್ಣೇ ತು ಜೀರಕೇ ॥ ೯೨೨
ಸುಷವೀ ಕಾರವೀ ಪೃಥ್ವೀ ಪೃಥುಃ ಕಾಲೋಪಕುಂಚಿಕಾ ।
ಆರ್ದ್ರಕಂ ಶೃಂಗವೇರಂ ಸ್ಯಾದಥ ಛತ್ರಾ ವಿತುನ್ನಕಂ ॥ ೯೨೩

---

೯೨೦-೯೨೧. ದರ್ವೀ, ಕಂಬಿ ಖಜಾಕಾ (ಸ್ತ್ರೀ)=ಸೌಟು. ತರ್ದೂ,[1] (ತಂಡೂ), ದಾರುಹಸ್ತಕ (ಪು)=ಮರದ ಸೌಟು, ಮರದ ಹಿಡಿಯಿರುವ ಸಟ್ಟುಗ. ಶಾಕ (ಪು.ನ), ಹರಿತಕ (ನ), ಶಿಗ್ರು (ಪು)=ಸೊಪ್ಪು ; ತರಕಾರಿ, ಕಾಯಿಪಲ್ಯ. ನಾಡಿಕಾ (ಸ್ತ್ರೀ), ಕಲಂಬ, ಕಡಂಬ (ಪು)=ಸೊಪ್ಪಿನ ದಂಟು. ವೇಶವಾರ (ವೇಸವಾರ), ಉಪಸ್ಕರ (ಪು)=ಸಂಬಾರದ ಪುಡಿ ; ಒಗ್ಗರಣೆ,

೯೨೧-೯೨೨. ತಿಂತಿ[2]ಡೀಕ, ಚುಕ್ರ, ವೃಕ್ಷಾಮ್ಲ (ನ)=ಹುಣಿಸೆ ಹಣ್ಣು. ವೇಲ್ಲಜ, ಮರೀಚ, (ಮರಿಚ), ಕೋಲಕ, ಕೃಷ್ಣ, ಊಷಣ, ಧರ್ಮಪತ್ತನ (ನ)=ಮೆಣಸು.

೯೨೨-೯೨೩. ಜೀರಕ, ಜರಣ (ಪು), ಅಜಾಜೀ, ಕಣಾ (ಸ್ತ್ರೀ)=ಜೀರಿಗೆ. ಸುಷವೀ, ಕಾರವೀ, ಪೃಥ್ವೀ, ಪೃಥು, ಕಾಲಾ, ಉಪಕುಂಚಿಕಾ (ಸ್ತ್ರೀ)=ಕರಿಜೀರಿಗೆ.

೯೨೩-೯೨೪. ಆರ್ದ್ರಕ, ಶೃಂಗವೇರ (ನ)=ಹಸಿಶುಂಠಿ. ಛತ್ರಾ (ಸ್ತ್ರೀ), ವಿತುನ್ನಕ, ಕುಸ್ತುಂಬುರು, ಧಾನ್ಯಾಕ[3] (ನ)=ಕೊತ್ತುಂಬರಿ, ಧನಿಯ. ಶುಂಠೀ (ಸ್ತ್ರೀ), ಮಹೌಷಧ (ನ), ವಿಶ್ವ (ಸ್ತ್ರೀ. ನ), ನಾಗರ, ವಿಶ್ವಭೇಷಜ (ನ)=ಒಣಶುಂಠಿ.

---

1 ತರ್ದೂ ಶಬ್ದವು ಸ್ತ್ರೀಲಿಂಗವೆಂದು ಕೆಲವರು.
2 ತಿಂತ್ರಿಣೀ, ತಿಂತಿಣೀ (ಸ್ತ್ರೀ) ಎಂಬ ರೂಪಗಳೂ ಉಂಟು.
3 ಧಾನ್ಯಾಕವೆಂದೂ ಇದೆ.



ಕುಸ್ತುಂಬುರು ಚ ಧಾನ್ಯಾಕಮಥ ಶುಂಠೀ ಮಹೌಷಧಮ್ ।
ಸ್ತ್ರೀನಪುಂಸಕಯೋರ್ವಿಶ್ವಂ ನಾಗರಂ ವಿಶ್ವಭೇಷಜಮ್ ॥ ೯೨೪
ಆರನಾಲಕಸೌವೀರಕುಲ್ಮಾಷಾಭಿಷುತಾನಿ ಚ ।
ಅವಂತಿಸೋಮಧಾನ್ಯಾಮ್ಲಕುಂಜಲಾನಿ ಚ ಕಾಂಜಿಕೇ ॥ ೯೨೫
ಸಹಸ್ರವೇಧಿ ಜತುಕಂ ಬಾಹ್ಲೀಕಂ ಹಿಂಗು ರಾಮಠಮ್ ।
ತತ್ಪತ್ರೀ ಕಾರವೀ ಪೃಥ್ವೀ ಬಾಷ್ಪಿಕಾ ಕಬರೀ ಪೃಥುಃ ॥ ೯೨೬
ನಿಶಾಖ್ಯಾ ಕಾಂಚನೀ ಪೀತಾ ಹರಿದ್ರಾ ವರವರ್ಣಿನೀ ।
ಸಾಮುದ್ರಂ ಯತ್ತು ಲವಣಮಕ್ಷೀವಂ ವಶಿರಂ ಚ ತತ್ ॥ ೯೨೭
ಸೈಂಧವೋऽಸ್ತ್ರೀ ಶೀತಶಿವಂ ಮಾಣಿಮಂಥಂ ಚ ಸಿಂಧುಜೇ ।
ರೌಮಕಂ ವಸುಕಂ ಪಾಕ್ಯಂ ಬಿಡಂ ಚ ಕೃತಕೇ ದ್ವಯಮ್ ॥ ೯೨೮
ಸೌವರ್ಚಲೇऽಕ್ಷರುಚಕೇ ತಿಲಕಂ ತತ್ರ ಮೇಚಕೇ ।
ಮತ್ಸ್ಯಂಡೀ ಫಾಣಿತಂ ಖಂಡವಿಕಾರೇ ಶರ್ಕರಾ ಸಿತಾ ॥ ೯೨೯

---

೯೨೫. ಆರನಾಲಕ, ಸೌವೀರ, ಕುಲ್ಮಾಷ, ಅಭಿಷುತ, ಅವಂತಿಸೋಮ, ಧಾನ್ಯಾಮ್ಲ, ಕುಂಜಲ, ಕಾಂಜಿಕ (ನ)=ಅನ್ನದ ಹುಳಿಗಂಜಿ (ಒಂದು ಬಗೆಯ ಮದ್ಯವಿರಬಹುದು.)

೯೨೬. ಸಹಸ್ರವೇಧಿನ್, ಜತುಕ, ಬಾಹ್ಲೀಕ, ಹಿಂಗು, ರಾಮಠ (ನ)=ಹಿಂಗು. ತತ್ಪತ್ರೀ (ತ್ವಕ್ಪತ್ರೀ), ಕಾರವೀ, ಪೃಥ್ವೀ, ಬಾಷ್ಪಿಕಾ, ಕಬರೀ, ಪೃಥು (ಸ್ತ್ರೀ)=ಹಿಂಗಿನ ಮರ.

೯೨೭. ನಿಶಾಖ್ಯಾ, ಕಾಂಚನೀ, ಪೀತಾ, ಹರಿದ್ರಾ, ವರವರ್ಣಿನೀ (ಸ್ತ್ರೀ)=ಅರಿಶಿಣ. ಅಕ್ಷೀವ, ವಶಿರ (ವಸಿರ) (ನ)=ಸಮುದ್ರದಲ್ಲಿ ಹುಟ್ಟಿದ ಉಪ್ಪು.ಲವಣ (ನ)=ಉಪ್ಪು.

೯೨೮. ಸೈಂಧವ (ಪು. ನ), ಶೀತಶಿವ, ಮಾಣಿಮಂಥ (ಮಾಣಿಬಂಧ.), ಸಿಂಧುಜ (ನ)=ಸೈಂಧವ ಲವಣ. ರೌಮಕ, ವಸುಕ (ವಸ್ತಕ) (ನ)=ಚೌಳುಪ್ಪು. ಪಾಕ್ಯ, ಬಿಡ (ನ)=ಅಡಿಗೆಗೋಸ್ಕರ ಸ್ವಚ್ಛಪಡಿಸಿದ ಉಪ್ಪು (Table=salt).

೯೨೯. ಸೌವರ್ಚಲ, ಅಕ್ಷ, ರುಚಕ (ನ)=ಸೌವರ್ಚಲವಣ, ಅಡಿಗೆ ಸೋಡ. ತಿಲಕ (ನ)=ಕಪ್ಪಾದ ಸೌವರ್ಚಲವಣ. ಮತ್ಸ್ಯಂಡೀ (ಸ್ತ್ರೀ)=ಕಲ್ಲುಸಕ್ಕರೆ. ಫಾಣಿತ (ನ)=ಕಾಕಂಬಿ, ಜೋನಿಬೆಲ್ಲ. ಶರ್ಕರಾ, ಸಿತಾ (ಸ್ತ್ರೀ)=ಸಕ್ಕರೆ.

೯೩೦. ಕೂರ್ಚಿಕಾ (ಸ್ತ್ರೀ)=ಹಾಲಿನಗಿಣ್ಣು. ರಸಾಲಾ, ಮಾರ್ಜಿತಾ (ಸ್ತ್ರೀ)=ಮೊಸರಿಗೆ ಜೇನು, ಸಕ್ಕರೆ, ಶುಂಠಿ, ಮೆಣಸು, ಪಚ್ಚಕರ್ಪೂರಗಳನ್ನು ಸೇರಿಸಿ ಮಾಡಿದ ಮಿಶ್ರಣ. ತೇಮನ,

ಕೂರ್ಚಿಕಾ ಕ್ಷೀರವಿಕೃತಿಸ್ಸ್ಯಾದ್ರಸಾಲಾ ತು ಮಾರ್ಜಿತಾ ।
ಸ್ಯಾತ್ತೇಮನಂ ತು ನಿಷ್ಠಾನಂ ತ್ರಿಲಿಂಗಾ ವಾಸಿತಾವಧೇಃ ॥ ೯೩೦
ಶೂಲಾಕೃತಂ ಭಟಿತ್ರಂ ಚ ಶೂಲ್ಯಮುಖ್ಯಂ ತು ಪೈಠರಮ್ ।
ಪ್ರಣೀತಮುಪಸಂಪನ್ನಂ ಪ್ರಯಸ್ತಂ ಸ್ಯಾತ್ಸುಸಂಸ್ಕೃತಮ್ ॥ ೯೩೧
ಸ್ಯಾತ್ಪಿಚ್ಛಿಲಂ ತು ವಿಜಿಲಂ ಸಂಮೃಷ್ಟಂ ಶೋಧಿತಂ ಸಮೇ ।
ಚಿಕ್ಕಣಂ ಮಸೃಣಂ ಸ್ನಿಗ್ಧಂ ತುಲ್ಯೇ ಭಾವಿತವಾಸಿತೇ ॥ ೯೩೨
ಆಪಕ್ವಂ ಪೌಲಿರಭ್ಯೂಷೋ ಲಾಜಾಃ ಪುಂಭೂಮ್ನಿ ಚಾಕ್ಷತಾಃ ।
ಪೃಥುಕಃ ಸ್ಯಾಚ್ಚಿಪಿಟಕೋ ಧಾನಾ ಭೃಷ್ಟಯವೇ ಸ್ತ್ರಿಯಃ ॥ ೯೩೩
ಪೂಪೋಽಪೂಪಃ ಪಿಷ್ಟಕಃ ಸ್ಯಾತ್ ಕರಂಭೋ ದಧಿಸಕ್ತವಃ ।
ಭಿಸ್ಸಾ ಸ್ತ್ರೀ ಭಕ್ತಮಂಧೋಽನ್ನ ಮೋದನೋಽಸ್ತ್ರೀ ಸ ದೀದಿವಿಃ ॥ ೯೩೪

---

ನಿಷ್ಠಾನ (ನ)=ಮಜ್ಜಿಗೆ ಹುಳಿ ; ಪಳಿದ್ಯ. ೯೩೨ನೆಯ ಶ್ಲೋಕದ ವಾಸಿತ ಶಬ್ದದವರೆಗೆ ಇರುವ ಮುಂದಿನ ಶಬ್ದಗಳು ವಿಶೇಷ್ಯನಿಘ್ನಗಳಾಗಿ ತ್ರಿಲಿಂಗಗಳಾಗುತ್ತವೆ.

೯೩೧-೯೩೨. ಶೂಲಾಕೃತ, ಭಟಿತ್ರ, ಶೂಲ್ಯ (ನ)=ಸಲಾಕಿಗೆ ಚುಚ್ಚಿಬೇಯಿಸಿದ್ದು. ಉಖ್ಯ, ಪೈಠರ(ನ)=ಮಡಿಕೆ ಮುಂತಾದ ಪಾತ್ರೆಯಲ್ಲಿ ಬೇಯಿಸಿದ್ದು. ಪ್ರಣೀತ, ಉಪಸಂಪನ್ನ (ನ)=ಚೆನ್ನಾಗಿ ಪಕ್ವಮಾಡಿದ್ದು. ಪ್ರಯಸ್ತ, ಸುಸಂಸ್ಕೃತ (ನ)=ಸಂಬಾರ ಉಪ್ಪು ಮುಂತಾದ್ದನ್ನು ಸೇರಿಸಿ ರುಚಿಕರವಾಗಿ ಮಾಡಿದ್ದು. ಪಿಚ್ಛಿಲ, ವಿಜಿಲ (ನ)=ಜಿಡ್ಡಿನಿಂದ ಕೂಡಿ ನುಣ್ಣಗಿರುವ ಹಲ್ವ ಮುಂತಾದ್ದು. ಸಂಮೃಷ್ಟ, ಶೋಧಿತ (ನ)=ಶೋಧಿಸಲ್ಪಟ್ಟದ್ದು. ಚಿಕ್ಕಣ, ಮಸೃಣ, ಸ್ನಿಗ್ಧ (ನ)=ಜಿಡ್ಡಿನಿಂದ ಮಾಡಿದ್ದು ; ನುಣುಪಾದ್ದು. ಭಾವಿತ, ವಾಸಿತ (ನ)=ಹಿಂಗು ಮುಂತಾದುದರ ವಾಸನೆ ಬರುವಂತೆ ಮಾಡಿದ್ದು :

೯೩೩. ಆಪಕ್ವ (ನ), ಪೌಲಿ, ಅಭ್ಯೂಷ (ಪು)=ಹುರಿಗಾಳು ; ಉಸಳಿ. ಲಾಜ, ಅಕ್ಷತ (ಪು. ನಿತ್ಯ ಬಹುವಚನ)=ಅರಳು, (ಅಖಂಡವಾದ ಅಕ್ಕಿ ಎಂದು ಕೆಲವರು) ಪೃಥುಕ, ಚಿಪಿಟಕ (ಪು)=ಅವಲಕ್ಕಿ. ಧಾನಾ (ಸ್ತ್ರೀ. ನಿತ್ಯಬಹುವಚನ)=ಹುರಿದ ಯವಧಾನ್ಯ ; ಪುರಿ.

೯೩೪. ಪೂಪ, ಅಪೂಪ, ಪಿಷ್ಟಕ (ಪು)=ಹಿಟ್ಟಿನಿಂದ ಮಾಡಿದ ದೋಸೆ, ಹೋಳಿಗೆ, ಶಾವಿಗೆ ಮೊದಲಾದ ಭಕ್ಷ್ಯ. ಕರಂಭ (ಪು)=ಮೊಸರನ್ನೂ ಹಿಟ್ಟನ್ನೂ ಕಲಸಿ ಮಾಡಿದ ಹುರಿಹಿಟ್ಟು. ಭಿಸ್ಸಾ (ಸ್ತ್ರೀ) ,ಭಕ್ತ, ಅಂಧಸ್, ಅನ್ನ (ನ), ಓದನ (ಪು. ನ) ದೀದಿವಿ (ಪು)=ಅನ್ನ.

೯೩೫. ಭಿಸ್ಸಟಾ, ದಗ್ಧಿಕಾ (ಸ್ತ್ರೀ)=ಸೀದ ಅನ್ನ, ಚರುಕಲು. ಮಂಡ (ಪು. ನ)=ಕೆನೆ. ಮಾಸರ, ಆಚಾಮ, ನಿಸ್ರಾವ (ಪು)=ಅನ್ನವನ್ನು ಬಸಿದು ತೆಗೆದ ಗಂಜಿ, ತಿಳಿ.



ಭಿಸ್ಸಟಾ ದಗ್ಧಿಕಾ ಸರ್ವರಸಾಗ್ರೇ ಮಂಡಮಸ್ತ್ರಿಯಾಮ್ ।
ಮಾಸರಾಚಾಮನಿಸ್ರಾವಾ ಮಂಡೇ ಭಕ್ತಸಮುದ್ಭವೇ ॥ ೯೩೫
ಯವಾಗೂರುಷ್ಣಿಕಾ ಶ್ರಾಣಾ ವಿಲೇಪೀ ತರಲಾ ಚ ಸಾ ।
ಗವ್ಯಂ ತ್ರಿಷು ಗವಾಂ ಸರ್ವಂ ಗೋವಿಟ್‌ಗೋಮಯಮಸ್ತ್ರಿಯಾಮ್ ॥ ೯೩೬
ತತ್ತು ಶುಷ್ಕಂ ಕರೀಷೋಽಸ್ತ್ರೀ ದುಗ್ಧಂ ಕ್ಷೀರಂ ಪಯಸ್ಸಮಮ್ ।
ಪಯಸ್ಯಮಾಜ್ಯದಧ್ಯಾದಿ ದ್ರಪ್ಸಂ ದಧಿ ಘನೇತರತ್ ॥ ೯೩೭
ಘೃತಮಾಜ್ಯಂ ಹವಿಸ್ಸರ್ಪಿರ್ನವನೀತಂ ನವೋದ್ಧೃತಮ್ ।
ತತ್ತು ಹೈಯಂಗವೀನಂ ಯತ್ ಹ್ಯೋಗೋದೋಹೋದ್ಭವಂ ಘೃತಂ ॥ ೯೩೮
ದಂಡಾಹತಂ ಕಾಲಶೇಯಮರಿಷ್ಟಮಪಿ ಗೋರಸಃ ।
ತಕ್ರಂ ಹ್ಯುದಶ್ವಿನ್ಮಥಿತಂ ಪಾದಾಂಬ್ವರ್ಧಾಂಬು ನಿರ್ಜಲಮ್ ॥ ೯೩೯

---

೯೩೬. ಯವಾಗೂ, ಉಷ್ಣಿಕಾ, ಶ್ರಾಣಾ, ವಿಲೇಪೀ, ತರಲಾ (ಸ್ತ್ರೀ)=ಗಂಜಿ, ಅಂಬಲಿ. ಗವ್ಯ (ಪು. ಸ್ತ್ರೀ. ನ)=ಗೋವಿಗೆ ಸಂಬಂಧಿಸಿದ ವಸ್ತು- ಹಾಲು ಮುಂತಾದ್ದು. ಗೋವಿಷ್ (ಸ್ತ್ರೀ), ಗೋಮಯ (ಪು. ನ)=ಹಸುವಿನ ಸಗಣಿ.

೯೩೭. ಕರೀಷ (ಪು.ನ)=ಬೆರಣಿ. ದುಗ್ಧ, ಕ್ಷೀರ, ಪಯಸ್ (ನ)=ಹಾಲು. ಪಯಸ್ಯ (ನ)=ಹಾಲಿನಿಂದಾಗುವ ತುಪ್ಪ, ಮೊಸರು ಮುಂತಾದ್ದು. ದ್ರಪ್ಸ (ನ)=ಗಟ್ಟಿಯಲ್ಲದ ಮೊಸರು.

೯೩೮. ಘೃತ, ಆಜ್ಯ, ಹವಿಸ್, ಸರ್ಪಿಸ್ (ನ)=ತುಪ್ಪ. ನವನೀತ (ನ)=ಬೆಣ್ಣೆ. ಹೈಯಂಗವೀನ (ನ)=ನಿನ್ನೆ ಕರೆದ ಹಸುವಿನಿಂದಾದ ತುಪ್ಪ.[1]

೯೩೯. ದಂಡಾಹತ, ಕಾಲಶೇಯ, ಅರಿಷ್ಟ (ನ), ಗೋರಸ (ಪು)=ಕಡೆದ ಮೊಸರು, ಮಜ್ಜಿಗೆ. ತಕ್ರ (ನ)=ಕಾಲುಭಾಗ ನೀರು ಸೇರಿಸಿದ ಮಜ್ಜಿಗೆ. ಉದಶ್ವಿತ್ (ನ)=ಅರ್ಧಭಾಗ ನೀರು ಸೇರಿಸಿದ ಮಜ್ಜಿಗೆ. ಮಥಿತ (ನ)=ನೀರನ್ನು ಸೇರಿಸದೆ ಕಡೆದ ಮಜ್ಜಿಗೆ.

೯೪೦. ಮಸ್ತು (ನ)=ಮೊಸರಿನ ಕೆನೆ ; ಮೊಸರಿನಿಂದ ಸ್ರವಿಸಿದ ನೀರು. ಪೀಯೂಷ[1] (ಪು)=ಆಗತಾನೆ ಕರದೆ ಹಾಲು. ಅಶನಾಯಾ, ಬುಭುಕ್ಷಾ, ಕ್ಷುಧ್ (ಸ್ತ್ರೀ)=ಹಸಿವು. ಗ್ರಾಸ, ಕವಲ (ಪು)=ತುತ್ತು.

---

[1] ಬೆಣ್ಣೆ ಎಂದು ಕೆಲವರು.

ಮಂಡಂ ದಧಿಭವಂ ಮಸ್ತು ಪೀಯೂಷೋಽಭಿನವಂ ಪಯಃ ।
ಅಶನಾಯಾ ಬುಭುಕ್ಷಾ ಕ್ಷುದ್ಗ್ರಾಸಸ್ತು ಕವಲಃ ಪುಮಾನ್ ॥ ೯೪೦
ಸಪೀತಿಃ ಸ್ತ್ರೀ ತುಲ್ಯಪಾನಂ ಸಗ್ಧಿಃ ಸ್ತ್ರೀ ಸಹಭೋಜನಮ್ ।
ಉದನ್ಯಾ ತು ಪಿಪಾಸಾ ತೃಟ್ತರ್ಷೋ ಜಗ್ಧಿಸ್ತು ಭೋಜನಮ್ ॥ ೯೪೧
ಜೇಮನಂ ಲೇಹ ಆಹಾರೋ ನಿಘಸೋ ನ್ಯಾದ ಇತ್ಯಪಿ ।
ಸೌಹಿತ್ಯಂ ತರ್ಪಣಂ ತೃಪ್ತಿಃ ಫೇಲಾ ಭುಕ್ತಸಮುಜ್ಝಿತಮ್ ॥ ೯೪೨
ಕಾಮಂ ಪ್ರಕಾಮಂ ಪರ್ಯಾಪ್ತಂ ನಿಕಾಮೇಷ್ಟಂ ಯಥೇಪ್ಸಿತಮ್ ।
ಗೋಪೇ ಗೋಪಾಲಗೋಸಂಖ್ಯಗೋಧುಗಾಭೀರವಲ್ಲವಾಃ ॥ ೯೪೩
ಹೋಮಹಿಷ್ಯಾದಿಕಂ ಪಾದಬಂಧನಂ ದ್ವೌ ಗವೀಶ್ವರೇ ।
ಗೋಮಾನ್ ಗೋಮೀ ಗೋಕುಲಂ ತು ಗೋಧನಂ ಸ್ಯಾದ್ಗವಾಂ ವ್ರಜೇ ॥ ೯೪೪

---

೯೪೧-೯೪೨. ಸಪೀತಿ (ಸ್ತ್ರೀ), ತುಲ್ಯಪಾನ (ನ)=ಜನರ ಜೊತೆಯಲ್ಲಿ ಪಾನಮಾಡುವುದು. ಸಗ್ಧಿ (ಸ್ತ್ರೀ), ಸಹಭೋಜನ (ನ)=ಜನರ ಜೊತೆಯಲ್ಲಿ ಊಟಮಾಡುವುದು. ಉದನ್ಯಾ, ಪಿಪಾಸಾ, ತೃಷ್[2] (ಸ್ತ್ರೀ), ತರ್ಷ (ಪು)=ಬಾಯಾರಿಕೆ. ಜಗ್ಧಿ (ಸ್ತ್ರೀ), ಭೋಜನ, ಜೇಮನ (ನ), ಲೇಹ, ಆಹಾರ, ನಿಘಸ, ನ್ಯಾದ (ಪು)=ಊಟ, ತಿನ್ನುವುದು.

೯೪೨-೯೪೩. ಸೌಹಿತ್ಯ, ತರ್ಪಣ (ನ), ತೃಪ್ತಿ (ಸ್ತ್ರೀ)=ತೃಪ್ತಿ. ಫೇಲಾ (ಸ್ತ್ರೀ)=ಎಂಜಲು, ತಿಂದುಬಿಟ್ಟದ್ದು. ಕಾಮ, ಪ್ರಕಾಮ, ಪರ್ಯಾಪ್ತ, ನಿಕಾಮ, ಇಷ್ಟ (ನ. ಕ್ರಿಯಾವಿಶೇಷಣ), ಯಥೇಪ್ಸಿತ (ನ. ಅವ್ಯಯೀಭಾವ)=ಯಥೇಷ್ಟವಾಗಿ, ಸ್ವೇಚ್ಛೆಯಾಗಿ. ಗೋಪ, ಗೋಪಾಲ, ಗೋಸಂಖ್ಯ ಗೋದುಹ್, ಆಭೀರ, ವಲ್ಲವ (ಪು)=ದನ ಕಾಯುವವನು, ಗೊಲ್ಲ.

೯೪೪. ಪಾದಬಂಧನ (ನ)=ಹಸು ಎಮ್ಮೆ ಮುಂತಾದ ಕಾಲ್ನಡೆ. 'ಯಾದವಂ ಧನಂ' ಎಂದು ಪಾಠಾಂತರ ಉಂಟು. ಆ ಪಕ್ಷದಲ್ಲಿ, ಯಾದವಧನ (ನ)=ಹಸು ಎಮ್ಮೆ ಮುಂತಾದ ಕಾಲ್ನಡೆ. ಗವೀಶ್ವರ, ಗೋಮತ್, ಗೋಮಿನ್ (ಪು)=ದನಗಳ ಒಡೆಯ. ಗೋಕುಲ, ಗೋಧನ (ನ)=ಹಸುಗಳ ಮಂದೆ.

[1] ಇದು ನಪುಂಸಕಲಿಂಗದಲ್ಲಿಯೂ ಇದೆ. ಪೇಯೂಷ ಎಂಬ ರೂಪಾಂತರವೂ ಇದೆ.
[2] ತೃಷಾ (ಸ್ತ್ರೀ) ಎಂಬ ರೂಪಾಂತರವೂ ಇದೆ.



ಕ್ಷಿಪ್ರಾಶಿತಂಗವೀನಂ ತದ್ಗಾವೋ ಯತ್ರಾಶಿತಾಃ ಪುರಾ ।
ಉಕ್ಷಾ ಭದ್ರೋ ಬಲೀವರ್ದ ಋಷಭೋ ವೃಷಭೋ ವೃಷಃ ॥ ೯೪೫
ಅನಡ್ವಾನ್ ಸೌರಭೇಯೋ ಗೌರುಕ್ಷ್ಣಾಂ ಸಂಹತಿರೌಕ್ಷಕಮ್ ।
ಗವ್ಯಾ ಗೋತ್ರಾ ಗವಾಂ ವತ್ಸಧೇನ್ವೋರ್ವಾತ್ಸಕಧೈನುಕೇ ॥ ೯೪೬
ಉಕ್ಷಾ ಮಹಾನ್ ಮಹೋಕ್ಷಸ್ಸ್ಯಾತ್ ವೃದ್ಧೋಕ್ಷಸ್ತು ಜರದ್ಗವಃ ।
ಉತ್ಪನ್ನ ಉಕ್ಷಾ ಜಾತೋಕ್ಷಸ್ಸದ್ಯೋಜಾತಸ್ತು ತರ್ಣಕಃ ॥ ೯೪೭
ಶಕೃತ್ಕರಿಸ್ತು ವತ್ಸಃ ಸ್ಯಾದ್ದಮ್ಯವತ್ಸತರೌ ಸಮೌ ।
ಆರ್ಷಭ್ಯ ಷಂಡತಾಯೋಗ್ಯಷ್ಷಂಡೋ ಗೋಪತಿರಿಟ್ಚರಃ ॥ ೯೪೮
ಕೂಚರಃ ಶೃಂಗಹೀನೋಽಸೌ ಕಕುದೋಽಸ್ತ್ರಿ ಕಕುಚ್ಚ ಸಾ ।
ಸ್ಕಂಧಪ್ರದೇಶೋಽಸ್ಯವಹಸ್ಸಾಸ್ನಾ ತು ಗಲಕಂಬಲಃ ॥ ೯೪೯

---

೯೪೫- ೯೪೬. ಆಶಿತಂಗವೀನ (ನ)=ಹಸುಗಳನ್ನು ಮೇಯಿಸಿದ ಸ್ಥಳ. ಉಕ್ಷನ್, ಭದ್ರ, ಬಲೀವರ್ದ, ಋಷಭ, ವೃಷಭ, ವೃಷ, ಅನಡುಹ್, ಸೌರಭೇಯ, ಗೋ (ಪು)=ಎತ್ತು. ಔಕ್ಷಕ (ನ)=ಎತ್ತುಗಳ ಗುಂಪು. ಗವ್ಯಾ, ಗೋತ್ರಾ (ಸ್ತ್ರೀ)=ಗೋವುಗಳ ಸಮೂಹ (ಗೋ ಎಂದರೆ ಎತ್ತು ಅಥವಾ ಹಸು). ವಾತ್ಸಕ (ನ)=ಕರುಗಳ ಹಿಂಡು. ಧೈನುಕ (ನ)=ಧೇನುಗಳ ಹಿಂಡು (ಧೇನು=ಹಸು, ಹೊಸದಾಗಿ ಈದ ಹಸು).

೯೪೭. ಮಹೋಕ್ಷ (ಪು)=ದೊಡ್ಡ ಎತ್ತು. ವೃದ್ಧೋಕ್ಷ, ಜರದ್ಗವ (ಪು)=ಮುದಿ ಎತ್ತು. ಜಾತೋಕ್ಷ (ಪು)=ಹೊರೆಯನ್ನೆಳೆಯಲು ತಕ್ಕ ವಯಸ್ಸನ್ನು ಪಡೆದ ಹೋರಿ, ಬಾಯಿಗೂಡಿದ ಹೋರಿ. ತರ್ಣಕ (ಪು)=ಆಗತಾನೆ ಹುಟ್ಟಿದ ಕರು.

೯೪೮. ಶಕೃತ್ಕರಿ, ವತ್ಸ (ಪು)=ಕರು. ದಮ್ಯ, ವತ್ಸತರ (ಪು)=ತಿದ್ದುವುದಕ್ಕೆ ಅರ್ಹವಾದ ವಯಸ್ಸಿನ ಹೋರಿ. ಆರ್ಷಭ್ಯ (ಪು)=ವಯಸ್ಸಿಗೆ ಬಂದ ಹೋರಿ. ಷಂಡ, ಗೋಪತಿ, ಇಟ್ಚರ (ಪು)=ಗೂಳಿ, ಬಸವ.

೯೪೯. ಕೂಚರ (ಪು)=ಕೊಂಬಿಲ್ಲದ ಎತ್ತು. ಕಕುದ (ಪು.ನ),ಕಕುದ್ (ಸ್ತ್ರೀ)=ಎತ್ತಿನ ಹಿಣಿಲು (Hump). ವಹ (ಪು)=ಎತ್ತಿನ ಹೆಗಲು. ಸಾಸ್ನಾ (ಸ್ತ್ರೀ), ಗಲಕಂಬಲ (ಪು)=ಗಂಗೆ ದೊಗಲು.

ಸ್ಯಾನ್ನಸ್ತಿತಸ್ತು ನಸ್ಯೋತಃ ಪ್ರಷ್ಠವಾಡ್ಯುಗಪಾರ್ಶ್ವಗಃ ।
ಯುಗಾದೀನಾಂ ತು ವೋಢಾರೋ ಯುಗ್ಯಪ್ರಾಸಂಗ್ಯಶಾಕಟಾಃ ॥ ೬೫೦
ಖನತಿ ತೇನ ತದ್ವೋಢಾಽಸ್ಯೇದಂ ಹಾಲಿಕಸೈರಿಕೌ ।
ಧೂರ್ವಹೇ ಧುರ್ಯಧೌರೇಯಧುರೀಣಾಸ್ಸಧುರಂಧರಾಃ ॥ ೬೫೧
ಉಭಾವೇಕಧುರೀಣೈಕಧುರಾವೇಕಧುರಾವಹೇ ।
ಸ ತು ಸರ್ವಧುರೀಣೋ ಯೋ ಭವೇತ್ಸರ್ವಧುರಾವಹಃ ॥ ೬೫೨
ಮಾಹೇಯೀ ಸೌರಭೇಯೀ ಗೌರುಸ್ರಾ ಮಾತಾ ಚ ಶೃಂಗಿಣೀ ।
ಅರ್ಜುನ್ಯಘ್ನ್ಯಾರೋಹಿಣೀ ಸ್ಯಾದುತ್ತಮಾ ಗೋಷು ನೈಚಕೀ ॥ ೬೫೩
ವರ್ಣಾದಿಭೇದಾತ್ಸಂಜ್ಞಾಸ್ಸ್ಯುಃ ಶಬಲೀ ಧವಲಾದಯಃ ।
ದ್ವಿಹಾಯನೀ ದ್ವಿವರ್ಷಾ ಗೌರೇಕಾಬ್ದಾ ತ್ವೇಕಹಾಯನೀ ॥ ೬೫೪

---

೬೫೦. ನಸ್ತಿತ, ನಸ್ಯೋತ (ಪು)=ಮೂಗುದಾಣ ಹಾಕಿದ ಎತ್ತು. ಪ್ರಷ್ಠವಾಹ್, ಯುಗಪಾರ್ಶ್ವಗ (ಪು)=ತಿದ್ದಲ್ಪಡುತ್ತಿರುವ ಎತ್ತು. ಯುಗ್ಯ (ಪು)=ನೊಗವನ್ನೆಳೆಯುವ ಎತ್ತು,—ಕುದುರೆ. ಪ್ರಾಸಂಗ್ಯ (ಪು)=ಪಳಗಿಸುವುದಕ್ಕಾಗಿ ಕಟ್ಟಿದ ನೊಗವನ್ನೆಳೆಯುವ ಹೋರಿ. ಶಾಕಟ (ಪು)=ಗಾಡಿಯೆನ್ನೆಳೆಯುವ ಎತ್ತು, ಕುದುರೆ.

೬೫೧. ಹಾಲಿಕ, ಸೈರಿಕ (ಪು)=ನೇಗಿಲಿನಿಂದ ಹೂಡುವವನು ; ನೇಗಿಲನ್ನು ಹೊರುವವನು, —ಎಳೆಯುವವನು; ನೇಗಿಲಿಗೆ ಸಂಬಂಧಿಸಿದವನು. ಧೂರ್ವಹ, ಧುರ್ಯ, ಧೌರೇಯ, ಧುರೀಣ, ಧುರಂಧರ (ಪು)=ಭಾರವನ್ನೆಳೆಯುವ ಎತ್ತು ಮೊದಲಾದ್ದು.

೬೫೨. ಏಕಧುರೀಣ, ಏಕಧುರ, ಏಕಧುರಾವಹ (ಪು)=ಬಂಡಿ ಎಳೆಯುವುದು, ನೇಗಿಲಿನಿಂದ ಹೂಡುವುದು, ಗೋಣಿಯನ್ನು ಹೊರುವುದು—ಮುಂತಾದ ಯಾವುದಾದರೊಂದು ಕಾರ್ಯದಲ್ಲಿ ಪರಿಣತವಾದ ಎತ್ತು. ಸರ್ವಧುರೀಣ, ಸರ್ವಧುರಾವಹ (ಪು)=ಎಲ್ಲಾ ಬಗೆಯ ಭಾರವನ್ನೆಳೆಯುವುದರಲ್ಲಿಯೂ ಪರಿಣತವಾದ ಎತ್ತು (ಧೂರ್ವಹ, ಏಕಧುರೀಣ ಮುಂತಾದ ಶಬ್ದಗಳನ್ನು ಕುದುರೆ ಮೊದಲಾದ ಪ್ರಾಣಿಗಳಿಗೂ ಮನುಷ್ಯನಿಗೂ ಯಥಾಯೋಗ್ಯವಾಗಿ ಅನ್ವಯಿಸಿಕೊಳ್ಳಬಹುದು.)

೬೫೩. ಮಾಹೇಯೀ, ಸೌರಭೇಯೀ, ಗೋ, ಉಸ್ರಾ, ಮಾತೃ, ಶೃಂಗಿಣೀ, ಅರ್ಜುನೀ, ಅಘ್ನ್ಯಾ, ರೋಹಿಣೀ (ಸ್ತ್ರೀ)=ಹಸು, ಆಕಳು. ನೈಚಿಕೀ (ಸ್ತ್ರೀ)=ಉತ್ತಮವಾದ ಹಸು.

೬೫೪. ಬಣ್ಣ ಮುಂತಾದವುಗಳ ಭೇದದಿಂದ ಶಬಲೀ, ಧವಲಾ, ಕೃಷ್ಣಾ, ಪಿಂಗಾಕ್ಷೀ, ಲಂಬಕರ್ಣೀ (ಸ್ತ್ರೀ) ಮುಂತಾದ ಸಂಜ್ಞೆಗಳುಂಟಾಗುತ್ತವೆ. ದ್ವಿಹಾಯನೀ, ದ್ವಿವರ್ಷಾ (ಸ್ತ್ರೀ)= ಎರಡು ವರ್ಷದ ಹಸು. ಏಕಾಬ್ದಾ, ಏಕಹಾಯನೀ (ಸ್ತ್ರೀ)=ಒಂದು ವರ್ಷದ ಹೆಣ್ಣುಕರು.



ಚತುರಬ್ದಾ ಚತುರ್ಹಾಯಣ್ಯೇವಂ ತ್ರ್ಯಬ್ದಾ ತ್ರಿಹಾಯಣೀ ।
ವಶಾ ವಂಧ್ಯಾವತೋಕಾ ತು ಸ್ರವದ್ಗರ್ಭಾಥ ಸಂಧಿನೀ ॥ ೬೫೫
ಆಕ್ರಾಂತಾ ವೃಷಭೇಣಾಥ ವೇಹದ್ಗರ್ಭೋಪಘಾತಿನೀ ।
ಕಾಲೋಪಸರ್ಯಾ ಪ್ರಜನೇ ಪ್ರಷ್ಠೌಹೀ ಬಾಲಗರ್ಭಿಣೀ ॥ ೬೫೬
ಸ್ಯಾದಚಂಡೀ ತು ಸುಕರಾ ಬರುಸೂತಿಃ ಪರೇಷ್ಟುಕಾ ।
ಚಿರಸೂತಾ ಬಷ್ಕಯಣೀ ಧೇನುಸ್ಸ್ಯಾನ್ನವಸೂತಿಕಾ ॥ ೬೫೭
ಸುವ್ರತಾ ಸುಖಸಂದೋಹ್ಯಾ ಪೀನೋಧ್ನೀ ಪೀವರಸ್ತನೀ ।
ದ್ರೋಣಕ್ಷೀರಾ ದ್ರೋಣದುಗ್ಧಾ ಧೇನುಷ್ಯಾ ಬಂಧಕೇ ಸ್ಥಿತಾ ॥ ೬೫೮

---

೬೫೫. ಚತುರಬ್ದಾ, ಚತುರ್ಹಾಯಣೀ (ಸ್ತ್ರೀ)=ನಾಲ್ಕು ವರ್ಷದ ಹಸು. ತ್ರ್ಯಬ್ದಾ, ತ್ರಿಹಾಯಣೀ (ಸ್ತ್ರೀ)=ಮೂರು ವರ್ಷದ ಹಸು. ವಶಾ, ವಂಧ್ಯಾ (ಸ್ತ್ರೀ)=ಬಂಜೆಯಾದ ಹಸು. ಅವತೋಕಾ, ಸ್ರವದ್ಗರ್ಭಾ (ಸ್ತ್ರೀ)=ಕಂದಹಾಕುವ ಹಸು, ಗರ್ಭಸ್ರಾವವಾಗುವ ಹಸು. ಸಂಧಿನೀ (ಸ್ತ್ರೀ)=ಗೂಳಿಹಾರಿದ ಹಸು.

೬೫೬. ವೇಹತ್, ಗರ್ಭೋಪಘಾತಿನೀ (ಸ್ತ್ರೀ)=ಸತ್ತ ಕರುವನ್ನು ಹಾಕಿದ ಹಸು. ಉಪಸರ್ಯಾ (ಸ್ತ್ರೀ)=ನೆಸೆಗೆ ಬಂದ ಹಸು. ಗೂಳಿಗೆ ಬಂದ ಹಸು. ಪ್ರಷ್ಠೌಹೀ, ಬಾಲಗರ್ಭಿಣೀ (ಸ್ತ್ರೀ)=ಪ್ರಥಮಗರ್ಭವನ್ನು ಧರಿಸಿದ ಹಸು. ಚೊಚ್ಚಲು ಹಸು.

೬೫೭. ಅಚಂಡೀ, ಸುಕರಾ (ಸ್ತ್ರೀ)=ಸಾಧುವಾದ ಹಸು. ಬಹುಸೂತಿ, ಪರೇಷ್ಟುಕಾ (ಸ್ತ್ರೀ)=ಹಲವು ಸಾರಿ ಈದ ಹಸು. ಚಿರಸೂತಾ, ಬಷ್ಕಯಣೀ (ಸ್ತ್ರೀ)=ಕರುಹಾಕಿ ಬಹುದಿನಗಳು ಕಳೆದಿರುವ ಹಸು. ಧೇನು, ನವಸೂತಿಕಾ (ಸ್ತ್ರೀ)=ಹೊಸದಾಗಿ ಕರುಹಾಕಿದ ಹಸು.

೬೫೮. ಸುವ್ರತಾ, ಸುಖಸಂದೋಹ್ಯಾ (ಸ್ತ್ರೀ)=ತೊಂದರೆಪಡಿಸದೆ ಹಾಲುಕೊಡುವ ಹಸು, ಪೀನೋಧ್ನೀ, ಪೀವರಸ್ತನೀ (ಸ್ತ್ರೀ)=ದೊಡ್ಡ ಕೆಚ್ಚಲುಳ್ಳದ್ದು. ದ್ರೋಣಕ್ಷೀರಾ, ದ್ರೋಣದುಗ್ಧಾ (ಸ್ತ್ರೀ)=ಒಂದು ದ್ರೋಣದಷ್ಟು ಹಾಲನ್ನು ಕೊಡುವ ಹಸು. ಧೇನುಷ್ಯಾ (ಸ್ತ್ರೀ)=ಸಾಲಗಾರನ ಬಂಧನದಲ್ಲಿರುವ ಹಸು, ದೊಡ್ಡಿಯಲ್ಲಿರುವ ಹಸು.

ಸಮಾಂಸಮೀನಾ ಸಾ ಯೈವ ಪ್ರತಿವರ್ಷಂ ಪ್ರಸೂಯತೇ ।
ಊಧಸ್ತು ಕ್ಲೀಬಮಾಪೀನಂ ಸಮೌ ಶಿವಕಕೀಲಕೌ ॥ ೯೫೯
ನ ಪುಂಸಿ ದಾಮ ಸಂದಾನಂ ಪಶುರಜ್ಜುಸ್ತು ದಾಮನೀ ।
ವೈಶಾಖಮಂಥಮಂಥಾನಮಂಥಾನೋ ಮಂಥದಂಡಕೇ ॥ ೯೬೦
ಕುಟರೋ ದಂಡವಿಷ್ಕಂಭೋ ಮಂಥನೀ ಗರ್ಗರೀ ಸಮೇ ।
ಉಷ್ಟ್ರೇ ಕ್ರಮೇಲಕಮಯಮಹಾಂಗಾಃ ಕರಭಶ್ಶಿಶುಃ ॥ ೯೬೧
ಕರಭಾಃ ಸ್ಯುಶ್ಶೃಂಖಲಕಾ ದಾರವೈಃ ಪಾದಬಂಧನೈಃ ।
ಅಜಾ ಛಾಗೀ ಸ್ತುಭಚ್ಛಾಗವಸ್ತಚ್ಛಗಲಕಾ ಅಜೇ ॥ ೯೬೨
ಮೇಢ್ರೋರಭ್ರೋರಣೋರ್ಣಾಯುರ್ಮೇಷವೃಷ್ಣಯ ಏಡಕೇ ।
ಉಷ್ಟ್ರೋರಭ್ರಾಜವೃಂದೇ ಸ್ಯಾದೌಷ್ಟ್ರಕೌರಭ್ರಕಾಜಕಮ್ ॥ ೯೬೩

---

೯೫೯. ಸಮಾಂಸಮೀನಾ (ಸ್ತ್ರೀ)=ಪ್ರತಿವರ್ಷವೂ ಈಯುವ ಹಸು, ವರ್ಷಗಂದಿ. ಊಧಸ್, ಆಪೀನ (ನ)= ಕೆಚ್ಚಲು. ಶಿವಕ, ಕೀಲಕ (ಪು)=ದನಗಳನ್ನು ಕಟ್ಟುವ ಗೂಟ.

೯೬೦. ದಾಮನ್ (ಸ್ತ್ರೀ. ನ), ಸಂದಾನ (ನ)=ಹಾಲು ಕರೆಯುವಾಗ ಕಾಲಿಗೆ ಕಟ್ಟುವ ಹಗ್ಗ ; ಯಾವುದಾದರೂ ಹಗ್ಗ. ದಾಮನೀ (ಸ್ತ್ರೀ)=ದನಗಳನ್ನು ಕಟ್ಟುವ ಹಗ್ಗ, ಕಣ್ಣಿ. ವೈಶಾಖ, ಮಂಥ, ಮಂಥಾನ, ಮಂಥನ್, ಮಂಥದಂಡಕ (ಪು)=ಕಡೆಗೋಲು.

೯೬೧. ಕುಟರ (ಕುತರ), ದಂಡವಿಷ್ಕಂಭ (ಪು)=ಕಡೆಗೋಲನ್ನು ಕಟ್ಟುವ ಕಂಭ. ಮಂಥನೀ, ಗರ್ಗರೀ (ಸ್ತ್ರೀ)=ಕಡೆಯುವ ಪಾತ್ರೆ. ಉಷ್ಟ್ರ, ಕ್ರಮೇಲಕ, ಮಯ, ಮಹಾಂಗ (ಪು)=ಒಂಟೆ. ೯೬೨. ಕರಭ (ಪು)=ಒಂಟೆಯ ಮರಿ. ಶೃಂಖಲಕ (ಪು)=ಮರದ ಕಾಲ್ಕಟ್ಟನ್ನು ಹಾಕಿರುವ ಒಂಟೆ ಮರಿ. ಅಜಾ, ಛಾಗೀ (ಸ್ತ್ರೀ)=ಹೆಣ್ಣುಮೇಕೆ. ಸ್ತುಭ (ತುಭ, ಶುಭ),ಛಾಗ, ವಸ್ತ (ಬಸ್ತ)ಛಗಲಕ, ಅಜ (ಪು)=ಗಂಡುಮೇಕೆ, ಹೋತ.

೯೬೩. ಮೇಢ್ರ, ಉರಭ್ರ, ಉರಣ, ಊರ್ಣಾಯುಸ್, ಮೇಷ, ವೃಷ್ಣಿ, ಏಡಕ (ಪು)=ಕುರಿ. ಔಷ್ಟ್ರಕ (ನ)=ಒಂಟೆಗಳ ಗುಂಪು. ಔರಭ್ರಕ (ನ)=ಕುರಿಗಳ ಮಂದೆ. ಆಜಕ (ನ)=ಮೇಕೆಗಳ ಹಿಂಡು.



ಚಕ್ರೀವಂತಸ್ತು ಬಾಲೇಯಾ ರಾಸಭಾ ಗರ್ದಭಾಃ ಖರಾಃ ।
ವೈದೇಹಕಸ್ಸಾರ್ಥವಾಹೋ ನೈಗಮೋ ವಾಣಿಜೋ ವಣಿಕ್ ॥ ೯೬೪
ಪಣ್ಯಾಜೀವೋ ಹ್ಯಾಪಣಿಕಃ ಕ್ರಯವಿಕ್ರಯಿಕಶ್ಚ ಸಃ ।
ವಿಕ್ರೇತಾ ಸ್ಯಾದ್ವಿಕ್ರಯಿಕಃ ಕ್ರಾಯಕಃ ಕ್ರಯಿಕಸ್ಸಮೌ ॥ ೯೬೫
ವಾಣಿಜ್ಯಂ ತು ವಣಿಜ್ಯಾ ಸ್ಯಾನ್ಮೂಲ್ಯಂ ವಸ್ನೋಽಪ್ಯವಕ್ರಯಃ ।
ನೀವೀ ಪರಿಪಣೋ ಮೂಲಧನಂ ಲಾಭೋಽಧಿಕಂ ಫಲಮ್ ॥ ೯೬೬
ಪರಿದಾನಂ ಪರೀವರ್ತೋ ನೈಮೇಯನಿಮಯಾವಪಿ ।
ಪುಮಾನುಪನಿಧಿರ್ನ್ಯಾಸಃ ಪ್ರತಿದಾನಂ ತದರ್ಪಣಮ್ ॥ ೯೬೭
ಕ್ರಯೇ ಪ್ರಸಾರಿತಂ ಕ್ರಯ್ಯಂ ಕ್ರೇಯಂ ಕ್ರೇತವ್ಯಮಾತ್ರಕೇ ।
ವಿಕ್ರೇಯಂ ಪಣಿತವ್ಯಂ ಚ ಪಣ್ಯಂ ಕ್ರಯ್ಯಾದಯಸ್ತ್ರಿಷು ॥ ೯೬೮

---

೯೬೪-೯೬೫. ಚಕ್ರೀವತ್, ಬಾಲೇಯ, ರಾಸಭ, ಗರ್ದಭ, ಖರ (ಪು)=ಕತ್ತೆ. ವೈದೇಹಕ, ಸಾರ್ಥವಾಹ, ನೈಗಮ, ವಾಣಿಜ, ವಣಿಜ್, ಪಣ್ಯಾಜೀವ, ಆಪಣಿಕ, ಕ್ರಯ ವಿಕ್ರಯಿಕ (ಪು)=ವರ್ತಕ, ವಾಣಿಜ್ಯವೃತ್ತಿಯವನು. ವಿಕ್ರೇತೃ, ವಿಕ್ರಯಿಕ (ಪು)= ಮಾರು ವವನು. (Sales man) ಕ್ರಾಯಕ, ಕ್ರಯಿಕ (ಪು)=ಕೊಳ್ಳುವವನು.

೯೬೬. ವಾಣಿಜ್ಯ (ನ), ವಣಿಜ್ಯಾ (ಸ್ತ್ರೀ)=ವರ್ತಕತನ, ಮಾರಾಟ. ಮೂಲ್ಯ (ನ), ವಸ್ನ, ಅವಕ್ರಯ (ಪು)=ಬೆಲೆ. ನೀವೀ (ಸ್ತ್ರೀ), ಪರಿಪಣ (ಪು), ಮೂಲಧನ (ನ)=ಬಂಡವಾಳ. ಲಾಭ (ಪು)=ಲಾಭ, ನಫೆ.

೯೬೭. ಪರಿದಾನ (ನ), ಪರೀವರ್ತ, ನೈಮೇಯ, ನಿಮಯ (ಪು)=ಅದಲುಬದಲು, ವಿನಿಮಯ. ಉಪನಿಧಿ, ನ್ಯಾಸ (ಪು)=ರಕ್ಷಣಾರ್ಥವಾಗಿ ಇನ್ನೊಬ್ಬರ ಬಳಿಯಲ್ಲಿ ಇಡುವುದು. ಪ್ರತಿದಾನ (ನ)=ತನ್ನಲ್ಲಿ ರಕ್ಷಣಾರ್ಥವಾಗಿ ಇಟ್ಟಿದ್ದನ್ನು ಹಿಂದಕ್ಕೆ ಕೊಡುವುದು.

೯೬೮. ಕ್ರಯ್ಯದಿಂದ ಪಣ್ಯದವರೆಗಿನ ಶಬ್ದಗಳು ವಿಶ್ಯೇಷ್ಯನಿಘ್ನಗಳಾಗಿ ಮೂರು ಲಿಂಗ ಗಳಲ್ಲಿಯೂ ಇರುತ್ತವೆ. ಕ್ರಯ್ಯ (ನ)=ಜನರು ಕೊಳ್ಳಲೆಂದು ಅಂಗಡಿಯಲ್ಲಿ ಇಟ್ಟದ್ದು. ಕ್ರೇಯ, ಕ್ರೇತವ್ಯ (ನ)=ಕೊಳ್ಳಲು ಅರ್ಹವಾದದ್ದು. ವಿಕ್ರೇಯ, ಪಣಿತವ್ಯ, ಪಣ್ಯ (ನ)=ಮಾರುವ ಸರಕು.

---

[1] ದಶಾಂತಗಳಾದ ಏಕಾದಶ, ದ್ವಾದಶ ಮುಂತಾದವೂ ಸಂಖ್ಯೇಯವನ್ನು ಬೋಧಿಸುತ್ತವೆ.

**ಕ್ಲೀಬೇ ಸತ್ಯಾಪನಂ ಸತ್ಯಂಕಾರಸ್ಸತ್ಯಾಕೃತಿಃ ಸ್ತ್ರಿಯಾಮ್ ।**
**ವಿಪಣೋ ವಿಕ್ರಯಃ ಸಂಖ್ಯಾಃ ಸಂಖ್ಯೇಯೇ ಹ್ಯಾದಶ ತ್ರಿಷು ॥** ೯೬೯
**ವಿಂಶತ್ಯಾದ್ಯಾಸ್ಸದೈಕತ್ವೇ ಸರ್ವಾಸ್ಸಂಖ್ಯೇ ಯಸಂಖ್ಯಯೋಃ ।**
**ಸಂಖ್ಯಾರ್ಥೇ ದ್ವಿಬಹುತ್ವೇ ಸ್ತಸ್ತಾಸು ಚಾನವತೇಃ ಸ್ತ್ರಿಯಃ ॥** ೯೭೦
**ಪಂಕ್ತೇಶ್ಶತಸಹಸ್ರಾದಿ ಕ್ರಮಾದ್ದಶಗುಣೋತ್ತರಮ್ ।**
**ಯೌತವಂ ಧ್ರುವಯಂ ಪಾಯ್ಯಮಿತಿ ಮಾನಾರ್ಥಕಂ ತ್ರಯಮ್ ॥** ೯೭೧

---

೯೬೯. ಸತ್ಯಾಪನ (ನ), ಸತ್ಯಂಕಾರ (ಪು), ಸತ್ಯಾಕೃತಿ (ಸ್ತ್ರೀ)=ಒಪ್ಪಂದ, ಕರಾರು, ಮಾತು ಕೊಡುವುದು. ವಿಪಣ, ವಿಕ್ರಯ (ಪು)=ಮಾರುವಿಕೆ. ಏಕಶಬ್ದದಿಂದ ದಶಶಬ್ದದವರೆಗಿರುವ ಸಂಖ್ಯಾಶಬ್ದಗಳು ಸಂಖ್ಯೇಯವನ್ನೂ ಬೋಧಿಸುತ್ತವೆ. ಎಂದರೆ ಸಂಖ್ಯೆಯಿಂದ ಪರಿಚ್ಛಿನ್ನವಾದ ವಸ್ತುವನ್ನು ಬೋಧಿಸುತ್ತವೆ. ಅವು ವಿಶೇಷ್ಯನಿಘ್ನಗಳಾಗಿ ಮೂರು ಲಿಂಗಗಳಲ್ಲಿಯೂ ವರ್ತಿಸುತ್ತವೆ : ಉದಾ : ಏಕಃ ಪುರುಷಃ, ಏಕಾ ಸ್ತ್ರೀ, ಏಕಂ ಪುಸ್ತಕಂ.

೯೭೦. ವಿಂಶತಿ (ಇಪ್ಪತ್ತು) ಶಬ್ದದಿಂದ ನವತಿ (ತೊಂಬತ್ತು) ಎಂಬ ಶಬ್ದದವರೆಗೆ ಇರುವ ಸಂಖ್ಯಾಶಬ್ದಗಳು ಸಂಖ್ಯೆ ಮತ್ತು ಸಂಖ್ಯೇಯ ಇವೆರಡನ್ನೂ ಬೋಧಿಸುತ್ತವೆ. ಅವು ಏಕವಚನದಲ್ಲಿದ್ದು ನಿತ್ಯಸ್ತ್ರೀಲಿಂಗಗಳಾಗಿರುತ್ತವೆ. ಉದಾ : ವಿಂಶತಿಃ ಪುರುಷಾಃ, ಪುರುಷಾಣಾಂ ವಿಂಶತಿಃ, ವಿಂಶತ್ಯಾ ಪುರುಷೈಃ. ಈ ವಿಂಶತ್ಯಾದಿಗಳು ಕೇವಲ ಸಂಖ್ಯಾವಾಚಕಗಳಾಗಿದ್ದಾಗ ದ್ವಿವಚನ ಬಹುವಚನಗಳೂ ಬರಬಹುದು. ಉದಾ: ಸ್ತ್ರೀಣಾಂ ವಿಂಶತಿಃ (ಹೆಂಗಸರ ಇಪ್ಪತ್ತು), ಸ್ತ್ರೀಣಾಂ ವಿಂಶತೀ (ಹೆಂಗಸರ ಎರಡು ಇಪ್ಪತ್ತು) (ನಲವತ್ತು), ಸ್ತ್ರೀಣಾಂ ವಿಂಶತಯಃ (ಹೆಂಗಸರ ಅನೇಕ ಇಪ್ಪತ್ತುಗಳು (ಅರವತ್ತು, ಎಂಬತ್ತು- ಇತ್ಯಾದಿ).[1]

೯೭೧. ಪಂಕ್ತಿ (ಸ್ತ್ರೀ)= ಹತ್ತು. ಈ ಸಂಖ್ಯೆಯಿಂದ ಕ್ರಮವಾಗಿ ಹತ್ತರಷ್ಟು ಹೆಚ್ಚಿಸುತ್ತ ಹೋದರೆ ಶತ, ಸಹಸ್ರ, ಅಯುತ (ದಶಸಹಸ್ರ), ಲಕ್ಷ (ನ), ಕೋಟಿ (ಸ್ತ್ರೀ) ಮುಂತಾದ ಸಂಖ್ಯೆಗಳಾಗುತ್ತವೆ. ಯೌತವ, ದ್ರುತಯ, ಪಾಯ್ಯ, ಮಾನ (ನ)=ಅಳತೆ.

---

[1] ವಿಂಶತಿ = ಇಪ್ಪತ್ತು. ತ್ರಿಂಶತ್=ಮೂವತ್ತು. ಚತ್ವಾರಿಂಶತ್= ನಲವತ್ತು. ಪಂಚಾಶತ್= ಐವತ್ತು, ಷಷ್ಟಿ=ಅರುವತ್ತು. ಸಪ್ತತಿ=ಎಪ್ಪತ್ತು. ಅಶೀತಿ=ಎಂಬತ್ತು. ನವತಿ=ತೊಂಬತ್ತು. ಏಕವಿಂಶತಿ, ಪಂಚತ್ರಿಂಶತ್ ಮುಂತಾದವೂ ಸ್ತ್ರೀಲಿಂಗದಲ್ಲಿಯೂ ಏಕವಚನದಲ್ಲಿಯೂ ಇರುತ್ತವೆ.



**ಮಾನಂ ತುಲಾಂಗುಲಿಪ್ರಸ್ಥೈರ್ಗುಂಜಾಃ ಪಂಚಾದ್ಯಮಾಷಕಃ ।**
**ತೇ ಷೋಡಶಾಕ್ಷಃ ಕರ್ಷೋಽಸ್ತ್ರೀ ಪಲಂ ಕರ್ಷಚತುಷ್ಟಯಮ್ ॥** ೯೭೨
**ಸುವರ್ಣಬಿಸ್ತೌ ಹೇಮ್ನೋಽಕ್ಷೇ ಕುರುಬಿಸ್ತಸ್ತು ತತ್ಪಲೇ ।**
**ತುಲಾ ಸ್ತ್ರಿಯಾಂ ಪಲಶತಂ ಭಾರಃ ಸ್ಯಾದ್ವಿಂಶತಿಸ್ತುಲಾಃ ॥** ೯೭೩
**ಆಚಿತೋ ದಶ ಭಾರಾಸ್ಸ್ಯುಶ್ಶಾಕಟೋ ಭಾರ ಆಚಿತಃ ।**
**ಕಾರ್ಷಾಪಣಃ ಕಾಷಿಕಸ್ಸ್ಯಾತ್ಕಾರ್ಷಿಕೇ ತಾಮ್ರಿಕೇ ಪಣಃ ॥** ೯೭೪
**ಅಸ್ತ್ರಿಯಾಮಾಢಕದ್ರೋಣೌ ಖಾರೀ ವಾಹೋ ನಿಕುಂಚಕಃ ।**
**ಕುಡವಃ ಪ್ರಸ್ಥ ಇತ್ಯಾದ್ಯಾಃ ಪರಿಮಾಣಾರ್ಥಕಾಃ ಪೃಥಕ್ ॥** ೯೭೫

---

೯೭೨. ಮಾನವು (ಅಳತೆ) ತುಲಾ, ಅಂಗುಲಿ, ಪ್ರಸ್ಥ ಎಂದು ಮೂರು ವಿಧವಾಗಿರುತ್ತದೆ. ೧. ತುಲಾ=ತೂಗುವುದು. ೨. ಅಂಗುಲಿ=ಅಂಗುಲ ಇತ್ಯಾದಿ ಉದ್ದದ ಅಳತೆ. ೩. ಪ್ರಸ್ಥ= ಕೊಳಗ ಮೊದಲಾದ ಸಾಧನಗಳಿಂದ ಅಳೆಯುವುದು.

ಗುಂಜಾ (ಸ್ತ್ರೀ)=ಒಂದು ಗುಲಗಂಜಿ ತೂಕ, ಸುಮಾರು ೨ ಗ್ರೇನು. ಮಾಷಕ (ಪು)=ಐದು ಗುಂಜಿಗಳ ತೂಕ. ಅಕ್ಷ (ಪು), ಕರ್ಷ (ಪು. ನ)=ಹದಿನಾರು ಮಾಷಕಗಳು. ಪಲ (ನ)=ನಾಲ್ಕು ಕರ್ಷಗಳು.

೯೭೩. ಸುವರ್ಣ, ಬಿಸ್ತ (ಪು)=ಒಂದು ಕರ್ಷತೂಕದ ಚಿನ್ನ. ಕುರುಬಿಸ್ತ (ಪು)=ಒಂದು ಪಲತೂಕದ ಚಿನ್ನ. ತುಲಾ (ಸ್ತ್ರೀ)=ನೂರು ಪಲಗಳ ತೂಕ. ಭಾರ (ಪು)=ಇಪ್ಪತ್ತು ತುಲೆಗಳು.

೯೭೪. ಆಚಿತ (ಪು)=ಹತ್ತು ಭಾರಗಳು. ಶಾಕಟ (ಪು)=ಒಂದು ಗಾಡಿ ಹೇರು, ಹತ್ತು ಭಾರಗಳ ತೂಕ (ಸುಮಾರು ೧೨೦ ಮಣ). ಕಾರ್ಷಾಪಣ (ಪು)=ಒಂದು ಕರ್ಷ ತೂಕದ ಬೆಳ್ಳಿಯ ನಾಣ್ಯ. ಪಣ (ಪು)=ಒಂದು ಕರ್ಷತೂಕದ ತಾಮ್ರದ ನಾಣ್ಯ (ಹದಿನಾರು ಪಣಗಳಿಗೆ ಒಂದು ಕಾರ್ಷಾಪಣ, ಈ ಶಬ್ದಗಳು ನಾಣ್ಯಗಳನ್ನೂ ಅವುಗಳ ತೂಕವನ್ನೂ ಬೋಧಿಸುತ್ತವೆ).[1]

೯೭೫. ಆಢಕ ಮುಂತಾದವು ಬೇರೆ ಬೇರೆ ಅಳತೆಯ ಹೆಸರುಗಳು. ಅವುಗಳ ಕ್ರಮ ಹೀಗೆ : ನಿಕುಂಚಕ (ಪು)=ಒಂದು ಮುಷ್ಟಿ, ಚಟಾಕು. ಕುಡವ (ಪು)=ನಾಲ್ಕು ಚಟಾಕು, ಒಂದು ಪಾವು. ಪ್ರಸ್ಥ (ಪು)=ನಾಲ್ಕು ಕುಡವಗಳು, ಒಂದು ಸೇರು. ಆಢಕ (ಪು. ನ)=ನಾಲ್ಕು ಸೇರು. ದ್ರೋಣ (ಪು.ನ)=ಎಂಟು ಆಢಕ, ಮೂವತ್ತೆರಡು ಸೇರು. ಖಾರೀ (ಸ್ತ್ರೀ)=ಮೂರು ದ್ರೋಣ,

---

[1] ಗುಂಜಾದಿಗಳು ತುಲಾಮಾನಗಳು. ಅಂಗುಲಿಮಾನಗಳಾದ ಹಸ್ತ ಮುಂತಾದವು ಮನುಷ್ಯವರ್ಗದಲ್ಲಿ ಹೇಳಲ್ಪಟ್ಟಿವೆ. ಮುಂದೆ ಹೇಳುವ ಆಢಕಾದಿಗಳು ಪ್ರಸ್ಥಮಾನಗಳು.

ಭಾಗಸ್ತುರೀಯಃ ಪಾದಸ್ಸ್ಯಾತ್ ಅಂಶಭಾಗೌ ತು ವಂಟಕೇ ।
ದ್ರವ್ಯಂ ವಿತ್ತಂ ಸ್ವಾಪತೇಯಂ ರಿಕ್ಥಮೃಕ್ಥಂ ಧನಂ ವಸು ॥ ೯೭೬
ಹಿರಣ್ಯಂ ದ್ರವಿಣಂ ದ್ಯುಮ್ನಮರ್ಥರೈವಿಭವಾ ಅಪಿ ।
ಸ್ಯಾತ್ಕೋಶಶ್ಚ ಹಿರಣ್ಯಂ ಚ ಹೇಮರೂಪ್ಯೇ ಕೃತಾಕೃತೇ ॥ ೯೭೭
ತಾಭ್ಯಾಂ ಯದನ್ಯತ್ತತ್ಕುಪ್ಯಂ ರೂಪ್ಯಂ ತದ್ದ್ವಯಮಾಹತಮ್ ।
ಗಾರುತ್ಮತಂ ಮರಕತಮಶ್ಮಗರ್ಭೋ ಹರಿನ್ಮಣಿಃ ॥ ೯೭೮
ಶೋಣರತ್ನಂ ಲೋಹಿತಕಃ ಪದ್ಮರಾಗೋಽಥ ಮೌಕ್ತಿಕಮ್ ।
ಮುಕ್ತಾಥ ವಿದ್ರುಮಃ ಪುಂಸಿ ಪ್ರವಾಲಂ ಪುನ್ನಪುಂಸಕಮ್ ॥ ೯೭೯
ರತ್ನಂ ಮಣಿರ್ದ್ವಯೋರಶ್ಮಜಾತೌ ಮುಕ್ತಾದಿಕೇಽಪಿ ಚ ।
ಸ್ವರ್ಣಂ ಸುವರ್ಣಂ ಕನಕಂ ಹಿರಣ್ಯಂ ಹೇಮ ಹಾಟಕಮ್ ॥ ೯೮೦
ತಪನೀಯಂ ಶಾತಕುಂಭಂ ಗಾಂಗೇಯಂ ಭರ್ಮಕರ್ಬುರಮ್ ।
ಚಾಮೀಕರಂ ಜಾತರೂಪಂ ಮಹಾರಜತಕಾಂಚನೇ ॥ ೯೮೧

---

ತೊಂಬತ್ತಾರು ಸೇರು. ವಾಹ (ಪು)=ನಾಲ್ಕು ಖಾರಿ,[1] ಮುನ್ನೂರೆಂಬತ್ತುನಾಲ್ಕು ಸೇರು.

೯೭೬-೯೭೭. ಪಾದ (ಪು)=ನಾಲ್ಕನೆಯ ಒಂದು ಭಾಗ. ಅಂಶ, ಭಾಗ, ವಂಟಕ (ಪು)=ಒಂದು ಭಾಗ, ಏಕಾಂಶ. ದ್ರವ್ಯ, ವಿತ್ತ, ಸ್ವಾಪತೇಯ, ರಿಕ್ಥ, ಋಕ್ಥ, ಧನ, ವಸು, ಹಿರಣ್ಯ, ದ್ರವಿಣ, ದ್ಯುಮ್ನ (ನ), ಅರ್ಥ, ರೈ, ವಿಭವ (ಪು)=ಧನ, ಹಣ. ಕೋಶ (ಪು), ಹಿರಣ್ಯ (ನ)=ಚಿನ್ನ ಅಥವಾ ಬೆಳ್ಳಿಯ ಗಟ್ಟಿ, ಅಥವಾ ಇವುಗಳಿಂದ ಮಾಡಿದ ನಾಣ್ಯ, ಒಡವೆ.

೯೭೮ ಕುಪ್ಯ (ನ)=ಚಿನ್ನಬೆಳ್ಳಿಗಳಿಗಿಂತ ಅತಿರಿಕ್ತವಾದ ತಾಮ್ರಾದಿ ಲೋಹ. ರೂಪ್ಯ (ನ)=ಮುದ್ರೆ ಹೊಡೆದ ಚಿನ್ನ ಅಥವಾ ಬೆಳ್ಳಿಯ ನಾಣ್ಯ. ಗಾರುತ್ಮತ, ಮರಕತ (ನ), ಅಶ್ಮಗರ್ಭ, ಹರಿನ್ಮಣಿ (ಪು)=ಪಚ್ಚೆ (Emerald).

೯೭೯. ಶೋಣರತ್ನ (ನ), ಲೋಹಿತಕ, ಪದ್ಮರಾಗ (ಪು)=ಕೆಂಪು (Ruby). ಮೌಕ್ತಿಕ (ನ), ಮುಕ್ತಾ (ಸ್ತ್ರೀ)=ಮುತ್ತು. ವಿದ್ರುಮ (ಪು), ಪ್ರವಾಲ (ಪು. ನ)=ಹವಳ.

೯೮೦-೯೮೧. ರತ್ನ (ನ), ಮಣಿ (ಪು. ಸ್ತ್ರೀ)= ಶಿಲಾಜಾತಿಯ ಮರಕತಾದಿಗಳಿಗೂ ಮುತ್ತು ಹವಳ ಮುಂತಾದ ಬೆಲೆಬಾಳುವ ವಸ್ತುಗಳಿಗೂ ಸಾಮಾನ್ಯವಾದ ಹೆಸರು. ಸ್ವರ್ಣ,

[1] ಇವೆಲ್ಲವೂ ವ್ಯಾಖ್ಯಾನಕಾರರ ಮಾತಿನಿಂದ ಊಹಿಸಿ ಬರೆದವು. ವ್ಯವಹಾರವು ಲುಪ್ತವಾಗಿರುವುದರಿಂದ ನಿಷ್ಕೃಷ್ಟವಾದ ಅಳತೆಯನ್ನು ಹೇಳಲು ಸಾಧ್ಯವಿಲ್ಲ.



ರುಕ್ಮಂ ಕಾರ್ತಸ್ವರಂ ಜಾಂಬೂನದಮಷ್ಟಾಪದೋಽಸ್ತ್ರಿಯಾಮ್ ।
ಅಲಂಕಾರಸುವರ್ಣಂ ಯಚ್ಛೃಂಗೀಕನಕಮಿತ್ಯದಃ ॥ ೯೮೨
ದುರ್ವರ್ಣಂ ರಜತಂ ರೂಪ್ಯಂ ಖರ್ಜೂರಂ ಶ್ವೇತಮಿತ್ಯಪಿ ।
ರೀತಿಃ ಸ್ತ್ರಿಯಾಮಾರಕೂಟೋ ನ ಸ್ತ್ರಿಯಾಮಥ ತಾಮ್ರಕಮ್ ॥ ೯೮೩
ಶುಲ್ಬಂ ಮ್ಲೇಚ್ಛಮುಖಂ ದ್ವ್ಯಷ್ಟವರಿಷ್ಠೋದುಂಬರಾಣಿ ಚ ।
ಲೋಹೋಽಸ್ತ್ರೀ ಶಸ್ತ್ರಕಂ ತೀಕ್ಷ್ಣಂ ಪಿಂಡಂ ಕಾಲಾಯಸಾಯಸೀ ॥ ೯೮೪
ಅಶ್ಮಸಾರೋಽಥ ಮಂಡೂರಂ ಶಿಂಘಾಣಮಪಿ ತನ್ಮಲೇ ।
ಸರ್ವಂ ಚ ತೈಜಸಂ ಲೋಹಂ ವಿಕಾರಸ್ತ್ವಯಸಃ ಕುಶೀ ॥ ೯೮೫
ಕ್ಷಾರಃ ಕಾಚೋಽಥ ಚಪಲೋ ರಸಸ್ಸೂತಶ್ಚ ಪಾರದೇ ।
ಗವಲಂ ಮಾಹಿಷಂ ಶೃಂಗಮಭ್ರಕಂ ಗಿರಿಜಾಮಲೇ ॥ ೯೮೬

---

ಸುವರ್ಣ, ಕನಕ, ಹಿರಣ್ಯ, ಹೇಮನ್, ಹಾಟಕ, ತಪನೀಯ, ಶಾತಕುಂಭ, ಗಾಂಗೇಯ, ಭರ್ಮನ್, ಕರ್ಬುರ, ಚಾಮೀಕರ, ಜಾತರೂಪ, ಮಹಾರಜತ, ಕಾಂಚನ, ರುಕ್ಮ, ಕಾರ್ತಸ್ವರ, ಜಾಂಬೂನದ (ನ), ಅಷ್ಟಾಪದ (ಪು. ನ)=ಚಿನ್ನ. ಶೃಂಗೀ[1]ಕನಕ (ನ)=ಒಡವೆಗೆ ಉಪಯೋಗಿಸುವ ಚಿನ್ನ.

೯೮೩-೯೮೪. ದುರ್ವರ್ಣ, ರಜತ, ರೂಪ್ಯ, ಖರ್ಜೂರ, ಶ್ವೇತ (ನ)=ಬೆಳ್ಳಿ. ರೀತಿ (ಸ್ತ್ರೀ), ಆರಕೂಟ[2] (ಪು. ನ)=ಹಿತ್ತಾಳೆ. ತಾಮ್ರಕ, ಶುಲ್ಬ, ಮ್ಲೇಚ್ಛಮುಖ, ದ್ವ್ಯಷ್ಟ, ವರಿಷ್ಠ, ಉದುಂಬರ[3] (ನ)=ತಾಮ್ರ.

೯೮೪-೯೮೫. ಲೋಹ (ಪು.ನ) ಶಸ್ತ್ರಕ, ತೀಕ್ಷ್ಣ, ಪಿಂಡ, ಕಾಲಾಯಸ, ಅಯಸ್ (ನ), ಅಶ್ಮಸಾರ (ಪು)=ಕಬ್ಬಿಣ. ಮಂಡೂರ, ಶಿಂಘಾಣ (ನ)=ಕಬ್ಬಿಣದ ಕಿಟ್ಟ. ತೈಜಸ, ಲೋಹ (ನ)=ಎಲ್ಲ ಬಗೆಯ ಲೋಹ (Metal in general). ಕುಶೀ (ಸ್ತ್ರೀ)=ನೇಗಿಲಿನ ಕಬ್ಬಿಣದ ಗುಳ ; ಕಬ್ಬಿಣದ ಸಾಮಾನು ; ಉಕ್ಕು.

೯೮೬. ಕ್ಷಾರ, ಕಾಚ (ಪು)=ಗಾಜು. ಚಪಲ, ರಸ, ಸೂತ, ಪಾರದ (ಪು)=ಪಾದರಸ. ಗವಲ (ನ)=ಕೋಣದ ಕೊಂಬು. ಅಭ್ರಕ, ಗಿರಿಜ, ಅಮಲ (ನ)=ಅಭ್ರಕ.

[1] ಶೃಂಗೀ, ಶೃಂಗಿ (ಸ್ತ್ರೀ) ಎಂಬ ಶಬ್ದಾಂತರಗಳೂ ಇದೇ ಅರ್ಥದಲ್ಲಿ ಉಂಟು.
[2] ಪಿತ್ತಲ (ನ) ಎಂಬ ಶಬ್ದವೂ ಇದೆ. [3] ಔದುಂಬರ (ನ) ಎಂಬ ರೂಪಾಂತರವೂ ಉಂಟು.

ಸ್ರೋತೋಂಜನಂ ತು ಸೌವೀರಂ ಕಾಪೋತಾಂಜನಯಾಮುನೇ ।
ತುತ್ಥಾಂಜನಂ ಶಿಖಿಗ್ರೀವಂ ವಿತುನ್ನಕಮಯೂರಕೇ ॥ ೯೮೭
ಕರ್ಪರೀ ದಾರ್ವಿಕಾ ಕ್ವಾಥೋದ್ಭವಂ ತುತ್ಥಂ ರಸಾಂಜನಮ್ ।
ರಸಗರ್ಭಂ ತಾರ್ಕ್ಷ್ಯಶೈಲಂ ಗಂಧಾಶ್ಮನಿ ತು ಗಂಧಕಃ ॥ ೯೮೮
ಸೌಗಂಧಿಕಶ್ಚ ಚಕ್ಷುಷ್ಯಾಕುಲಾಲ್ಯೌ ತು ಕುಲತ್ಥಿಕಾ ।
ರೀತಿಪುಷ್ಪಂ ಪುಷ್ಪಕೇತು ಪೌಷ್ಪಕಂ ಕುಸುಮಾಜಂನಮ್ ॥ ೯೮೯
ಪಿಂಜರಂ ಪೀತನಂ ತಾಲಮಾಲಂ ಚ ಹರಿತಾಲಕೇ ।
ಗೈರೇಯಮರ್ಥ್ಯಂ ಗಿರಿಜಮಶ್ಮಜಂ ಚ ಶಿಲಾಜತು ॥ ೯೯೦
ಬೋಲಗಂಧರಸಪ್ರಾಣ ಪಿಂಡಗೋಪರಸಾಸ್ಸಮಾಃ ।
ಡಿಂಡೀರೋಽಬ್ಧಿ ಕಫಃ ಫೇನಸ್ಸಿಂದೂರಂ ನಾಗಸಂಭವಮ್ ॥ ೯೯೧
ನಾಗಸೀಸಕಯೋಗೇಷ್ಟವಪ್ರಾಣಿ ತ್ರಪು ಪಿಚ್ಚಟಮ್ ।
ರಂಗವಂಗೇ ಅಥ ಪಿಚುಸ್ತೂಲೋಽಥ ಕಮಲೋತ್ತರಮ್ ॥ ೯೯೨

೯೮೭-೯೮೯. ಸ್ರೋತೋಂಜನ, ಸೌವೀರ, ಕಾಪೋತಾಂಜನ, ಯಾಮುನ (ನ)=ಸೌವೀರಾಂಜನ, 'ಸುರ್ಮಾ' (Antimony). ತುತ್ಥಾಂಜನ, ಶಿಖಿಗ್ರೀವ, ವಿತುನ್ನಕ, ಮಯೂರಕ =ಮೈಲುತುತ್ತ. (ನ), ಕರ್ಪರೀ (ಸ್ತ್ರೀ) ಕರ್ಪರೀ ದಾರ್ವಿಕಾ (ಸ್ತ್ರೀ) ತುತ್ಥ, ರಸಾಂಜನ, ರಸಗರ್ಭ, ತಾರ್ಕ್ಷ್ಯಶೈಲ (ನ)=ಮರದರಿಸಿನದ ಕಷಾಯದಲ್ಲಿ ಭಾವಿಸಿ ಮಾಡಿದ ತುತ್ಥ. ರಸಾಂಜನ, ಗಂಧಾಶ್ಮನ್, ಗಂಧಕ, ಸೌಗಂಧಿಕ (ಪು)=ಗಂಧಕ. ಚಕ್ಷುಷ್ಯಾ, ಕುಲಾಲೀ, ಕುಲತ್ಥಿಕಾ (ಸ್ತ್ರೀ)=ಕಣ್ಣಿಗೆ ಹಚ್ಚುವ ಒಂದು ಬಗೆಯ ಅಂಜನ. ರೀತಿಪುಷ್ಪ, ಪುಷ್ಪಕೇತು, ಪೌಷ್ಪಕ, ಕುಸುಮಾಂಜನ (ನ)=ಹಿತ್ತಾಳೆಯನ್ನು ಕರಗಿಸುವಾಗ ಹುಟ್ಟುವ ಒಂದು ವಸ್ತು, ಕುಸುಮಾಂಜನ.

೯೯೦. ಪಿಂಜರ, ಪೀತನ, ತಾಲ, ಆಲ, ಹರಿತಾಲಕ (ನ)=ಹರಿದಳ. ಗೈರೇಯ, ಅರ್ಥ್ಯ, ಗಿರಿಜ, ಅಶ್ಮಜ, ಶಿಲಾಜತು (ನ)=ಶಿಲಾಜಿತು.

೯೯೧. ಬೋಲ, ಗಂಧರಸ, ಪ್ರಾಣ, ಪಿಂಡ, ಗೋಪ, ರಸ (ಪು)=ಬಾಣಂತಿ ಬಾಳು, ಒಂದು ಬಗೆಯ ಸುಗಂಧದ್ರವ್ಯ. ಡಿಂಡೀರ (ಹಿಂಡೀರ) ಅಬ್ಧಿಕಫ, ಫೇನ (ಪು)=ಸಮುದ್ರ ನಾಲಗೆ, ಸಮುದ್ರ ನೊರೆ. ಸಿಂದೂರ, ನಾಗಸಂಭವ (ನ)=ಸಿಂದೂರ, ಚಂದ್ರ.

೯೯೨-೯೯೩. ನಾಗ, ಸೀಸಕ, ಯೋಗೇಷ್ಟ, ವಪ್ರ (ನ)=ಸೀಸ. ತ್ರಪು, ಪಿಚ್ಚಟ, ರಂಗ, ವಂಗ (ನ)=ತವರ. ಪಿಚು, ತೂಲ (ಪು)=ಹತ್ತಿ. ಕಮಲೋತ್ತರ, ಕುಸುಂಭ, ವಹ್ನಿಶಿಖ,



ಸ್ಯಾತ್ಕುಸುಂಭಂ ವಹ್ನಿಶಿಖಂ ಮಹಾರಜನಮಿತ್ಯಪಿ ।
ಮೇಷಕಂಬಲ ಊರ್ಣಾಯುಃ ಶಶೋರ್ಣಂ ಶಶಲೋಮನಿ ॥ ೯೯೩
ಮಧು ಕ್ಷೌದ್ರಂ ಮಾಕ್ಷಿಕಾದಿ ಮಧೂಚ್ಛಿಷ್ಟಂ ತು ಸಿಕ್ಥಕಮ್ ।
ಮನಶ್ಶಿಲಾ ಮನೋಗುಪ್ತಾ ಮನೋಹ್ವಾ ನಾಗಜಿಹ್ವಿಕಾ ॥ ೯೯೪
ನೈಪಾಲೀ ಕುನಟೀ ಗೋಲಾ ಯವಕ್ಷಾರೋ ಯವಾಗ್ರಜಃ ।
ಪಾಕ್ಯೋಽಥ ಸರ್ಜಿಕಾಕ್ಷಾರಃ ಕಾಪೋತಸ್ಸುಖವರ್ಚಕಃ ॥ ೯೯೫
ಸೌವರ್ಚಲಂ ಸ್ಯಾದ್ರುಚಕಂ ತ್ವಕ್‌ಕ್ಷೀರೀ ವಂಶರೋಚನಾ ।
ಶಿಗ್ರುಜಂ ಶ್ವೇತಮರಿಚಂ ಮೋರಟಂ ಮೂಲಮೈಕ್ಷವಮ್ ॥ ೯೯೬
ಗ್ರಂಥಿಕಂ ಪಿಪ್ಪಲೀಮೂಲಂ ಚಟಕಾಶಿರ ಇತ್ಯಪಿ ।
ಗೋಲೋಮೀ ಭೂತಕೇಶೋ ನಾ ಪತ್ರಾಂಗಂ ರಕ್ತಚಂದನಮ್ ॥ ೯೯೭
ತ್ರಿಕಟು ತ್ರ್ಯೂಷಣಂ ವ್ಯೋಷಂ ತ್ರಿಫಲಾ ತು ಫಲತ್ರಿಕಮ್ ।

ಇತಿ ವೈಶ್ಯವರ್ಗಃ

ಮಹಾರಜನ (ನ)=ಕುಸುಬೆ ಹೂ. ಮೇಷಕಂಬಲ, ಊರ್ಣಾಯು (ಪು)=ಕುರಿಯ ಉಣ್ಣೆಯಿಂದ ನೆಯ್ದ ಕಂಬಳಿ,-ಶಾಲು. ಶಶೋರ್ಣ (ನ)=ಮೊಲದ ಕೂದಲು ; ಮೊಲದ ಕೂದಲಿಂದಾದ ಬಟ್ಟೆ.

೯೯೪-೯೯೬. ಮಧು, ಕ್ಷೌದ್ರ, ಮಾಕ್ಷಿಕ (ನ) (ಹೀಗೆಯೇ ಭ್ರಾಮರ, ವಾಟಕ, ಪೌತಿಕ) (ನ)=ಜೇನುತುಪ್ಪ. ಮಧೂಚ್ಛಿಷ್ಟ, ಸಿಕ್ಥಕ (ನ)=ಜೇನು ಮೇಣ. ಮನಶ್ಶಿಲಾ, ಮನೋಗುಪ್ತಾ, ಮನೋಹ್ವಾ, ನಾಗಜಿಹ್ವಿಕಾ, ನೈಪಾಲೀ, ಕುನಟೀ, ಗೋಲಾ (ಸ್ತ್ರೀ)=ಮಣಿಶಿಲೆ. ಯವಕ್ಷಾರ, ಯವಾಗ್ರಜ, ಪಾಕ್ಯ (ಪು)=ಯವಕ್ಷಾರ. ಸರ್ಜಿಕಾಕ್ಷಾರ, ಕಾಪೋತ, ಸುಖವರ್ಚಕ (ಪು), ಸೌವರ್ಚಲ, ರುಚಕ (ನ)=ಸರ್ಜಿಕಾಕ್ಷಾರ (Natron)ತ್ವಕ್‌ಕ್ಷೀರೀ, ವಂಶರೋಚನಾ (ಸ್ತ್ರೀ)=ತವಕ್ಷೀರ. ಶಿಗ್ರುಜ, ಶ್ವೇತಮರಿಚ (ನ)=ನುಗ್ಗೆಬೀಜ. ಮೋರಟ (ನ)=ಕಬ್ಬಿನ ಬೇರು.

೯೯೭. ಗ್ರಂಥಿಕ, ಚಟಕಾಶಿರಸ್ (ನ)=ಹಿಪ್ಪಲಿಬೇರು. ಗೋಲೋಮೀ (ಸ್ತ್ರೀ), ಭೂತಕೇಶ (ಪು)=ಜಟಾಮಾಂಸಿ. ಪತ್ರಾಂಗ, ರಕ್ತಚಂದನ (ನ)=ರಕ್ತಚಂದನ.

೯೯೮. ತ್ರಿಕಟು, ತ್ರ್ಯೂಷಣ, ವ್ಯೋಷ (ನ)=ಶುಂಠಿ, ಹಿಪ್ಪಲಿ, ಮೆಣಸು-ಇವುಗಳ ಸಂಘಾತ. ತ್ರಿಫಲಾ (ಸ್ತ್ರೀ), ಫಲತ್ರಿಕ (ನ)=ಅಳಲೆಕಾಯಿ, ತಾರೆಕಾಯಿ, ನೆಲ್ಲಿಕಾಯಿ-ಇವುಗಳ ಸಂಘಾತ.

## ೧೦. ಶೂದ್ರವರ್ಗಃ

ಶೂದ್ರಾಶ್ಚಾವರವರ್ಣಾಶ್ಚ ವೃಷಲಾಶ್ಚ ಜಘನ್ಯಜಾಃ ॥ ೯೯೮
ಆಚಂಡಾಲಾತ್ತು ಸಂಕೀರ್ಣಾ ಅಂಬಷ್ಠಕರಣಾದಯಃ ।
ಶೂದ್ರಾವಿಶೋಸ್ತು ಕರಣೋಽಂಬಷ್ಠೋ ವೈಶ್ಯಾದ್ವಿಜನ್ಮನೋಃ ॥ ೯೯೯
ಶೂದ್ರಾಕ್ಷತ್ರಿಯಯೋರುಗ್ರೋ ಮಾಗಧಃ ಕ್ಷತ್ರಿಯಾವಿಶೋಃ ।
ಮಾಹಿಷ್ಯೋಽರ್ಯಾಕ್ಷತ್ರಿಯಯೋಃ ಕ್ಷತ್ತಾರ್ಯಾಶೂದ್ರಯೋಸ್ಸುತಃ ॥ ೧೦೦೦

ಬ್ರಾಹ್ಮಣ್ಯಾಂ ಕ್ಷತ್ರಿಯಾತ್ಸೂತಸ್ತಸ್ಯಾಂ ವೈದೇಹಕೋ ವಿಶಃ ।
ರಥಕಾರಸ್ತು ಮಾಹಿಷ್ಯಾತ್ಕರಣ್ಯಾಂ ಯಸ್ಯ ಸಂಭವಃ ॥ ೧೦೦೧
ಸ್ಯಾಚ್ಚಂಡಾಲಸ್ತು ಜನಿತೋ ಬ್ರಾಹ್ಮಣ್ಯಾಂ ವೃಷಲೇನ ಯಃ ।
ಕಾರುಶ್ಶಿಲ್ಪೀ ಸಂಹತೈಸ್ತೈರ್ದ್ವಯೋಶ್ಶ್ರೇಣಿಸ್ಸಜಾತಿಭಿಃ ॥ ೧೦೦೨

### ಶೂದ್ರವರ್ಗ

ಸೂಚನೆ - ೧೦೧೮ನೆಯ ಶ್ಲೋಕದ ಲುಬ್ಧಕ ಶಬ್ದದವರೆಗೆ ಶೂದ್ರಾದಿ ಜಾತಿವಾಚಕ ಶಬ್ದಗಳು ಪುಲ್ಲಿಂಗ ಸ್ತ್ರೀಲಿಂಗಗಳಲ್ಲಿಯೂ ಚೋರಾದಿ ಯೌಗಿಕ ಶಬ್ದಗಳು ಮೂರು ಲಿಂಗಗಳಲ್ಲಿಯೂ ಇರುತ್ತವೆ. ಪ್ರಸಿದ್ಧವಾದ ಕೆಲವು ಸ್ತ್ರೀಲಿಂಗ ರೂಪಗಳನ್ನು ಅಲ್ಲಲ್ಲಿ ತೋರಿಸಿದೆ. ಉಳಿದ ಶಬ್ದಗಳ ಸ್ತ್ರೀಲಿಂಗ ರೂಪಗಳನ್ನು ವ್ಯಾಕರಣ ಶಾಸ್ತ್ರದಿಂದ ತಿಳಿದುಕೊಳ್ಳಬೇಕು.

೯೯೮-೯೯೯. ಶೂದ್ರ, ಅವರವರ್ಣ, ವೃಷಲ, ಜಘನ್ಯಜ (-ಸ್ತ್ರೀ. ಶೂದ್ರಾ, ವೃಷಲೀ) =ಶೂದ್ರ. ಸಂಕೀರ್ಣ=ಅಂಬಷ್ಠ ಕರಣಾದಿ ಸಂಕರ ಜಾತಿಯವನು. ಕರಣ=ವೈಶ್ಯನಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದವನು. ಅಂಬಷ್ಠ=ಬ್ರಾಹ್ಮಣನಿಂದ ವೈಶ್ಯಸ್ತ್ರೀಯಲ್ಲಿ ಜನಿಸಿದವನು.

೧೦೦೦. ಉಗ್ರ=ಶೂದ್ರಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದವನು. ಮಾಗಧ=ಕ್ಷತ್ರಿಯ ಸ್ತ್ರೀಯಲ್ಲಿ ವೈಶ್ಯನಿಂದ ಜನಿಸಿದವನು. ಮಾಹಿಷ್ಯ=ವೈಶ್ಯಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದವನು. ಕ್ಷತ್ತೃ=ಕ್ಷತ್ರಿಯ ಸ್ತ್ರೀ[1]ಯಲ್ಲಿ ಶೂದ್ರನಿಂದ ಜನಿಸಿದವನು.

[1] ಮೂಲದಲ್ಲಿ 'ಕ್ಷತ್ತಾರ್ಯಾಶೂದ್ರಯೋಃ ಸುತಃ' ಎಂದಿದೆ. ಮನುಸ್ಮೃತಿ (೧೦-೧೨) ಮುಂತಾದ ಗ್ರಂಥಗಳ ಆಧಾರದಿಂದ ಅರ್ಯಾ ಶಬ್ದಕ್ಕೆ ಕ್ಷತ್ರಿಯ ಸ್ತ್ರೀ ಎಂದು ಅರ್ಥವನ್ನು ಮಾಡಿದೆ.



ಕುಲಕಃ ಸ್ಯಾತ್ಕುಲಶ್ರೇಷ್ಠೀ ಮಾಲಾಕಾರಸ್ತು ಮಾಲಿಕಃ ।
ಕುಂಭಕಾರಃ ಕುಲಾಲಃ ಸ್ಯಾತ್ಪಲಗಂಡಸ್ತು ಲೇಪಕಃ ॥ ೧೦೦೩
ತಂತುವಾಯಃ ಕುವಿಂದಸ್ಸ್ಯಾತ್ತುನ್ನವಾಯಸ್ತು ಸೌಚಿಕಃ ।
ರಂಗಾಜೀವಶ್ಚಿತ್ರಕಾರಃ ಶಸ್ತ್ರ ಮಾರ್ಜೋಽಸಿಧಾವಕಃ ॥ ೧೦೦೪
ಪಾದೂಕೃಚ್ಚರ್ಮಕಾರಸ್ಸ್ಯಾತ್ ವ್ಯೋಕಾರೋ ಲೋಹಕಾರಕಃ ।
ನಾಡಿಂಧಮಃ ಸ್ವರ್ಣಕಾರಃ ಕಲಾದೋ ರುಕ್ಮಕಾರಕಃ ॥ ೧೦೦೫
ಸ್ಯಾಚ್ಛಾಂಖಿಕಃ ಕಾಂಬವಿಕಶ್ಶೌಲ್ಬಿಕಸ್ತಾಮ್ರಕುಟ್ಟಕಃ ।
ತಕ್ಷಾ ತು ವರ್ಧಕಿಸ್ತ್ವಷ್ಟಾ ರಥಕಾರಶ್ಚ ಕಾಷ್ಠತಟ್ ॥ ೧೦೦೬
ಗ್ರಾಮಾಧೀನೋ ಗ್ರಾಮತಕ್ಷಃ ಕೌಟತಕ್ಷೋಽನಧೀನಕಃ ।
ಕ್ಷುರೀ ಮುಂಡೀ ದಿವಾಕೀರ್ತಿನಾಪಿತಾಂತಾವಸಾಯಿನಃ ॥ ೧೦೦೭

೧೦೦೧. ಸೂತ=ಬ್ರಾಹ್ಮಣ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು. ವೈದೇಹಕ = ಬ್ರಾಹ್ಮಣ ಸ್ತ್ರೀಯಲ್ಲಿ ವೈಶ್ಯನಿಂದ ಹುಟ್ಟಿದವನು. ರಥಕಾರ=ಕರಣಸ್ತ್ರೀಯಲ್ಲಿ ಮಾಹಿಷ್ಯನಿಂದ ಹುಟ್ಟಿದವನು.

೧೦೦೨. ಚಂಡಾಲ (-ಸ್ತ್ರೀ. ಚಂಡಾಲೀ)=ಶೂದ್ರನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದವನು. ಕಾರು, ಶಿಲ್ಪಿನ್=ಕೆತ್ತನೆ ಮುಂತಾದ ಕೈಗೆಲಸವನ್ನು ಮಾಡತಕ್ಕವನು. ಶ್ರೇಣಿ (ಪು. ಸ್ತ್ರೀ)=ಶಿಲ್ಪಿಗಳ ಸಮೂಹ.

೧೦೦೩. ಕುಲಕ, ಕುಲಶ್ರೇಷ್ಠಿನ್=ಶಿಲ್ಪಿಸಂಘದಲ್ಲಿ ಮುಖ್ಯನಾದವನು, ಸೇರೆಗಾರ, 'ಮೇಸ್ತ್ರಿ'. ಮಾಲಾಕಾರ, ಮಾಲಿಕ (ಸ್ತ್ರೀ. ಮಾಲಾಕಾರೀ, ಮಾಲಿಕಾ)=ಹೂವಾಡಿಗ. ಕುಂಭಕಾರ, ಕುಲಾಲ (ಪು)=ಕುಂಬಾರ. ಪಲಗಂಡ, ಲೇಪಕ (ಪು)=ಸುಣ್ಣ ಬಳಿಯುವವನು, ಬಣ್ಣ ಹಚ್ಚುವವನು.

೧೦೦೪. ತಂತುವಾಯ, ಕುವಿಂದ ಬಟ್ಟೆಯನ್ನು ನೇಯುವವನು. ತುನ್ನವಾಯ, ಸೌಚಿಕ= ಹೊಲಿಗೆಯವನು, ದರ್ಜಿ. ರಂಗಾಜೀವ, ಚಿತ್ರಕಾರ=ಚಿತ್ರಗಾರ. ಶಸ್ತ್ರಮಾರ್ಜ, ಅಸಿಧಾವಕ=ಸಾಣೆ ಹಿಡಿಯುವವನು.

೧೦೦೫. ಪಾದೂಕೃತ್, ಚರ್ಮಕಾರ=ಚಮ್ಮಾರ. ವ್ಯೋಕಾರ, ಲೋಹಕಾರಕ=ಕಬ್ಬಿಣದ ಕೆಲಸಗಾರ. ನಾಡಿಂಧಮ, ಸ್ವರ್ಣಕಾರ, ಕಲಾದ, ರುಕ್ಮಕಾರಕ=ಅಕ್ಕಸಾಲೆ.

ನಿರ್ಣೇಜಕಸ್ಸ್ಯಾದ್ರಜಕಶ್ಶೌಂಡಿಕೋ ಮಂಡಹಾರಕಃ ।
ಜಾಬಾಲಸ್ಸ್ಯಾದಜಾಜೀವೋ ದೇವಾಜೀವಸ್ತು ದೇವಲಃ ॥ ೧೦೦೮
ಸ್ಯಾನ್ಮಾಯಾ ಶಾಂಬರೀ ಮಾಯಾಕಾರಸ್ತು ಪ್ರಾತಿಹಾರಿಕಃ ।
ಶೈಲಾಲಿನಸ್ತು ಶೈಲೂಷಾ ಜಾಯಾಜೀವಾಃ ಕೃಶಾಶ್ವಿನಃ ॥ ೧೦೦೯
ಭಾರತಾ ಇತ್ಯಪಿ ನಟಾಶ್ಚಾರಣಾಸ್ತು ಕುಶೀಲವಾಃ ।
ಮಾರ್ದಂಗಿಕಾ ಮೌರಜಿಕಾಃ ಪಾಣಿವಾದಾಸ್ತು ಪಾಣಿಘಾಃ ॥ ೧೦೧೦
ವೇಣುಧ್ಮಾಸ್ಸ್ಯುರ್ವೈಣವಿಕಾಃ ವೀಣಾವಾದಾಸ್ತು ವೈಣಿಕಾಃ ।
ಜೀವಾಂತಕಶ್ಶಾಕುನಿಕೋ ದ್ವೌ ವಾಗುರಿಕಜಾಲಿಕೌ ॥ ೧೦೧೧

---

೧೦೦೬. ಶಾಂಖಿಕ, ಕಾಂಬವಿಕ=ಶಂಖ, ಚಿಪ್ಪುಗಳನ್ನೂ ಅವುಗಳಿಂದಾದ ವಸ್ತುಗಳನ್ನೂ ಮಾರುವವನು. ಶೌಲ್ಬಿಕ, ತಾಮ್ರಕುಟ್ಟಕ=ತಾಮ್ರದ ಕೆಲಸದವನು. ತಕ್ಷನ್, ವರ್ಧಕಿ, ತ್ವಷ್ಟ್ರು, ರಥಕಾರ, ಕಾಷ್ಠತಕ್ಷ್=ಬಡಗಿ.

೧೦೦೭. ಗ್ರಾಮತಕ್ಷ=ಗ್ರಾಮಕ್ಕೆ ಅಧೀನನಾದ ಬಡಗಿ, ಊರ ಬಡಗಿ. ಕೌಟತಕ್ಷ=ತನ್ನ ಗುಡಿಸಲಲ್ಲಿಯೇ ಕೆಲಸಮಾಡುವ ಸ್ವತಂತ್ರನಾದ ಬಡಗಿ. ಕ್ಷುರಿನ್, ಮುಂಡಿನ್, ದಿವಾಕೀರ್ತಿ, ನಾಪಿತ, ಅಂತಾವಸಾಯಿನ್=ಕ್ಷೌರಿಕ.

೧೦೦೮. ನಿರ್ಣೇಜಕ, ರಜಕ (-ಸ್ತ್ರೀ. ನಿರ್ಣೇಜಿಕಾ, ರಜಿಕಾ ; ರಜಕೀ=ಅಗಸನ ಹೆಂಡತಿ)= ಅಗಸ. ಶೌಂಡಿಕ, ಮಂಡಹಾರಕ=ಹೆಂಡದ ಕೆಲಸದವನು. ಜಾಬಾಲ, ಅಜಾಜೀವ=ಕುರಿಮೇಕೆ ಗಳನ್ನು ಕಾಯುವವನು, ಕುರುಬ. ದೇವಾಜೀವ (ದೇವಾಜೀವಿನ್), ದೇವಲ=ದೇವಪೂಜೆ ಯಿಂದ ಜೀವಿಸುವವನು.

೧೦೦೯. ಮಾಯಾ, ಶಾಂಬರೀ (ಸ್ತ್ರೀ)=ಇಂದ್ರಜಾಲ ಮುಂತಾದ ಮಾಯೆ. ಮಾಯಾಕಾರ, ಪ್ರಾತಿಹಾರಿಕ=ಇಂದ್ರ ಜಾಲಮಾಡುವವನು, ಜಾದುಗಾರ.

೧೦೦೯-೧೦೧೦. ಶೈಲಾಲಿನ್, ಶೈಲೂಷ, ಜಾಯಾಜೀವ, ಕೃಶಾಶ್ವಿನ್, ಭಾರತ (ಭರತ), ನಟ (-ಸ್ತ್ರೀ. ಶೈಲೂಷೀ, ನಟೀ)=ನಟ. ಚಾರಣ, ಕುಶೀಲವ=ಗಾಯಕ, ಸ್ತುತಿಪಾಠಕ. ಮಾರ್ದಂಗಿಕ, ಮೌರಜಿಕ=ಮೃದಂಗದವನು. ಪಾಣಿವಾದ, ಪಾಣಿಘ=ಕೈತಾಳ ಹಾಕುವವನು.

೧೦೧೧. ವೇಣುಧ್ಮಾ, ವೈಣವಿಕ=ಕೊಳಲನ್ನು ಊದುವವನು. ವೀಣಾವಾದ, ವೈಣಿಕ (-ಸ್ತ್ರೀ. ವೈಣಿಕೀ)=ವೀಣೆಯನ್ನು ನುಡಿಸುವವನು. ಜೀವಾಂತಕ, ಶಾಕುನಿಕ (ಪು)=ಹಕ್ಕಿಯ ಬೇಟೆಗಾರ. ವಾಗುರಿಕ, ಜಾಲಿಕ (ಪು)=ಬಲೆಯಿಂದ ಮೃಗಗಳನ್ನು ಹಿಡಿಯುವವನು ; ಜಾಲಗಾರ.



ವೈತಂಸಿಕಃ ಕೌಟಕಶ್ಚ ಮಾಂಸಿಕಶ್ಚ ಸಮಂ ತ್ರಯಮ್ ।
ಭೃತಕೋ ಭೃತಿಭುಕ್ಕರ್ಮಕರೋ ವೈತನಿಕೋಽಪಿ ಸಃ ॥ ೧೦೧೨
ವಾರ್ತಾವಹೋ ವೈವಧಿಕೋ ಭಾರವಾಹಸ್ತು ಭಾರಿಕಃ ।
ವಿವರ್ಣಃ ಪಾಮರೋ ನೀಚಃ ಪ್ರಾಕೃತಶ್ಚ ಪೃಥಗ್ಜನಃ ॥ ೧೦೧೩
ನಿಹೀನೋಽಪಸದೋ ಜಾಲ್ಮಃ ಕ್ಷುಲ್ಲಕಶ್ಚೇತರಶ್ಚ ಸಃ ।
ಭೃತ್ಯೇ ದಾಸೇರದಾಸೇಯದಾಸಗೋಪ್ಯ ಕಚೇಟಕಾಃ ॥ ೧೦೧೪
ನಿಯೋಜ್ಯಕಿಂಕರಪ್ರೇಷ್ಯಭುಜಿಷ್ಯಪರಿಚಾರಕಾಃ ।
ಪರಾಚಿತಪರಿಸ್ಕಂದಪರಜಾತಪರ್ಯೈಧಿತಾಃ ॥ ೧೦೧೫
ಮಂದಸ್ತುಂದಪರಿಮೃಜ ಆಲಸ್ಯಃ ಶೀತಕೋಽಲಸೋಽನುಷ್ಣಃ ।
ದಕ್ಷೇ ತು ಚತುರಪೇಶಲಪಟವಃ ಸೂತ್ಥಾನ ಉಷ್ಣಶ್ಚ ॥ ೧೦೧೬

---

೧೦೧೨. ವೈತಂಸಿಕ, ಕೌಟಕ, ಮಾಂಸಿಕ=ಮಾಂಸವನ್ನು ಮಾರುವವನು. ಭೃತಕ, ಭೃತಿಭುಜ್, ಕರ್ಮಕರ, ವೈತನಿಕ=ಸಂಬಳದಿಂದ ಜೀವಿಸುವವನು, ನೌಕರ.

೧೦೧೩. ವಾರ್ತಾವಹ, ವೈವಧಿಕ=ಸರಕನ್ನು ಹೊತ್ತುಕೊಂಡು ಹೋಗಿ ಮಾರತಕ್ಕವನು. ಭಾರವಾಹ, ಭಾರಿಕ= ಹೊರೆ ಹೊರುವವನು.

೧೦೧೩-೧೦೧೫. ವಿವರ್ಣ, ಪಾಮರ, ನೀಚ, ಪ್ರಾಕೃತ, ಪೃಥಗ್ಜನ, ನಿಹೀನ, ಅಪಸದ, ಜಾಲ್ಮ, ಕ್ಷುಲ್ಲಕ, ಇತರ=ನೀಚ, ಅಲ್ಪಮನುಷ್ಯ. ಭೃತ್ಯ, ದಾಸೇರ, ದಾಸೇಯ, ದಾಸ, ಗೋಪ್ಯಕ, ಚೇಟಕ, ನಿಯೋಜ್ಯ, ಕಿಂಕರ, ಪ್ರೇಷ್ಯ, ಭುಜಿಷ್ಯ, ಪರಿಚಾರಕ (-ಸ್ತ್ರೀ. ದಾಸೀ, ಚೇಟಿಕಾ, ಕಿಂಕರೀ, ಪರಿಚಾರಿಕಾ)=ಸೇವಕ. ಪರಾಜಿತ, ಪರಿಸ್ಕಂದ, ಪರಜಾತ, ಪರ್ಯೈಧಿತ=ಅನ್ಯರ ಪೋಷಣೆಯಲ್ಲಿ ಬೆಳೆದ ಸೇವಕ.

೧೦೧೬. ಮಂದ, ತುಂದಪರಿಮೃಜ, ಆಲಸ್ಯ, ಶೀತಕ, ಅಲಸ, ಅನುಷ್ಣ=ಸೋಮಾರಿ. ದಕ್ಷ, ಚತುರ, ಪೇಶಲ, ಪಟು, ಸೂತ್ಥಾನ, ಉಷ್ಣ=ಕಾರ್ಯದಕ್ಷ, ಚುರುಕು ಬುದ್ಧಿಯವನು.

೧೦೧೭. ಚಂಡಾಲ, ಪ್ಲವ, ಮಾತಂಗ ದಿವಾಕೀರ್ತಿ, ಜನಂಗಮ, ನಿಷಾದ, ಶ್ವಪಚ, ಅಂತೇವಾಸಿನ್, ಚಾಂಡಾಲ, ಪುಲ್ಕಸ=ಹೊಲೆಯ.

೧೦೧೮. ಕಿರಾತ, ಶಬರ, ಪುಲಿಂದ, ಮ್ಲೇಚ್ಛಜಾತಿ (—ಸ್ತ್ರೀ. ಕಿರಾತೀ, ಶಬರೀ, ಪುಲಿಂದೀ)=ಬೇರೆ ಬೇರೆ ಮ್ಲೇಚ್ಛ ಜಾತಿಯವನು. ವ್ಯಾಧ, ಮೃಗವಧಾಜೀವ, ಮೃಗಯು, ಲುಬ್ಧಕ (ಪು)=ಬೇಟೆಗಾರ, ಬೇಡ.

ಚಂಡಾಲಪ್ಲವಮಾತಂಗದಿವಾಕೀರ್ತಿಜನಂಗಮಾಃ ।
ನಿಷಾದಶ್ವಪಚಾವಂತೇವಾಸಿಚಾಂಡಾಲಪುಲ್ಕಸಾಃ ॥ ೧೦೧೭
ಭೇದಾಃ ಕಿರಾತಶಬರಪುಲಿಂದಾ ಮ್ಲೇಚ್ಛಜಾತಯಃ ।
ವ್ಯಾಧೋ ಮೃಗವಧಾಜೀವೋ ಮೃಗಯುರ್ಲುಬ್ಧಕೋऽಪಿ ಸಃ ॥ ೧೦೧೮
ಕೌಲೇಯಕಸ್ಸಾರಮೇಯಃ ಕುಕ್ಕುರೋ ಮೃಗದಂಶಕಃ ।
ಶುನಕೋ ಭಷಕಶ್ವಾ ಸ್ಯಾದಲರ್ಕಸ್ತು ಸ ಯೋಗಿತಃ ॥ ೧೦೧೯
ಶ್ವಾ ವಿಶ್ವಕದ್ರುರ್ಮೃಗಯಾಕುಶಲಸ್ಸರಮಾ ಶುನೀ ।
ವಿಟ್ಚರಸ್ಸೂಕರೋ ಗ್ರಾಮ್ಯೋ ವರ್ಕರಸ್ತರುಣಃ ಪಶುಃ ॥ ೧೦೨೦
ಆಚ್ಛೋದನಂ ಮೃಗವ್ಯಂ ಸ್ಯಾದಾಖೇಟೋ ಮೃಗಯಾ ಸ್ತ್ರಿಯಾಮ್ ।
ದಕ್ಷಿಣಾರುರ್ಲುಬ್ಧಯೋಗಾದ್ದಕ್ಷಿಣೇರ್ಮಾ ಕುರಂಗಕಃ ॥ ೧೦೨೧
ಚೋರೈಕಾಗಾರಿಕಸ್ತೇನದಸ್ಯುತಸ್ಕರಮೋಷಕಾಃ ।
ಪ್ರತಿರೋಧಿಪರಾಸ್ಕಂದಿಪಾಟಚ್ಚರಮಲಿಮ್ಲುಚಾಃ ॥ ೧೦೨೨
ಚೌರಿಕಾ ಸ್ತೈನ್ಯಚೌರ್ಯೇ ಚ ಸ್ತೇಯಂ ಲೋಪ್ತ್ರಂ ತು ತದ್ಧನಮ್ ।
ವಿತಂಸಸ್ತೂಪಕರಣಂ ಬಂಧನೇ ಮೃಗಪಕ್ಷಿಣಾಮ್ ॥ ೧೦೨೩

---

೧೦೧೯. ಕೌಲೇಯಕ, ಸಾರಮೇಯ, ಕುಕ್ಕುರ, ಮೃಗದಂಶಕ, ಶುನಕ, ಭಷಕ, ಶ್ವನ್ (ಪು)=ನಾಯಿ. ಅಲರ್ಕ (ಪು)=ಹುಚ್ಚುನಾಯಿ.

೧೦೨೦. ವಿಶ್ವಕದ್ರು(ಪು)=ಬೇಟೆನಾಯಿ. ಸರಮಾ, ಶುನೀ (ಸ್ತ್ರೀ)=ಹೆಣ್ಣುನಾಯಿ. ವಿಟ್‌ಚರ (ಪು)=ಊರುಹಂದಿ. ವರ್ಕರ (ಪು)=ಪ್ರಾಯಕಾಲದ ಪಶು.

೧೦೨೧. ಆಚ್ಛೋದನ, ಮೃಗವ್ಯ (ನ), ಆಖೇಟ (ಪು), ಮೃಗಯಾ(ಸ್ತ್ರೀ)=ಬೇಟೆ. ದಕ್ಷಿಣೇರ್ಮನ್ (ಪು)=ಬೇಡನ ಬಾಣದಿಂದ ಬಲಗಡೆ ಗಾಯಹೊಂದಿದ ಜಿಂಕೆ.

೧೦೨೨. ಚೋರ (ಚೌರ), ಐಕಾಗಾರಿಕ, ಸ್ತೇನ, ದಸ್ಯು, ತಸ್ಕರ, ಮೋಷಕ, ಪ್ರತಿರೋಧಿನ್, ಪರಾಸ್ಕಂದಿನ್, ಪಾಟಚ್ಚರ, ಮಲಿಮ್ಲುಚ (ಪು)=ಕಳ್ಳ.

೧೦೨೩. ಚೌರಿಕಾ (ಸ್ತ್ರೀ), ಸ್ತೈನ್ಯ, ಚೌರ್ಯ, ಸ್ತೇಯ (ನ)=ಕಳ್ಳತನ. ಲೋಪ್ತ್ರ (ನ)=ಕದ್ದ ವಸ್ತು. ವಿತಂಸ (ವೀತಂಸ) (ಪು)=ಮೃಗಪಕ್ಷಿಗಳನ್ನು ಹಿಡಿಯುವ ಸಾಧನ.



ಉನ್ಮಾಥಃ ಕೂಟಯಂತ್ರಂ ಸ್ಯಾತ್ ವಾಗುರಾ ಮೃಗಬಂಧಿನೀ ।
ಶುಲ್ಬಂ ವರಾಟಕಃ ಸ್ತ್ರೀ ತು ರಜ್ಜುಸ್ತ್ರಿಷು ವಟೀ ಗುಣಃ ॥ ೧೦೨೪
ಉದ್ಘಾಟನಂ ಘಟೀಯಂತ್ರಂ ಸಲಿಲೋದ್ವಾಹನಂ ಪ್ರಹೇಃ ।
ಪುಂಸಿ ವೇಮಾ ವಾಯದಂಡಸ್ಸೂತ್ರಾಣಿ ನರಿ ತಂತವಃ ॥ ೧೦೨೫
ವಾಣಿರ್ವ್ಯೂತಿಃ ಸ್ತ್ರಿಯೌ ತುಲ್ಯೇ ಪುಸ್ತಂ ಲೇಪ್ಯಾದಿಕರ್ಮಣಿ ।
ಪಾಂಚಾಲಿಕಾ ಪುತ್ರಿಕಾ ಸ್ಯಾದ್ವಸ್ತ್ರದಂತಾದಿಭಿಃ ಕೃತಾ ॥ ೧೦೨೬
ಪಿಟಕಃ ಪೇಟಕಃ ಪೇಟಾ ಮಂಜೂಷಾಥ ವಿಹಂಗಿಕಾ ।
ಭಾರಯಷ್ಟಿಸ್ತದಾಲಂಬಿ ಶಿಕ್ಯಂ ಕಾಚೋऽಥ ಪಾದುಕಾ ॥ ೧೦೨೭
ಪಾದೂರುಪಾನತ್ ಸ್ತ್ರೀ ಸೈವಾನುಪದೀನಾ ಪದಾಯತಾ ।
ನಧ್ರೀ ವರ್ಧ್ರೀ ವರತ್ರಾ ಸ್ಯಾದಶ್ವಾದೇಸ್ತಾಡನೀ ಕಶಾ ॥ ೧೦೨೮

---

೧೦೨೪. ಉನ್ಮಾಥ (ಪು), ಕೂಟಯಂತ್ರ (ನ)=ಪ್ರಾಣಿಗಳನ್ನು ಹಿಡಿಯುವ ಬೋನು. ವಾಗುರಾ, ಮೃಗಬಂಧಿನೀ (ಸ್ತ್ರೀ)=ಮೃಗಗಳನ್ನು ಹಿಡಿಯುವ ಬಲೆ. ಶುಲ್ಬ (ನ), ವರಾಟಕ (ಪು), ರಜ್ಜು (ಸ್ತ್ರೀ), ವಟೀ (ಸ್ತ್ರೀ. ಪು. ನ (ಪು. ನ. ವಟ), ಗುಣ (ಪು)=ಹಗ್ಗ, ಹುರಿ.

೧೦೨೫. ಉದ್ಘಾಟನ, ಘಟೀಯಂತ್ರ (ನ)=ನೀರನ್ನೆತ್ತುವ ರಾಟೆ, ಏತ. ವೇಮನ್, ವಾಯದಂಡ (ಪು)=ನೇಯುವ ಕೋಲು, ತಾಕುಹಲಗೆ (A loom). ಸೂತ್ರ (ನ), ತಂತು (ಪು)=ನೂಲು.

೧೦೨೬. ವಾಣಿ, ವ್ಯೂತಿ (ಸ್ತ್ರೀ)=ನೇಯ್ಗೆ. ಪುಸ್ತ (ನ)=ಬಳಿದು ಮೆತ್ತುವುದು ; ಮಣ್ಣು ಮರ ಬಟ್ಟೆ ಇವುಗಳಿಂದ ಮಾಡುವ ಬೊಂಬೆ ಮುಂತಾದ ಕೈಗೆಲಸ. ಪಾಂಚಾಲಿಕಾ, ಪುತ್ರಿಕಾ (ಸ್ತ್ರೀ)=ಬೊಂಬೆ.

೧೦೨೭-೧೦೨೮. ಪಿಟಕ, ಪೇಟಕ (ಪು), ಪೇಟಾ, ಮಂಜೂಷಾ (ಸ್ತ್ರೀ)=ಪೆಟ್ಟಿಗೆ. ವಿಹಂಗಿಕಾ, ಭಾರಯಷ್ಟಿ (ಸ್ತ್ರೀ)=ಭಾರವನ್ನು ತೂಗುಹಾಕುವ ಅಡ್ಡೆ. ಶಿಕ್ಯ (ನ), ಕಾಚ (ಪು)=ಭಾರವನ್ನು ತುಂಬಿ ತೂಗಿಹಾಕುವ ಹಗ್ಗದ ಶಿಕ್ಕೆ. ಪಾದುಕಾ, ಪಾದೂ, ಉಪಾನಹ್ (ಸ್ತ್ರೀ)=ಪಾದರಕ್ಷೆ. ಅನುಪದೀನಾ (ಸ್ತ್ರೀ)=ಕಾಲಿನ ಅಳತೆಗೆ ತಕ್ಕದ್ದಾದ ಪಾದರಕ್ಷೆ. ನಧ್ರೀ, ವರ್ಧ್ರೀ, ವರತ್ರಾ (ಸ್ತ್ರೀ)=ಚರ್ಮದ ಪಟ್ಟಿ, 'ಬಾರು'. ಕಶಾ (ಸ್ತ್ರೀ)=ಕುದುರೆ ಮೊದಲಾದ್ದನ್ನು ಹೊಡೆವ ಚಾಟಿ.

ಚಾಂಡಾಲಿಕಾ ತು ಕಂಡೋಲವೀಣಾ ಚಂಡಾಲವಲ್ಲಕೀ ।
ನಾರಾಚೀ ಸ್ಯಾದೇಷಣಿಕಾ ಶಾಣಸ್ತು ನಿಕಷಃ ಕಷಃ ॥ ೧೦೨೯
ವ್ರಶ್ಚನಃ ಪತ್ರಪರಶುರೀಷಿಕಾ ತೂಲಿಕಾ ಸಮೇ ।
ತೈಜಸಾವರ್ತನೀ ಮೂಷಾ ಭಸ್ತ್ರಾ ಚರ್ಮಪ್ರಸೇವಿಕಾ ॥ ೧೦೩೦
ಆಸ್ಫೋಟನೀ ವೇಧನಿಕಾ ಕೃಪಾಣೀ ಕರ್ತರೀ ಸಮೇ ।
ವೃಕ್ಷಾದನೀ ವೃಕ್ಷಭೇದೀ ಟಂಕಃ ಪಾಷಾಣದಾರಣಃ ॥ ೧೦೩೧
ಕ್ರಕಚೋಽಸ್ತ್ರೀ ಕರಪತ್ರಮಾರಾ ಚರ್ಮಪ್ರಭೇದಿಕಾ ।
ಸೂರ್ಮಿಃಸ್ಥೂಣಾಯಃ ಪ್ರತಿಮಾ ಶಿಲ್ಪಂ ಕರ್ಮ ಕಲಾದಿಕಮ್ ॥ ೧೦೩೨
ಪ್ರತಿಮಾನಂ ಪ್ರತಿಬಿಂಬಂ ಪ್ರತಿಮಾ ಪ್ರತಿಯಾತನಾ ಪ್ರತಿಚ್ಛಾಯಾ ।
ಪ್ರತಿಕೃತಿರರ್ಚಾ ಪುಂಸಿ ಪ್ರತಿನಿಧಿರುಪಮೋಪಮಾನಂ ಸ್ಯಾತ್ ॥ ೧೦೩೩

---

೧೦೨೯. ಚಾಂಡಾಲಿಕಾ, ಕಂಡೋಲವೀಣಾ, ಚಂಡಾಲವಲ್ಲಕೀ (ಸ್ತ್ರೀ)=ಮಾದಿಗರು ಉಪಯೋಗಿಸುವ ವೀಣೆ, ಕರುಳಿಂದ ತಂತಿಯನ್ನು ಮಾಡಿ ಬಿಗಿದಿರುವ ವೀಣೆ. ನಾರಾಚೀ, ಏಷಣಿಕಾ (ಸ್ತ್ರೀ)=ತಕ್ಕಡಿ. ಶಾಣ, ನಿಕಷ, ಕಷ (ಪು)=ಒರೆಗಲ್ಲು.

೧೦೩೦. ವ್ರಶ್ಚನ, ಪತ್ರಪರಶು (ಪು)=ಚಾಣ ; ಚಿಕ್ಕ ಗರಗಸ. ಈಷಿಕಾ, ತೂಲಿಕಾ (ಸ್ತ್ರೀ)=ಚಿತ್ರವನ್ನು ಬರೆಯುವ ಕಡ್ಡಿ,-ಕುಂಚ. ತೈಜಸಾವರ್ತನೀ, ಮೂಷಾ (ಸ್ತ್ರೀ)=ಲೋಹವನ್ನು ಕರಗಿಸುವ ಮೂಸೆ. ಭಸ್ತ್ರಾ, ಚರ್ಮಪ್ರಸೇವಿಕಾ (ಸ್ತ್ರೀ)=ತಿದಿ.

೧೦೩೧. ಆಸ್ಫೋಟನೀ, ವೇಧನಿಕಾ (ಸ್ತ್ರೀ)=ಬೈರಿಗೆ. ಕೃಪಾಣೀ, ಕರ್ತರೀ (ಸ್ತ್ರೀ)=ಕತ್ತರಿ. ವೃಕ್ಷಾದನೀ (ಸ್ತ್ರೀ), ವೃಕ್ಷಭೇದಿನ್ (ಪು)=ಉಳಿ (Chisel). ಟಂಕ, ಪಾಷಾಣದಾರಣ (ಪು)=ಕಲ್ಲನ್ನು ಕೆತ್ತುವ ಉಳಿ.

೧೦೩೨. ಕ್ರಕಚ (ಪು. ನ), ಕರಪತ್ರ (ನ)=ಗರಗಸ. ಆರಾ, ಚರ್ಮ ಪ್ರಭೇದಿಕಾ (ಸ್ತ್ರೀ)=ಚರ್ಮವನ್ನು ಹೊಲಿಯುವ ಸೂಚಿ ; ಚರ್ಮವನ್ನು ಕೊರೆಯುವ ಸಾಧನ. ಸೂರ್ಮೀ, ಸ್ಥೂಣಾ, ಅಯಃಪ್ರತಿಮಾ (ಸ್ತ್ರೀ)=ಕಬ್ಬಿಣದ ಪ್ರತಿಮೆ. ಶಿಲ್ಪ (ನ)=ಕುಶಲವಿದ್ಯೆ.

೧೦೩೩. ಪ್ರತಿಮಾನ, ಪ್ರತಿಬಿಂಬ (ನ), ಪ್ರತಿಮಾ, ಪ್ರತಿಯಾತನಾ, ಪ್ರತಿಚ್ಛಾಯಾ, ಪ್ರತಿಕೃತಿ, ಅರ್ಚಾ (ಸ್ತ್ರೀ), ಪ್ರತಿನಿಧಿ (ಪು)=ಮೂಲದ ಆಕೃತಿಯನ್ನು ಹೋಲುವಂತೆ ರಚಿಸಿದ ವಿಗ್ರಹ, ಚಿತ್ರ- ಇತ್ಯಾದಿ. ಉಪಮಾ (ಸ್ತ್ರೀ), ಉಪಮಾನ (ನ)=ಹೋಲಿಕೆ.



ವಾಚ್ಯಲಿಂಗಾಸ್ಸಮಸ್ತುಲ್ಯಸ್ಸದೃಕ್ಷಸ್ಸದೃಶಸ್ಸದೃಕ್ ।
ಸಾಧಾರಣಸ್ಸಮಾನಶ್ಚ ಸ್ಯುರುತ್ತರಪದೇ ತ್ವಮೀ ॥ ೧೦೩೪
ನಿಭಸಂಕಾಶನೀಕಾಶಪ್ರತೀಕಾಶೋಪಮಾದಯಃ ।
ಕರ್ಮಣ್ಯಾ ತು ವಿಧಾಭೃತ್ಯಾಭೃತಯೋ ಭರ್ಮ ವೇತನಮ್ ॥ ೧೦೩೫
ಭರಣ್ಯಂ ಭರಣಂ ಮೂಲ್ಯಂ ನಿರ್ವೇಶಃ ಪಣ ಇತ್ಯಪಿ ।
ಸುರಾ ಹಲಿಪ್ರಿಯಾ ಹಾಲಾ ಪರಿಸ್ರುದ್ವರುಣಾತ್ಮಜಾ ॥ ೧೦೩೬
ಗಂಧೋತ್ತಮಾ ಪ್ರಸನ್ನೇರಾಕಾದಂಬರ್ಯಃ ಪರಿಸ್ರುತಾ ।
ಮದಿರಾ ಕಶ್ಯಮದ್ಯೇ ಚಾಪ್ಯವದಂಶಸ್ತು ಭಕ್ಷಣಮ್ ॥ ೧೦೩೭
ಶುಂಡಾ ಪಾನಂ ಮದಸ್ಥಾನಂ ಮಧುವಾರಾ ಮಧುಕ್ರಮಾಃ ।
ಮಧ್ವಾಸವೋ ಮಾಧವಕೋ ಮಧು ಮಾರ್ದ್ವೀಕಮದ್ವಯೋಃ ॥ ೧೦೩೮

---

೧೦೩೪. ಈ ಶ್ಲೋಕದಲ್ಲಿ ಹೇಳುವ ಏಳು ಶಬ್ದಗಳು ವಿಶೇಷ್ಯಾನುರೋಧವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ : ಸಮ, ತುಲ್ಯ, ಸದೃಕ್ಷ, ಸದೃಶ, (ಸ್ತ್ರೀ. ಸದೃಶೀ), ಸದೃಶ್, ಸಾಧಾರಣ (-ಸ್ತ್ರೀ. ಸಾಧಾರಣೀ, ಸಾಧಾರಣಾ), ಸಮಾನ=ಸಮಾನವಾದದ್ದು.

೧೦೩೫-೧೦೩೬. ನಿಭಾದಿ ಶಬ್ದಗಳು ಸಮಾಸದ ಉತ್ತರ ಪದದಲ್ಲಿ ಮಾತ್ರ ಪ್ರಯುಕ್ತವಾಗಿ ಸಮಾನ ಎಂಬ ಅರ್ಥವನ್ನು ಬೋಧಿಸುತ್ತವೆ. ವಿಶೇಷ್ಯಾನುರೋಧವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ, ಉದಾ : ಚಂದ್ರನಿಭಂ, ಮುಖಂ, ಚಂದ್ರಿಕಾನಿಭಾ ಕೀರ್ತಿಃ. ನಿಭ, ಸಂಕಾಶ, ನೀಕಾಶ, ಪ್ರತೀಕಾಶ, ಉಪಮ. ಹೀಗೆಯೇ ಭೂತ, ರೂಪ, ಕಲ್ಪ. ಉದಾ—ಪಿತೃಭೂತಃ ಕರ್ಮಣ್ಯಾ, ವಿಧಾ, ಭೃತ್ಯಾ, ಭೃತಿ (ಸ್ತ್ರೀ), ಭರ್ಮನ್, ವೇತನ, ಭರಣ್ಯ, ಭರಣ, ಮೂಲ್ಯ (ನ), ನಿರ್ವೇಶ, ಪಣ (ಪು)=ಸಂಬಳ, ಕೂಲಿ.

೧೦೩೬-೧೦೩೭. ಸುರಾ, ಹಲಿಪ್ರಿಯಾ, ಹಾಲಾ, ಪರಿಸ್ರುತ್, ವರುಣಾತ್ಮಜಾ, ಗಂಧೋತ್ತಮಾ, ಪ್ರಸನ್ನಾ, ಈರಾ, ಕಾದಂಬರೀ, ಪರಿಸ್ರುತಾ, ಮದಿರಾ (ಸ್ತ್ರೀ), ಕಶ್ಯ, ಮದ್ಯ (ನ)=ಹೆಂಡ. ಅವದಂಶ (ಪು)=ನಂಜಿಕೊಳ್ಳತಕ್ಕ ವಸ್ತು-ಉಪ್ಪಿನ ಕಾಯಿ ಮೊದಲಾದದ್ದು.

೧೦೩೮. ಶುಂಡಾ (ಸ್ತ್ರೀ), ಪಾನ, ಮದಸ್ಥಾನ (ನ)=ಹೆಂಡವನ್ನು ಕುಡಿಯುವ ಸ್ಥಳ. ಮಧುರವಾರ, ಮಧುಕ್ರಮ (ಪು)=ಮದ್ಯಪಾನದ ಕ್ರಮ ; ಮದ್ಯಪಾನ ಮಾಡುವ ಸಮಯ. ಮಧ್ವಾಸವ, ಮಾಧವಕ (ಪು), ಮಧು (ನ)=ಹಿಪ್ಪೆಹೂವಿನಿಂದಾದ ಮದ್ಯ. ಮಾರ್ದ್ವೀಕ[1] (ನ)=ದ್ರಾಕ್ಷಿಹಣ್ಣಿನ ಮದ್ಯ.

---

[1] ಮಾಧ್ವೀಕ (ನ) ಎಂಬ ಪಾಠಾಂತರದಲ್ಲಿ ಹಿಪ್ಪೆ ಹೂವಿನ ಮದ್ಯಕ್ಕೆ ಹೆಸರು.

ಮೈರೇಯಮಾಸವಃ ಶೀಧುರ್ಮೇದಕೋ ಜಗಲಸ್ಸಮೌ ।
ಸಂಧಾನಂ ಸ್ಯಾದಭಿಷವಃ ಕಿಣ್ವಂ ಪುಂಸಿ ತು ನಗ್ನಹೂಃ ॥ ೧೦೩೯
ಕಾರೋತ್ತರಃ ಸುರಾಮಂಡಮಾಪಾನಂ ಪಾನಗೋಷ್ಠಿಕಾ ।
ಚಷಕೋಽಸ್ತ್ರೀ ಪಾನಪಾತ್ರಂ ಸರಕೋಽಪ್ಯನುತರ್ಷಣಮ್ ॥ ೧೦೪೦
ಧೂರ್ತೋಽಕ್ಷದೇವೀ ಕಿತವೋಽಕ್ಷಧೂರ್ತೋ ದ್ಯೂತಕೃತ್ಸಮಾಃ ।
ಸ್ಯುರ್ಲಗ್ನಕಾಃ ಪ್ರತಿಭುವಃ ಸಭಿಕಾ ದ್ಯೂತಕಾರಕಾಃ ॥ ೧೦೪೧
ದ್ಯೂತೋಽಸ್ತ್ರಿಯಾಮಕ್ಷವತೀ ಕೈತವಂ ಪಣ ಇತ್ಯಪಿ ।
ಪಣೋಽಕ್ಷೇಷು ಗ್ಲಹೋಽಕ್ಷಾಸ್ತು ದೇವನಾಃ ಪಾಶಕಾಶ್ಚ ತೇ ॥ ೧೦೪೨
ಪರಿಣಾಯಸ್ತು ಶಾರೀಣಾಂ ಸಮಂತನ್ನಯನೇಽಸ್ತ್ರಿಯಾಮ್ ।
ಅಷ್ಟಾಪದಂ ಶಾರಿಫಲಂ ಪ್ರಾಣಿದ್ಯೂತಂ ಸಮಾಹ್ವಯಃ ॥ ೧೦೪೩

---

೧೦೩೯. ಮೈರೇಯ (ನ), ಆಸವ, ಶೀಧು (ಪು)=ಕಬ್ಬಿನ ಹಾಲು ಮುಂತಾದವುಗಳಿಂದ ಮಾಡಿದ ಬೇರೆ ಬೇರೆ ಜಾತಿಯ ಮದ್ಯ. ಮೇದಕ, ಜಗಲ (ಪು)=ಮದ್ಯವನ್ನು ತಯಾರಿಸಲು ಬೇಕಾಗುವ ವಸ್ತು. ಸಂಧಾನ (ನ), ಅಭಿಷವ (ಪು)=ಮದ್ಯವನ್ನು ತಯಾರಿಸುವುದು (Distilling). ಕಿಣ್ವ (ನ), ನಗ್ನಹೂ (ಪು)=ಹೆಂಡವು ಹುಳಿಯಾಗಲು ಉಪಯೋಗಿಸುವ ವಸ್ತು ; ಕುಡುಕರ ಕೂಗಾಟ.

೧೦೪೦. ಕಾರೋತ್ತರ (ಪು), ಸುರಾಮಂಡ (ನ)=ಹೆಂಡದ ತಿಳಿ. ಆಪಾನ (ನ),ಪಾನಗೋಷ್ಠಿಕಾ (ಸ್ತ್ರೀ)=ಹೆಂಡಕುಡಿಯುವವರ ಗೋಷ್ಠಿ. ಚಷಕ (ಪು. ನ), ಪಾನಪಾತ್ರ (ನ)=ಹೆಂಡವನ್ನು ಕುಡಿಯುವ ಬಟ್ಟಲು. ಸರಕ (ಪು.ನ), ಅನುತರ್ಷಣ (ನ)=ಹೆಂಡವನ್ನು ಬಡಿಸುವುದು ; ಹೆಂಡವನ್ನು ಕುಡಿಯುವ ಬಟ್ಟಲು.

೧೦೪೧. ಧೂರ್ತ, ಅಕ್ಷದೇವಿನ್, ಕಿತವ, ಅಕ್ಷಧೂರ್ತ, ದ್ಯೂತಕೃತ್ (ಪು)=ಜೂಜಾಡತಕ್ಕವನು, ಜೂಜುಕೋರ. ಲಗ್ನಕ, ಪ್ರತಿಭೂ (ಪು)=ಹೊಣೆಗಾರ, 'ಜಾಮೀನು' ಹೇಳಿದವನು. ಸಭಿಕ, ದ್ಯೂತಕಾರಕ (ಪು)=ಜೂಜುಕಟ್ಟೆಯನ್ನು ನಡೆಸುವವನು.

೧೦೪೨. ದ್ಯೂತ (ಪು. ನ), ಅಕ್ಷವತೀ (ಸ್ತ್ರೀ), ಕೈತವ (ನ), ಪಣ (ಪು)=ಜೂಜು. ಪಣ, ಗ್ಲಹ (ಪು)=ಪಗಡೆಯಾಟದಲ್ಲಿ ಕಟ್ಟುವ ಪಂತ, ಪಂದ್ಯ. ಅಕ್ಷ, ದೇವನ, ಪಾಶಕ (ಪು)=ಪಗಡೆಕಾಯಿ.

೧೦೪೩. ಪರಿಣಾಯ (ಪು)=ಪಗಡೆಕಾಯಿ ನಡೆಸುವುದು. ಅಷ್ಟಾಪದ, ಶಾರಿಫಲ



ಉಕ್ತಾ ಭೂರಿಪ್ರಯೋಗತ್ವಾದೇಕಸ್ಮಿನ್ ಯೇಽತ್ರ ಯೌಗಿಕಾಃ ।
ತಾದ್ಧರ್ಮ್ಯಾದನ್ಯತೋ ವೃತ್ತಾವೂಹ್ಯಾ ಲಿಂಗಾಂತರೇಽಪಿ ತೇ ॥ ೧೦೪೪

ಇತಿ ಶೂದ್ರವರ್ಗಃ

ಇತ್ಯಮರಸಿಂಹಕೃತೌ ನಾಮಲಿಂಗಾನುಶಾಸನೇ ।
ದ್ವಿತೀಯಕಾಂಡೋ ಭೂಮ್ಯಾದಿಃ ಸಾಂಗ ಏವ ಸಮರ್ಥಿತಃ ॥ ೧೦೪೫

ಇತಿ ನಾಮಲಿಂಗಾನುಶಾಸನೇ ದ್ವಿತೀಯಕಾಂಡಂ

ಸಂಪೂರ್ಣಮ್

---

(ನ)=ಪಗಡೆಯಾಡುವ ಹಲಿಗೆ. ಪ್ರಾಣಿದ್ಯೂತ (ನ),ಸಮಾಹ್ವಯ (ಪು)=ಕೋಳಿ ಮೊದಲಾದ ಪ್ರಾಣಿಗಳ ಪಂದ್ಯ.

೧೦೪೪. ಇಲ್ಲಿ ಯೌಗಿಕಗಳಾದ ಮಾಲಾಕಾರಾದಿ ಶಬ್ದಗಳನ್ನು ಪ್ರಯೋಗ ಬಾಹುಳ್ಯವನ್ನನುಸರಿಸಿ ಒಂದೇ ಪುಲ್ಲಿಂಗದಲ್ಲಿ ಹೇಳಲಾಗಿದೆ. ಆ ಶಬ್ದಗಳ ಸಿದ್ಧಿಗೆ ಪ್ರಯೋಜಕವಾದ ಧರ್ಮವು ಬೇರೆ ಎಡೆಯಲ್ಲಿ ಬಂದಾಗ ಲಿಂಗಾಂತರಗಳಾದ ಸ್ತ್ರೀ ನಪುಂಸಕಗಳಲ್ಲಿಯೂ ಆ ಶಬ್ದಗಳು ವರ್ತಿಸುತ್ತವೆ.

ವಿವರಣೆ :- ಮಾಲಾಕಾರ, ವೈಣಿಕ ಮುಂತಾದವು ಮಾಲೆಯನ್ನು ಕಟ್ಟುವುದು, ವೀಣೆಯನ್ನು ನುಡಿಸುವುದು ಎಂಬ ಕ್ರಿಯೆಯ ಯೋಗದಿಂದಾದ ಯೌಗಿಕ ಶಬ್ದಗಳು. ಇವು ಪುಲ್ಲಿಂಗಗಳೆಂದು ತಿಳಿಸಲಾಗಿದೆ. ಆದರೆ ಈ ಕ್ರಿಯಾಯೋಗವು ಬೇರೆ ಎಡೆಯಲ್ಲಿಯೂ ಬರಬಹುದು. ಉದಾ : ಮಾಲಾಕಾರೀ ವೈಣಿಕೀ ವಾ ಸ್ತ್ರೀ. ಮಾಲಾಕಾರಂ ವೈಣಿಕಂ ವಾ ಕುಲಮ್. ಆದ್ದರಿಂದ ಇಂಥ ಶಬ್ದಗಳನ್ನು ಅರ್ಥಾನುಸಾರವಾಗಿ ಲಿಂಗಾಂತರದಲ್ಲಿಯೂ ಪ್ರಯೋಗಿಸಬಹುದು.

ಕರಣ, ಮಾಗಧ ಮುಂತಾದವು ಜಾತಿವಾಚಕಗಳು. ಇವು ಯೌಗಿಕಗಳಲ್ಲ. ಇವೂ ಸಹ ಅರ್ಥಾನುಸಾರವಾಗಿ ಕರಣೀ, ಮಾಗಧೀ ಎಂದು ಲಿಂಗಾಂತರವನ್ನು ಪಡೆಯುತ್ತವೆ. ಈ ಸೂಚನೆಯು ಶೂದ್ರವರ್ಗಕ್ಕೆ ಮಾತ್ರವೇ ಅಲ್ಲ, ದ್ವಿತೀಯ ಕಾಂಡದ ಎಲ್ಲ ವರ್ಗಗಳಿಗೂ ಅನ್ವಯಿಸುತ್ತದೆ.

೧೦೪೫. ಅಮರಸಿಂಹನ ಕೃತಿಯಾದ ನಾಮಲಿಂಗಾನುಶಾಸನದಲ್ಲಿ ಭೂಮಿವರ್ಗ ಮುಂತಾದವುಗಳಿಂದ ಯುಕ್ತವಾದ ದ್ವಿತೀಯಕಾಂಡವು ಈ ರೀತಿಯಲ್ಲಿ ಸಾಂಗವಾಗಿ ವಿವರಿಸಲ್ಪಟ್ಟಿತು.

## ತೃತೀಯಕಾಂಡಮ್

ವಿಶೇಷ್ಯನಿಘ್ನೈಃ ಸಂಕೀರ್ಣೈರ್ನಾನಾರ್ಥೈರವ್ಯಯೈರಪಿ ।
ಲಿಂಗಾದಿಸಂಗ್ರಹೈರ್ವರ್ಗಾಸ್ಸಾಮಾನ್ಯೇ ವರ್ಗಸಂಶ್ರಯಾಃ ॥ ೧೦೪೬

### ೧. ವಿಶೇಷ್ಯ ನಿಘ್ನವರ್ಗಃ

ಸ್ತ್ರೀದಾರಾದ್ಯೈರ್ಯದ್ವಿಶೇಷ್ಯಂ ಯಾದೃಶೈಃ ಪ್ರಸ್ತುತಂ ಪದೈಃ ।
ಗುಣದ್ರವ್ಯಕ್ರಿಯಾಶಬ್ದಾಸ್ತಥಾ ಸ್ಯುಸ್ತಸ್ಯ ಭೇದಕಾಃ ॥ ೧೦೪೭

---

## ತೃತೀಯ ಕಾಂಡ

೧೦೪೬. ಈ ಸಾಮಾನ್ಯ ಕಾಂಡದಲ್ಲಿ ವಿಶೇಷ್ಯನಿಘ್ನ, ಸಂಕೀರ್ಣ, ನಾನಾರ್ಥ, ಅವ್ಯಯ, ಲಿಂಗಾದಿಸಂಗ್ರಹ-ಇವುಗಳಿಂದ ಕೂಡಿದ ಐದು ವರ್ಗಗಳಿವೆ. ಈ ವರ್ಗಗಳು, ವರ್ಗಸಂಶ್ರಯಾಃ—ಹಿಂದೆ ಹೇಳಿದ ಸ್ವರ್ಗಾದಿ ವರ್ಗಗಳಿಗೆ ಸಂಬಂಧಿಸಿದ ಸಾಧಾರಣ ಶಬ್ದಗಳಿಂದ ಕೂಡಿವೆ.

ಟಿಪ್ಪಣಿ —ಇಲ್ಲಿ ಉಕ್ತವಾದ ಸುಕೃತಿ ಮುಂತಾದ ಶಬ್ದಗಳು ಹಿಂದೆ ಹೇಳಿದ ದೇವ, ಮನುಷ್ಯ ಮುಂತಾದವುಗಳೊಡನೆ ಪ್ರಯೋಗಿಸಲು ಅರ್ಹವಾದ ಸಾಧಾರಣ ಶಬ್ದಗಳು.

### ವಿಶೇಷ್ಯನಿಘ್ನ ವರ್ಗ

೧೦೪೭. ಈ ವರ್ಗದಲ್ಲಿ ಯಾವ ಯಾವ ಲಿಂಗ ಸಂಖ್ಯಾ ವಿಶಿಷ್ಟವಾದ ಸ್ತ್ರೀ, ದಾರ-ಮುಂತಾದ ಪದಗಳಿಂದ ವಿಶೇಷ್ಯವು ಪ್ರಸ್ತುತವಾಗಿರುತ್ತಿದೆಯೋ, ಅದರ ವಿಶೇಷಣಗಳಾದ ಗುಣ ದ್ರವ್ಯಕ್ರಿಯಾ ಶಬ್ದಗಳು ಆಯಾ ಲಿಂಗ ಸಂಖ್ಯೆಗಳನ್ನೇ ಪಡೆಯುತ್ತವೆ.

ವಿವರಣೆ—ವಿಶೇಷಣವು ಯಾವಾಗಲೂ ಗುಣ ದ್ರವ್ಯಕ್ರಿಯೆಗಳಲ್ಲಿ ಯಾವುದಾದರೊಂದನ್ನು ನಿಮಿತ್ತವಾಗಿಟ್ಟುಕೊಂಡು ಪ್ರವರ್ತಿಸುತ್ತದೆ. ಹೇಗೆಂದರೆ—ಸುಕೃತಿ, ದಂಡಿ, ಪಾಚಕ—ಇವು ಮೂರೂ ವಿಶೇಷಣಗಳೇ. ಸುಕೃತಿ ಶಬ್ದದಲ್ಲಿ ಸುಕೃತವೆಂಬ ಗುಣವೂ, ದಂಡಿ ಶಬ್ದದಲ್ಲಿ ದಂಡವೆಂಬ ದ್ರವ್ಯವೂ, ಪಾಚಕ ಶಬ್ದದಲ್ಲಿ ಪಾಕವೆಂಬ ಕ್ರಿಯೆಯೂ ಆಯಾ ಶಬ್ದಗಳ ಸಿದ್ಧಿಗೆ ನಿಮಿತ್ತಗಳು. ಯಾವ ವಿಶೇಷಣವನ್ನು ತೆಗೆದುಕೊಂಡರೂ ಗುಣದ್ರವ್ಯಕ್ರಿಯೆ ಗಳಲ್ಲೊಂದು ಪ್ರವೃತ್ತಿ ನಿಮಿತ್ತವಾಗಿ ಇರುತ್ತದೆ. ಈ ಶಬ್ದಗಳು ವಿಶೇಷ್ಯದ



ಕ್ಷೇಮಂಕರೋಽರಿಷ್ಟತಾತಿಶ್ಶಿವತಾತಿಶ್ಶಿವಂಕರಃ ।
ಸುಕೃತೀ ಪುಣ್ಯವಾನ್ ಧನ್ಯೋ ಮಹೇಚ್ಛಸ್ತು ಮಹಾಶಯಃ ॥ ೧೦೪೮
ಹೃದಯಾಲುಸ್ಸುಹೃದಯೋ ಮಹೋತ್ಸಾಹೋ ಮಹೋದ್ಯಮಃ ।
ಪ್ರವೀಣೇ ನಿಪುಣಾಭಿಜ್ಞವಿಜ್ಞನಿಷ್ಣಾತಶಿಕ್ಷಿತಾಃ ॥ ೧೦೪೯
ವೈಜ್ಞಾನಿಕಃ ಕೃತಮುಖಃ ಕೃತೀ ಕುಶಲ ಇತ್ಯಪಿ ।
ಪೂಜ್ಯಃ ಪ್ರತೀಕ್ಷ್ಯಸ್ಸಾಂಶಯಿಕಸ್ಸಂಶಯಾಪನ್ನಮಾನಸಃ ॥ ೧೦೫೦
ದಕ್ಷಿಣೀಯೋ ದಕ್ಷಿಣಾರ್ಹಸ್ತತ್ರ ದಕ್ಷಿಣ್ಯ ಇತ್ಯಪಿ ।
ಸ್ಯುರ್ವದಾನ್ಯಸ್ಥೂಲಲಕ್ಷದಾನಶೌಂಡಾ ಬಹುಪ್ರದೇ ॥ ೧೦೫೧

---

ಲಿಂಗ ಸಂಖ್ಯೆ ಗಳನ್ನನುಸರಿಸುತ್ತವೆ. ಉದಾ : ಸುಕೃತಿನೀ ಸ್ತ್ರೀ, ಸುಕೃತಿನೋ ದಾರಾಃ, ಸುಕೃತಿ ಕಲತ್ರಮ್.

ಈ ವರ್ಗದಲ್ಲಿ ಹೇಳುವ ಶಬ್ದಗಳು ಮೂರು ಲಿಂಗಗಳಲ್ಲಿಯೂ ಇರುತ್ತವೆ. ಸ್ತ್ರೀಲಿಂಗದಲ್ಲಿ ರೂಪವಿಶೇಷಗಳಿದ್ದರೆ, ಅಲ್ಲಲ್ಲಿ ತಿಳಿಸಲಾಗುವುದು. ಕೆಲವು ಪ್ರಸಿದ್ಧ ಪದಗಳ ಅರ್ಥವನ್ನು ಪುಲ್ಲಿಂಗಾನುಸಾರವಾಗಿ ಬರೆದಿದೆ.

೧೦೪೮. ಕ್ಷೇಮಂಕರ, ಅರಿಷ್ಟತಾತಿ, ಶಿವತಾತಿ, ಶಿವಂಕರ=ಶುಭವನ್ನು ಮಾಡುವವನು. ಸುಕೃತಿನ್, ಪುಣ್ಯವತ್, ಧನ್ಯ (—ಸ್ತ್ರೀ. ಸುಕೃತಿನೀ, ಪುಣ್ಯವತೀ)=ಪುಣ್ಯಶಾಲಿ. ಮಹೇಚ್ಛ, ಮಹಾಶಯ=ಶ್ರೇಷ್ಠವಾದ ಅಭಿಪ್ರಾಯವುಳ್ಳವನು.

೧೦೪೯—೧೦೫೦. ಹೃದಯಾಲು, ಸು (ಸ)ಸಹೃದಯ=ಶುದ್ಧ ಮನಸ್ಸುಳ್ಳವನು. ಮಹೋತ್ಸಾಹ, ಮಹೋದ್ಯಮ=ಮಹತ್ತರವಾದ ಕಾರ್ಯವನ್ನು ಸಾಧಿಸಲು ಯತ್ನಿಸತಕ್ಕವನು. ಪ್ರವೀಣ, ನಿಪುಣ, ಅಭಿಜ್ಞ, ವಿಜ್ಞ, ನಿಷ್ಣಾತ, ಶಿಕ್ಷಿತ, ವೈಜ್ಞಾನಿಕ, ಕೃತಮುಖ, ಕೃತಿನ್, ಕುಶಲ (—ಸ್ತ್ರೀ. ವೈಜ್ಞಾನಿಕೀ, ಕೃತಿನೀ)=ಪ್ರವೀಣ, ಜಾಣ. ಪೂಜ್ಯ, ಪ್ರತೀಕ್ಷ್ಯ= ಪೂಜೆಗೆ ಅರ್ಹನಾದವನು. ಸಾಂಶಯಿಕ=(—ಸ್ತ್ರೀ. ಸಾಂಶಯಿಕೀ)=ಸಂದೇಹ ಪಡತಕ್ಕವನು ; ಸಂದೇಹಕ್ಕೆ ವಿಷಯನಾದವನು.

೧೦೫೧. ದಕ್ಷಿಣೀಯ, ದಕ್ಷಿಣಾರ್ಹ, ದಕ್ಷಿಣ್ಯ=ದಕ್ಷಿಣೆಗೆ ಅರ್ಹನಾದವನು. ವದಾನ್ಯ, ಸ್ಥೂಲಲಕ್ಷ (ಕ್ಷ್ಯ), ದಾನಶೌಂಡ, ಬಹುಪ್ರದ=ಬಹಳವಾಗಿ ದಾನಮಾಡತಕ್ಕವನು.

೧೦೫೨. ಜೈವಾತೃಕ, ಆಯುಷ್ಮತ್ (—ಸ್ತ್ರೀ. ಆಯುಷ್ಮತೀ)=ದೀರ್ಘಾಯು. ಅಂತರ್ವಾಣಿ, ಶಾಸ್ತ್ರವಿದ್=ಶಾಸ್ತ್ರಜ್ಞ. ಪರೀಕ್ಷಕ, ಕಾರಣಿಕ (—ಸ್ತ್ರೀ. ಪರೀಕ್ಷಿಕಾ,

ಜೈವಾತೃಕಸ್ಸ್ಯಾದಾಯುಷ್ಮಾನಂತರ್ವಾಣಿಸ್ತು ಶಾಸ್ತ್ರವಿತ್ ।
ಪರೀಕ್ಷಕಃ ಕಾರಣಿಕೋ ವರದಸ್ತು ಸಮರ್ಧಕಃ ॥ ೧೦೫೨
ಹರ್ಷಮಾಣೋ ವಿಕುರ್ವಾಣಃ ಪ್ರಮನಾ ಹೃಷ್ಟಮಾನಸಃ ।
ದುರ್ಮನಾ ವಿಮನಾ ಅಂತರ್ಮನಾಸ್ಸ್ಯಾದುತ್ಕ ಉನ್ಮನಾಃ ॥ ೧೦೫೩
ದಕ್ಷಿಣೇ ಸರಲೋದಾರೌ ಸುಕಲೋ ದಾತೃಭೋಕ್ತರಿ ।
ತತ್ಪರೇ ಪ್ರಸಿತಾಸಕ್ತಾವಿಷ್ಟಾರ್ಥೋದ್ಯುಕ್ತ ಉತ್ಸುಕಃ ॥ ೧೦೫೪
ಪ್ರತೀತೇ ಪ್ರಥಿತಖ್ಯಾತವಿತ್ತವಿಜ್ಞಾತವಿಶ್ರುತಾಃ ।
ಗುಣ್ಯೈಃ ಪ್ರತೀತೇ ತು ಕೃತಲಕ್ಷಣಾಹತಲಕ್ಷಣೌ ॥ ೧೦೫೫
ಇಭ್ಯ ಆಢ್ಯೋ ಧನೀ ಸ್ವಾಮೀ ತ್ವೀಶ್ವರಃ ಪತಿರೀಶಿತಾ ।
ಅಧಿಭೂರ್ನಾಯಕೋ ನೇತಾ ಪ್ರಭುಃ ಪರಿವೃಢೋಽಧಿಪಃ ॥ ೧೦೫೬
ಅಧಿಕರ್ದ್ಧಿಸ್ಸಮೃದ್ಧಸ್ಸ್ಯಾತ್ಕುಟುಂಬವ್ಯಾಪೃತಸ್ತು ಯಃ ।
ಸ್ಯಾದಭ್ಯಾಗಾರಿಕಸ್ತಸ್ಮಿನ್ನುಪಾಧಿಶ್ಚ ಪುಮಾನಯಮ್ ॥ ೧೦೫೭

---

ಕಾರಣಿಕೀ)=ಪರೀಕ್ಷಿಸುವವನು. ವರದ, ಸಮರ್ಧಕ (—ಸ್ತ್ರೀ. ಸಮರ್ಧಿಕಾ)=ಬೇಡಿದುದನ್ನು ಕೊಡತಕ್ಕವನು.

೧೦೫೩. ಹರ್ಷಮಾಣ, ವಿಕುರ್ವಾಣ, ಪ್ರಮನಸ್, ಹೃಷ್ಟಮಾನಸ=ಸಂತುಷ್ಟ. ದುರ್ಮನಸ್, ವಿಮನಸ್, ಅಂತರ್ಮನಸ್=ಖೇದದಿಂದ ಕೂಡಿದ ಮನಸ್ಸುಳ್ಳವನು. ಉತ್ಕ, ಉನ್ಮನಸ್=ಪ್ರಿಯವಸ್ತುವನ್ನು ಪಡೆಯಲು ಮನಸ್ಸುಳ್ಳವನು.

೧೦೫೪. ದಕ್ಷಿಣ, ಸರಲ, ಉದಾರ=ಋಜುಬುದ್ಧಿಯವನು. ಸುಕಲ=ತ್ಯಾಗಭೋಗಗಳುಳ್ಳವನು. ತತ್ಪರ, ಪ್ರಸಿತ, ಆಸಕ್ತ=ಆಸಕ್ತಿಯುಳ್ಳವನು. ಉತ್ಸುಕ=ಇಷ್ಟವನ್ನು ಪಡೆಯಲು ಉತ್ಸಾಹವುಳ್ಳವನು.

೧೦೫೫. ಪ್ರತೀತ, ಪ್ರಥಿತ, ಖ್ಯಾತ, ವಿತ್ತ, ವಿಜ್ಞಾತ, ವಿಶ್ರುತ=ಪ್ರಸಿದ್ಧ. ಕೃತಲಕ್ಷಣ, ಆಹತಲಕ್ಷಣ=ಸದ್ಗುಣಗಳಿಂದ ಪ್ರಸಿದ್ಧ.

೧೦೫೬. ಇಭ್ಯ, ಆಢ್ಯ, ಧನಿನ್, (—ಸ್ತ್ರೀ. ಧನಿನೀ)=ಹಣವಂತ. ಸ್ವಾಮಿನ್, ಈಶ್ವರ, ಪತಿ, ಈಶಿತೃ, ಅಧಿಭೂ, ನಾಯಕ, ನೇತೃ, ಪ್ರಭು, ಪರಿವೃಢ, ಅಧಿಪ (—ಸ್ತ್ರೀ. ಸ್ವಾಮಿನೀ, ಈಶಿತ್ರೀ, ನಾಯಿಕಾ, ನೇತ್ರೀ, ಪ್ರಭ್ವೀ—ಪ್ರಭು)=ಒಡೆಯ.

೧೦೫೭. ಅಧಿಕರ್ದ್ಧಿ, ಸಮೃದ್ಧ=ಬಹಳ ಸಂಪತ್ತುಳ್ಳವನು. ಅಭ್ಯಾಗಾರಿಕ (—ಸ್ತ್ರೀ. ಅಭ್ಯಾಗಾರಿಕಾ) ಉಪಾಧಿ (ನಿತ್ಯಪುಲ್ಲಿಂಗ)=ಕುಟುಂಬ ಪೋಷಣೆಯಲ್ಲಿ ಆಸಕ್ತ.



ವರಾಂಗರೂಪೋಪೇತೋ ಯಃ ಸಿಂಹಸಂಹನನೋ ಹಿ ಸಃ ।
ನಿರ್ವಾರ್ಯಃ ಕಾರ್ಯಕರ್ತಾ ಯಃ ಸಂಪನ್ನಸ್ಸತ್ತ್ವಸಂಪದಾ ॥ ೧೦೫೮
ಅವಾಚಿ ಮೂಕೋಽಥ ಮನೋಜವಸಃ ಪಿತೃಸನ್ನಿಭಃ ।
ಸತ್ಕೃತ್ಯಾಲಂಕೃತಾಂ ಕನ್ಯಾಂ ಯೋ ದದಾತಿ ಸ ಕೂಕುದಃ ॥ ೧೦೫೯
ಲಕ್ಷ್ಮೀವಾನ್ ಲಕ್ಷ್ಮಣಶ್ಶ್ರೀಲಶ್ಶ್ರೀಮಾನ್ ಸ್ನಿಗ್ಧಸ್ತು ವತ್ಸಲಃ ।
ಸ್ಯಾದ್ದಯಾಲುಃ ಕಾರುಣಿಕಃ ಕೃಪಾಲುಸ್ಸೂರತಸ್ಸಮಾಃ ॥ ೧೦೬೦
ಸ್ವತಂತ್ರೋಽಪಾವೃತಃ ಸ್ವೈರೀ ಸ್ವಚ್ಛಂದೋ ನಿರವಗ್ರಹಃ ।
ಪರತಂತ್ರಃ ಪರಾಧೀನಃ ಪರವಾನ್ನಾಥವಾನಪಿ ॥ ೧೦೬೧
ಅಧೀನೋ ನಿಘ್ನ ಆಯತ್ತೋಽಸ್ವಚ್ಛಂದೋ ಗೃಹ್ಯಕೋಽಪ್ಯಸೌ ।
ಖಲಪೂಃ ಸ್ಯಾದ್ಬಹುಕರೋ ದೀರ್ಘಸೂತ್ರಶ್ಚಿರಕ್ರಿಯಃ ॥ ೧೦೬೨

---

೧೦೫೮. ಸಿಂಹಸಂಹನನ=ದೃಢವಾದ ಮೈಕಟ್ಟುಳ್ಳ ರೂಪಶಾಲಿ. ನಿರ್ವಾರ್ಯ (ನಿರ್ಧಾರ್ಯ)=ಧೈರ್ಯದಿಂದ ಕಾರ್ಯವನ್ನು ನಡೆಸುವ ಸತ್ತ್ವಶಾಲಿ.

೧೦೫೯. ಮೂಕ=ಮೂಗ, ಮಾತುಬಾರದವನು. ಮನೋಜವಸ[1]=ತಂದೆಗೆ ಸಮಾನನಾದವನು (ಚಿಕ್ಕಪ್ಪ ಇತ್ಯಾದಿ). ಕೂಕುದ=ಅಲಂಕೃತಳಾದ ಕನ್ಯೆಯನ್ನು ಸತ್ಕಾರಪೂರ್ವಕವಾಗಿ ಮದುವೆಮಾಡಿಕೊಡತಕ್ಕವನು.

೧೦೬೦. ಲಕ್ಷ್ಮೀವತ್, ಲಕ್ಷ್ಮಣ, ಶ್ರೀಲ, ಶ್ರೀಮತ್ (—ಸ್ತ್ರೀ. ಲಕ್ಷ್ಮೀವತೀ, ಶ್ರೀಮತೀ) =ಭಾಗ್ಯಶಾಲಿ ; ತೇಜಸ್ವಿ ; ಲಕ್ಷಣವಂತ. ಸ್ನಿಗ್ಧ, ವತ್ಸಲ=ಪ್ರೀತಿಯುಳ್ಳವನು. ದಯಾಲು, ಕಾರುಣಿಕ, ಕೃಪಾಲು, ಸೂರತ (—ಸ್ತ್ರೀ. ಕಾರುಣಿಕೀ)=ಕಾರುಣ್ಯವುಳ್ಳವನು.

೧೦೬೧. ಸ್ವತಂತ್ರ, ಅಪಾವೃತ, ಸ್ವೈರಿನ್, ಸ್ವಚ್ಛಂದ, ನಿರವಗ್ರಹ (—ಸ್ತ್ರೀ. ಸ್ವೈರಿಣೀ) =ಸ್ವತಂತ್ರ. ಪರತಂತ್ರ, ಪರಾಧೀನ, ಪರವತ್, ನಾಥವತ್ (—ಸ್ತ್ರೀ. ಪರವತೀ, ನಾಥವತೀ) =ಪರಾಧೀನ.

೧೦೬೨. ಅಧೀನ, ನಿಘ್ನ, ಆಯತ್ತ, ಅಸ್ವಚ್ಛಂದ, ಗೃಹ್ಯಕ=ಅಧೀನ. ಪರತಂತ್ರಾದಿ ಶಬ್ದಗಳು ಪರ್ಯಾಯಗಳೆಂದು ಕೆಲವರು. ಖಲಪೂ, ಬಹುಕರ (—ಸ್ತ್ರೀ. ಬಹುಕರೀ)=ಕಣವನ್ನು ಗುಡಿಸುವವನು. ದೀರ್ಘಸೂತ್ರ, ಚಿರಕ್ರಿಯ=ಸಾವಕಾಶವಾಗಿ ಕೆಲಸಮಾಡುವವನು.

---

[1] ಮನೋಜವ, ಮನೋಜವಸ್ ಎಂಬ ರೂಪಾಂತರಗಳೂ ಉಂಟು.

ಜಾಲ್ಮೋಽಸಮೀಕ್ಷ್ಯಕಾರೀ ಸ್ಯಾತ್ಕುಂಠೋ ಮಂದಃ ಕ್ರಿಯಾಸು ಯಃ ।
ಕರ್ಮಕ್ಷಮೋಽಲಂಕರ್ಮೀಣಃ ಕ್ರಿಯಾವಾನ್ ಕರ್ಮಸೂದ್ಯತಃ ॥ ೧೧೬೩
ಸ ಕಾರ್ಮಃ ಕರ್ಮಶೀಲೋ ಯಃ ಕರ್ಮಶೂರಸ್ತು ಕರ್ಮಠಃ ।
ಭರಣ್ಯಭುಕ್ಕರ್ಮಕರಃ ಕರ್ಮಕಾರಸ್ತು ತತ್ಕ್ರಿಯಃ ॥ ೧೧೬೪
ಅಪಸ್ನಾತೋ ಮೃತಸ್ನಾತ ಆಮಿಷಾಶೀ ತು ಶೌಷ್ಕಲಃ ।
ಬುಭುಕ್ಷಿತಃ ಸ್ಯಾತ್ ಕ್ಷುಧಿತೋ ಜಿಘತ್ಸುರಶನಾಯಿತಃ ॥ ೧೧೬೫
ಪರಾನ್ನಃ ಪರಪಿಂಡಾದೋ ಭಕ್ಷಕೋ ಘಸ್ಮರೋಽದ್ಮರಃ ।
ಆದ್ಯೂನಃ ಸ್ಯಾದೌದರಿಕೋ ವಿಜಿಗೀಷಾವಿವರ್ಜಿತೇ ॥ ೧೧೬೬
ಉಭಾವಾತ್ಮಂಭರಿಃ ಕುಕ್ಷಿಂಭರಿಃ ಸ್ವೋದರಪೂರಕೇ ।
ಸರ್ವಾನ್ನೀನಸ್ತು ಸರ್ವಾನ್ನಭೋಜೀ ಗೃಧ್ನುಸ್ತು ಗರ್ಧನಃ ॥ ೧೧೬೭

---

೧೧೬೩. ಜಾಲ್ಮ, ಅಸಮೀಕ್ಷ್ಯಕಾರಿನ್ (—ಸ್ತ್ರೀ.—ಕಾರಿಣೀ)=ವಿಚಾರವಿಲ್ಲದೆ ಕೆಲಸ ಮಾಡತಕ್ಕವನು. ಕುಂಠ=ಕಾರ್ಯದಲ್ಲಿ ದಡ್ಡ ; ಸೋಮಾರಿ. ಕರ್ಮಕ್ಷಮ, ಅಲಂಕರ್ಮೀಣ=ಕಾರ್ಯದಕ್ಷ. ಕ್ರಿಯಾವತ್ (—ಸ್ತ್ರೀ. —ವತೀ)=ಕಾರ್ಯದಲ್ಲಿ ತೊಡಗಿದವನು.

೧೧೬೪. ಕಾರ್ಮ, ಕರ್ಮಶೀಲ (—ಸ್ತ್ರೀ. ಕಾರ್ಮೀ)=ಸದಾ ಕಾರ್ಯನಿರತ. ಕರ್ಮಶೂರ, ಕರ್ಮಠ=ಕರ್ಮನಿಷ್ಠ. ಭರಣ್ಯಭುಜ್, ಕರ್ಮಕರ (—ಸ್ತ್ರೀ. ಕರ್ಮಕರೀ)=ಕೂಲಿಗಾಗಿ ಕೆಲಸಮಾಡತಕ್ಕವನು. ಕರ್ಮಕಾರ (— ಸ್ತ್ರೀ. ಕರ್ಮಕಾರೀ)=ಕೆಲಸಮಾಡತಕ್ಕವನು ; ಕೆಲಸಗಾರ.

೧೧೬೫. ಅಪಸ್ನಾತ, ಮೃತಸ್ನಾತ=ಸತ್ತವನಿಗಾಗಿ ಸ್ನಾನಮಾಡುವವನು. ಆಮಿಷಾಶಿನ್, ಶೌಷ್ಕಲ (—ಸ್ತ್ರೀ.—ಶಿನೀ,—ಲೀ)= ಮಾಂಸಾಹಾರಿ. ಬುಭುಕ್ಷಿತ, ಕ್ಷುಧಿತ, ಜಿಘತ್ಸು, ಅಶನಾಯಿತ=ಹಸಿದವನು.

೧೧೬೬. ಪರಾನ್ನ, ಪರಪಿಂಡಾದ (—ಸ್ತ್ರೀ. ಪರಪಿಂಡಾದೀ)=ಪರಾನ್ನ ಜೀವಿ. ಭಕ್ಷಕ, ಘಸ್ಮರ, ಅದ್ಮರ (—ಸ್ತ್ರೀ. ಭಕ್ಷಿಕಾ)=ತಿನ್ನುವವನು. ಆದ್ಯೂನ, ಔದರಿಕ (—ಸ್ತ್ರೀ. ಔದರಿಕೀ)=ಸೋಮಾರಿ, ಉಂಡಾಡಿ.

೧೧೬೭—೧೧೬೮. ಆತ್ಮಂಭರಿ, ಕುಕ್ಷಿಂಭರಿ=ತನ್ನ ಹೊಟ್ಟೆಯನ್ನು ತುಂಬಿಕೊಳ್ಳತಕ್ಕವನು. ಸರ್ವಾನ್ನೀನ, ಸರ್ವಾನ್ನಭೋಜಿನ್ (—ಸ್ತ್ರೀ.—ಭೋಜಿನೀ)=ನಿಯಮರಹಿತನಾಗಿ ಎಲ್ಲರ ಅನ್ನವನ್ನು ತಿನ್ನತಕ್ಕವನು. ಗೃಧ್ನು, ಗರ್ಧನ, ಲುಬ್ಧ, ಅಭಿಲಾಷುಕ,



ಲುಬ್ಧೋಽಭಿಲಾಷುಕಸ್ತೃಷ್ಣಕ್ಸಮೌ ಲೋಲುಪಲೋಲುಭೌ ।
ಸೋನ್ಮಾದಸ್ತೂನ್ಮದಿಷ್ಣುಃ ಸ್ಯಾದವಿನೀತಸ್ಸಮುದ್ಧತಃ ॥ ೧೧೬೮
ಮತ್ತೇ ಶೌಂಡೋತ್ಕಟಕ್ಷೀಬಾಃ ಕಾಮುಕೇ ಕಮಿತಾಽನುಕಃ ।
ಕಮ್ರಃ ಕಾಮಯಿತಾಽಭೀಕಃ ಕಮನಃ ಕಾಮನೋಽಭಿಕಃ ॥ ೧೧೬೯
ವಿಧೇಯೋ ವಿನಯಗ್ರಾಹೀ ವಚನೇ ಸ್ಥಿತ ಆಶ್ರವಃ ।
ವಶ್ಯಃ ಪ್ರಣೇಯೋ ನಿಭೃತವಿನೀತಪ್ರಶ್ರಿತಾಸ್ಸಮಾಃ ॥ ೧೧೭೦
ಧೃಷ್ಟೇ ಧೃಷ್ಣಗ್ವಿಯಾತಶ್ಚ ಪ್ರಗಲ್ಭಃ ಪ್ರತಿಭಾನ್ವಿತೇ ।
ಸ್ಯಾದಧೃಷ್ಟೇ ತು ಶಾಲೀನೋ ವಿಲಕ್ಷೋ ವಿಸ್ಮಯಾನ್ವಿತೇ ॥ ೧೧೭೧
ಅಧೀರೇ ಕಾತರಸ್ತ್ರಸ್ನೌ ಭೀರುಭೀರುಕಭೀಲುಕಾಃ ।
ಆಶಂಸುರಾಶಂಸಿತರಿ ಗೃಹಯಾಲುರ್ಗ್ರಹೀತರಿ ॥ ೧೧೭೨
ಶ್ರದ್ಧಾಲುಃ ಶ್ರದ್ಧಯಾ ಯುಕ್ತೇ ಪತಯಾಲುಸ್ತು ಪಾತುಕೇ ।
ಲಜ್ಜಾಶೀಲೇ ಽಪತ್ರಪಿಷ್ಣುರ್ವಂದಾರುರಭಿವಾದಕೇ ॥ ೧೧೭೩

---

ತೃಷ್ಣಜ್=ಆಸೆಯುಳ್ಳವನು. ಲೋಲುಪ, ಲೋಲುಭ=ಅತ್ಯಾಸೆಯುಳ್ಳವನು. ಸೋನ್ಮಾದ, ಉನ್ಮದಿಷ್ಣು=ಭೂತಾವಿಷ್ಟನಾದವನು ; ಹುಚ್ಚ. ಅವಿನೀತ, ಸಮುದ್ಧತ=ವಿನಯರಹಿತ.

೧೧೬೯. ಮತ್ತ, ಶೌಂಡ, ಉತ್ಕಟ, ಕ್ಷೀಬ=ಮದ್ಯಸೇವನೆಯಿಂದ ಮತ್ತನಾದವನು. ಕಾಮುಕ, ಕಮಿತೃ, ಅನುಕ, ಕಮ್ರ, ಕಾಮಯಿತೃ, ಅಭೀಕ, ಕಮನ, ಕಾಮನ, ಅಭಿಕ (ಸ್ತ್ರೀ. ಕಮಿತ್ರೀ, ಕಾಮಯಿತ್ರೀ)=ಕಾಮುಕ.

೧೧೭೦. ವಿಧೇಯ, ವಿನಯಗ್ರಾಹಿನ್ (ಸ್ತ್ರೀ. —ಗ್ರಾಹಿಣೀ), ವಚನೇಸ್ಥಿತ, ಆಶ್ರವ, ವಶ್ಯ, ಪ್ರಣೇಯ, ನಿಭೃತ, ವಿನೀತ, ಪ್ರಶ್ರಿತ=ಹೇಳಿದಂತೆ ಕೇಳುವವನು, ವಿನೀತ.

೧೧೭೧. ಧೃಷ್ಟ, ಧೃಷ್ಣಜ್, ವಿಯಾತ=ಅವಿನೀತ, ಒರಟ. ಪ್ರಗಲ್ಭ=ಪ್ರತಿಭಾಶಾಲಿ. ಅಧೃಷ್ಟ, ಶಾಲೀನ=ಮೃದುಸ್ವಭಾವದವನು. ವಿಲಕ್ಷ, ವಿಸ್ಮಯಾನ್ವಿತ=ಆಶ್ಚರ್ಯಪಟ್ಟವನು.

೧೧೭೨. ಅಧೀರ, ಕಾತರ=ಧೈರ್ಯವಿಲ್ಲದವನು. ತ್ರಸ್ನು, ಭೀರು, ಭೀರುಕ, ಭೀಲುಕ=ಹೆದರುವವನು. ಆಶಂಸು, ಆಶಂಸಿತೃ (ಸ್ತ್ರೀ. ಆಶಂಸಿತ್ರೀ)= ಕೋರುವವನು. ಗೃಹಯಾಲು, ಗೃಹೀತೃ (ಸ್ತ್ರೀ. ಗೃಹೀತ್ರೀ)=ತೆಗೆದುಕೊಳ್ಳತಕ್ಕವನು.

೧೧೭೩. ಶ್ರದ್ಧಾಲು=ಶ್ರದ್ಧೆಯುಳ್ಳವನು. ಪತಯಾಲು, ಪಾತುಕ=ಬೀಳುವ ಸ್ವಭಾವದವನು. ಲಜ್ಜಾಶೀಲ, ಅಪತ್ರಪಿಷ್ಣು=ನಾಚಿಕೆಯ ಸ್ವಭಾವದವನು. ವಂದಾರು, ಅಭಿವಾದಕ (ಸ್ತ್ರೀ. ಅಭಿವಾದಿಕಾ=ನಮಸ್ಕರಿಸುವವನು.

ಜಡೋಽಜ್ಞೋ ಏಡಮೂಕಸ್ತು ವಕ್ತುಂ ಶ್ರೋತುಮಶಿಕ್ಷಿತೇ ।
ತೂಷ್ಣೀಂಶೀಲಸ್ತು ತೂಷ್ಣೀಕೋ ನಗ್ನೋಽವಾಸಾ ದಿಗಂಬರಃ ॥ ೧೦೮೪
ನಿಷ್ಕಾಸಿತೋಽವಕೃಷ್ಟಸ್ಸ್ಯಾದಪಧ್ವಸ್ತಸ್ತು ಧಿಕ್ಕೃತಃ ।
ಆತ್ತಗರ್ವೋಽಭಿಭೂತಸ್ಸ್ಯಾದ್ದಾಪಿತಸ್ಸಾಧಿತಸ್ಸಮೌ ॥ ೧೦೮೫
ಪ್ರತ್ಯಾದಿಷ್ಟೋ ನಿರಸ್ತಸ್ಸ್ಯಾತ್ಪ್ರತ್ಯಾಖ್ಯಾತೋ ನಿರಾಕೃತಃ ।
ನಿಕೃತಸ್ಸ್ಯಾತ್ ವಿಪ್ರಕೃತೋ ವಿಪ್ರಲಬ್ಧಸ್ತು ವಂಚಿತಃ ॥ ೧೦೮೬
ಮನೋಹತಃ ಪ್ರತಿಹತಃ ಪ್ರತಿಬದ್ಧೋ ಹತಶ್ಚ ಸಃ ।
ಅಧಿಕ್ಷಿಪ್ತಃ ಪ್ರತಿಕ್ಷಿಪ್ತೋ ಬದ್ಧೇ ಕೀಲಿತಸಂಯತೌ ॥ ೧೦೮೭
ಆಪನ್ನ ಆಪತ್ಪ್ರಾಪ್ತಃ ಸ್ಯಾತ್ಕಾಂದಿಶೀಕೋ ಭಯದ್ರುತಃ ।
ಆಕ್ಷಾರಿತಃ ಕ್ಷಾರಿತೋಽಭಿಶಸ್ತೇ ಸಂಕಸುಕೋಽಸ್ಥಿರೇ ॥ ೧೦೮೮

---

೧೦೮೪. ಜಡ, ಅಜ್ಞ=ಜಡಬುದ್ಧಿ, ಮೂರ್ಖ. ಏಡಮೂಕ=ಕಿವುಡನೂ ಮೂಕನೂ ಆದವನು. ತೂಷ್ಣೀಂಶೀಲ, ತೂಷ್ಣೀಕ=ಮಾತಾಡದೆ ಸುಮ್ಮನಿರುವವನು. ನಗ್ನ, ಅವಾಸಸ್, ದಿಗಂಬರ=ಬೆತ್ತಲೆಯಾದವನು.

೧೦೮೫. ನಿಷ್ಕಾಸಿತ, ಅವಕೃಷ್ಟ=ಹೊರಗೆ ತಳ್ಳಲ್ಪಟ್ಟವನು. ಅಪಧ್ವಸ್ತ, ಧಿಕ್ಕೃತ=ತಿರಸ್ಕರಿಸಲ್ಪಟ್ಟವನು. ಆತ್ತಗರ್ವ (—ಗಂಧ), ಅಭಿಭೂತ=ಗರ್ವಿ ; ತಿರಸ್ಕೃತ (ಅಪಧ್ವಸ್ತಾದಿ ನಾಲ್ಕು ಶಬ್ದಗಳೂ ಪರ್ಯಾಯಗಳೆಂದು ಕೆಲವರು.) ದಾಪಿತ, ಸಾಧಿತ=ಕೊಡಿಸಲ್ಪಟ್ಟವನು ; ತೆರಿಗೆಯನ್ನು ತೆರಿಸಲ್ಪಟ್ಟವನು.

೧೦೮೬. ಪ್ರತ್ಯಾದಿಷ್ಟ, ನಿರಸ್ತ, ಪ್ರತ್ಯಾಖ್ಯಾತ, ನಿರಾಕೃತ=ನಿರಾಕರಿಸಲ್ಪಟ್ಟವನು. ನಿಕೃತ, ವಿಪ್ರಕೃತ=ಅಪಕಾರಮಾಡಲ್ಪಟ್ಟವನು. ವಿಪ್ರಲಬ್ಧ, ವಂಚಿತ=ಮೋಸಗೊಳಿಸಲ್ಪಟ್ಟವನು.

೧೦೮೭. ಮನೋಹತ, ಪ್ರತಿಹತ, ಪ್ರತಿಬದ್ಧ, ಹತ=ಕಂಗೆಟ್ಟವನು, ಅಧಿಕ್ಷಿಪ್ತ, ಪ್ರತಿಕ್ಷಿಪ್ತ=ಆಕ್ಷೇಪಣೆಗೆ ಗುರಿಯಾದವನು. ಬದ್ಧ, ಕೀಲಿತ, ಸಂಯತ=ಕಟ್ಟಲ್ಪಟ್ಟವನು.

೧೦೮೮. ಆಪನ್ನ=ಆಪತ್ತಿಗೆ ಗುರಿಯಾದವನು. ಕಾಂದಿಶೀಕ, ಭಯದ್ರುತ (ಸ್ತ್ರೀ. ಕಾಂದಿಶೀಕೀ)=ಹೆದರಿ ಓಡಿಹೋದವನು. ಆಕ್ಷಾರಿತ, ಕ್ಷಾರಿತ, ಅಭಿಶಸ್ತ=ದೋಷಾರೋಪಣೆಗೆ ಗುರಿಯಾದವನು (Accused). ಸಂಕಸುಕ, ಅಸ್ಥಿರ=ಚಂಚಲ ಸ್ವಭಾವದವನು.



ವ್ಯಸನಾರ್ತೋಪರಕ್ತೌ ದ್ವೌ ವಿಹಸ್ತವ್ಯಾಕುಲೌ ಸಮೌ ।
ವಿಕ್ಲವೋ ವಿಹ್ವಲಃ ಸ್ಯಾತ್ತು ವಿವಶೋಽರಿಷ್ಟದುಷ್ಟಧೀಃ ॥ ೧೦೮೯
ಕಶ್ಯಃ ಕಶಾರ್ಹೇ ಸನ್ನದ್ಧೇ ತ್ವಾತತಾಯೀ ವಧೋದ್ಯತೇ ।
ದ್ವೇಷ್ಯೇ ತ್ವಕ್ಷಿಗತೋ ವಧ್ಯಶ್ಶೀರ್ಷಚ್ಛೇದ್ಯ ಇಮೌ ಸಮೌ ॥ ೧೦೯೦
ವಿಷ್ಯೋ ವಿಷೇಣಯೋವಧ್ಯೋ ಮುಸಲ್ಯೋ ಮುಸಲೇನ ಯಃ ।
ಶಿಶ್ವಿದಾನೋಽಕೃಷ್ಣಕರ್ಮಾ ಚಪಲಶ್ಚಿಕುರಃ ಸಮೌ ॥ ೧೦೯೧
ದೋಷೈಕದೃಕ್ಪುರೋಭಾಗೀ ನಿಕೃತಸ್ತ್ವನೃಜುಶ್ಶಠಃ ।
ಕರ್ಣೇ ಜಪಸ್ಸೂಚಕಸ್ಸ್ಯಾತ್ಪಿಶುನೋ ದುರ್ಜನಃ ಖಲಃ ॥ ೧೦೯೨

---

೧೦೮೯. ವ್ಯಸನಾರ್ತ, ಉಪರಕ್ತ=ವ್ಯಸನದಿಂದ ಪೀಡಿತ. ವಿಹಸ್ತ, ವ್ಯಾಕುಲ=ಚಿಂತೆಯಿಂದ ದಿಕ್ಕು ತೋಚದವನು. ವಿಕ್ಲವ, ವಿಹ್ವಲ=ಭಯಶೋಕಾದಿಗಳನ್ನು ಸಹಿಸಲು ಸ್ಥೈರ್ಯವಿಲ್ಲದವನು. ವಿವಶ=ಅಮಂಗಳ ವಾರ್ತೆಯಿಂದ ಬುದ್ಧಿಗೆಟ್ಟವನು.

೧೦೯೦. ಕಶ್ಯ, ಕಶಾರ್ಹ=ಚಾಟಿಯ ಪೆಟ್ಟಿಗೆ ಅರ್ಹ. ಆತತಾಯಿನ್ (ಸ್ತ್ರೀ. ಆತತಾಯಿನೀ)=ಕೊಲ್ಲುವುದಕ್ಕೆ ಯತ್ನಿಸಿದವನು. ದ್ವೇಷ್ಯ, ಅಕ್ಷಿಗತ=ದ್ವೇಷಪಾತ್ರ, ವೈರಿ. ವಧ್ಯ, ಶೀರ್ಷಚ್ಛೇದ್ಯ=ವಧೆಗೆ ಅರ್ಹ.

೧೦೯೧. ವಿಷ್ಯ=ವಿಷದಿಂದ ಕೊಲ್ಲಲ್ಪಡತಕ್ಕವನು. ಮುಸಲ್ಯ=ಒನಕೆಯಿಂದ ಕೊಲ್ಲಲ್ಪಡತಕ್ಕವನು,—ಹೊಡೆಯಲ್ಪಡತಕ್ಕವನು. ಶಿಶ್ವಿದಾನ, ಅಕೃಷ್ಣಕರ್ಮನ್= ಅನಪರಾಧಿ, ಅಪರಾಧದಿಂದ ಬಿಡುಗಡೆ ಹೊಂದಿದವನು, ಶುದ್ಧಾಚಾರ. 'ಶಿಶ್ವಿದಾನಃ ಕೃಷ್ಣಕರ್ಮಾ' ಎಂದು ಕೆಲವೆಡೆ ಪಾಠವಿದೆ. ಆ ಪಕ್ಷದಲ್ಲಿ ಶಿಶ್ವಿದಾನ, ಕೃಷ್ಣಕರ್ಮನ್—ಇವೆರಡೂ ಅಪರಾಧಿಯ ಹೆಸರುಗಳು, ದುರಾಚಾರ. ಶಿಶ್ವಿದಾನ ಶಬ್ದವು ಎರಡು ವಿರುದ್ಧಾರ್ಥಗಳನ್ನೂ ಬೋಧಿಸುತ್ತದೆ. ಚಪಲ, ಚಿಕುರ=ದೋಷವನ್ನು ವಿಚಾರಿಸದೆ ದುಡುಕಿನಿಂದ ದಂಡಿಸುವವನು.

೧೦೯೨. ದೋಷೈಕದೃಶ್, ಪುರೋಭಾಗಿನ್ (ಸ್ತ್ರೀ—.ಭಾಗಿನೀ)=ದೋಷವನ್ನೇ ಹುಡುಕುವವನು. ನಿಕೃತ, ಅನೃಜು, ಶಠ (ಸ್ತ್ರೀ. ಅನೃಜು– ಅನೃಜ್ವೀ)=ಕುಟಿಲ ಬುದ್ಧಿಯವನು. ಕರ್ಣೇಜಪ, ಸೂಚಕ, ಪಿಶುನ (ಸ್ತ್ರೀ. ಸೂಚಿಕಾ) ಚಾಡಿಖೋರ. ದುರ್ಜನ, ಖಲ=ದುಷ್ಟ.

೧೦೯೩. ನೃಶಂಸ, ಘಾತುಕ, ಕ್ರೂರ, ಪಾಪ=ಪರರಿಗೆ ಹಿಂಸೆಮಾಡತಕ್ಕವನು. ದುರುಳ, ಧೂರ್ತ, ವಂಚಕ (ಸ್ತ್ರೀ. ವಂಚಿಕಾ)=ಮೋಸಗಾರ. ಅಜ್ಞ, ಮೂಢ, ಯಥಾಜಾತ, ಮೂರ್ಖ, ವೈಧೇಯ, ಬಾಲಿಶ=ದಡ್ಡ.

ನೃಶಂಸೋ ಘಾತುಕಃ ಕ್ರೂರಃ ಪಾಪೋ ಧೂರ್ತಸ್ತು ವಂಚಕಃ ।
ಅಜ್ಞೇ ಮೂಢಯಥಾಜಾತ ಮೂರ್ಖವೈಧೇಯಬಾಲಿಶಾಃ ॥ ೧೮೯೩
ಕದರ್ಯೇ ಕೃಪಣಕ್ಷುದ್ರಕಿಂಪಚಾನಮಿತಂಪಚಾಃ ।
ನಿಸ್ಸ್ವಸ್ತು ದುರ್ವಿಧೋ ದೀನೋ ದರಿದ್ರೋ ದುರ್ಗತೋಽಪಿ ಸಃ ॥ ೧೮೯೪
ವನೀಯಕೋ ಯಾಚನಕೋ ಮಾರ್ಗಣೋ ಯಾಚಕಾರ್ಥಿನೌ ।
ಅಹಂಕಾರವಾನಹಂ ಯುಃ ಶುಭಂಯುಸ್ತು ಶುಭಾನ್ವಿತಃ ॥ ೧೮೯೫
ದಿವ್ಯೋ ಪಪಾದುಕಾ ದೇವಾ ನೃಗವಾದ್ಯಾ ಜರಾಯುಜಾಃ ।
ಸ್ವೇದಜಾಃ ಕ್ರಿಮಿದಂಶಾದ್ಯಾಃ ಪಕ್ಷಿಸರ್ಪಾದಯೋಽಂಡಜಾಃ ॥ ೧೮೯೬
ಉದ್ಭಿದಸ್ತರುಗುಲ್ಮಾದ್ಯಾ ಉದ್ಭಿದುದ್ಭಿಜ್ಜಮುದ್ಭಿದಮ್ ।
ಸುಂದರಂ ರುಚಿರಂ ಚಾರು ಸುಷಮಂ ಸಾಧು ಶೋಭನಮ್ ॥ ೧೮೯೭
ಕಾಂತಂ ಮನೋರಮಂ ರುಚ್ಯಂ ಮನೋಜ್ಞಂ ಮಂಜು ಮಂಜುಲಮ್ ।
ತದಾಸೇಚನಕಂ ತೃಪ್ತೇರ್ನಾಸ್ತ್ಯಂತೋ ಯಸ್ಯದರ್ಶನಾತ್ ॥ ೧೮೯೮

---

೧೮೯೪. ಕದರ್ಯ, ಕೃಪಣ, ಕ್ಷುದ್ರ, ಕಿಂಪಚಾನ, ಮಿತಂಪಚ=ಜಿಪುಣ. ನಿಸ್ಸ್ವ, ದುರ್ವಿಧ, ದೀನ, ದರಿದ್ರ, ದುರ್ಗತ=ಬಡವ.

೧೮೯೫. ವನೀಯಕ, ಯಾಚನಕ, ಮಾರ್ಗಣ, ಯಾಚಕ, ಅರ್ಥಿನ್= (ಸ್ತ್ರೀ. ವನೀಯಿಕಾ, ಯಾಚನಿಕಾ, ಯಾಚಿಕಾ, ಅರ್ಥಿನೀ)=ಬೇಡುವವನು. ಅಹಂಯು=ಅಹಂಕಾರಿ. ಶುಭಂಯು=ಶುಭವುಳ್ಳವನು.

೧೮೯೬. ದಿವ್ಯೋಪಪಾದುಕ=ಸ್ವರ್ಗದಲ್ಲಿ ಅಯೋನಿಜರಾಗಿರುವ ದೇವತೆಗಳು. ಜರಾಯುಜ=ಗರ್ಭದ ಚೀಲದಿಂದ ಜನಿಸುವ ಮನುಷ್ಯ ಹಸು ಮುಂತಾದವರು. ಸ್ವೇದಜ=ಉಷ್ಣತೆಯಿಂದ ಜನಿಸುವ ಕ್ರಿಮಿಕೀಟಾದಿಗಳು. ಅಂಡಜ=ಮೊಟ್ಟೆಗಳಿಂದ ಜನಿಸುವ ಹಕ್ಕಿ ಹಾವು ಮುಂತಾದವು.

೧೮೯೭—೧೮೯೮ ಉದ್ಭಿದ್=ನೆಲವನ್ನು ಭೇದಿಸಿ ಬೆಳೆಯುವ ಮರ ಪೊದೆ ಮೊದಲಾದವು. ಉದ್ಭಿದ್, ಉದ್ಭಿಜ್ಜ, ಉದ್ಭಿದ=(ಸಮಾನಾರ್ಥಕಪದಗಳು.) ಸುಂದರ, ರುಚಿರ, ಚಾರು, ಸುಷಮ, ಸಾಧು, ಶೋಭನ, ಕಾಂತ, ಮನೋರಮ, ರುಚ್ಯ, ಮನೋಜ್ಞ, ಮಂಜು, ಮಂಜುಲ (ಸ್ತ್ರೀ. ಸುಂದರೀ, ಸಾಧು– ಸಾಧ್ವೀ)=ಚೆನ್ನಾಗಿರುವವನು, ಸುಂದರ. ಆಸೇಚನಕ (ಸ್ತ್ರೀ. ಆಸೇಚನಿಕಾ)=ಎಷ್ಟು ನೋಡಿದರೂ ತೃಪ್ತಿಯಾಗದಷ್ಟು ಸುಂದರ.



ಅಭೀಷ್ಟೇಽಭೀಪ್ಸಿತಂ ಹೃದ್ಯಂ ದಯಿತಂ ವಲ್ಲಭಂ ಪ್ರಿಯಮ್ ।
ನಿಕೃಷ್ಟಪ್ರತಿಕೃಷ್ಟಾರ್ವರೇಫಯಾಪ್ಯಾವಮಾಧಮಾಃ ॥ ೧೮೯೯
ಕುಪೂಯಕುತ್ಸಿತಾವದ್ಯಖೇಟಗರ್ಹ್ಯಾಣಕಾಸ್ಸಮಾಃ ।
ಮಲೀಮಸಂ ತು ಮಲಿನಂ ಕಚ್ಚರಂ ಮಲದೂಷಿತಮ್ ॥ ೧೯೦೦
ಪೂತಂ ಪವಿತ್ರಂ ಮೇಧ್ಯಂ ಚ ವೀಧ್ರಂ ತು ವಿಮಲಾರ್ಥಕಮ್ ।
ನಿರ್ಣಿಕ್ತಂ ಶೋಧಿತಂ ಮೃಷ್ಟಂ ನಿಶ್ಶೋಧ್ಯಮನವಸ್ಕರಮ್ ॥ ೧೯೦೧
ಅಸಾರಂ ಫಲ್ಗು ಶೂನ್ಯಂ ತು ವಶಿಕಂ ತುಚ್ಛರಿಕ್ತಕೇ ।
ಕ್ಲೀಬೇ ಪ್ರಧಾನಂ ಪ್ರಮುಖಪ್ರವೇಕಾನುತ್ತಮೋತ್ತಮಾಃ ॥ ೧೯೦೨
ಮುಖ್ಯವರ್ಯವರೇಣ್ಯಾಶ್ಚ ಪ್ರವರ್ಹೋಽನವರಾರ್ಧ್ಯವತ್ ।
ಪರಾರ್ಧ್ಯಾಗ್ರಪ್ರಾಗ್ರಹರಪ್ರಾಗ್ರ್ಯಾಗ್ರ್ಯಾಗ್ರೀಯಮಗ್ರಿಯಮ್ ॥ ೧೯೦೩

---

೧೮೯೯-೧೯೦೦. ಅಭೀಷ್ಟ, ಅಭೀಪ್ಸಿತ, ಹೃದ್ಯ, ದಯಿತ, ವಲ್ಲಭ, ಪ್ರಿಯ=ಇಷ್ಟ, ಪ್ರಿಯ. ನಿಕೃಷ್ಟ, ಪ್ರತಿಕೃಷ್ಟ, ಅರ್ವನ್, ರೇಫ[1], ಯಾಪ್ಯ, ಅವಮ, ಅಧಮ, ಕುಪೂಯ[2]. ಕುತ್ಸಿತ, ಅವದ್ಯ, ಖೇಟ, ಗರ್ಹ್ಯ, ಅಣಕ=ಕೀಳಾದವನು, ನಿಂದನೀಯ. ಮಲೀಮಸ, ಮಲಿನ, ಕಚ್ಚರ, ಮಲದೂಷಿತ=ಮಲಿನ.

೧೯೦೧. ಪೂತ, ಪವಿತ್ರ, ಮೇಧ್ಯ=ಪವಿತ್ರ. ವೀಧ್ರ, ವಿಮಲ=ಶುದ್ಧ, ನಿರ್ಮಲ. ನಿರ್ಣಿಕ್ತ, ಶೋಧಿತ, ಮೃಷ್ಟ, ನಿಶ್ಶೋಧ್ಯ, ಅನವಸ್ಕರ=ಸ್ವಚ್ಛಗೊಳಿಸಲ್ಪಟ್ಟ, ಪರಿಶುದ್ಧ.

೧೯೦೨—೧೯೦೩. ಅಸಾರ, ಫಲ್ಗು=ನಿಸ್ಸಾರ, ಜೊಳ್ಳು. ಶೂನ್ಯ, ವಶಿಕ, ತುಚ್ಛ, ರಿಕ್ತಕ=ಖಾಲಿ, ಏನೂ ಇಲ್ಲದ (Empty). ಪ್ರಧಾನ[3] (ನಿತ್ಯನಪುಂಸಕ), ಪ್ರಮುಖ, ಪ್ರವೇಕ, ಅನುತ್ತಮ, ಉತ್ತಮ, ಮುಖ್ಯ, ವರ್ಯ, ವರೇಣ್ಯ, ಪ್ರವರ್ಹ, ಅನವರಾರ್ಧ್ಯ (ರ್ಘ್ಯ), ಪರಾರ್ಧ್ಯ, ಅಗ್ರ, ಪ್ರಾಗ್ರಹರ, ಪ್ರಾಗ್ರ್ಯ, ಅಗ್ರ್ಯ, ಅಗ್ರೀಯ, ಅಗ್ರಿಯ=ಮುಖ್ಯ, ಪ್ರಧಾನ.

---

[1] ರೇಪ, ರೇಪಸ್ ಎಂಬ ರೂಪಾಂತರಗಳೂ ಇವೆ.
[2] ಕಪೂಯ ಎಂಬ ಶಬ್ದವೂ ಇದೆ.
[3] ಮುಖ್ಯಸಚಿವ ಎಂಬ ಅರ್ಥದಲ್ಲಿ ಪ್ರಧಾನ ಶಬ್ದವು ಪುಲ್ಲಿಂಗವಾಗಿಯೂ ಪ್ರಯುಕ್ತವಾಗಿದೆ.

ಶ್ರೇಯಾನ್ ಶ್ರೇಷ್ಠಃ ಪುಷ್ಕಲಸ್ಸ್ಯಾತ್ಸತ್ತಮಶ್ಚಾತಿಶೋಭನೇ ।
ಸ್ಯುರುತ್ತರಪದೇ ವ್ಯಾಘ್ರಪುಂಗವರ್ಷಭಕುಂಜರಾಃ ॥ ೧೧೦೪
ಸಿಂಹಶಾರ್ದೂಲನಾಗಾದ್ಯಾಃ ಪುಂಸಿ ಶ್ರೇಷ್ಠಾರ್ಥಗೋಚರಾಃ ।
ಅಪ್ರಾಗ್ರ್ಯಂ ದ್ವಯಹೀನೇ ದ್ವೇ ಅಪ್ರಧಾನೋಪಸರ್ಜನೇ ॥ ೧೧೦೫
ವಿಶಂಕಟಂ ಪೃಥು ಬೃಹದ್ವಿಶಾಲಂ ಪೃಥುಲಂ ಮಹತ್ ।
ವಡ್ರೋರುವಿಪುಲಂ ಪೀನಪೀವ್ನೀ ತು ಸ್ಥೂಲಪೀವರೇ ॥ ೧೧೦೬
ಸ್ತೋಕಾಲ್ಪಕ್ಷುಲ್ಲಕಾಸ್ಸೂಕ್ಷ್ಮಂ ಶ್ಲಕ್ಷ್ಣಂ ದಭ್ರಂ ಕೃಶಂ ತನು ।
ಸ್ತ್ರಿಯಾಂ ಮಾತ್ರಾ ತ್ರುಟೀ ಪುಂಸಿ ಲವಲೇಶಕಣಾಣವಃ ॥ ೧೧೦೭
ಅತ್ಯಲ್ಪೇಽಲ್ಪಿಷ್ಠಮಲ್ಪೀಯಃ ಕನೀಯೋಽಣೀಯ ಇತ್ಯಪಿ ।
ಪ್ರಭೂತಂ ಪ್ರಚುರಂ ಪ್ರಾಜ್ಯಮದಭ್ರಂ ಬಹುಲಂ ಬಹು ॥ ೧೧೦೮

---

೧೧೦೪—೧೧೦೫. ಶ್ರೇಯಸ್, ಶ್ರೇಷ್ಠ, ಪುಷ್ಕಲ, ಸತ್ತಮ, ಅತಿಶೋಭನ, (—ಸ್ತ್ರೀ. ಶ್ರೇಯಸೀ)=ಅತಿಮುಖ್ಯ, ಅತ್ಯುತ್ತಮ. ಮುಂದೆ ಹೇಳುವ ಪದಗಳು ಸಮಾಸದಲ್ಲಿ ಉತ್ತರಪದದಲ್ಲಿದ್ದು ಶ್ರೇಷ್ಠ ಎಂಬ ಅರ್ಥವನ್ನು ಬೋಧಿಸುತ್ತವೆ. ಅವು ಸದಾ ಪುಲ್ಲಿಂಗಗಳು ಯಾವುವೆಂದರೆ : ವ್ಯಾಘ್ರ, ಪುಂಗವ, ಋಷಭ, ಕುಂಜರ, ಸಿಂಹ, ಶಾರ್ದೂಲ, ನಾಗ.— ಹೀಗೆಯೇ ವೃಷಭ, ಚಂದ್ರ, ಕಂಠೀರವ ಇತ್ಯಾದಿ. ಉದಾ : ಪುರುಷವ್ಯಾಘ್ರ, ಪಂಡಿತ ಪುಂಗವ. ನಿತ್ಯಪುಲ್ಲಿಂಗವಾದ್ದರಿಂದ ಯೋಷಿದ್ವ್ಯಾಘ್ರಃ, ಅಪತ್ಯಸಿಂಹಃ ಎಂದು ಹೇಳಬಹುದು. ಅಪ್ರಾಗ್ರ್ಯ (ಪು. ಸ್ತ್ರೀ. ನ)=ಅಪ್ರಧಾನ, ಉಪಸರ್ಜನ (ನ)=ಅಮುಖ್ಯ.

೧೧೦೬. ವಿಶಂಕಟ, ಪೃಥು, ಬೃಹತ್, ವಿಶಾಲ, ಪೃಥುಲ, ಮಹತ್, ವಡ್ರ, ಉರು, ವಿಪುಲ (—ಸ್ತ್ರೀ. ಪೃಥು, ಪೃಥ್ವೀ, ಬೃಹತೀ, ಮಹತೀ, ಉರು—ಉರ್ವೀ)=ದೊಡ್ಡದಾದ, ವಿಶಾಲವಾದ. ಪೀನ, ಪೀವನ್, ಸ್ಥೂಲ, ಪೀವರ (—ಸ್ತ್ರೀ. ಪೀವನ್, ಪೀವರ=ಪೀವರೀ)= ದಪ್ಪವಾದ.

೧೧೦೭. ಸ್ತೋಕ, ಅಲ್ಪ, ಕ್ಷುಲ್ಲಕ, ಸೂಕ್ಷ್ಮ, ಶ್ಲಕ್ಷ್ಣ, ದಭ್ರ, ಕೃಶ, ತನು (ಸ್ತ್ರೀ. ತನು- ತನ್ವೀ)=ಸಣ್ಣದಾದ, ಸ್ವಲ್ಪ ಚಿಕ್ಕದಾದ. ಮಾತ್ರಾ, ತ್ರುಟೀ (ಸ್ತ್ರೀ), ಲವ, ಲೇಶ, ಕಣ, ಅಣು (ಪು)=ತುಸ, ಚಿಕ್ಕ ಪ್ರಮಾಣ (A Particle, A very small Quantity—ಇವು ವಿಶೇಷ್ಯ ನಿಘ್ನಗಳಲ್ಲ. ಉದಾ: ಗಂಧಸ್ಯ ಮಾತ್ರಾ, ಬುದ್ಧೇಃ ಲೇಶಃ).

೧೧೦೮—೧೧೦೯. ಅತ್ಯಲ್ಪ, ಅಲ್ಪಿಷ್ಠ, ಅಲ್ಪೀಯಸ್, ಕನೀಯಸ್, ಅಣೀಯಸ್



ಪುರುಹಂ ಪುರು ಭೂಯಿಷ್ಠಂ ಸ್ಫಾರಂ ಭೂಯಶ್ಚ ಭೂರಿ ಚ ।
ಪರಶ್ಶತಾದ್ಯಾಸ್ತೇ ಯೇಷಾಂ ಪರಾ ಸಂಖ್ಯಾ ಶತಾಧಿಕಾತ್ ॥ ೧೧೦೯
ಗಣನೀಯೇ ತು ಗಣೇಯಂ ಸಂಖ್ಯಾತೇ ಗಣಿತಮಥ ಸಮಂ ಸರ್ವಮ್ ।
ವಿಶ್ವಮಶೇಷಂ ಕೃತ್ಸ್ನಂ ಸಮಸ್ತನಿಖಿಲಾಖಿಲಾನಿ ನಿಶ್ಶೇಷಮ್ ॥ ೧೧೧೦
ಸಮಗ್ರಂ ಸಕಲಂ ಪೂರ್ಣಮಖಂಡಂ ಸ್ಯಾದನೂನಕೇ ।
ಘನಂ ನಿರಂತರಂ ಸಾಂದ್ರಂ ಪೇಲವಂ ವಿರಲಂ ತನು ॥ ೧೧೧೧
ಸಮೀಪೇ ನಿಕಟಾಸನ್ನಸನ್ನಿಕೃಷ್ಟಸನೀಡವತ್ ।
ಸದೇಶಾಭ್ಯಾಶಸವಿಧಸಮರ್ಯಾದಸವೇಶವತ್ ॥ ೧೧೧೨
ಉಪಕಂಠಾಂತಿಕಾಭ್ಯರ್ಣಾಭ್ಯಗ್ರಾ ಅಪ್ಯಭಿತೋಽವ್ಯಯಮ್ ।
ಸಂಸಕ್ತೇ ತ್ವವ್ಯವಹಿತಮಪದಾಂತರಮಿತ್ಯಪಿ ॥ ೧೧೧೩
ನೇದಿಷ್ಠಮಂತಿಕತಮಂ ಸ್ಯಾದ್ದೂರಂ ವಿಪ್ರಕೃಷ್ಟಕಮ್ ।
ದವೀಯಶ್ಚ ದವಿಷ್ಠಂ ಚ ಸುದೂರಂ ದೀರ್ಘಮಾಯತಮ್ ॥ ೧೧೧೪

---

(ಸ್ತ್ರೀ. ಅಲ್ಪೀಯಸೀ, ಕನೀಯಸೀ, ಅಣೀಯಸೀ)=ಬಹಳ ಚಿಕ್ಕದಾದ. ಪ್ರಭೂತ, ಪ್ರಚುರ, ಪ್ರಾಜ್ಯ, ಅದಭ್ರ, ಬಹುಲ, ಬಹು, ಪುರುಹ, ಪುರು, ಭೂಯಿಷ್ಠ, ಸ್ಫಾರ, ಭೂಯಸ್, ಭೂರಿ (—ಸ್ತ್ರೀ. ಬಹು— ಬಹ್ವೀ, ಪುರು— ಪುರ್ವೀ, ಭೂಯಸೀ)=ಬಹಳ, ದೊಡ್ಡದಾದ. ಪರಃಶತ=(ಸಂಖ್ಯೇಯ ವಾಚಕ)=ನೂರಕ್ಕಿಂತಲೂ ಹೆಚ್ಚಾದ. ಹೀಗೆಯೇ—ಪರಃ ಸಹಸ್ರ=ಸಾವಿರಕ್ಕಿಂತಲೂ ಹೆಚ್ಚಾದ (ಸಂಖ್ಯಾವಾಚಕವಾದಾಗ ನಪುಂಸಕ ಮಾತ್ರ. ಉದಾ:— ಧೇನೂನಾಂ ಪರಃಶತಂ— ಪರಃಸಹಸ್ರಂ).

೧೧೧೦—೧೧೧೧. ಗಣನೀಯ ಗಣೇಯ=ಎಣಿಸಲ್ಪಡುವ. ಸಂಖ್ಯಾತ, ಗಣಿತ= ಎಣಿಸಲ್ಪಟ್ಟ. ಸಮ, ಸರ್ವ, ವಿಶ್ವ, ಅಶೇಷ, ಕೃತ್ಸ್ನ, ಸಮಸ್ತ, ನಿಖಿಲ, ಅಖಿಲ, ನಿಶ್ಶೇಷ, ಸಮಗ್ರ, ಸಕಲ, ಪೂರ್ಣ, ಅಖಂಡ, ಅನೂನಕ=ಸಮಸ್ತ, ಎಲ್ಲ. ಘನ, ನಿರಂತರ, ಸಾಂದ್ರ= ದಟ್ಟವಾದ. ಪೇಲವ, ವಿರಲ, ತನು (—ಸ್ತ್ರೀ. ತನು, ತನ್ವೀ)=ವಿರಳವಾದ.

೧೧೧೨—೧೧೧೩. ಸಮೀಪ, ನಿಕಟ, ಆಸನ್ನ, ಸಂನಿಕೃಷ್ಟ, ಸನೀಡ, ಸದೇಶ, ಅಭ್ಯಾಶ, ಸವಿಧ, ಸಮರ್ಯಾದ, ಸವೇಶ, ಉಪಕಂಠ, ಅಂತಿಕ, ಅಭ್ಯರ್ಣ, ಅಭ್ಯಗ್ರ (ವಿ. ನಿಘ್ನ, ಅಭಿತಸ್(ಅವ್ಯಯ)=ಹತ್ತಿರದಲ್ಲಿರುವ. ಸಂಸಕ್ತ, ಅವ್ಯವಹಿತ, ಅಪದಾಂತರ=ಸೇರಿ ಕೊಂಡಿರುವ, ಪಕ್ಕದಲ್ಲಿರುವ.

ವರ್ತುಲಂ ನಿಸ್ತಲಂ ವೃತ್ತಂ ಬಂಧುರಂ ತೂನ್ನತಾನತಮ್ ।
ಉಚ್ಚಪ್ರಾಂಶೂನ್ನತೋದಗ್ರೋಚ್ಛ್ರಿತಾಸ್ತುಂಗೇಽಥ ವಾಮನೇ ॥ ೧೧೧೫

ನ್ಯಗ್ನೀಚಖರ್ವಹ್ರಸ್ವಾಃ ಸ್ಯುರವಾಗ್ರೇಽವನತಾನತೇ ।
ಅರಾಲಂ ವೃಜಿನಂ ಜಿಹ್ಮಮೂರ್ಮಿಮತ್ಕುಂಚಿತಂ ನತಮ್ ॥ ೧೧೧೬

ಆವಿದ್ಧಂ ಕುಟಿಲಂ ಭುಗ್ನಂ ವೇಲ್ಲಿತಂ ವಕ್ರಮಿತ್ಯಪಿ ।
ಋಜಾವಜಿಹ್ಮಪ್ರಗುಣೌ ವ್ಯಸ್ತೇತ್ವಪ್ರಗುಣಾಕುಲೌ ॥ ೧೧೧೭

ಶಾಶ್ವತಸ್ತು ಧ್ರುವೋ ನಿತ್ಯಸದಾತನಸನಾತನಾಃ ।
ಸ್ಥಾಸ್ನುಃ ಸ್ಥಿರತರಃ ಸ್ಥೇಯಾನೇಕರೂಪತಯಾ ತು ಯಃ ॥ ೧೧೧೮

ಕಾಲವ್ಯಾಪೀ ಸ ಕೂಟಸ್ಥಃ ಸ್ಥಾವರೋ ಜಂಗಮೇತರಃ ।
ಚರಿಷ್ಣು ಜಂಗಮಚರಂ ತ್ರಸಮಿಂಗಂ ಚರಾಚರಮ್ ॥ ೧೧೧೯

---

೧೧೧೪. ನೇದಿಷ್ಠ, ಅಂತಿಕತಮ=ಬಹಳ ಹತ್ತಿರದಲ್ಲಿರುವ. ದೂರ, ವಿಪ್ರಕೃಷ್ಟಕ=ದೂರದಲ್ಲಿರುವ. ದವೀಯಸ್, ದವಿಷ್ಠ, ಸುದೂರ (—ಸ್ತ್ರೀ. ದವೀಯಸೀ)=ಬಹಳ ದೂರದಲ್ಲಿರುವ. ದೀರ್ಘ, ಆಯತ=ಉದ್ದವಾದ.

೧೧೧೫—೧೧೧೬. ವರ್ತುಲ, ನಿಸ್ತಲ, ವೃತ್ತ=ದುಂಡಾದ, ಗುಂಡನೆಯ. ಬಂಧುರ, ಉನ್ನತಾನತ=ಎತ್ತರವಾಗಿದ್ದು ಸ್ವಲ್ಪ ಬಾಗಿರುವ. ಉಚ್ಚ, ಪ್ರಾಂಶು, ಉನ್ನತ, ಉದಗ್ರ, ಉಚ್ಛ್ರಿತ, ತುಂಗ=ಎತ್ತರವಾದ. ವಾಮನ, ನ್ಯಚ್, ನೀಚ, ಖರ್ವ, ಹ್ರಸ್ವ (—ಸ್ತ್ರೀ. ನ್ಯಚ್=ನೀಚೀ)=ಗಿಡ್ಡ, ಕುಳ್ಳಾದ. ಅವಾಗ್ರ, ಅವನತ, ಆನತ=ಬಗ್ಗಿದ.

೧೧೧೬—೧೧೧೭. ಅರಾಲ, ವೃಜಿನ, ಜಿಹ್ಮ, ಊರ್ಮಿಮತ್, ಕುಂಚಿತ, ನತ, ಆವಿದ್ಧ, ಕುಟಿಲ, ಭುಗ್ನ, ವೇಲ್ಲಿತ, ವಕ್ರ (—ಸ್ತ್ರೀ. ಊರ್ಮಿಮತೀ)=ಸೊಟ್ಟನೆಯ, ಡೊಂಕಾದ. ಋಜು, ಅಜಿಹ್ಮ, ಪ್ರಗುಣ (—ಸ್ತ್ರೀ. ಋಜು—ಋಜ್ವೀ)=ನೆಟ್ಟಗಿರುವ, ಸರಳವಾದ. ವ್ಯಸ್ತ, ಅಪ್ರಗುಣ, ಆಕುಲ=ಚದರಿದ, ಕೆದರಿದ.

೧೧೧೮. ಶಾಶ್ವತ, ಧ್ರುವ, ನಿತ್ಯ, ಸದಾತನ, ಸನಾತನ (—ಸ್ತ್ರೀ. ಶಾಶ್ವತೀ, ಸದಾತನೀ, ಸನಾತನೀ)=ನಿತ್ಯವಾದ, ಸ್ಥಿರವಾದ. ಸ್ಥಾಸ್ನು, ಸ್ಥಿರತರ, ಸ್ಥೇಯಸ್ (—ಸ್ತ್ರೀ. ಸ್ಥೇಯಸೀ)=ಅತ್ಯಂತ ಸ್ಥಿರವಾದ.

೧೧೧೯. ಕೂಟಸ್ಥ =ಶಾಶ್ವತವಾಗಿ ಒಂದೇ ಬಗೆಯಾಗಿರುವ. ಸ್ಥಾವರ, ಜಂಗಮೇತರ=ಸಂಚರಿಸದಿರುವ. ಚರಿಷ್ಣು, ಜಂಗಮ, ಚರ, ತ್ರಸ, ಇಂಗ, ಚರಾಚರ=ಸಂಚರಿಸುವ, ಚಲಿಸುವ.



ಚಲನಂ ಕಂಪನಂ ಕಂಪ್ರಂ ಚಲಂ ಲೋಲಂ ಚಲಾಚಲಮ್ ।
ಚಂಚಲಂ ತರಲಂ ಚೈವ ಪಾರಿಪ್ಲವಪರಿಪ್ಲವೇ ॥ ೧೧೨೦

ಅತಿರಿಕ್ತಸ್ಸಮಧಿಕೋ ದೃಢಸಂಧಿಸ್ತು ಸಂಹತಃ ।
ಕರ್ಕಶಂ ಕಠಿನಂ ಕ್ರೂರಂ ಕಠೋರಂ ನಿಷ್ಠುರಂ ದೃಢಮ್ ॥ ೧೧೨೧

ಜರಠಂ ಮೂರ್ತಿಮನ್ಮೂರ್ತಂ ಪ್ರವೃದ್ಧಂ ಪ್ರೌಢಮೇಧಿತಮ್ ।
ಪುರಾಣೇ ಪ್ರತನಪ್ರತ್ನಪುರಾತನಚಿರಂತನಾಃ ॥ ೧೧೨೨

ಪ್ರತ್ಯಗ್ರೋಽಭಿನವೋ ನವ್ಯೋ ನವೀನೋ ನೂತನೋ ನವಃ ।
ನೂತ್ನಶ್ಚ ಸುಕುಮಾರಂ ತು ಕೋಮಲಂ ಮೃದುಲಂ ಮೃದು ॥ ೧೧೨೩

ಅನ್ವಗನ್ವಕ್ಷಮನುಗೇಽನುಪದಂ ಕ್ಲೀಬಮವ್ಯಯಮ್ ।
ಪ್ರತ್ಯಕ್ಷಂ ಸ್ಯಾದೈಂದ್ರಿಯಕಮಪ್ರತ್ಯಕ್ಷಮತೀಂದ್ರಿಯಮ್ ॥ ೧೧೨೪

---

೧೧೨೦. ಚಲನ, ಕಂಪನ, ಕಂಪ್ರ, ಚಲ, ಲೋಲ, ಚಲಾಚಲ, ಚಂಚಲ, ತರಲ, ಪಾರಿಪ್ಲವ, ಪರಿಪ್ಲವ=ಅಲ್ಲಾಡುವ.

೧೧೨೧. ಅತಿರಿಕ್ತ, ಸಮಧಿಕ=ಹೆಚ್ಚಿನ, ಅಧಿಕವಾದ, ದೃಢಸಂಧಿ, ಸಂಹತ=ಚೆನ್ನಾಗಿ ಕೂಡಿಕೊಂಡಿರುವ. ಕರ್ಕಶ, ಕಠಿನ, ಕ್ರೂರ, ಕಠೋರ, ನಿಷ್ಠುರ, ದೃಢ=ಗಟ್ಟಿಯಾದ (Hard).

೧೧೨೨. ಜರಠ, ಮೂರ್ತಿಮತ್, ಮೂರ್ತ (ಸ್ತ್ರೀ. ಮೂರ್ತಿಮತೀ)=ಆಕೃತಿಯುಳ್ಳ (ಕರ್ಕಶಶಬ್ದದಿಂದ ಮೂರ್ತಶಬ್ದದವರೆಗೂ ಪರ್ಯಾಯಗಳೆಂದು ಕೆಲವರು). ಪ್ರವೃದ್ಧ, ಪ್ರೌಢ, ಏಧಿತ=ಬೆಳೆದ. ಪುರಾಣ, ಪ್ರತನ, ಪ್ರತ್ನ, ಪುರಾತನ, ಚಿರಂತನ (—ಸ್ತ್ರೀ. ಪುರಾಣೀ, ಪುರಾತನೀ, ಚಿರಂತನೀ)=ಹಳೆಯದು.

೧೧೨೩. ಪ್ರತ್ಯಗ್ರ, ಅಭಿನವ, ನವ್ಯ, ನವೀನ, ನೂತನ, ನವ, ನೂತ್ನ=ಹೊಸದು. ಸುಕುಮಾರ,[1] ಕೋಮಲ, ಮೃದುಲ, ಮೃದು (—ಸ್ತ್ರೀ. ಮೃದು—ಮೃದ್ವೀ)=ಮೆತ್ತಗಿರುವ.

೧೧೨೪. ಅನ್ವಚ್,[2] ಅನ್ವಕ್ಷ, ಅನುಗ, ಅನುಪದ (—ಸ್ತ್ರೀ. ಅನೂಚೀ)=ಹಿಂಬಾಲಿಸುವವನು. (ಇವುಗಳಲ್ಲಿ ಅನುಪದ ಶಬ್ದವು ನಿತ್ಯನಪುಂಸಕ. ಉದಾ: ರಾಮಸ್ಯ ಅನುಪದಂ ಸೀತಾ. ಈ ಶಬ್ದವು ನಿತ್ಯನಪುಂಸಕ. ಈ ಶಬ್ದವು ಅವ್ಯಯೀಭಾವವಾದಾಗ ಅವ್ಯಯವಾಗು

---

[1] ಇದು ಸ್ತ್ರೀಲಿಂಗದಲ್ಲಿ ಸುಕುಮಾರಾ. ವಯೋವಾಚಿಯಾದಲ್ಲಿ—ಸುಕುಮಾರೀ.

[2] ಅನ್ವಚ್, ಅನ್ವಕ್ಷ. ಅನುಪದ—ಈ ಮೂರೂ ಅವ್ಯಯಗಳೆಂದು ಕೆಲವರು. ಉದಾ : ಅನ್ವಗ್ಯಯೌ ಮಧ್ಯಮಲೋಕಪಾಲ. ; (ರಘು, ೨—೧೬). ಸೀತಾಂ ಚಾರೋಪಯಾನ್ವಕ್ಷಂ (ರಾಮಾ. ಅಯೋ. ೫—೭೫)

ಏಕತಾನೋಽನನ್ಯವೃತ್ತಿರೇಕಾಗ್ರೈಕಾಯನಾವಪಿ ।
ಅಪ್ಯೇಕಸರ್ಗ ಏಕಾಗ್ರ್ಯೋಽಪ್ಯೇಕಾಯನಗತೋಽಪಿ ಚ ॥ ೧೧೨೫
ಪುಂಸ್ಯಾದಿಃ ಪೂರ್ವ ಪೌರಸ್ತ್ಯಪ್ರಥಮಾದ್ಯಾ ಅಥಾಸ್ತ್ರಿಯಾಮ್ ।
ಅಂತೋ ಜಘನ್ಯಂ ಚರಮಮಂತ್ಯಪಾಶ್ಚಾತ್ತ್ಯಪಶ್ಚಿಮಮ್ ॥ ೧೧೨೬
ಮೋಘಂ ನಿರರ್ಥಕಂ ಸ್ಪಷ್ಟಂ ಸ್ಫುಟಂ ಪ್ರವ್ಯಕ್ತಮುಲ್ಬಣಮ್ ।
ಸಾಧಾರಣಂ ತು ಸಾಮಾನ್ಯಮೇಕಾಕೀ ತ್ವೇಕ ಏಕಕಃ ॥ ೧೧೨೭
ಭಿನ್ನಾರ್ಥಕಾ ಅನ್ಯತರ ಏಕಸ್ತ್ವೋಽನ್ಯೇತರಾವಪಿ ।
ಉಚ್ಚಾವಚಂ ನೈಕಭೇದಮುಚ್ಚಂಡಮವಿಲಂಬಿತಮ್ ॥ ೧೧೨೮
ಅರುಂತುದಂ ತು ಮರ್ಮಸ್ಪೃಗಬಾಧಂ ತು ನಿರರ್ಗಲಮ್ ।
ಪ್ರಸವ್ಯಂ ಪ್ರತಿಕೂಲಂ ಸ್ಯಾದಪಸವ್ಯಮಪಷ್ಠು ಚ ॥ ೧೧೨೯

---

ತ್ತದೆ. ಆಗ ಅದು ಕ್ರಿಯಾವಿಶೇಷಣ. ಹಿಂದುಗಡೆಯಲ್ಲಿ ಎಂದು ಅರ್ಥ. ಉದಾ: ರಾಮಸ್ಯ ಅನುಪದಂ ಗತಾ ಸೀತಾ.) ಪ್ರತ್ಯಕ್ಷ, ಐಂದ್ರಿಯಿಕ (—ಸ್ತ್ರೀ. ಐಂದ್ರಿಯಿಕೀ)=ಇಂದ್ರಿಯ ಗೋಚರ. ಅಪ್ರತ್ಯಕ್ಷ, ಅತೀಂದ್ರಿಯ= ಇಂದ್ರಿಯಗಳಿಗೆ ಅಗೋಚರ.

೧೧೨೫. ಏಕತಾನ, ಅನನ್ಯವೃತ್ತಿ, ಏಕಾಗ್ರ, ಏಕಾಯನ, ಏಕಸರ್ಗ, ಏಕಾಗ್ರ್ಯ, ಏಕಾಯನಗತಿ=ಏಕಾಗ್ರವಾದ, ಒಂದೇ ಕಡೆಯಲ್ಲಿ ಆಸಕ್ತವಾದ.

೧೧೨೬. ಆದಿ (ನಿತ್ಯಪುಲ್ಲಿಂಗ), ಪೂರ್ವ, ಪೌರಸ್ತ್ಯ, ಪ್ರಥಮ, ಆದ್ಯ=ಮೊದಲನೆಯ. ಅಂತ (ಪು.ನ), ಜಘನ್ಯ, ಚರಮ, ಅಂತ್ಯ, ಪಾಶ್ಚಾತ್ತ್ಯ, ಪಶ್ಚಿಮ=ಕಡೆಯ, ಕೊನೆಯ.

೧೧೨೭. ಮೋಘ, ನಿರರ್ಥಕ=ವ್ಯರ್ಥವಾದ. ಸ್ಪಷ್ಟ, ಸ್ಫುಟ, ಪ್ರವ್ಯಕ್ತ, ಉಲ್ಬಣ=ಸ್ಪಷ್ಟವಾದ. ಸಾಧಾರಣ, ಸಾಮಾನ್ಯ (—ಸ್ತ್ರೀ. ಸಾಧಾರಣೀ)=ಸಾಧಾರಣವಾದ, ಅನೇಕ ವಸ್ತುಗಳಲ್ಲಿ ಒಂದಾದ. ಏಕಾಕಿನ್, ಏಕ, ಏಕಕ[1] (—ಸ್ತ್ರೀ. ಏಕಾಕಿನೀ)=ಒಂಟಿಯಾದ.

೧೧೨೮. ಭಿನ್ನ, ಅನ್ಯತರ, ಏಕ, ತ್ವ[1] ಅನ್ಯ, ಇತರ=ಬೇರೆಯದು, ಭಿನ್ನ. ಉಚ್ಚಾವಚ, ನೈಕಭೇದ=ಅನೇಕ ಪ್ರಕಾರವಾದ. ಉಚ್ಚಂಡ, ಅವಿಲಂಬಿತ=ಶೀಘ್ರವಾದ, ಅವಕಾಶವಿಲ್ಲದ.

೧೧೨೯. ಅರುಂತುದ, ಮರ್ಮಸ್ಪೃಶ್=ಮರ್ಮಭೇದಕವಾದ, ಅಬಾಧ, ನಿರರ್ಗಲ=ತಡೆಯಿಲ್ಲದ. ಪ್ರಸವ್ಯ, ಪ್ರತಿಕೂಲ, ಅಪಸವ್ಯ, ಅಪಷ್ಠು=ವಿರುದ್ಧವಾದ.

---

[1] ಏಕಲ ಎಂಬ ಶಬ್ದವೂ ಉಂಟು.
[2] ತ್ವತ್ ಎಂಬ ರೂಪವೂ ಉಂಟು. (ಸರ್ವನಾಮ;—ತ್ವಃ, ತ್ವೌ, ತ್ವೇ).



ವಾಮಂ ಶರೀರಂ ಸವ್ಯಂ ಸ್ಯಾದಪಸವ್ಯಂ ತು ದಕ್ಷಿಣಮ್ ।
ಸಂಕಟಂ ನಾ ತು ಸಂಬಾಧಃ ಕಲಿಲಂ ಗಹನಂ ಸಮೇ ॥ ೧೧೩೦
ಸಂಕೀರ್ಣಂ ಸಂಕುಲಾಕೀರ್ಣೇ ಮುಂಡಿತಂ ಪರಿವಾಪಿತಮ್ ।
ಗ್ರಂಥಿತೇ ಸಂದಿತಂ ದೃಬ್ಧಂ ವಿಸೃತಂ ವಿಸ್ತೃತಂ ತತಮ್ ॥ ೧೧೩೧
ಅಂತರ್ಗತಂ ವಿಸ್ಮೃತಂ ಸ್ಯಾತ್ ಪ್ರಾಪ್ತಪ್ರಣಿಹಿತೇ ಸಮೇ ।
ವೇಲ್ಲಿತಪ್ರೇಂಖಿತಾಧೂತಚಲಿತಾ ಕಂಪಿತಾ ಧುತೇ ॥ ೧೧೩೨
ನುತ್ತನುನ್ನಾಸ್ತನಿಷ್ಠ್ಯೂತಾವಿದ್ಧಕ್ಷಿಪ್ತೇರಿತಾಸ್ಸಮಾಃ ।
ಪರಿಕ್ಷಿಪ್ತಂ ತು ನಿವೃತಂ ಮೂಷಿತಂ ಮುಷಿತಾರ್ಥಕಮ್ ॥ ೧೧೩೩
ಪ್ರವೃದ್ಧಪ್ರಸೃತೇ ನ್ಯಸ್ತನಿಸೃಷ್ಟೇ ಗುಣಿತಾಹತೇ ।
ನಿದಿಗ್ಧೋಪಚಿತೇ ಗೂಢಗುಪ್ತೇ ಗುಂಠಿತರೂಷಿತೇ ॥ ೧೧೩೪

---

೧೧೩೦. ಸವ್ಯ=ದೇಹದ ಎಡ[1] ಭಾಗದ. ಅಪಸವ್ಯ=ದೇಹದ ಬಲಭಾಗದ. ಸಂಕಟ(ವಿ.ನಿ), ಸಂಬಾಧ ([2]ಪುಲ್ಲಿಂಗ)=ಇಕ್ಕಟ್ಟಾದ (Narrow, Hemmed). ಕಲಿಲ, ಗಹನ=ಪ್ರವೇಶಿಸಲು ಅಶಕ್ಯವಾದ.

೧೧೩೧. ಸಂಕೀರ್ಣ, ಸಂಕುಲ, ಆಕೀರ್ಣ=ವಿವಿಧ ವಸ್ತುಗಳಿಂದ ಸಂಮಿಶ್ರವಾದ. ಮುಂಡಿತ, ಪರಿವಾಪಿತ=ಬೋಳಿಸಲ್ಪಟ್ಟ. ಗ್ರಂಥಿತ (ಗ್ರಥಿತ), ಸಂದಿತ, ದೃಬ್ಧ=ಪೋಣಿಸಲ್ಪಟ್ಟ. ವಿಸೃತ, ವಿಸ್ತೃತ, ತತ=ಹರಡಿದ, ವ್ಯಾಪಿಸಿದ.

೧೧೩೨. ಅಂತರ್ಗತ, ವಿಸ್ಮೃತ=ಮರೆಯಲ್ಪಟ್ಟ. ಪ್ರಾಪ್ತ, ಪ್ರಣಿಹಿತ=ಲಬ್ಧವಾದ ; ಇರಿಸಲ್ಪಟ್ಟ. ವೇಲ್ಲಿತ, ಪ್ರೇಂಖಿತ, ಆಧೂತ, ಚಲಿತ, ಕಂಪಿತ, ಧುತ=ಅಲ್ಲಾಡಿಸಲ್ಪಟ್ಟ.

೧೧೩೩. ನುತ್ತ, ನುನ್ನ, ಅಸ್ತ, ನಿಷ್ಠ್ಯೂತ, ಆವಿದ್ಧ, ಕ್ಷಿಪ್ತ, ಈರಿತ=ನೂಕಲ್ಪಟ್ಟ, ತಳ್ಳಲ್ಪಟ್ಟ. ಪರಿಕ್ಷಿಪ್ತ, ನಿವೃತ=ಆವರಿಸಲ್ಪಟ್ಟ. ಮೂಷಿತ, ಮುಷಿತ=ಕದಿಯಲ್ಪಟ್ಟ.

೧೧೩೪. ಪ್ರವೃದ್ಧ, ಪ್ರಸೃತ=ಹರಡಿದ ; ಹೆಚ್ಚಿದ. ನ್ಯಸ್ತ, ನಿಸೃಷ್ಟ=ಇರಿಸಲ್ಪಟ್ಟ. ಗುಣಿತ, ಆಹತ=ಗುಣಿಸಲ್ಪಟ್ಟ. ನಿದಿಗ್ಧ, ಉಪಚಿತ=ಬೆಳೆದ, ವೃದ್ಧಿಹೊಂದಿದ. ಗೂಢ, ಗುಪ್ತ=ಬಚ್ಚಿಡಲ್ಪಟ್ಟ ; ಸುರಕ್ಷಿತವಾದ. ಗುಂಠಿತ, ರೂಷಿತ=ಧೂಳಿ ಮುಂತಾದ್ದರಿಂದ ಆವೃತವಾದ.

---

[1] ಸವ್ಯ ಶಬ್ದಕ್ಕೆ ಬಲಭಾಗದ ಎಂಬ ಅರ್ಥವೂ ಇದೆ.
[2] ಇದು ತ್ರಿಲಿಂಗದಲ್ಲಿಯೂ ಕಂಡುಬರುತ್ತದೆ.

ದ್ರುತಾವದೀರ್ಣೇ ಉದ್ಗೂರ್ಣೋದ್ಯತೇ ಕಾಚಿತಶಿಕ್ಯಿತೇ ।
ಘ್ರಾಣಘ್ರಾತೇ ದಿಗ್ಧಲಿಪ್ತೇ ಸಮುದಕ್ತೋದ್ಧೃತೇ ಸಮ ॥ ೧೧೩೫
ವೇಷ್ಟಿತಂ ಸ್ಯಾದ್ವಲಯಿತಂ ಸಂವೀತಂ ರುದ್ಧಮಾವೃತಮ್ ।
ರುಗ್ಣಂ ಭುಗ್ನೇಽಥ ನಿಶಿತಕ್ಷ್ಣುತಶಾತಾನಿ ತೇಜಿತೇ ॥ ೧೧೩೬
ಸ್ಯಾದ್ವಿನಾಶೋನ್ಮುಖಂ ಪಕ್ವಂ ಹ್ರೀಣಹ್ರೀತೌ ತು ಲಜ್ಜಿತೇ ।
ವೃತೇ ತು ವೃತ್ತವಾವೃತ್ತೌ ಸಂಯೋಜಿತ ಉಪಾಹಿತಃ ॥ ೧೧೩೭
ಪ್ರಾಪ್ಯಂ ಗಮ್ಯಂ ಸಮಾಸಾದ್ಯಂ ಸ್ಯನ್ನಂ ರೀಣಂ ಸ್ರುತಂ ಸ್ನುತಮ್ ।
ಸಂಗೂಢಃ ಸ್ಯಾತ್ಸಂಕಲಿತೋಽವಗೀತಃ ಖ್ಯಾತಗರ್ಹಣಃ ॥ ೧೧೩೮
ವಿವಿಧಃ ಸ್ಯಾದ್ಬಹುವಿಧೋ ನಾನಾರೂಪಃ ಪೃಥಗ್ವಿಧಃ ।
ಅವರೀಣೋ ಧಿಕ್ಕೃತಶ್ಚಾಪ್ಯವಧ್ವಸ್ತೋಽವಚೂರ್ಣಿತಃ ॥ ೧೧೩೯
ಅನಾಯಾಸಕೃತಂ ಫಾಂಟಂ ಸ್ವನಿತಂ ಧ್ವನಿತಂ ಸಮೇ ।
ಬದ್ಧೇ ಸಂದಾನಿತಂ ಮೂತಮುದ್ದಿತಂ ಸಂದಿತಂ ಸಿತಮ್ ॥ ೧೧೪೦

---

೧೧೩೫. ದ್ರುತ, ಅವದೀರ್ಣ=ಕರಗಿದ. ಉದ್ಗೂರ್ಣ, ಉದ್ಯತ=ಮೇಲಕ್ಕೆ ಎತ್ತಲ್ಪಟ್ಟ. ಕಾಚಿತ, ಶಿಕ್ಯಿತ=ತೂಗುಹಾಕಲ್ಪಟ್ಟ, ನೇತುಹಾಕಿದ. ಘ್ರಾಣ, ಘ್ರಾತ=ಮೂಸಲ್ಪಟ್ಟ. ದಿಗ್ಧ, ಲಿಪ್ತ=ಲೇಪಿಸಲ್ಪಟ್ಟ. ಸಮುದಕ್ತ, ಉದ್ಧೃತ=ಮೇಲಕ್ಕೆ ಸೇದಲ್ಪಟ್ಟ, ಎತ್ತಲ್ಪಟ್ಟ.

೧೧೩೬. ವೇಷ್ಟಿತ, ವಲಯಿತ, ಸಂವೀತ, ರುದ್ಧ, ಆವೃತ=ಸುತ್ತುಗಟ್ಟಲ್ಪಟ್ಟ. ರುಗ್ಣ, ಭುಗ್ನ=ಬಾಗಿದ, ಡೊಂಕಾದ. ನಿಶಿತ, ಕ್ಷ್ಣುತ, ಶಾತ, ತೇಜಿತ=ಹರಿತಮಾಡಿದ.

೧೧೩೭. ವಿನಾಶೋನ್ಮುಖ, ಪಕ್ವ=ನಾಶಸ್ಥಿತಿಗೆ ಬಂದ. ಹ್ರೀಣ, ಹ್ರೀತ, ಲಜ್ಜಿತ=ನಾಚಿಕೆಗೊಂಡ. ವೃತ, ವೃತ್ತ, ವಾವೃತ್ತ=ವರಿಸಲ್ಪಟ್ಟ, ಆರಿಸಲ್ಪಟ್ಟ. ಸಂಯೋಜಿತ, ಉಪಾಹಿತ=ಸೇರಿಸಲ್ಪಟ್ಟ.

೧೧೩೮. ಪ್ರಾಪ್ಯ, ಗಮ್ಯ, ಸಮಾಸಾದ್ಯ=ಪಡೆಯಲು ಸಾಧ್ಯವಾದ. ಸ್ಯನ್ನ, ರೀಣ, ಸ್ರುತ, ಸ್ನುತ=ಸುರಿದ, ಸೋರಿದ. ಸಂಗೂಢ, ಸಂಕಲಿತ=ಸೇರಿಸಲ್ಪಟ್ಟ, ಕೂಡಿಸಲ್ಪಟ್ಟ. ಅವಗೀತ, ಖ್ಯಾತಗರ್ಹಣ=ಬಹಳ ನಿಂದ್ಯವಾದ.

೧೧೩೯. ವಿವಿಧ, ಬಹುವಿಧ, ನಾನಾರೂಪ, ಪೃಥಗ್ವಿಧ=ನಾನಾಬಗೆಯ. ಅವರೀಣ, ಧಿಕ್ಕೃತ=ತಿರಸ್ಕೃತವಾದ. ಅವಧ್ವಸ್ತ, ಅವಚೂರ್ಣಿತ=ಪುಡಿಗೊಳಿಸಲ್ಪಟ್ಟ.

೧೧೪೦. ಫಾಂಟ=ಸುಲಭ ರೀತಿಯಲ್ಲಿ ಮಾಡಿದ ಕಷಾಯ. ಸ್ವನಿತ, ಧ್ವನಿತ=ಶಬ್ದ ಮಾಡಿದ. ಬದ್ಧ, ಸಂದಾನಿತ, ಮೂತ, ಉದ್ದಿತ, ಸಂದಿತ, ಸಿತ=ಕಟ್ಟಲ್ಪಟ್ಟ.



ನಿಷ್ಪಕ್ವಂ ಕ್ವಥಿತಂ ಪಾಕೇ ಕ್ಷೀರಾಜ್ಯಪಯಸಾಂ ಶೃತಮ್ ।
ನಿರ್ವಾಣೋ ಮುನಿವಹ್ನ್ಯಾದೌ ನಿರ್ವಾತಸ್ತು ಗತೇಽನಿಲೇ ॥ ೧೧೪೧
ಪಕ್ವಂ ಪರಿಣತೇ ಗೂನಂ ಹನ್ನೇ ಮೀಢಂ ತು ಮೂತ್ರಿತೇ ।
ಪುಷ್ಟೇ ತು ಪುಷಿತಂ ಸೋಢೇ ಕ್ಷಾಂತಮುದ್ವಾಂತಮುದ್ಗತೇ ॥ ೧೧೪೨
ದಾಂತಸ್ತು ದಮಿತೇ ಶಾಂತಶ್ಶಮಿತೇ ಪ್ರಾರ್ಥಿತೇಽರ್ದಿತಃ ।
ಜ್ಞಪ್ತಸ್ತು ಜ್ಞಪಿತೇ ಛನ್ನಶ್ಛಾದಿತೇ ಪೂಜಿತೇಽಂಚಿತಃ ॥ ೧೧೪೩
ಪೂರ್ಣಸ್ತು ಪೂರಿತೇ ಕ್ಲಿಷ್ಟಃ ಕ್ಲಿಶಿತೇಽವಸಿತೇ ಸಿತಃ ।
ಪ್ರುಷ್ಟಪ್ಲುಷ್ಟೋಷಿತಾ ದಗ್ಧೇ ತ್ವಷ್ಟತ್ವಷ್ಟೌ ತನೂಕೃತೇ ॥ ೧೧೪೪
ವೇಧಿತಚ್ಛಿದ್ರಿತೌ ವಿದ್ಧೇ ವಿನ್ನವಿತ್ತೌ ವಿಚಾರಿತೇ ।
ನಿಷ್ಪ್ರಭೇ ವಿಗತಾರೋಕೌ ವಿಲೀನೇ ವಿದ್ರುತದ್ರುತೌ ॥ ೧೧೪೫

---

೧೧೪೧. ನಿಷ್ಪಕ್ವ, ಕ್ವಥಿತ=ಕುದಿಸಲ್ಪಟ್ಟ. ಶೃತ=ಹಾಲು ತುಪ್ಪ ಅಥವಾ ನೀರಿನಲ್ಲಿ ಪಕ್ವವಾದದ್ದು. ನಿರ್ವಾಣ=ಶಾಂತವಾದ ; ಮುಕ್ತನಾದ (ಮುನಿ, ಅಗ್ನಿ ಮುಂತಾದ್ದಕ್ಕೆ ವಿಶೇಷಣ). ನಿರ್ವಾತ=ಗಾಳಿ ಇಲ್ಲದ.

೧೧೪೨. ಪಕ್ವ, ಪರಿಣತ=ಕಾಲವಶದಿಂದ ಪರಿಣಾಮಗೊಂಡ. ಗೂನ, ಹನ್ನ=ಗುದದ್ವಾರದಿಂದ ಹೊರಗೆ ಬಂದ, ಹೇತ. ಮೀಢ, ಮೂತ್ರಿತ=ಉಚ್ಚೆಹೊಯ್ದ. ಪುಷ್ಟ, ಪುಷಿತ=ಪೋಷಿಸಲ್ಪಟ್ಟ. ಸೋಢ, ಕ್ಷಾಂತ=ಸಹಿಸಲ್ಪಟ್ಟ. ಉದ್ವಾಂತ, ಉದ್ಗತ=ವಾಂತಿಮಾಡಲ್ಪಟ್ಟ.

೧೧೪೩. ದಾಂತ, ದಮಿತ=ಪಳಗಿಸಲ್ಪಟ್ಟ. ಶಾಂತ, ಶಮಿತ=ಶಮನ ಹೊಂದಿದ. ಪ್ರಾರ್ಥಿತ, ಅರ್ದಿತ=ಯಾಚಿಸಲ್ಪಟ್ಟ. ಜ್ಞಪ್ತ, ಜ್ಞಪಿತ=ಬೋಧಿಸಲ್ಪಟ್ಟ, ಜ್ಞಾಪಿಸಲ್ಪಟ್ಟ. ಛನ್ನ, ಛಾದಿತ=ಹೊದಿಸಲ್ಪಟ್ಟ. ಪೂಜಿತ, ಅಂಚಿತ=ಪೂಜಿಸಲ್ಪಟ್ಟ.

೧೧೪೪. ಪೂರ್ಣ, ಪೂರಿತ=ತುಂಬಿದ. ಕ್ಲಿಷ್ಟ, ಕ್ಲಿಶಿತ=ಕ್ಲೇಶಕ್ಕೆ ಒಳಗಾದ. ಅವಸಿತ, ಸಿತ=ಮುಗಿದುಹೋದ. ಪ್ರುಷ್ಟ, ಪ್ಲುಷ್ಟ, ಉಷಿತ, ದಗ್ಧ=ಸುಟ್ಟುಹೋದ. ತಷ್ಟ, ತ್ವಷ್ಟ, ತನೂಕೃತ=ಕೆತ್ತಲ್ಪಟ್ಟ.

೧೧೪೫. ವೇಧಿತ, ಛಿದ್ರಿತ, ವಿದ್ಧ=ತೂತು ಕೊರೆಯಲ್ಪಟ್ಟ. ವಿನ್ನ, ವಿತ್ತ, ವಿಚಾರಿತ=ವಿಚಾರಕ್ಕೆ ಒಳಗಾದ. ನಿಷ್ಪ್ರಭ, ವಿಗತ, ಅರೋಕ=ಕಳೆಗುಂದಿದ. ವಿಲೀನ, ವಿದ್ರುತ, ದ್ರುತ=ಕರಗಿದ.

ಸಿದ್ಧೇ ನಿರ್ವೃತ್ತನಿಷ್ಪನ್ನೌ ದಾರಿತೇ ಭಿನ್ನಭೇದಿತೌ ।
ಊತಂ ಸ್ಯೂತಮುತಂ ಚೇತಿ ತ್ರಿತಯಂ ತಂತುಸಂತತೇ ॥ ೧೧೪೬
ಸ್ಯಾದರ್ಹಿತೇ ನಮಸ್ಯಿತನಮಸಿತಮಪಚಾಯಿತಾರ್ಚಿತಾಪಚಿತಮ್ ।
ವರಿವಸಿತೇ ವರಿವಸ್ಯಿತಮುಪಾಸಿತಂ ಚೋಪಚರಿತಂ ಚ ॥ ೧೧೪೭
ಸಂತಾಪಿತಸಂತಪ್ತೌ ಧೂಪಾಯಿತಧೂಪಿತೌ ಚ ಧೂನಶ್ಚ ।
ಹೃಷ್ಟೇ ಮತ್ತಸ್ತೃಪ್ತಃ ಪ್ರಹ್ಲನ್ನಃ ಪ್ರಮುದಿತಃ ಪ್ರೀತಃ ॥ ೧೧೪೮
ಛಿನ್ನಂ ಛಾತಂ ಲೂನಂ ಕೃತ್ತಂ ದಾತಂ ದಿತಂ ಛಿತಂ ವೃಕ್ಣಮ್ ।
ಸ್ರಸ್ತಂ ಧ್ವಸ್ತಂ ಭ್ರಷ್ಟಂ ಸ್ಕನ್ನಂ ಪನ್ನಂ ಚ್ಯುತಂ ಗಲಿತಮ್ ॥ ೧೧೪೯
ಲಬ್ಧಂ ಪ್ರಾಪ್ತಂ ವಿನ್ನಂ ಭಾವಿತಮಾಸಾದಿತಂ ಚ ಭೂತಂ ಚ ।
ಅನ್ವೇಷಿತಂ ಗವೇಷಿತಮನ್ವಿಷ್ಟಂ ಮಾರ್ಗಿತಂ ಮೃಗಿತಮ್ ॥ ೧೧೫೦
ಆರ್ದ್ರಂ ಸಾರ್ದ್ರಂ ಕ್ಲಿನ್ನಂ ತಿಮಿತಂ ಸ್ತಿಮಿತಂ ಸಮುನ್ನಮುತ್ತಂ ಚ ।
ತ್ರಾತಂ ತ್ರಾಣಂ ರಕ್ಷಿತಮವಿತಂ ಗೋಪಾಯಿತಂ ಚ ಗುಪ್ತಂ ಚ ॥ ೧೧೫೧

---

೧೧೪೬. ಸಿದ್ಧ, ನಿರ್ವೃತ್ತ, ನಿಷ್ಪನ್ನ=ಸಿದ್ಧವಾದ. ದಾರಿತ, ಭಿನ್ನ, ಭೇದಿತ=ಸೀಳಲ್ಪಟ್ಟ. ಊತ, ಸ್ಯೂತ, ಉತ=ಹೊಲಿಯಲ್ಪಟ್ಟ ; ನೇಯಲ್ಪಟ್ಟ.

೧೧೪೭. ಅರ್ಹಿತ, ನಮಸ್ಯಿತ, ನಮಸಿತ, ಅಪಚಾಯಿತ, ಅರ್ಚಿತ, ಅಪಚಿತ=ನಮಸ್ಕೃತವಾದ. ವರಿವಸಿತ, ವರಿವಸ್ಯಿತ, ಉಪಾಸಿತ, ಉಪಚರಿತ=ಪೂಜಿತವಾದ.

೧೧೪೮. ಸಂತಾಪಿತ, ಸಂತಪ್ತ, ಧೂಪಾಯಿತ, ಧೂಪಿತ, ದೂನ=ಕಾಯಿಸಲ್ಪಟ್ಟ ; ಪೀಡೆಗೆ ಒಳಗಾದ. ಹೃಷ್ಟ, ಮತ್ತ, ತೃಪ್ತ, ಪ್ರಹ್ಲನ್ನ, ಪ್ರಮುದಿತ, ಪ್ರೀತ=ಸಂತುಷ್ಟನಾದ.

೧೧೪೯. ಛಿನ್ನ, ಛಾತ, ಲೂನ, ಕೃತ್ತ, ದಾತ, ದಿತ, ಛಿತ, ವೃಕ್ಣ=ಕತ್ತರಿಸಲ್ಪಟ್ಟ. ಸ್ರಸ್ತ, ಧ್ವಸ್ತ, ಭ್ರಷ್ಟ, ಸ್ಕನ್ನ, ಪನ್ನ, ಚ್ಯುತ, ಗಲಿತ=ಜಾರಿದ, ಕಳಚಿದ.

೧೧೫೦. ಲಬ್ಧ, ಪ್ರಾಪ್ತ, ವಿನ್ನ, ಭಾವಿತ, ಆಸಾದಿತ, ಭೂತ=ದೊರೆತ. ಅನ್ವೇಷಿತ, ಗವೇಷಿತ, ಅನ್ವಿಷ್ಟ, ಮಾರ್ಗಿತ, ಮೃಗಿತ=ಹುಡುಕಲ್ಪಟ್ಟ.

೧೧೫೧. ಆರ್ದ್ರ, ಸಾರ್ದ್ರ, ಕ್ಲಿನ್ನ, ತಿಮಿತ, ಸ್ತಿಮಿತ, ಸಮುನ್ನ, ಉತ್ತ=ಒದ್ದೆಯಾದ. ತ್ರಾತ, ತ್ರಾಣ, ರಕ್ಷಿತ, ಅವಿತ, ಗೋಪಾಯಿತ, ಗುಪ್ತ=ರಕ್ಷಿತವಾದ.



ಅಗಣಿತಮವಮತಾವಜ್ಞಾತೇಽವಮಾನಿತಂ ಚ ಪರಿಭೂತೇ ।
ತ್ಯಕ್ತಂ ಹೀನಂ ವಿಧುತಂ ಸಮುಜ್ಝಿತಂ ಧೂತಮುತ್ಸೃಷ್ಟಮ್ ॥ ೧೧೫೨
ಉಕ್ತಂ ಭಾಷಿತಮುದಿತಂ ಜಲ್ಪಿತಮಾಖ್ಯಾತಮಭಿಹಿತಂ ಲಪಿತಮ್ ।
ಬುದ್ಧಂ ಬುಧಿತಂ ಮನಿತಂ ವಿದಿತಂ ಪ್ರತಿಪನ್ನಮವಸಿತಾವಗತೇ ॥ ೧೧೫೩
ಊರೀಕೃತಮುರರೀಕೃತಮಂಗೀಕೃತಮಾಶ್ರುತಂ ಪ್ರತಿಜ್ಞಾತಮ್ ।
ಸಂಗೀರ್ಣವಿದಿತಸಂಶ್ರುತಸಮಾಹಿತೋಪಶ್ರುತೋಪಗತಮ್ ॥ ೧೧೫೪
ಈಲಿತಶಸ್ತಪಣಾಯಿತಪನಾಯಿತ ಪ್ರಣುತಪಣಿತಪನಿತಾನಿ ।
ಅಪಿ ಗೀರ್ಣವರ್ಣಿತಾಭಿಷ್ಟುತೇಡಿತಾನಿ ಸ್ತುತಾರ್ಥಾನಿ ॥ ೧೧೫೫
ಭಕ್ಷಿತಚರ್ವಿತಲಿಪ್ತಪ್ರತ್ಯವಸಿತಗಿಲಿತಖಾದಿತಪ್ಸಾತಮ್ ।
ಅಭ್ಯವಹೃತಾನ್ನಜಗ್ಧಗ್ರಸ್ತಗ್ಲಸ್ತಾಶಿತಂ ಭುಕ್ತೇ ॥ ೧೧೫೬
ಕ್ಷೇಪಿಷ್ಠಕ್ಷೋದಿಷ್ಠಪ್ರೇಷ್ಠ ವರಿಷ್ಠಸ್ಥವಿಷ್ಠಬಂಹಿಷ್ಠಾಃ ।
ಕ್ಷಿಪ್ರಕ್ಷುದ್ರಾಭೀಪ್ಸಿತಪೃಥುಪೀವರಬಹುಪ್ರಕರ್ಷಾರ್ಥಾಃ ॥ ೧೧೫೭

---

೧೧೫೨. ಅಗಣಿತ, ಅವಮತ, ಅವಜ್ಞಾತ, ಅವಮಾನಿತ, ಪರಿಭೂತ=ಉಪೇಕ್ಷಿತವಾದ. ತ್ಯಕ್ತ, ಹೀನ, ವಿಧುತ, ಸಮುಜ್ಝಿತ, ಧೂತ, ಉತ್ಸೃಷ್ಟ=ತ್ಯಜಿಸಲ್ಪಟ್ಟ.

೧೧೫೩. ಉಕ್ತ, ಭಾಷಿತ, ಉದಿತ, ಜಲ್ಪಿತ, ಆಖ್ಯಾತ, ಅಭಿಹಿತ, ಲಪಿತ= ಹೇಳಲ್ಪಟ್ಟ. ಬುದ್ಧ, ಬುಧಿತ (ಮತ) ಮನಿತ, ವಿದಿತ, ಪ್ರತಿಪನ್ನ, ಅವಸಿತ, ಅವಗತ=ತಿಳಿಯಲ್ಪಟ್ಟ.

೧೧೫೪. ಊರೀಕೃತ, ಉರರೀಕೃತ, ಅಂಗೀಕೃತ, ಆಶ್ರುತ, ಪ್ರತಿಜ್ಞಾತ, ಸಂಗೀರ್ಣ, ವಿದಿತ, ಸಂಶ್ರುತ, ಸಮಾಹಿತ, ಉಪಶ್ರುತ, ಉಪಗತ=ಅಂಗೀಕೃತವಾದ.

೧೧೫೫. ಈಲಿತ, ಶಸ್ತ, ಪಣಾಯಿತ, ಪನಾಯಿತ, ಪ್ರಣುತ, ಪಣಿತ, ಪನಿತ, ಗೀರ್ಣ, ವರ್ಣಿತ, ಅಭಿಷ್ಟುತ, ಈಡಿತ, ಸ್ತುತ=ಸ್ತುತಿಸಲ್ಪಟ್ಟ.

೧೧೫೬. ಭಕ್ಷಿತ, ಚರ್ವಿತ, ಲಿಪ್ತ[1], ಪ್ರತ್ಯವಸಿತ, ಗಿಲಿತ, ಖಾದಿತ, ಪ್ಸಾತ, ಅಭ್ಯವಹೃತ, ಅನ್ನ, ಜಗ್ಧ, ಗ್ರಸ್ತ, ಗ್ಲಸ್ತ, ಅಶಿತ, ಭುಕ್ತ=ತಿನ್ನಲ್ಪಟ್ಟ.

೧೧೫೭. ಕ್ಷೇಪಿಷ್ಠ, ಕ್ಷೋದಿಷ್ಠ, ಪ್ರೇಷ್ಠ, ವರಿಷ್ಠ, ಸ್ಥವಿಷ್ಠ, ಬಂಹಿಷ್ಠ=ಈ ಆರು ಶಬ್ದಗಳು ಕ್ರಮವಾಗಿ ಕ್ಷಿಪ್ರ, ಕ್ಷುದ್ರ, ಅಭೀಪ್ಸಿತ, ಪೃಥು, ಪೀವರ, ಬಹು—ಎಂಬವುಗಳ

---

[1] ಲಿಪ್ತಕ್ಕೆ ಬದಲಾಗಿ ಲೀಢ ಎಂದು ಪಾಠಾಂತರವಿದೆ.

**ಸಾಧಿಷ್ಠದ್ರಾಘಿಷ್ಠಸ್ಫೇಷ್ಠಗರಿಷ್ಠಹ್ರಸಿಷ್ಠಬೃಂದಿಷ್ಠಾಃ ।**
**ಬಾಢವ್ಯಾಯತಬಹುಗುರುವಾಮನಬೃಂದಾರಕಾತಿಶಯೇ ॥** ೧೧೫೮

ಇತಿ ವಿಶೇಷ್ಯನಿಘ್ನವರ್ಗಃ

---

ಪ್ರಕರ್ಷ ಬೋಧಕಗಳು. ಉದಾ: ಕ್ಷೇಪಿಷ್ಠ=ಅತ್ಯಂತ ಕ್ಷಿಪ್ರವಾದ. ಪೃಥು=ದೊಡ್ಡದು ; ಅಗಲವಾದದ್ದು. ಪೀವರ=ಸ್ಥೂಲ.

೧೧೫೮. ಸಾಧಿಷ್ಠ, ದ್ರಾಘಿಷ್ಠ, ಸ್ಫೇಷ್ಠ, ಗರಿಷ್ಠ, ಹ್ರಸಿಷ್ಠ, ಬೃಂದಿಷ್ಠ=ಇವು ಆರು ಕ್ರಮವಾಗಿ ಬಾಢ, ವ್ಯಾಯತ, ಬಹು, ಗುರು, ವಾಮನ, ಬೃಂದಾರಕ ಎಂಬವುಗಳ ಪ್ರಕರ್ಷಬೋಧಕಗಳು. ಬಾಢ=ಉತ್ತಮ. ವ್ಯಾಯತ=ಉದ್ದ. ವಾಮನ=ಕುಳ್ಳಾದ. ಬೃಂದಾರಕ=ಮುಖ್ಯ.

### ೨. ಸಂಕೀರ್ಣವರ್ಗಃ

**ಪ್ರಕೃತಿಪ್ರತ್ಯಯಾರ್ಥಾದ್ಯೈಸ್ಸಂಕೀರ್ಣೇ ಲಿಂಗಮುನ್ನಯೇತ್ ।**
**ಕರ್ಮಕ್ರಿಯಾ ತತ್ಸಾತತ್ಯೇ ಗಮ್ಯೇ ಸ್ಯುರಪರಸ್ಪರಾಃ ॥** ೧೧೫೯
**ಸಾಕಲ್ಯಾಸಂಗವಚನೇ ಪಾರಾಯಣತುರಾಯಣೇ ।**
**ಯದೃಚ್ಛಾ ಸ್ವೈರಿತಾ ಹೇತುಶೂನ್ಯಾ ತ್ವಾಸ್ಥಾ ವಿಲಕ್ಷಣಮ್ ॥** ೧೧೬೦

---

### ಸಂಕೀರ್ಣವರ್ಗ

೧೧೫೯. ಈ ಸಂಕೀರ್ಣವರ್ಗದಲ್ಲಿ ಪ್ರಕೃತ್ಯರ್ಥ ಪ್ರತ್ಯಯಾರ್ಥಗಳಿಂದಲೂ ಹಾಗೆಯೇ ರೂಪಭೇದ ಸಾಹಚರ್ಯಗಳಿಂದಲೂ ಆಯಾ ಶಬ್ದದ ಲಿಂಗವನ್ನು ಊಹಿಸಿ ತಿಳಿಯಬೇಕು. (ಈ ವರ್ಗದಲ್ಲಿ 'ಸ್ತ್ರಿಯಾಂ, ಕ್ಲೀಬೇ' ಮುಂತಾದ ಶಬ್ದಗಳಿಂದ ಲಿಂಗವನ್ನು ತಿಳಿಸಿಲ್ಲ.)ಉದಾ:

೧. ಪ್ರಕೃತ್ಯರ್ಥ—ಅಪರಸ್ಪರ, ಸ್ತಂಬಘ್ನ ಶಬ್ದಗಳು. ಇವು ವಿಶೇಷ್ಯ ನಿಘ್ನಗಳಾದ್ದರಿಂದ ಅರ್ಥಾನುಸಾರವಾಗಿ ಮೂರುಲಿಂಗಗಳನ್ನೂ ಪಡೆಯುತ್ತವೆ.

೨. ಪ್ರತ್ಯಾಯಾರ್ಥ— ಶಾಂತಿ, ದಾಂತಿ. 'ಸ್ತ್ರಿಯಾಂ ಕ್ತಿನ್' ಎಂಬ ಅಷ್ಟಾಧ್ಯಾಯೀ ಸೂತ್ರದಿಂದ 'ತಿ' ಎಂಬ ಪ್ರತ್ಯಯವು ಸ್ತ್ರೀಲಿಂಗದಲ್ಲಿ ವಿಹಿತವಾಗಿದೆ.

೩..ರೂಪಭೇದ= 'ವಿದರಃ ಸ್ಫುಟನಂ ಭಿದಾ.' ಈ ಮೂರು ಶಬ್ದಗಳು ಕ್ರಮವಾಗಿ ಪುಲ್ಲಿಂಗ ನಪುಂಸಕ ಲಿಂಗ ಸ್ತ್ರೀಲಿಂಗಗಳೆಂದು ರೂಪಭೇದದಿಂದ ತಿಳಿಯಬಹುದು.

೪. ಸಾಹಚರ್ಯ—'ಡಿಂಬೇ ಡಮರವಿಪ್ಲವೌ' ಇಲ್ಲಿ ಡಮರವಿಪ್ಲವ ಶಬ್ದಗಳ ಸಾಹಚರ್ಯದಿಂದ ಡಿಂಬ ಶಬ್ದವು ಪುಲ್ಲಿಂಗವೆಂದೂ ತಿಳಿಯಬಹುದು.

ಕರ್ಮನ್ (ನ), ಕ್ರಿಯಾ (ಸ್ತ್ರೀ)=ಕೆಲಸ. ಅಪರಸ್ಪರ (ವಿ. ನಿಘ್ನ)=ಸದಾ ತೆರಪಿಲ್ಲದ. ಉದಾ:ಅಪರಸ್ಪರಾಃ ಸಾರ್ಥಾ ಗಚ್ಛಂತಿ. (ಇದು ಕ್ರಿಯಾವಿಶೇಷಣವಾದಾಗ ನಪುಂಸಕ. ಉದಾ: ಅಪರಸ್ಪರಂ ಜನಾ ಗಚ್ಛಂತಿ).

೧೧೬೦. ಪಾರಾಯಣ, ತುರಾಯಣ (ನ)=ಸಮಗ್ರವಾಗಿ ಸ್ಖಾಲಿತ್ಯವಿಲ್ಲದಂತೆ ಉಚ್ಚರಿಸುವುದು. ಯದೃಚ್ಛಾ, ಸ್ವೈರಿತಾ (ಸ್ತ್ರೀ)=ಮನಸ್ಸು ಬಂದಂತೆ ವರ್ತಿಸುವುದು, ಸ್ವೇಚ್ಛೆ. ವಿಲಕ್ಷಣ=ಕಾರಣವಿಲ್ಲದೆ ಇರುವುದು. .

೧೧೬೧. ಶಮಥ, ಶಮ (ಪು), ಶಾಂತಿ (ಸ್ತ್ರೀ)=ಕಾಮಕ್ರೋಧಾದಿಗಳ ನಿಗ್ರಹ. ದಾಂತಿ (ಸ್ತ್ರೀ), ದಮಥ, ದಮ (ಪು)=ತಪಃಕ್ಲೇಶವನ್ನು ಸಹಿಸಿಕೊಳ್ಳುವುದು. ಅವದಾನ (ನ)=ಹಿಂದೆ

ಶಮಥಸ್ತು ಶಮಶ್ಶಾಂತಿರ್ದಾಂತಿಸ್ತು ದಮಥೋ ದಮಃ ।
ಅವದಾನಂ ಕರ್ಮ ವೃತ್ತಂ ಕಾಮ್ಯದಾನಂ ಪ್ರವಾರಣಮ್ ॥ ೧೧೬೧
ವಶಕ್ರಿಯಾ ಸಂವನನಂ ಮೂಲಕರ್ಮ ತು ಕಾರ್ಮಣಮ್ ।
ವಿಧೂನನಂ ವಿಧುವನಂ ತರ್ಪಣಂ ಪ್ರೀಣನಾವನಮ್ ॥ ೧೧೬೨
ಪರ್ಯಾಪ್ತಿಸ್ಸ್ಯಾತ್ಪರಿತ್ರಾಣಂ ಹಸ್ತವಾರಣಮಿತ್ಯಪಿ ।
ಸೇವನಂ ಸೀವನಂ ಸ್ಯೂತಿರ್ವಿದರಃ ಸ್ಫುಟನಂ ಭಿದಾ ॥ ೧೧೬೩
ಆಕ್ರೋಶನಮಭೀಷಂಗಸ್ಸಂವೇದೋ ವೇದನಾ ನ ನಾ ।
ಸಂಮೂರ್ಛನಮಭಿವ್ಯಾಪ್ತಿರ್ಯಾಚ್ಞಾ ಭಿಕ್ಷಾರ್ಥನಾರ್ದನಾ ॥ ೧೧೬೪
ವರ್ಧನಂ ಛೇದನೇಽಥ ದ್ವೇ ಆನಂದನಸಭಾಜನೇ ।
ಆಪ್ರಚ್ಛನ್ನಮಥಾಮ್ನಾಯಸ್ಸಂಪ್ರದಾಯಃ ಕ್ಷಯೇ ಕ್ಷಿಯಾ ॥ ೧೧೬೫

---

ನಡೆದ ಕಾರ್ಯ. ಕಾಮ್ಯದಾನ, ಪ್ರವಾರಣ=ಫಲಾಪೇಕ್ಷೆಯಿಂದ ಕೊಡುವುದು ; ಬಯಸಿದ್ದನ್ನು ಕೊಡುವುದು.

೧೧೬೨. ವಶಕ್ರಿಯಾ (ಸ್ತ್ರೀ), ಸಂವನನ (ಸಂವದನ)=ವಶಪಡಿಸಿಕೊಳ್ಳುವುದು. ಮೂಲ ಕರ್ಮನ್, ಕಾರ್ಮಣ (ನ)=ಮೂಲಿಕೆ ಮುಂತಾದವುಗಳಿಂದ ಮಾಡುವ ವಿಷಹರಣ ಮುಂತಾದ ಪ್ರಯೋಗ, ಚಾಟುಕ. ವಿಧೂನನ, ವಿಧುವನ (ನ)=ಕೊಡಹುವುದು, ತಳ್ಳುವುದು. ತರ್ಪಣ, ಪ್ರೀಣನ, ಅವನ (ನ)=ತೃಪ್ತಿಪಡಿಸುವುದು.

೧೧೬೩. ಪರ್ಯಾಪ್ತಿ (ಸ್ತ್ರೀ), ಪರಿತ್ರಾಣ, ಹಸ್ತವಾರಣ (ನ)=ಕೈಬೀಸಿ ತಡೆಯುವುದು. ಸೇವನ, ಸೀವನ (ನ) ಸ್ಯೂತಿ (ಸ್ತ್ರೀ)=ಹೊಲಿಯುವುದು. ವಿದರ (ಪು), ಸ್ಫುಟನ (ನ), ಭಿದಾ (ಸ್ತ್ರೀ)=ರಂಧ್ರ ಮಾಡುವುದು.

೧೧೬೪. ಆಕ್ರೋಶನ (ನ), ಅಭೀಷಂಗ. (ಪು)=ಶಾಪ, ಬಯ್ಯುವುದು. ಸಂವೇದ (ಪು),ವೇದನ (ನ. ಸ್ತ್ರೀ)=ಮಾನಸಿಕವಾದ ಅನುಭವ, ಸಂಮೂರ್ಛನ (ನ), ಅಭಿವ್ಯಾಪ್ತಿ (ಸ್ತ್ರೀ)=ವ್ಯಾಪಿಸುವುದು. ಯಾಚ್ಞಾ, ಭಿಕ್ಷಾ, ಅರ್ಥನಾ, ಅರ್ದನಾ (ಸ್ತ್ರೀ)=ಬೇಡುವುದು.

೧೧೬೫. ವರ್ಧನ, ಛೇದನ (ನ)=ಕತ್ತರಿಸುವುದು. ಆನಂದನ, ಸಭಾಜನ, ಆಪ್ರಚ್ಛನ್ನ (ನ)=ಉಪಚಾರ, ಸತ್ಕಾರ. ಆಮ್ನಾಯ, ಸಂಪ್ರದಾಯ (ಪು)=ಗುರುಪರಂಪರೆಯಿಂದ ಬಂದ ಉಪದೇಶ (Holy tradition). ಕ್ಷಯ (ಪು), ಕ್ಷಿಯಾ (ಸ್ತ್ರೀ)=ಕ್ಷೀಣಿಸುವಿಕೆ.



ಗ್ರಹೋ ಗ್ರಾಹೇ ವಶಃ ಕಾಂತೌ ರಕ್ಷ್ಣಸ್ತ್ರಾಣೇ ರಣಃ ಕ್ವಣೇ ।
ವ್ಯಧೋ ವೇಧೇ ಪಚಾ ಪಾಕೇ ಹವೋ ಹೂತೌ ವರೋ ವೃತೌ ॥ ೧೧೬೬
ಓಷಃ ಪ್ಲೋಷೇ ನಯೋ ನಾಯೇ ಜ್ಯಾನಿರ್ಜೀರ್ಣೌ ಭ್ರಮೋ ಭ್ರಮೌ ।
ಸ್ಫಾತಿರ್ವೃದ್ಧೌ ಪ್ರಥಾ ಖ್ಯಾತೌ ಸ್ಪೃಷ್ಟಿಃ ಪೃಕ್ತೌ ಸ್ನವಸ್ಸ್ರವೇ ॥ ೧೧೬೭
ಏಧಾ ಸಮೃದ್ಧೌ ಸ್ಫುರಣೇ ಸ್ಫುರಣಾಪ್ರಮಿತೌ ಪ್ರಮಾ ।
ಪ್ರಸೂತಿಃ ಪ್ರಸವೇ ಶ್ಚ್ಯೋತೇ ಪ್ರಾಘಾರಃ ಕ್ಲಮಥಃ ಕ್ಲಮೇ ॥ ೧೧೬೮
ಉತ್ಕರ್ಷೋಽತಿಶಯೇ ಸಂಧಿಃ ಶ್ಲೇಷೇ ವಿಷಯ ಆಶ್ರಯೇ ।
ಕ್ಷಿಪಾಯಾಂ ಕ್ಷೇಪಣಂ ಗೀರ್ಣಿರ್ಗಿರೌ ಗುರಣಮುದ್ಯಮೇ ॥ ೧೧೬೯

---

೧೧೬೬. ಗ್ರಹ, ಗ್ರಾಹ (ಪು)=ಹಿಡಿಯುವುದು. ವಶ (ಪು)=ಕಾಂತಿ (ಸ್ತ್ರೀ)= ಇಚ್ಛೆ. ರಕ್ಷ್ಣ (ಪು), ತ್ರಾಣ (ನ)=ರಕ್ಷಣೆ. ರಣ, ಕ್ವಣ (ಪು)=ಶಬ್ದಮಾಡುವುದು. ವ್ಯಧ, ವೇಧ (ಪು)=ಚುಚ್ಚುವುದು. ಪಚಾ (ಸ್ತ್ರೀ), ಪಾಕ (ಪು)=ಅಡಿಗೆ, ಬೇಯಿಸುವುದು. ಹವ (ಪು), ಹೂತಿ (ಸ್ತ್ರೀ)=ಆಹ್ವಾನ, ವರ (ಪು), ವೃತಿ (ಸ್ತ್ರೀ)=ಆರಿಸುವುದು.

೧೧೬೭. ಓಷ, ಪ್ಲೋಷ (ಪು)=ಸುಡುವುದು. ನಯ, ನಾಯ (ಪು)=ಹೊಂದಿಸುವುದು ; ನೀತಿ. ಜ್ಯಾನಿ, ಜೀರ್ಣಿ (ಸ್ತ್ರೀ)=ಮುಪ್ಪು, ಶೈಥಿಲ್ಯ. ಭ್ರಮ (ಪು),ಭ್ರಮಿ (ಸ್ತ್ರೀ)=ಸುತ್ತುವುದು ; ಭ್ರಾಂತಿ. ಸ್ಫಾತಿ, ವೃದ್ಧಿ (ಸ್ತ್ರೀ)ಹೆಚ್ಚುವುದು. ಪ್ರಥಾ, ಖ್ಯಾತಿ (ಸ್ತ್ರೀ)=ಪ್ರಖ್ಯಾತಿ. ಸ್ಪೃಷ್ಟಿ, ಪೃಕ್ತಿ (ಸ್ತ್ರೀ)=ಸ್ಪರ್ಶ. ಸ್ನವ, ಸ್ರವ (ಪು)=ಸೋರುವುದು.

೧೧೬೮. ಏಧಾ, ಸಮೃದ್ಧಿ (ಸ್ತ್ರೀ)=ಧನಸಮೃದ್ಧಿ. ಸ್ಫುರಣ (ನ),ಸ್ಫುರಣಾ=ಸ್ಫುರಿಸುವುದು, ಹೊಳೆಯುವುದು ; ಅದಿರುವುದು. ಪ್ರಮಿತಿ, ಪ್ರಮಾ (ಸ್ತ್ರೀ)=ಯಥಾರ್ಥಜ್ಞಾನ. ಪ್ರಸೂತಿ (ಸ್ತ್ರೀ), ಪ್ರಸವ (ಪು)=ಹೆರುವುದು. ಶ್ಚ್ಯೋತ, ಪ್ರಾಘಾರ (ಪು)=ಹರಿಯುವಿಕೆ ; ತುಳುಕುವಿಕೆ. ಕ್ಲಮ[1]ಥ, ಕ್ಲಮ (ಪು)=ಬಳಲಿಕೆ.

೧೧೬೯. ಉತ್ಕರ್ಷ, ಅತಿಶಯ (ಪು)=ಮೇಲ್ಮೆ. ಸಂಧಿ, ಶ್ಲೇಷ (ಪು)=ಕೂಡುವಿಕೆ. ವಿಷಯ, ಆಶ್ರಯ (ಆಶಯ) (ಪು)=ಆಸರೆ, ಅವಲಂಬ. ಕ್ಷಿಪಾ (ಸ್ತ್ರೀ), ಕ್ಷೇಪಣ (ನ)=ಎಸೆಯುವುದು. ಗೀರ್ಣಿ, ಗಿರಿ (ಸ್ತ್ರೀ)=ನುಂಗುವುದು. ಗುರಣ (ಗೂರಣ), ಉದ್ಯಮ= ಉದ್ಯೋಗ.

---

[1] ಕ್ಲಮಥು ಎಂಬ ಶಬ್ದವೂ ಇದೆ.

ಉನ್ನಾಯ ಉನ್ನಯೇ ಶ್ರಾಯಶ್ರ್ಯಯಣೇ ಜಯನೇ ಜಯಃ ।
ನಿಗಾದೋ ನಿಗದೇ ಮಾದೋ ಮದ ಉದ್ವೇಗ ಉದ್ಭ್ರಮೇ ॥ ೧೧೭೦
ವಿಮರ್ದನಂ ಪರಿಮಲೇಽಭ್ಯುಪಪತ್ತಿರನುಗ್ರಹಃ ।
ನಿಗ್ರಹಸ್ತು ನಿರೋಧಃ ಸ್ಯಾದಭಿಯೋಗಸ್ತ್ವಭಿಗ್ರಹಃ ॥ ೧೧೭೧
ಮುಷ್ಟಿಬಂಧಸ್ತು ಸಂಗ್ರಾಹೋ ಡಿಂಬೇ ಡಮರವಿಪ್ಲವೌ ।
ಬಂಧನಂ ಪ್ರಸಿತಿಶ್ಚಾರಸ್ಸ್ಪರ್ಶಃ ಸ್ಪೃಷ್ಟೋಪತಪ್ತರಿ ॥ ೧೧೭೨
ನಿಕಾರೋ ವಿಪ್ರಕಾರಸ್ಸ್ಯಾದಾಕಾರಸ್ತ್ವಿಂಗ ಇಂಗಿತಮ್ ।
ಪರಿಣಾಮೋ ವಿಕಾರೋ ದ್ವೇ ಸಮೇ ವಿಕೃತಿವಿಕ್ರಿಯೇ ॥ ೧೧೭೩
ಅಪಹಾರಸ್ತ್ವಪಚಯಸ್ಸಮಾಹಾರಸ್ಸಮುಚ್ಚಯಃ ।
ಪ್ರತ್ಯಾಹಾರ ಉಪಾದಾನಂ ವಿಹಾರಸ್ತು ಪರಿಕ್ರಮಃ ॥ ೧೧೭೪

---

೧೧೭೦. ಉನ್ನಾಯ, ಉನ್ನಯ (ಪು)=ಎತ್ತುವುದು ; ಊಹಿಸುವುದು. ಶ್ರಾಯ (ಪು), ಶ್ರಯಣ (ನ)=ಅವಲಂಬಿಸುವುದು ; ಸೇವೆ. ಜಯನ (ನ), ಜಯ (ಪು)=ಗೆಲ್ಲುವುದು. ನಿಗಾದ, ನಿಗದ (ಪು)=ಸ್ಪಷ್ಟವಾಗಿ ಹೇಳುವುದು. ಮಾದ, ಮದ (ಪು)=ಗರ್ವ ; ಹರ್ಷ. ಉದ್ವೇಗ, ಉದ್ಭ್ರಮ (ಪು)=ತಳಮಳ, ಕಳವಳ.

೧೧೭೧. ವಿಮರ್ದನ (ನ), ಪರಿಮಲ (ಪು)=ಗಂಧದ್ರವ್ಯವನ್ನು ತೀಡುವುದು ; ಸುಗಂಧ. ಅಭ್ಯುಪಪತ್ತಿ (ಸ್ತ್ರೀ), ಅನುಗ್ರಹ (ಪು)=ಹಿತವನ್ನು ಮಾಡುವುದು. ನಿಗ್ರಹ, ನಿರೋಧ (ಪು) ಅಹಿತವನ್ನು ಮಾಡುವುದು. ಅಭಿಯೋಗ, ಅಭಿಗ್ರಹ=ಕಲಹಕ್ಕಾಗಿ ನುಗ್ಗುವುದು.

೧೧೭೨. ಮುಷ್ಟಿಬಂಧ, ಸಂಗ್ರಾಹ (ಪು)=ಮುಷ್ಟಿಯನ್ನು ಕಟ್ಟುವುದು. ಡಿಂಬ, ಡಮರ, ವಿಪ್ಲವ(ಪು)=ದೇಶೋಪದ್ರವ. ಬಂಧನ (ನ), ಪ್ರಸಿತಿ (ಸ್ತ್ರೀ), ಚಾರ (ಪು)=ಕಟ್ಟುವುದು. (ಚಾರಾಗಾರ=ಬಂಧನಾಲಯ [Jail]). ಸ್ಪರ್ಶ, ಸ್ಪೃಷ್ಟ, ಉಪತಪ್ತ (ಪು)=ತಾಪಕರವಾದ ಒಂದು ರೋಗ.

೧೧೭೩. ನಿಕಾರ, ವಿಪ್ರಕಾರ (ಪು)=ಅಪಕಾರ. ಆಕಾರ, ಇಂಗ (ಪು), ಇಂಗಿತ (ನ)=ಅಭಿಪ್ರಾಯವನ್ನು ಪ್ರಕಟಗೊಳಿಸುವ ಚೇಷ್ಟೆ—ಮುಖವಿಕಾರ. ಪರಿಣಾಮ, ವಿಕಾರ (ಪು), ವಿಕೃತಿ, ವಿಕ್ರಿಯಾ (ಸ್ತ್ರೀ)=ಸ್ವರೂಪದ ಬದಲಾವಣೆ.

೧೧೭೪. ಅಪಹಾರ, ಅಪಚಯ (ಪು)=ಹಾನಿಗೊಳಿಸುವುದು. ಸಮಾಹಾರ, ಸಮುಚ್ಚಯ (ಪು)=ರಾಶಿಮಾಡುವುದು. ಪ್ರತ್ಯಾಹಾರ (ಪು), ಉಪಾದಾನ (ನ)=ಹಿಂದಕ್ಕೆ ಎಳೆದು ಕೊಳ್ಳುವುದು. ವಿಹಾರ, ಪರಿಕ್ರಮ (ಪು)=ಕ್ರೀಡಾರ್ಥವಾದ ಸಂಚಾರ.



ಅಭಿಹಾರೋಽಭಿಗ್ರಹಣಂ ನಿರ್ಹಾರೋಽಭ್ಯವಕರ್ಷಣಮ್ ।
ಅನುಹಾರೋಽನುಕಾರಸ್ಸ್ಯಾದರ್ಥಸ್ಯಾಪಗಮೇ ವ್ಯಯಃ ॥ ೧೧೭೫
ಪ್ರವಾಹಸ್ತು ಪ್ರವೃತ್ತಿಸ್ಸ್ಯಾತ್ಪ್ರವಹೋ ಗಮನಂ ಬಹಿಃ ।
ವಿಯಾಮೋ ವಿಯಮೋ ಯಾಮೋ ಯಮಸ್ಸಂಯಾಮಸಂಯಮೌ ॥
ಹಿಂಸಾಕರ್ಮಾಭಿಚಾರಸ್ಸ್ಯಾಜ್ಜಾಗರ್ಯಾ ಜಾಗರಾ ದ್ವಯೋಃ ।
ವಿಘ್ನೋಽಂತರಾಯಃ ಪ್ರತ್ಯೂಹಸ್ಸ್ಯಾದುಪಘ್ನೋಽಂತಿಕಾಶ್ರಯೇ ॥ ೧೧೭೭
ನಿರ್ವೇಶ ಉಪಭೋಗಸ್ಸ್ಯಾತ್ಪರಿಸರ್ಪಃ ಪರಿಕ್ರಿಯಾ ।
ವಿಧುರಂ ತು ಪ್ರವಿಶ್ಲೇಷೋಽಭಿಪ್ರಾಯಶ್ಛಂದ ಆಶಯಃ ॥ ೧೧೭೮
ಸಂಕ್ಷೇಪಣಂ ಸಮಸನಂ ಪರ್ಯವಸ್ಥಾ ವಿರೋಧನಮ್ ।
ಪರಿಸರ್ಯಾ ಪರೀಸಾರಸ್ಸ್ಯಾದಾಸ್ಯಾ ತ್ವಾಸನಾ ಸ್ಥಿತಿಃ ॥ ೧೧೭೯

---

೧೧೭೫. ಅಭಿಹಾರ (ಪು), ಅಭಿಗ್ರಹಣ (ನ)=ಎದುರಾಗಿ ಹಿಡಿಯುವುದು. ನಿರ್ಹಾರ (ಪು), ಅಭ್ಯವಕರ್ಷಣ (ನ)=ಹೊರಗೆ ತೆಗೆದುಹಾಕುವುದು. ಅನುಹಾರ, ಅನುಕಾರ (ಪು)=ಅನುಕರಣೆ. ವ್ಯಯ (ಪು)=ಖರ್ಚು.

೧೧೭೬. ಪ್ರವಾಹ (ಪು), ಪ್ರವೃತ್ತಿ (ಸ್ತ್ರೀ)=ನೀರು ಮುಂತಾದ್ದು ಹರಿಯುವುದು. ಪ್ರವಹ (ಪು)=ಹೊರಗಡೆ ಹೋಗುವುದು. ವಿಯಾಮ, ವಿಯಮ, ಯಾಮ, ಯಮ, ಸಂಯಾಮ, ಸಂಯಮ (ಪು)=ಮನೋವೃತ್ತಿಯ ನಿರೋಧ, ತಡೆಯುವುದು.

೧೧೭೭. ಹಿಂಸಾಕರ್ಮನ್ (ನ), ಅಭಿಚಾರ (ಪು)=ಕೊಲ್ಲುವುದಕ್ಕಾಗಿ ಮಾಡಿದ ಮಂತ್ರ ತಂತ್ರಾದಿ ಪ್ರಯೋಗ, ಮಾಟ. ಜಾಗರ್ಯಾ (ಸ್ತ್ರೀ), ಜಾಗರಾ (ಸ್ತ್ರೀ. —ಪು. ಜಾಗರ)=ಎಚ್ಚರ ವಾಗಿರುವುದು. ವಿಘ್ನ, ಅಂತರಾಯ, ಪ್ರತ್ಯೂಹ (ಪು)=ಅಡ್ಡಿ. ಉಪಘ್ನ (ಪು)=ಸಮೀಪ ದಲ್ಲಿರುವ ಆಶ್ರಯ.

೧೧೭೮. ನಿರ್ವೇಶ, ಉಪಭೋಗ (ಪು)=ಭೋಗಿಸುವುದು. ಪರಿಸರ್ಪ (ಪು), ಪರಿಕ್ರಿಯಾ (ಸ್ತ್ರೀ)=ಸುತ್ತುಗಟ್ಟುವುದು. ವಿಧುರ (ನ), ಪ್ರವಿಶ್ಲೇಷ (ಪು)=ಅಗಲುವುದು. ಅಭಿಪ್ರಾಯ. ಛಂದ, ಆಶಯ (ಪು)=ಅಭಿಪ್ರಾಯ, ಮತ.

೧೧೭೯. ಸಂಕ್ಷೇಪಣ, ಸಮಸನ (ನ)=ಸಂಕ್ಷೇಪಿಸುವುದು. ಪರ್ಯವಸ್ಥಾ (ಸ್ತ್ರೀ), ವಿರೋಧನ (ನ)=ವಿರೋಧಿಸುವುದು. ಪರಿಸರ್ಯಾ (ಸ್ತ್ರೀ), ಪರೀಸಾರ (ಪು)=ಎಲ್ಲೆಡೆಯೂ ಹೋಗುವುದು. ಆಸ್ಯಾ, ಆಸನಾ, ಸ್ಥಿತಿ (ಸ್ತ್ರೀ)=ಇರುವಿಕೆ.

ವಿಸ್ತಾರೋ ವಿಗ್ರಹೋ ವ್ಯಾಸಃ ಸ ಚ ಶಬ್ದಸ್ಯ ವಿಸ್ತರಃ ।
ಸ್ಯಾನ್ಮರ್ದನಂ ಸಂವಹನಂ ವಿನಾಶಃ ಸ್ಯಾದದರ್ಶನಮ್ ॥ ೧೧೮೦
ಸಂಸ್ತವಸ್ಸ್ಯಾತ್ಪರಿಚಯಃ ಪ್ರಸರಸ್ತು ವಿಸರ್ಪಣಮ್ ।
ನೀವಾಕಸ್ತು ಪ್ರಯಾಮಸ್ಸ್ಯಾತ್ಸನ್ನಿಧಿಸ್ಸನ್ನಿಕರ್ಷಣಮ್ ॥ ೧೧೮೧
ಲವೋಽಭಿಲಾವೋ ಲವನೇ ನಿಷ್ಪಾವಃ ಪವನೇ ಪವಃ ।
ಪ್ರಸ್ತಾವಸ್ಸ್ಯಾ ದವಸರಸ್ತ್ರ ಸರಸ್ಸೂತ್ರವೇಷ್ಟನಮ್ ॥ ೧೧೮೨
ಪ್ರಜನಃ ಸ್ಯಾದುಪಸರಃ ಪ್ರಶ್ರಯಪ್ರಣಯೌ ಸಮೌ ।
ಧೀಶಕ್ತಿರ್ನಿಷ್ಕ್ರಮೋಽಸ್ತ್ರೀ ತು ಸಂಕ್ರಮೋ ದುರ್ಗಸಂಚರಃ ॥ ೧೧೮೩
ಪ್ರತ್ಯುತ್ಕ್ರಮಃ ಪ್ರಯೋಗಾರ್ಥಃ ಪ್ರಕ್ರಮಸ್ಸ್ಯಾದುಪಕ್ರಮಃ ।
ಸ್ಯಾದಭ್ಯಾದಾನಮುದ್ಘಾತ ಆರಂಭಸ್ಸಂಭ್ರಮಸ್ತ್ವರಾ ॥ ೧೧೮೪

---

೧೧೮೦. ವಿಸ್ತಾರ, ವಿಗ್ರಹ, ವ್ಯಾಸ (ಪು)=ಹಿಗ್ಗಿಸುವುದು, ವಿಸ್ತರಿಸುವುದು. ವಿಸ್ತರ (ಪು)=ಶಬ್ದಗಳ ವಿಸ್ತರಣೆ. ಮರ್ದನ, ಸಂವಹನ (ನ)=ಕೈಕಾಲುಗಳನ್ನು ಹಿಸುಕುವುದು, ಅಂಗಮರ್ದನ. ವಿನಾಶ (ಪು), ಅದರ್ಶನ (ನ)=ಗೋಚರಿಸದಿರುವುದು.

೧೧೮೧. ಸಂಸ್ತವ, ಪರಿಚಯ (ಪು)=ಗುರುತು ತಿಳಿದಿರುವುದು. ಪ್ರಸರ (ಪು), ವಿಸರ್ಪಣ (ನ)=ಹರಡುವುದು. ನೀವಾಕ, ಪ್ರಯಾಮ (ಪು)=ಧಾನ್ಯಾದಿಗಳ ಸಂಚಯ (Hoarding), ಧನಧಾನ್ಯಾದಿಗಳಲ್ಲಿ ಆಸೆ. (ಯಥಾರ್ಥವಾದ ನುಡಿ ಎಂದು ಕೆಲವರು.) ಸಂನಿಧಿ (ಪು),ಸಂನಿಕರ್ಷಣ (ನ)=ಸಮೀಪದಲ್ಲಿರುವುದು.

೧೧೮೨. ಲವ, ಅಭಿಲಾವ (ಪು), ಲವನ (ನ)=ಕತ್ತರಿಸುವುದು, ಕೊಯ್ಯುವುದು. ನಿಷ್ಪಾವ (ಪು), ಪವ (ಪು)=ಧಾನ್ಯಾದಿಗಳನ್ನು ತೂರುವುದು. ಪ್ರಸ್ತಾವ, ಅವಸರ (ಪು)=ಸೂಚನೆಗೆ ತಕ್ಕ ಸಮಯ. ತ್ರಸರ (ಪು) , ಸೂತ್ರವೇಷ್ಟನ (ನ)=ನೂಲನ್ನು ಸುತ್ತುವುದು ; ನೂಲುಸುತ್ತುವ ಲಾಳಿ.

೧೧೮೩. ಪ್ರಜನ, ಉಪಸರ (ಪು)=ಗರ್ಭಧಾರಣೆ. ಪ್ರಶ್ರಯ, ಪ್ರಣಯ (ಪು)=ಪ್ರೀತಿಯಿಂದ ಪ್ರಾರ್ಥಿಸುವುದು. ಧೀಶಕ್ತಿ (ಸ್ತ್ರೀ), ನಿಷ್ಕ್ರಮ (ಪು)=ಬುದ್ಧಿಸಾಮರ್ಥ್ಯ. ಸಂಕ್ರಮ, ದುರ್ಗಸಂಚರ (ಪು. ನ)=ಇಕ್ಕಟ್ಟಾದ ಹಾದಿ ; ಹೊಳೆ ಮುಂತಾದವುಗಳನ್ನು ದಾಟಲು ಹಾಕಿದ ಮರದ ತುಂಡು, ಸಂಕ.

೧೧೮೪. ಪ್ರತ್ಯುತ್ಕ್ರಮ (ಪು)=ಪರೀಕ್ಷಾರ್ಥವಾದ ಆರಂಭ. ಪ್ರಕ್ರಮ, ಉಪಕ್ರಮ (ಪು), ಅಭ್ಯಾದಾನ (ನ), ಉದ್ಘಾತ, ಆರಂಭ (ಪು)=ಆರಂಭ. ಸಂಭ್ರಮ (ಪು), ತ್ವರಾ (ಸ್ತ್ರೀ)=ಆತುರಪಡುವುದು.



ಪ್ರತಿಬಂಧಃ ಪ್ರತಿಷ್ಟಂಭೋಽವನಾಯಸ್ತು ನಿಪಾತನಮ್ ।
ಉಪಲಂಭಸ್ತ್ವನುಭವಸ್ಸಮಾಲಂಭೋ ವಿಲೇಪನಮ್ ॥ ೧೧೮೫
ವಿಪ್ರಲಂಭೋ ವಿಪ್ರಯೋಗೋ ವಿಲಂಭಸ್ತ್ವತಿಸರ್ಜನಮ್ ।
ವಿಶ್ರಾವಸ್ತು ಪ್ರವಿಖ್ಯಾತಿರವೇಕ್ಷಾ ಪ್ರತಿಜಾಗರಃ ॥ ೧೧೮೬
ನಿಪಾಠನಿಪಠೌ ಪಾಠೇ ತೇಮಸ್ತೇಮೌ ಸಮುಂದನೇ ।
ಆದೀನವಾಸ್ರವೌ ಕ್ಲೇಶೇ ಮೇಲಕೇ ಸಂಗಸಂಗಮೌ ॥ ೧೧೮೭
ಅನ್ವೀಕ್ಷಣಂ ವಿಚಯನಂ ಮಾರ್ಗಣಂ ಮೃಗಣಾ ಮೃಗಃ ।
ಪರಿರಂಭಃ ಪರಿಷ್ವಂಗಸ್ಸಂಶ್ಲೇಷ ಉಪಗೂಹನಮ್ ॥ ೧೧೮೮
ನಿರ್ವರ್ಣನಂ ತು ನಿಧ್ಯಾನಂ ದರ್ಶನಾಲೋಕನೇಕ್ಷಣಮ್ ।
ಪ್ರತ್ಯಾಖ್ಯಾನಂ ನಿರಸನಂ ಪ್ರತ್ಯಾದೇಶೋ ನಿರಾಕೃತಿಃ ॥ ೧೧೮೯

---

೧೧೮೫. ಪ್ರತಿಬಂಧ, ಪ್ರತಿಷ್ಟಂಭ (ಪು)=ಕಾರ್ಯವಿಘಾತ, ಅವನಾಯ (ಪು), ನಿಪಾತನ (ನ)=ಕೆಳಗೆ ಬೀಳಿಸುವುದು. ಉಪಲಂಭ, ಅನುಭವ (ಪು)=ಅನುಭವ, ತಿಳಿಯುವುದು. ಸಮಾಲಂಭ (ಪು), ವಿಲೇಪನ (ನ)=ಬಳಿಯುವುದು, ಹಚ್ಚುವುದು.

೧೧೮೬. ವಿಪ್ರಲಂಭ, ವಿಪ್ರಯೋಗ (ಪು)=ಅನುರಕ್ತರಾದ ಸ್ತ್ರೀ ಪುರುಷರ ವಿರಹ. ವಿಲಂಭ (ಪು), ಅತಿಸರ್ಜನ (ನ)=ಉದಾರವಾದ ದಾನ, ದತ್ತಿ (Donation). ವಿಶ್ರಾವ (ಪು), ಪ್ರವಿಖ್ಯಾತಿ (ಸ್ತ್ರೀ)=ಅತಿಪ್ರಸಿದ್ಧಿ. ಅವೇಕ್ಷಾ (ಸ್ತ್ರೀ), ಪ್ರತಿಜಾಗರ (ಪು)=ಗಮನವಿಡುವುದು, ಎಚ್ಚರ.

೧೧೮೭. ನಿಪಾಠ, ನಿಪಠ, ಪಾಠ, (ಪು)=ಓದುವುದು. ತೇಮ, ಸ್ತೇಮ (ಪು), ಸಮುಂದನ (ನ)=ಒದ್ದೆ, ತೇವ. ಆದೀನವ, ಆಸ್ರವ, ಕ್ಲೇಶ (ಪು)=ಮಾನಸದುಃಖ, ಮನೋವ್ಯಥೆ. ಮೇಲಕ, ಸಂಗ, ಸಂಗಮ (ಪು)=ಕೂಡುವುದು.

೧೧೮೮. ಅನ್ವೀಕ್ಷಣ, ವಿಚಯನ, ಮಾರ್ಗಣ (ನ), ಮೃಗಯಾ (ಸ್ತ್ರೀ), ಮೃಗ (ಪು)=ಹುಡುಕುವುದು. ಪರಿರಂಭ, ಪರಿಷ್ವಂಗ, ಸಂಶ್ಲೇಷ (ಪು), ಉಪಗೂಹನ (ನ)=ಆಲಿಂಗನ.

೧೧೮೯. ನಿರ್ವರ್ಣನ, ನಿಧ್ಯಾನ, ದರ್ಶನ, ಆಲೋಕನ, ಈಕ್ಷಣ (ನ)=ನೋಡು ವುದು. ಪ್ರತ್ಯಾಖ್ಯಾನ, ನಿರಸನ (ನ), ಪ್ರತ್ಯಾದೇಶ, (ಪು), ನಿರಾಕೃತಿ (ಸ್ತ್ರೀ)=ತಳ್ಳಿಹಾಕುವುದು, ತಿರಸ್ಕಾರ.

ಉಪಶಾಯೋ ವಿಶಾಯಶ್ಚ ಪರ್ಯಾಯಶಯನಾರ್ಥಕೌ ।
ಅರ್ತನಂ ಚ ಋತೀಯಾ ಚ ಹೃಣೀಯಾ ಚ ಘೃಣಾರ್ಥಕಾಃ ॥ ೧೧೯೦
ಸ್ಯಾದ್ವ್ಯತ್ಯಾಸೋ ವಿಪರ್ಯಾಸೋ ವ್ಯತ್ಯಯಶ್ಚ ವಿಪರ್ಯಯೇ ।
ಪರ್ಯಯೋಽತಿಕ್ರಮಸ್ತಸ್ಮಿನ್ನತಿಪಾತ ಉಪಾತ್ಯಯಃ ॥ ೧೧೯೧
ಪ್ರೇಷಣಂ ಯತ್ಸಮಾಹೂಯ ತತ್ರ ಸ್ಯಾತ್ಪ್ರತಿಶಾಸನಮ್ ।
ಸ ಸಂಸ್ತಾವಃ ಕ್ರತುಷು ಯಾ ಸ್ತುತಿಭೂಮಿರ್ದ್ವಿಜನ್ಮನಾಮ್ ॥ ೧೧೯೨
ನಿಧಾಯ ತಕ್ಷ್ಯತೇ ಯತ್ರ ಕಾಷ್ಠೇ ಕಾಷ್ಠಂ ಸ ಉದ್ಘನಃ ।
ಸ್ತಂಬಘ್ನಸ್ತು ಸ್ತಂಬಘನಃ ಸ್ತಂಬೋ ಯೇನ ನಿಹನ್ಯತೇ ॥ ೧೧೯೩
ಆವಿಧೋ ವಿಧ್ಯತೇ ಯೇನ ತತ್ರ ವಿಷ್ವಕ್ಸಮೇ ನಿಘಃ ।
ಉತ್ಕಾರಶ್ಚ ನಿಕಾರಶ್ಚ ದ್ವೌ ಧಾನ್ಯೋತ್ಕ್ಷೇ ಪಣಾರ್ಥಕೌ ॥ ೧೧೯೪
ನಿಗಾರೋದ್ಗಾರವಿಕ್ಷಾವೋದ್ಗ್ರಾಹಾ ನಿಗರಣಾದಿಷು ।
ಆರತ್ಯವರತಿವಿರತಯ ಉಪರಾಮೇಽಥಾಸ್ತ್ರಿಯಾಂ ತು ನಿಷ್ಠೇವಃ ॥ ೧೧೯೫

---

೧೧೯೦. ಉಪಶಾಯ, ವಿಶಾಯ (ಪು)=ಸರದಿಯ ಮೇಲೆ ಮಲಗುವುದು. ಅರ್ತನ (ನ), ಋತೀಯಾ ಹೃಣೀಯಾ, ಘೃಣಾ (ಸ್ತ್ರೀ)=ಜುಗುಪ್ಸೆ.

೧೧೯೧. ವ್ಯತ್ಯಾಸ, ವಿಪರ್ಯಾಸ, ವ್ಯತ್ಯಯ, ವಿಪರ್ಯಯ (ಪು_=ವ್ಯತ್ಯಾಸ, ಬದಲಾವಣೆ. ಪರ್ಯಯ, ಅತಿಕ್ರಮ, ಅತಿಪಾತ, ಉಪಾತ್ಯಯ (ಪು)=ಉಲ್ಲಂಘನೆ, ಅತಿಕ್ರಮಣ.

೧೧೯೨. ಪ್ರತಿಶಾಸನ (ನ)=ಆಜ್ಞೆಯನ್ನಿತ್ತು ಕಳಿಸುವುದು. ಸಂಸ್ತಾವ (ಪು)=ಯಜ್ಞದಲ್ಲಿ ಉದ್ಗಾತೃ ಮೊದಲಾದವರು ಸ್ತುತಿಮಂತ್ರಗಳನ್ನು ಪಠಿಸುವ ಸ್ಥಳ.

೧೧೯೩. ಉದ್ಘನ (ಪು)=ಬಡಗಿಯು ಮರವನ್ನು ಕೆತ್ತುವಾಗ ಕೆಳಗೆ ಇಟ್ಟುಕೊಳ್ಳುವ ಅಡಿತುಂಡು. ಸ್ತಂಬಘ್ನ, ಸ್ತಂಬಘನ (ಪು)=ಕುಡಗೋಲು ; ಸನಿಕೆ.

೧೧೯೪. ಆವಿಧ (ಪು)=ಬೈರಿಗೆ. ನಿಘ (ಪು)=ಉದ್ದ, ಅಗಲ, ಎತ್ತರಗಳು ಸಮವಾದ ಘನಾಕೃತಿಯ ವಸ್ತು. ಉತ್ಕಾರ, ನಿಕಾರ (ಪು)=ಧಾನ್ಯಗಳನ್ನು ತೂರುವುದು.

೧೧೯೫. ನಿಗಾರ (ಪು)=ನುಂಗುವುದು. ಉದ್ಗಾರ (ಪು)=ತೇಗು. ವಿಕ್ಷಾವ (ಪು)=ಶೀನುವುದು. ಉದ್ಗ್ರಾಹ (ಪು)=ಎತ್ತುವುದು. ಈ ನಾಲ್ಕು ಅರ್ಥಗಳಲ್ಲಿ ಕ್ರಮವಾಗಿ ನಿಗರಣ, ಉದ್ಗರಣ, ವಿಕ್ಷವಣ, ಉದ್ಗ್ರಹಣ (ನ) ಎಂಬ ಶಬ್ದಗಳೂ ಇವೆ.



ನಿಷ್ಠ್ಯೂತಿರ್ನಿಷ್ಠೇವನಂ ನಿಷ್ಠೀವನಮಿತ್ಯಭಿನ್ನಾನಿ ।
ಜವನೇ ಜೂತಿಸ್ಸಾತಿಸ್ತ್ವವಸಾನೇ ಸ್ಯಾದಥ ಜ್ವರೇ ಜೂರ್ತಿಃ ॥ ೧೧೯೬
ಉದಜಸ್ತು ಪಶುಪ್ರೇರಣಮಕರಣಿರಿತ್ಯಾದಯಃ ಶಾಪೇ ।
ಗೋತ್ರಾಂತೇಭ್ಯಸ್ತಸ್ಯ ವೃಂದಮಿತ್ಯೌ ಪಗವಕಾದಿಕಮ್ ॥ ೧೧೯೭
ಆಪೂಪಿಕಂ ಶಾಷ್ಕುಲಿಕಮೇವಮಾದ್ಯಮಚೇತಸಾಮ್ ।
ಮಾಣವಾನಾಂ ತು ಮಾಣವ್ಯಂ ಸಹಾಯಾನಾಂ ಸಹಾಯತಾ ॥ ೧೧೯೮
ಹಲ್ಯಾ ಹಲಾನಾಂ ಬ್ರಾಹ್ಮಣ್ಯವಾಡವ್ಯೇ ತು ದ್ವಿಜನ್ಮನಾಮ್ ।
ದ್ವೇ ಪರ್ಶುಕಾನಾಂ ಪೃಷ್ಠಾನಾಂ ಪಾರ್ಶ್ವಂ ಪೃಷ್ಠ್ಯ ಮನುಕ್ರಮಾತ್ ॥ ೧೧೯೯

---

೧೧೯೫—೧೧೯೬. ಆರತಿ, ಅವರತಿ, ವಿರತಿ (ಸ್ತ್ರೀ), ಉಪರಾಮ (ಪು)=ಕೆಲಸವನ್ನು ನಿಲ್ಲಿಸುವುದು, ವಿರಾಮ. ನಿಷ್ಠೇವ (ಪು. ನ), ನಿಷ್ಠ್ಯೂತಿ (ಸ್ತ್ರೀ),ನಿಷ್ಠೇವನ, ನಿಷ್ಠೀವನ (ನ)=ಉಗುಳುವುದು. ಜವನ (ನ), ಜೂತಿ (ಸ್ತ್ರೀ)=ವೇಗ. ಸಾತಿ (ಸ್ತ್ರೀ), ಅವಸಾನ (ನ)=ಸಮಾಪ್ತಿ. ಜ್ವರ (ಪು), ಜೂರ್ತಿ (ಸ್ತ್ರೀ)=ಜ್ವರ.

೧೧೯೭. ಉದಜ (ಪು)=ದನಕರುಗಳನ್ನು ಪ್ರೇರಿಸುವುದು,—ಕಾಯುವುದು. ಅಕರಣಿ (ಸ್ತ್ರೀ)=ಮಾಡದಿರುವುದು, ಅನಿಷ್ಪತ್ತಿ. ಇದು ಬಯ್ಯುವಾಗ ಮಾತ್ರ ಉಪಯೋಗಿಸಲ್ಪಡುತ್ತದೆ. ಹೀಗೆಯೇ ಅಜನನಿ (ಸ್ತ್ರೀ)=ಹುಟ್ಟದಿರುವುದು. ಅವಗ್ರಾಹ, ನಿಗ್ರಾಹ(ಪು)=ಬಂಧನ, ದಂಡನೆ. ಉದಾ :—ಅಕರಣಿಸ್ತೇ ಭೂಯಾತ್=ನಿನ್ನ ಕಾರ್ಯವು ಸಿದ್ಧಿಸದೆ ಹೋಗಲಿ ! ತಸ್ಯ ಅಜನನಿರೇವಾಸ್ತು =ಅಂಥವನು ಹುಟ್ಟುವುದೇ ಬೇಡ !

ಗೋತ್ರಪ್ರತ್ಯಯಾಂತಗಳಾದ ಔಪಗವ ಮುಂತಾದ ಶಬ್ದಗಳು ಸಮೂಹಾರ್ಥದಲ್ಲಿ ಔಪಗವಕ ಮುಂತಾದ ರೂಪಗಳನ್ನು ಪಡೆಯುತ್ತವೆ. ಉಪಗು ಎಂಬವನ ಗೋತ್ರ ವಂಶೀಯರು ಔಪಗವರು. ಅವರ ಸಮೂಹ ಔಪಗವಕ (ನ). ಹೀಗೆಯೇ ಗಾರ್ಗಕ, ವಾತ್ಸಕ (ನ) ಮುಂತಾದವು.

೧೧೯೮. ಜಡವಸ್ತುಗಳ ಸಮೂಹವು ಆಪೂಪಿಕ (ನ)=ಭಕ್ಷ್ಯಗಳ ರಾಶಿ, ಶಾಷ್ಕುಲಿಕ (ನ)=ಚಕ್ಕುಲಿಗಳ ರಾಶಿ—ಈ ರೀತಿಯಲ್ಲಿ ಆಗುತ್ತದೆ. ಹೀಗೆಯೇ ಸಾಕ್ತುಕ (ನ)=ಹಿಟ್ಟಿನ ರಾಶಿ. ಮಾಣವ್ಯ (ನ)=ಹುಡುಗರ ಗುಂಪು. ಸಹಾಯತಾ (ಸ್ತ್ರೀ)=ಜೊತೆಗಾರರ ಸಮೂಹ.

೧೧೯೯. ಹಲ್ಯಾ (ಸ್ತ್ರೀ)=ನೇಗಿಲುಗಳ ಸಮೂಹ. ಬ್ರಾಹ್ಮಣ್ಯ, ವಾಡವ್ಯ (ನ)=ಬ್ರಾಹ್ಮಣರ ಗುಂಪು. ಪಾರ್ಶ್ವ (ನ)=ಪಕ್ಕೆಲುಬುಗಳ ಸಮುದಾಯ. ಪೃಷ್ಠ್ಯ (ನ)=ಯಜ್ಞಸಂಬಂಧಿಗಳಾದ ಸ್ತೋತ್ರಗಳ ಸಮುದಾಯ.

ಖಲಾನಾಂ ಖಲಿನೀ ಖಲ್ಯಾಪ್ಯಥ ಮಾನುಷ್ಯಕಂ ನೃಣಾಮ್ ।
ಗ್ರಾಮತಾ ಜನತಾ ಧೂಮ್ಯಾ ಪಾಶ್ಯಾಗಲ್ಯಾ ಪೃಥಕ್ಪೃಥಕ್ ॥ ೧೨೦೦
ಅಪಿ ಸಾಹಸ್ರಕಾರೀಷವಾರ್ಮಣಾಥರ್ವಣಾದಿಕಮ್ ॥ ೧೨೦೧

ಇತಿ ಸಂಕೀರ್ಣವರ್ಗಃ

---

೧೨೦೦. ಖಲಿನೀ, ಖಲ್ಯಾ (ಸ್ತ್ರೀ)=ಕಣಗಳ ಸಮೂಹ. ಮಾನುಷ್ಯಕ (ನ)=ಮನುಷ್ಯರ ಸಮೂಹ. ಗ್ರಾಮತಾ (ಸ್ತ್ರೀ)=ಹಳ್ಳಿಗಳ ಸಮುದಾಯ. ಜನತಾ (ಸ್ತ್ರೀ)=ಜನರ ಗುಂಪು. ಧೂಮ್ಯಾ (ಸ್ತ್ರೀ)=ಹೊಗೆಯ ರಾಶಿ. ಪಾಶ್ಯಾ (ಸ್ತ್ರೀ)=ಹಗ್ಗಗಳ ಪಿಂಡಿ. ಗಲ್ಯಾ (ಸ್ತ್ರೀ)=(ಗಲ ಎಂದರೆ ಕುತ್ತಿಗೆ, ಹಗ್ಗ, ಬಿದಿರಿನ ಗಳ ಎಂಬ ಅರ್ಥಗಳುಂಟು). ಅವುಗಳ ಸಮೂಹ.

೧೨೦೧. ಸಾಹಸ್ರ (ನ)=ಸಾವಿರಗಳ ರಾಶಿ. ಕಾರೀಷ (ನ)=ಬೆರಣಿಗಳ ರಾಶಿ. ವಾರ್ಮಣ (ನ)=ಕವಚಗಳ ರಾಶಿ. ಆಥರ್ವಣ (ನ)=ಅಥರ್ವವೇದಮಂತ್ರಗಳ ಸಮುದಾಯ. ಹೀಗೆಯೇ ಆಂಗಾರ (ನ)=ಕೆಂಡಗಳ ರಾಶಿ. ಚಾರ್ಮಣ (ನ)=ಚರ್ಮಗಳ ರಾಶಿ.

## ೩. ನಾನಾರ್ಥವರ್ಗಃ

ನಾನಾರ್ಥಾಃ ಕೇಽಪಿ ಕಾಂತಾದಿವರ್ಗೇಷ್ವೇವಾತ್ರ ಕೀರ್ತಿತಾಃ ॥
ಭೂರಿಪ್ರಯೋಗಾ ಯೇ ಯೇಷು ಪರ್ಯಾಯೇಷ್ವಪಿ ತೇಷು ತೇ ।
ಆಕಾಶೇ ತ್ರಿದಿವೇ ನಾಕೋ ಲೋಕಸ್ತು ಭುವನೇ ಜನೇ ॥ ೧೨೦೨
ಪದ್ಯೇ ಯಶಸಿ ಚ ಶ್ಲೋಕಶ್ಶರೇ ಖಡ್ಗೇ ಚ ಸಾಯಕಃ ।
ಜಂಬುಕೌ ಕ್ರೋಷ್ಟುವರುಣೌ ಪೃಥುಕೌ ಚಿಪಿಟಾರ್ಭಕೌ ॥ ೧೨೦೩
ಆಲೋಕೌ ದರ್ಶನೋದ್ಯೋತೌ ಭೇರೀಪಟಹಮಾನಕೌ ।
ಉತ್ಸಂಗಚಿಹ್ನಯೋರಂಕಃ ಕಲಂಕೋಽಂಕಾಪವಾದಯೋಃ ॥ ೧೨೦೪

---

### ನಾನಾರ್ಥವರ್ಗ

೧೨೦೧—೧೨೦೨. ಅನೇಕಾರ್ಥಗಳನ್ನು ಕೊಡುವ ಕೆಲವು ಶಬ್ದಗಳನ್ನು ಇಲ್ಲಿ ಕಕಾರಾಂತ ಗಕಾರಾಂತಾದಿ ವರ್ಗಗಳಲ್ಲಿಯೇ ಹೇಳಲಾಗಿದೆ. ಇನ್ನು ಯಾವ ಶಬ್ದಗಳು ಯಾವ ಅರ್ಥದಲ್ಲಿ ಹೆಚ್ಚಾಗಿ ಬಳಕೆಯಲ್ಲಿವೆಯೋ ಅವುಗಳನ್ನು (ಹಿಂದೆ ಸ್ವರ್ಗಾದಿ ವರ್ಗಗಳಲ್ಲಿ) ಅವುಗಳ ಪರ್ಯಾಯಗಳಲ್ಲಿಯೂ ಹೇಳಲಾಗಿದೆ.[1] ವಿವರಣೆ :—ಅನೇಕಾರ್ಥದ ಶಬ್ದಗಳನ್ನು ಮಾತ್ರ ಈ ವರ್ಗದಲ್ಲಿ ಹೇಳಿದೆ. ಕೆಲವು ಪ್ರಸಿದ್ಧ ಶಬ್ದಗಳನ್ನು ಹಿಂದೆ ಆಯಾ ಪರ್ಯಾಯದಲ್ಲಿ ಹೇಳಿದೆ. ಅನೇಕಾರ್ಥಕವಾಗಿದ್ದರಿಂದ ಅವನ್ನು ಪುನಃ ಈ ವರ್ಗದಲ್ಲಿ ಹೇಳಿರುವುದುಂಟು.

ಕಾಂತ (ಕಕಾರಾಂತ. ಅಂತವೆಂದರೆ ಈ ವರ್ಗದಲ್ಲಿ ಉಪಾಂತ)

೧೨೦೨—೧೨೦೩. ನಾಕ (ಪು)=ಆಕಾಶ, ಸ್ವರ್ಗ. ಲೋಕ (ಪು)=ಜಗತ್ತು, ಜನ. ಶ್ಲೋಕ (ಪು)=ಪದ್ಯ, ಕೀರ್ತಿ. ಸಾಯಕ (ಪು)=ಬಾಣ, ಕತ್ತಿ. ಜಂಬುಕ (ಪು)=ನರಿ, ವರುಣ. ಪೃಥುಕ (ಪು)=ಅವಲಕ್ಕಿ, ಹುಡುಗ.

೧೨೦೪. ಆಲೋಕ (ಪು)=ನೋಡುವುದು, ಬೆಳಕು. ಆನಕ (ಪು)=ಭೇರಿ, ತಮಟೆ. ಅಂಕ

---

[1] ಈ ವರ್ಗದಲ್ಲಿ ಭಿನ್ನಾರ್ಥಗಳ ನಡುವೆ ಅಲ್ಪವಿರಾಮ ಚಿಹ್ನೆಯನ್ನು (Comma) ಬಳಸಲಾಗಿದೆ. ಅರ್ಥವು ಮೂಲಶ್ಲೋಕದಲ್ಲಿರುವ ಅರ್ಥದ ಸಂಖ್ಯಾಕ್ರಮವನ್ನು ಅನುಸರಿಸಿದೆ. ಆದ್ದರಿಂದ ಯಥಾಸಂಖ್ಯವಾಗಿ ಅನ್ವಯಿಸಿಕೊಂಡು, ಶ್ಲೋಕದಲ್ಲಿ ಅರ್ಥಪರವಾದ ಶಬ್ದದ ಅರ್ಥವನ್ನು ಗೊತ್ತು ಮಾಡಿಕೊಳ್ಳಬಹುದು. ಉದಾ : "ಪೃಥುಕೌ ಚಿಪಿಟಾರ್ಭಕೌ. ಪೃಥುಕ=ಅವಲಕ್ಕಿ, ಹುಡುಗ." ಚಿಪಿಟ ಎಂದರೆ ಅವಲಕ್ಕಿ, ಅರ್ಭಕ ಎಂದರೆ ಹುಡುಗ. ಮೂಲದಲ್ಲಿ ಸ್ಪಷ್ಟವಾಗಿ ಹೇಳದಿರುವ ಅರ್ಥಗಳನ್ನು ಕಂಸದಲ್ಲಿ ಬರೆದಿದೆ. ಮೂರು ಲಿಂಗಗಳಲ್ಲಿಯೂ ಇರುವ ಶಬ್ದಗಳು ವಿಶೇಷ್ಯನಿಘ್ನಗಳು.

ತಿಲಕಲ್ಕೇ ಚ ಪಿಣ್ಯಾಕೋ ಬಾಹ್ಲೀಕಂ ರಾಮಠೇಽಪಿ ಚ ।
ಮಹೇಂದ್ರಗುಗ್ಗುಲೂಲೂಕವ್ಯಾಲಗ್ರಾಹಿಷು ಕೌಶಿಕಃ ॥ ೧೨೧೦
ರುಕ್ತಾಪಶಂಕಾಸ್ವಾತಂಕಸ್ಸ್ವಲ್ಪೇಽಪಿ ಕ್ಷುಲ್ಲಕಸ್ತ್ರಿಷು ।
ಜೈವಾತೃಕಶ್ಶಶಾಂಕೇಽಪಿ ಖುರೇಽಪ್ಯಶ್ವಸ್ಯವರ್ತಕಃ ॥ ೧೨೧೧
ವ್ಯಾಘ್ರೇಽಪಿ ಪುಂಡರೀಕೋ ನಾ ಯವಾನ್ಯಾಮಪಿ ದೀಪಕಃ ।
ಶಾಲಾವೃಕಾಃ ಕಪಿಕ್ರೋಷ್ಟುಶ್ವಾನಃ ಸ್ವರ್ಣೇಽಪಿ ಗೈರಿಕಮ್ ॥ ೧೨೧೨
ಪೀಡಾರ್ಥೇಽಪಿ ವ್ಯಲೀಕಂ ಸ್ಯಾದಲೀಕಂ ತ್ವಪ್ರಿಯೇಽನೃತೇ ।
ಶೀಲಾನ್ವಯಾವನೂಕೇ ದ್ವೇ ಶಲ್ಕೇ ಶಕಲವಲ್ಕಲೇ ॥ ೧೨೧೩
ಸಾಷ್ಟೇ ಶತೇ ಸುವರ್ಣಾನಾಂ ಹೇಮ್ನ್ಯುರೋಭೂಷಣೇ ಪಲೇ ।
ದೀನಾರೇಽಪಿ ಚ ನಿಷ್ಕೋಽಸ್ತ್ರೀ ಕಲ್ಕೋಽಸ್ತ್ರೀ ಶಮಲೈನಸೋಃ ॥ ೧೨೧೪

---

೧೨೧೧. ಆತಂಕ (ಪು)=ರೋಗ, ತಾಪ, ಕಳವಳ. ಕ್ಷುಲ್ಲಕ (ತ್ರಿಲಿಂಗ )=ಸ್ವಲ್ಪ, ಮತ್ತು (ನೀಚ). ಜೈವಾತೃಕ (ಪು)=ಚಂದ್ರ, ಮತ್ತು (ದೀರ್ಘಾಯು). ವರ್ತಕ (ಪು)=ಕುದುರೆಯ ಗೊರಸು. (ಒಂದು ಬಗೆಯ ಹುಳು, ಒಂದು ಬಗೆಯ ಹಕ್ಕಿ).

೧೨೧೨. ಪುಂಡರೀಕ (ಪು)=ಹುಲಿ, ಮತ್ತು (ಅಗ್ನಿ, ಒಂದು ದಿಗ್ಗಜ). ದೀಪಕ (ಪು)=ಓಮು, (ಜೀರಿಗೆ). ಶಾಲಾವೃಕ (ಪು)=ಕಪಿ, ನರಿ, ನಾಯಿ. ಗೈರಿಕ (ನ)=ಚಿನ್ನ, (ಯಾವುದಾದರೂ ಲೋಹ).

೧೨೧೩. ವ್ಯಲೀಕ (ನ)=ಪೀಡೆ, (ಅಪ್ರಿಯ, ಅಕಾರ್ಯ). ಅಲೀಕ (ನ)=ಅಪ್ರಿಯ, ಸುಳ್ಳು. ಅನೂಕ (ನ. ಪು)=ಶೀಲ, ವಂಶ, (ಹಿಂದಿನ ಜನ್ಮ). ಶಲ್ಕ (ನ)=ಚೂರು, ನಾರುಬಟ್ಟೆ.

೧೨೧೪. ನಿಷ್ಕ (ನ. ಪು)=ನೂರೆಂಟು ಗುಲಗಂಜಿಗಳ ತೂಕದ ಚಿನ್ನ, ಎದೆಯಲ್ಲಿ ಧರಿಸುವ ಪದಕ, ಒಂದು ಪಲ ತೂಕ, ಸುವರ್ಣನಾಣ್ಯ. ಕಲ್ಕ (ಪು.ನ)=ಕೊಳೆ, ಪಾಪ, ಗರ್ವ.

೧೨೧೫. ಪಿನಾಕ (ಪು. ನ)=ಶೂಲ, ಶಿವನಧನುಸ್ಸು. ಧೇನುಕಾ (ಸ್ತ್ರೀ)=ಹೆಣ್ಣಾನೆ, ಹಸು. ಕಾಲಿಕಾ (ಸ್ತ್ರೀ)=ಮೋಡಗಳ ರಾಶಿ, (ಕಾಳಿ ಎಂಬ ದೇವತೆ).

೧೨೧೬. ಕಾರಿಕಾ (ಸ್ತ್ರೀ)=ತೀವ್ರವೇದನೆ, ಕ್ರಿಯೆ, (ಶ್ಲೋಕಭೇದ).ಕರ್ಣಿಕಾ (ಸ್ತ್ರೀ)= ಕಿವಿಯ ಆಭರಣ, ಆನೆಯ ಸೊಂಡಿಲ ತುದಿ, ತಾವರೆಯ ಬೀಜಕೋಶ. ಮುಂದೆ ಹೇಳತಕ್ಕ ಕಕಾರಾಂತಗಳು (ಕಟಕ, ಕಂಟಕ ಶಬ್ದಗಳನ್ನು ಬಿಟ್ಟು) ಅರ್ಥಾನುಸಾರವಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ.

ತಕ್ಷಕೋ ನಾಗವರ್ಧಕ್ಯೋರರ್ಕಃ ಸ್ಫಟಿಕಸೂರ್ಯಯೋಃ ।
ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ ಕಂ ಶಿರೋಽಮ್ಬುನೋಃ ॥ ೧೨೦೫
ಸ್ಯಾತ್ಪುಲಾಕಸ್ತುಚ್ಛಧಾನ್ಯೇ ಸಂಕ್ಷೇಪೇ ಭಕ್ತಸಿಕ್ಥಕೇ ।
ಉಲೂಕೇ ಕರಿಣಃ ಪುಚ್ಛಮೂಲೋಪಾಂತೇ ಚ ಪೇಚಕಃ ॥ ೧೨೦೬
ಕಮಂಡಲೌ ಚ ಕರಕಃ ಸುಗತೇ ಚ ವಿನಾಯಕಃ ।
ಕಿಷ್ಕುರ್ಹಸ್ತೇ ವಿತಸ್ತೌ ಚ ಶೂಕಕೀಟೇ ಚ ವೃಶ್ಚಿಕಃ ॥ ೧೨೦೭
ಪ್ರತಿಕೂಲೇ ಪ್ರತೀಕಸ್ತ್ರಿಷ್ವೇಕದೇಶೇ ತು ಪುಂಸ್ಯಯಮ್ ।
ಸ್ಯಾದ್ಭೂತಿಕಂ ತು ಭೂನಿಂಬೇ ಕತ್ತೃಣೇ ಭೂಸ್ತೃಣೇಽಪಿ ಚ ॥ ೧೨೦೮
ಜ್ಯೋತ್ಸ್ನಿಕಾಯಾಂ ಚ ಘೋಷೇ ಚ ಕೋಶಾತಕ್ಯಥ ಕಟ್ಫಲೇ ।
ಸಿತೇ ಚ ಖದಿರೇ ಸೋಮವಲ್ಕಸ್ಸ್ಯಾದಥ ಸಿಹ್ಲಕೇ ॥ ೧೨೦೯

---

(ಪು)=ತೊಡೆ, ಚಿಹ್ನೆ. ಕಲಂಕ (ಪು)=ಚಿಹ್ನೆ, ಕೆಟ್ಟ ಹೆಸರು.

೧೨೦೫. ತಕ್ಷಕ (ಪು)=ನಾಗರಾಜ, ಬಡಗಿ. ಅರ್ಕ (ಪು)=ಸ್ಫಟಿಕ, ಸೂರ್ಯ. ಕ (ಪು)=ಗಾಳಿ, ಬ್ರಹ್ಮ, ಸೂರ್ಯ (ಆತ್ಮ). ಕ (ನ)=ಶಿರಸ್ಸು, ನೀರು.

೧೨೦೬. ಪುಲಾಕ (ಪು)=ಜಳ್ಳು, ಸಂ[1]ಕ್ಷೇಪ, ಅನ್ನದ ಅಗಳು. ಪೇಚಕ (ಪು)=ಗೂಬೆ, ಆನೆಯ ಬಾಲದ ಬುಡ.

೧೨೦೭. ಕರಕ (ಪು)=ಕಮಂಡಲು, (ಆಲಿಕಲ್ಲು, ಕೊಕ್ಕರೆ, ದಾಳಿಂಬೆ). ವಿನಾಯಕ (ಪು)=ಬುದ್ಧ, ಮತ್ತು (ಗಣಪತಿ, ಗರುಡ, ವಿಘ್ನ). ಕಿಷ್ಕು (ಪು)=ಮೊಳ, ಗೇಣು. ವೃಶ್ಚಿಕ (ಪು)=ಚೇಳು, ಮತ್ತು (ವೃಶ್ಚಿಕರಾಶಿ, ಒಂದು ಮುಳ್ಳುಗಿಡ).

೧೨೦೮. ಪ್ರತೀಕ (ತ್ರಿಲಿಂಗ)=ಪ್ರತಿಕೂಲವಾದದ್ದು. ಪ್ರತೀಕ (ಪು)=ಅವಯವ. ಭೂತಿಕ (ನ)=ನೆಲಬೇವು, ಕಾಚಿಹುಲ್ಲು, ಹಂಚಿಹುಲ್ಲು.

೧೨೦೯—೧೨೧೦. ಕೋಶಾತಕೀ (ಸ್ತ್ರೀ)=ಪಡವಲಗಿಡ, ಉತ್ತರಣೆ (ಘೋಷ=ಔಡಲಗಿಡ ಎಂದು ಕೆಲವರು.) ಸೋಮವಲ್ಕ (ಪು)=ತೇಗದ ಮರ, ಬಿಳಿಯ ಕಗ್ಗಲಿ. ಪಿಣ್ಯಾಕ (ಪು)=ಧೂಪವಿಶೇಷ, ಎಳ್ಳಿನ ಹಿಂಡಿ. ಬಾಹ್ಲೀಕ (ನ)=ಹಿಂಗು, (ಬಾಹ್ಲೀಕದೇಶದ ಕುದುರೆ, ಕುಂಕುಮಕೇಸರಿ). ಕೌಶಿಕ (ಪು)=ದೇವೇಂದ್ರ, ಗುಗ್ಗುಳ, ಗೂಬೆ, ಹಾವಾಡಿಗ.

---

[1] ನಿಬೋಧ ಕಿಂಚಿತ್ತು ಪುಲಾಕಮಾತ್ರಂ ವಾಕ್ಯಂ ಮುನೇರ್ವಾಕ್ಯವಿಶಾರದಸ್ಯ I
—ಬುದ್ಧಚರಿತ

ದಂಭೇಽಪ್ಯಥ ಪಿನಾಕೋಽಸ್ತ್ರೀ ಶೂಲಶಂಕರಧನ್ವನೋಃ ।
ಧೇನುಕಾ ತು ಕರೇಣ್ವಾಂ ಚ ಮೇಘಜಾಲೇ ಚ ಕಾಲಿಕಾ ॥ ೧೨೧೫
ಕಾರಿಕಾ ಯಾತನಾಕೃತ್ಯೋಃ ಕರ್ಣಿಕಾ ಕರ್ಣಭೂಷಣೇ ।
ಕರಿಹಸ್ತಾಂಗುಲೌ ಪದ್ಮಬೀಜಕೋಶ್ಯಾಂ ತ್ರಿಷೂತ್ತರೇ ॥ ೧೨೧೬
ವೃಂದಾರಕೌ ರೂಪಿಮುಖ್ಯಾವೇಕೇ ಮುಖ್ಯಾನ್ಯಕೇವಲಾಃ ।
ಸ್ಯಾದ್ದಾಂಭಿಕಃ ಕೌಕ್ಕುಟಿಕೋ ಯಶ್ಚಾದೂರೇರಿತೇಕ್ಷಣಃ ॥ ೧೨೧೭
ಲಾಲಾಟಿಕಃ ಪ್ರಭೋರ್ಭಾಲದರ್ಶೀ ಕಾರ್ಯಾಕ್ಷಮಶ್ಚ ಯಃ ।
ಭೂಭೃನ್ನಿತಂಬವಲಯಚಕ್ರೇಷು ಕಟಕೋಽಸ್ತ್ರಿಯಾಮ್ ॥ ೧೨೧೮
ಸೂಚ್ಯಗ್ರೇ ಕ್ಷುದ್ರಶತ್ರೌ ಚ ರೋಮಹರ್ಷೇ ಚ ಕಂಟಕಃ ।
ಮಯೂಖಸ್ತ್ವಿಟ್ಕರಜ್ವಾಲಾಸ್ವಲಿಬಾಣೌ ಶಿಲೀಮುಖೌ ॥ ೧೨೧೯
ಶಂಖೋ ನಿಧೌ ಲಲಾಟಾಸ್ಥ್ನಿ ಕಂಬೌ ನ ಸ್ತ್ರೀಂದ್ರಿಯೇಽಪಿ ಖಮ್ ।

ಇತಿ ಖಾಂತವರ್ಗಃ

---

೧೨೧೭. ವೃಂದಾರಕ (ತ್ರಿಲಿಂಗ( (ಸ್ತ್ರೀ—ವೃಂದಾರಿಕಾ)=ಸುಂದರ, ಮುಖ್ಯ. ಏಕ (ತ್ರಿಲಿಂಗ)=ಮುಖ್ಯ. ಉದಾ :—ಸರ್ವಸತ್ತ್ವೈಕ ಬಂಧುಃ, ಅನ್ಯ. ಉದಾ:—ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ದುರಾತ್ಮನಾಮ್, ಕೇವಲ (ಒಂಟಿ)—ಉದಾ:—ಅಹಮೇಕೋಽಪಿ ಪರ್ಯಾಪ್ತಃ. ಕೌಕ್ಕುಟಿಕ, (ತ್ರಿಲಿಂಗ) (—ಸ್ತ್ರೀ. ಕೌಕ್ಕುಟಿಕೀ)=ವೇಷಧಾರಿಯಾದ ವಂಚಕ, ಪ್ರಾಣಿಹಿಂಸೆಯಾದೀತೆಂದು ಮೆಲ್ಲಗೆ ನಡೆಯುವ ಭಿಕ್ಷು.

೧೨೧೮. ಲಾಲಾಟಿಕ (ತ್ರಿಲಿಂಗ) (— ಸ್ತ್ರೀ. ಲಾಲಾಟಿಕೀ)=ವಿನೀತನಾದ ಸೇವಕ, ಕೆಲಸದಲ್ಲಿ ಅಸಮರ್ಥ. ಕಟಕ (ಪು. ನ)=ಬೆಟ್ಟದ ತಪ್ಪಲು, ಕಡಗ, ಸೈನ್ಯ. ಕಂಟಕ (ಪು)=ಸೂಜಿಯ ತುದಿ, ಅಲ್ಪನಾದ ಶತ್ರು, ರೋಮಾಂಚ, (ಮುಳ್ಳು).

ಇತಿ ಕಾಂತವರ್ಗಃ



ಘೃಣಿಜ್ವಾಲೇ ಅಪಿ ಶಿಖೇ ಶೈಲವೃಕ್ಷೌ ನಗಾವಗೌ ॥ ೧೨೨೦
ಆಶುಗೌ ವಾಯುವಿಶಿಖೌ ಶರಾರ್ಕವಿಹಗಾಃ ಖಗಾಃ ।
ಪತಂಗೌ ಪಕ್ಷಿಸೂರ್ಯೌ ಚ ಪೂಗಃ ಕ್ರಮುಕವೃಂದಯೋಃ ॥ ೧೨೨೧
ಪಶವೋಽಪಿ ಮೃಗಾ ವೇಗಃ ಪ್ರವಾಹಜವಯೋರಪಿ ।
ಪರಾಗಃ ಕೌಸುಮೇ ರೇಣೌ ಸ್ನಾನೀಯಾದೌ ರಜಸ್ಯಪಿ ॥ ೧೨೨೨
ಗಜೇಽಪಿ ನಾಗಮಾತಂಗಾವಪಾಂಗಸ್ತಿಲಕೇಽಪಿ ಚ ।
ಸರ್ಗಸ್ಸ್ವಭಾವನಿರ್ಮೋಕ್ಷನಿಶ್ಚಯಾಧ್ಯಾಯ ಸೃಷ್ಟಿಷು ॥ ೧೨೨೩
ಯೋಗಃ ಸಂನಹನೋಪಾಯಧ್ಯಾನಸಂಗತಿಯುಕ್ತಿಷು ।
ಭೋಗಸ್ಸುಖೇ ಸ್ತ್ರ್ಯಾದಿಭೃತಾವಹೇಶ್ಚ ಫಣಕಾಯಯೋಃ ॥ ೧೨೨೪

---

## ಖಾಂತಗಳು

೧೨೧೯–೧೨೨೦. ಮಯೂಖ(ಪು)=ಕಾಂತಿ, ಕಿರಣ, ಜ್ವಾಲೆ. ಶಿಲೀಮುಖ (ಪು)=ದುಂಬಿ, ಬಾಣ. ಶಂಖ (ಪು)=ನಿಧಿವಿಶೇಷ, ಹಣೆಯ ಮೂಳೆ. ಶಂಖ (ಪು.ನ)=ಶಂಖ. ಖ (ನ)=ಇಂದ್ರಿಯ, (ಆಕಾಶ). ಶಿಖಾ (ಸ್ತ್ರೀ)=ಕಿರಣ, ಜ್ವಾಲೆ, (ಜುಟ್ಟು).

## ಗಾಂತಗಳು

೧೨೨೦–೧೨೨೧. ನಗ, ಅಗ (ಪು)=ಬೆಟ್ಟ, ಮರ. ಆಶುಗ (ಪು)=ಗಾಳಿ, ಬಾಣ. ಖಗ (ಪು)=ಬಾಣ, ಸೂರ್ಯ, ಹಕ್ಕಿ. ಪತಂಗ (ಪು)=ಹಕ್ಕಿ, ಸೂರ್ಯ. ಪೂಗ (ಪು)=ಅಡಿಕೆಮರ, ಸಮೂಹ.

೧೨೨೨. ಮೃಗ (ಪು)=ಪಶು, (ಜಿಂಕೆ, ಮೃಗಶಿರ ನಕ್ಷತ್ರ). ವೇಗ (ಪು)=ಪ್ರವಾಹ, ವೇಗ, (ಮಲಮೂತ್ರಾದಿ ಪ್ರವೃತ್ತಿ). ಪರಾಗ (ಪು)=ಹೂವಿನ ಧೂಳಿ, ಸ್ನಾನಕ್ಕೆ ಉಪಯೋಗಿಸುವ ಪುಡಿ, ಧೂಳಿ.

೧೨೨೩. ನಾಗ (ಪು)=ಆನೆ, (ಸರ್ಪ, ಸೀಸ). ಮಾತಂಗ (ಪು)=ಆನೆ, (ಚಂಡಾಲ). ಅಪಾಂಗ (ಪು)=ಹಣೆಯ ಬೊಟ್ಟು, (ಕಡೆಗಣ್ಣು). ಸರ್ಗ (ಪು)=ಸ್ವಭಾವ, ತ್ಯಾಗ, ನಿಶ್ಚಯ, ಕಾವ್ಯದಲ್ಲಿ ವಿರಾಮಸ್ಥಾನ, ಸೃಷ್ಟಿ.

೧೨೨೪. ಯೋಗ (ಪು)=ಕವಚ, ಉಪಾಯ, ಧ್ಯಾನ, ಸಂಬಂಧ, ಯೋಗ್ಯತೆ. ಭೋಗ (ಪು)=ಸುಖ, ಸ್ತ್ರೀ ಮುಂತಾದವರ ಸಂರಕ್ಷಣೆ, ಹಾವಿನ ಹೆಡೆ, ಹಾವಿನ ದೇಹ.

ಚಾತಕೇ ಹರಿಣೇ ಪುಂಸಿ ಸಾರಂಗಃ ಶಬಲೇ ತ್ರಿಷು ।
ಕಪೌ ಚ ಪ್ಲವಗಃ ಶಾಪೇ ತ್ವಭಿಷಂಗಃ ಪರಾಭವೇ ॥ ೧೨೨೫
ಯಾನಾದ್ಯಂಗೇ ಯುಗಃ ಪುಂಸಿ ಯುಗಂ ಯುಗ್ಮೇ ಕೃತಾದಿಷು ।
ಸ್ವರ್ಗೇಷುಪಶುವಾಗ್ವಜ್ರದಿಙ್ನೇತ್ರಘೃಣಿಭೂಜಲೇ ॥ ೧೨೨೬
ಲಕ್ಷ್ಯದೃಷ್ಟ್ಯಾಸ್ತ್ರಿಯಾಂ ಪುಂಸಿ ಗೌರ್ಲಿಂಗಂ ಚಿಹ್ನಶೇಫಸೋಃ ।
ಶೃಂಗಂ ಪ್ರಾಧಾನ್ಯಸಾನ್ವೋಶ್ಚ ವರಾಂಗಂ ಮೂರ್ಧಗುಹ್ಯಯೋಃ ॥ ೧೨೨೭
ಭಗಃ ಶ್ರೀಕಾಮಮಾಹಾತ್ಮ್ಯ ವೀರ್ಯಯತ್ನಾರ್ಕಕೀರ್ತಿಷು ।

ಇತಿ ಗಾಂತವರ್ಗಃ

---

೧೨೨೫. ಸಾರಂಗ (ಪು)=ಚಾತಕಪಕ್ಷಿ, ಜಿಂಕೆ. ಸಾರಂಗ (ಪು. ಸ್ತ್ರೀ. ನ) (—ಸ್ತ್ರೀ. ಸಾರಂಗೀ)=ಚಿತ್ರವರ್ಣದ ವಸ್ತು. ಪ್ಲವಗ (ಪು)=ಕಪಿ, ಕಪ್ಪೆ. ಅಭಿಷಂಗ (ಪು)=ಶಾಪ, ತಿರಸ್ಕಾರ.

೧೨೨೬—೧೨೨೭. ಯುಗ (ಪು)=ನೊಗ, ಯುಗ (ನ)=ಜೊತೆ, ಕೃತಾದಿ ಯುಗ. ಗೋ= ಸ್ವರ್ಗ, ಬಾಣ, ಎತ್ತು ಅಥವಾ ಹಸು, ಮಾತು, ವಜ್ರಾಯುಧ, ದಿಕ್ಕು, ಕಣ್ಣು, ಕಿರಣ, ಭೂಮಿ, ನೀರು. ಗೋಶಬ್ದವು ಸ್ವರ್ಗ, ಎತ್ತು, ಕಿರಣ, ವಜ್ರಾಯುಧ— ಇಷ್ಟು ಅರ್ಥಗಳಲ್ಲಿ ಪುಲ್ಲಿಂಗ. ಉಳಿದ ಅರ್ಥಗಳಲ್ಲಿ ಸ್ತ್ರೀಲಿಂಗ. ಲಿಂಗ (ನ)=ಚಿಹ್ನೆ, ಶಿಶ್ನ. ಶೃಂಗ (ನ)=ಪ್ರಾಧಾನ್ಯ, ಪರ್ವತ ಶಿಖರ. ವರಾಂಗ (ನ)=ತಲೆ, ಸ್ತ್ರೀಯರ ಗುಹ್ಯಾಂಗ.

೧೨೨೮. ಭಗ (ಪು)=ಐಶ್ವರ್ಯ, ಇಚ್ಛೆ, ಮಹಿಮೆ, ಶಕ್ತಿ, ಯತ್ನ, ಸೂರ್ಯ, ಕೀರ್ತಿ, (ಸ್ತ್ರೀಯರ ಗುಹ್ಯಾಂಗ).

## ಘಾಂತಗಳು

೧೨೨೮—೧೨೨೯. ಪರಿಘ (ಪು)=ಬಡಿಯುವುದು, ಒಂದು ಆಯುಧ. ಓಘ (ಪು)=ಸಮೂಹ, ನೀರಿನ ವೇಗ. ಅರ್ಘ (ಪು)=ಬೆಲೆ, ಪೂಜಾವಿಧಿ. ಅಘ (ನ)=ಪಾಪ, ದುಃಖ, ದ್ಯೂತಾದಿವ್ಯಸನ. ಲಘು (ಪು. ಸ್ತ್ರೀ. ನ) (—ಸ್ತ್ರೀ. ಲಘ್ವೀ—ಲಘು)=ಇಷ್ಟ[1]ವಾದ, ಅಲ್ಪ.

[1] ಉದಾ:—ದರ್ಶನೇನ ಲಘುನಾ ಯಥಾ ತಯೋಃ ಪ್ರೀತಿಮಾಪುರುಭಯೋಸ್ತಪಸ್ವಿನಃ ॥–ರಘು, ೧೧—೨



ಪರಿಘಃ ಪರಿಘಾತೇಽಸ್ತ್ರೇಽಪ್ಯೋಘೋ ವೃಂದೇಂಽಭಸಾಂ ರಯೇ ॥ ೧೨೨೮
ಮೂಲ್ಯೇ ಪೂಜಾವಿಧಾವರ್ಘೋಂಽಹೋದುಃಖವ್ಯಸನೇಷ್ವಘಮ್ ।

ಇತಿ ಘಾಂತಾಃ

ತ್ರಿಷ್ವಿಷ್ಟೇಽಲ್ಪೇ ಲಘುಃ ಕಾಚಾಶ್ಶಿಕ್ಯಮೃದ್ಭೇದದೃಗ್ರುಜಃ ॥ ೧೨೨೯
ವಿಪರ್ಯಾಸೇ ವಿಸ್ತರೇ ಚ ಪ್ರಪಂಚಃ ಪಾವಕೇ ಶುಚಿಃ ।
ಮಾಸ್ಯಮಾತ್ಯೇ ಚಾತ್ಯುಪಧೇ ಪುಂಸಿ ಮೇಧ್ಯೇ ಸಿತೇ ತ್ರಿಷು ॥ ೧೨೩೦
ಅಭಿಷ್ವಂಗೇ ಸ್ಪೃಹಾಯಾಂ ಚ ಗಭಸ್ತೌ ಚ ರುಚಿಸ್ತ್ರಿಯಾಮ್ ।

ಇತಿ ಚಾಂತಾಃ

ಕೇಕಿತಾರ್ಕ್ಷ್ಯಾವಹಿಭುಜೌ ದಂತವಿಪ್ರಾಂಡಜಾ ದ್ವಿಜಾಃ ॥ ೧೨೩೧
ಅಜಾ ವಿಷ್ಣುಹರಚ್ಛಾಗಾ ಗೋಷ್ಠಾಧ್ವನಿವಹಾ ವ್ರಜಾಃ ।
ಧರ್ಮರಾಜೌ ಜಿನಯಮೌ ಕುಂಜೋ ದಂತೇಽಪಿ ನ ಸ್ತ್ರಿಯಾಮ್ ॥ ೧೨೩೨

---

## ಚಾಂತಗಳು

೧೨೨೯—೧೨೩೦. ಕಾಚ (ಪು)=ನೇತುಹಾಕುವ ಜೋಳಿಗೆ, ಗಾಜು, ನೇತ್ರರೋಗ. ಪ್ರಪಂಚ (ಪು)=ವೈಪರೀತ್ಯ, ವಿಸ್ತಾರ. ಶುಚಿ (ಪು)=ಬೆಂಕಿ, ಆಷಾಢಮಾಸ. ಲಂಚ ಮುಂತಾದ ದೋಷವಿಲ್ಲದ ಮಂತ್ರಿ. ಶುಚಿ (ಪು. ಸ್ತ್ರೀ. ನ)=ಪರಿಶುದ್ಧ, ಶುಭ್ರ. ರುಚಿ (ಸ್ತ್ರೀ)=ಆಸಕ್ತಿ, ಇಚ್ಛೆ, ಕಿರಣ.

## ಜಾಂತಗಳು

೧೨೩೧—೧೨೩೨. ಅಹಿಭುಜ್ (ಪು)=ನವಿಲು, ಗರುಡ. ದ್ವಿಜ (ಪು)=ಹಲ್ಲು, ಬ್ರಾಹ್ಮಣ, ಹಕ್ಕಿ. ಅಜ (ಪು)=ವಿಷ್ಣು, ಶಿವ, ಮೇಕೆ. ವ್ರಜ (ಪು)=ಕೊಟ್ಟಿಗೆ, ದಾರಿ, ಸಮೂಹ. ಧರ್ಮರಾಜ (ಪು)=ಬುದ್ಧ, ಯಮ. ಕುಂಜ (ಪು.ನ)=ಆನೆಯ ದಂತ, (ಲತಾಗೃಹ).

ವಲಜಂ ಕ್ಷೇತ್ರಪೂರ್ದ್ವಾರೇ ವಲಜಾ ವಲ್ಗುದರ್ಶನಾ ।
ಸಮಕ್ಷ್ಮಾಂಶೇ ರಣೇಽಪ್ಯಾಜಿಃ ಪ್ರಜಾ ಸ್ಯಾತ್ಸಂತತೌ ಜನೇ ॥ ೧೨೩೩
ಅಬ್ಜೌ ಶಂಖಶಶಾಂಕೌ ಚ ಸ್ವಕೇ ನಿತ್ಯೇ ನಿಜಂ ತ್ರಿಷು ।

ಇತಿ ಜಾಂತಾಃ

ಪುಂಸ್ಯಾತ್ಮನಿ ಪ್ರವೀಣೇ ಚ ಕ್ಷೇತ್ರಜ್ಞೋ ವಾಚ್ಯಲಿಂಗಕಃ ॥ ೧೨೩೪
ಸಂಜ್ಞಾ ಸ್ಯಾಚ್ಚೇತನಾ ನಾಮಹಸ್ತಾದ್ಯೈ ಶ್ಚಾರ್ಥಸೂಚನಾ ।

ಇತಿ ಞಾಂತಾಃ

ಕಾಕೇಭಗಂಡೌ ಕರಟೌ ಗಜಗಂಡಕಟೀ ಕಟೌ ॥ ೧೨೩೫
ಶಿಪಿವಿಷ್ಟಸ್ತು ಖಲತೌ ದುಶ್ಚರ್ಮಣಿ ಮಹೇಶ್ವರೇ ।
ದೇವಶಿಲ್ಪಿನ್ಯಪಿ ತ್ವಷ್ಟಾ ದಿಷ್ಟಂ ದೈವೇಽಪಿ ನ ದ್ವಯೋಃ ॥ ೧೨೩೬

---

೧೨೩೩—೧೨೩೪. ವಲಜ (ನ)=ಹೊಲ, ನಗರದ್ವಾರ. ವಲಜಾ (ಸ್ತ್ರೀ)=ಸುಂದರಿ. ಆಜಿ (ಸ್ತ್ರೀ)=ಸಮವಾದ ನೆಲ, ಯುದ್ಧ. ಪ್ರಜಾ (ಸ್ತ್ರೀ)=ಸಂತಾನ, ಜನ. ಅಬ್ಜ (ಪು)=ಶಂಖ, ಚಂದ್ರ, (ಅಬ್ಜ (ನ)=ಕಮಲ). ನಿಜ (ಪು. ಸ್ತ್ರೀ.ನ)=ತನ್ನದು, ಶಾಶ್ವತವಾದ.

## ಞಾಂತಗಳು

೧೨೩೪—೧೨೩೫. ಕ್ಷೇತ್ರಜ್ಞ (ಪು)=ಆತ್ಮ. ಕ್ಷೇತ್ರಜ್ಞ (ಪು. ಸ್ತ್ರೀ.ನ)=ನಿಪುಣ. ಸಂಜ್ಞಾ (ಸ್ತ್ರೀ)=ಚೈತನ್ಯ, ಹೆಸರು, ಹಸ್ತಾದಿಗಳಿಂದ ಅಭಿಪ್ರಾಯವನ್ನು ಸೂಚಿಸುವುದು.

## ಟಾಂತಗಳು

೧೨೩೫—೧೨೩೬. ಕರಟ (ಪು)=ಕಾಗೆ, ಆನೆಯ ಗಂಡಸ್ಥಳ. ಕಟ (ಪು)—ಆನೆಯ ಗಂಡಸ್ಥಳ, ಸೊಂಟ. ಶಿಪಿವಿಷ್ಟ (ಪು)=ಬೋಳದಲೆಯವನು, ಕುಷ್ಠರೋಗಿ, ಪರಮೇಶ್ವರ. ತ್ವಷ್ಟ (ಪು)=ವಿಶ್ವಕರ್ಮ, ಬಡಗಿ. ದಿಷ್ಟ, (ನ)=ದೈವ. (ದಿಷ್ಟ(ಪು)=ಕಾಲ).



ರಸೇ ಕಟುಃ ಕಟ್ವಕಾರ್ಯೇ ತ್ರಿಷು ಮತ್ಸರತೀಕ್ಷ್ಣಯೋಃ ।
ರಿಷ್ಟಂ ಕ್ಷೇಮಾಶುಭಾಭಾವೇ ತ್ವರಿಷ್ಟೇ ತು ಶುಭಾಶುಭೇ ॥ ೧೨೩೭
ಮಾಯಾನಿಶ್ಚಲಯಂತ್ರೇಷು ಕೈತವಾನೃತರಾಶಿಷು ।
ಅಯೋಘನೇ ಶೈಲಶೃಂಗೇ ಸೀರಾಂಗೇ ಕೂಟಮಸ್ತ್ರಿಯಾಮ್ ॥ ೧೨೩೮
ಸೂಕ್ಷ್ಮೈಲಾಯಾಂ ತ್ರುಟಿಃ ಸ್ತ್ರೀಸ್ಯಾತ್ಕಾಲೇಽಲ್ಪೇ ಸಂಶಯೇಽಪಿ ಸಾ ।
ಅತ್ಯುತ್ಕರ್ಷಾಶ್ರಯಃ ಕೋಟ್ಯೋ ಮೂಲೇ ಲಗ್ನಕಚೇ ಜಟಾ ॥ ೧೨೩೯
ವ್ಯುಷ್ಟಿಃ ಫಲೇ ಸಮೃದ್ಧೌ ಚ ದೃಷ್ಟಿರ್ಜ್ಞಾನೇಽಕ್ಷ್ಣಿ ದರ್ಶನೇ ।
ಇಷ್ಟಿರ್ಯಾಗೇಚ್ಛಯೋಃ ಸೃಷ್ಟಂ ನಿಶ್ಚಿತೇ ಬಹುಲೇ ತ್ರಿಷು ॥ ೧೨೪೦
ಕಷ್ಟೇ ತು ಕೃಚ್ಛ್ರ ಗಹನೇ ದಕ್ಷಾಮಂದಾಗದೇಷು ತು ।

ಇತಿ ಟಾಂತಾಃ

ಪಟುರ್ದ್ವೌ ವಾಚ್ಯಲಿಂಗೌ ಚ ನೀಲಕಂಠಶ್ಶಿವೇಽಪಿ ಚ ॥ ೧೨೪೧

---

೧೨೩೭. ಕಟು (ಪು)=ಖಾರ, ಕಟು (ನ)=ದುಷ್ಕಾರ್ಯ. ಕಟು (ವಿ. ನಿಘ್ನ)=ಮಾತ್ಸರ್ಯವುಳ್ಳ, ತೀಕ್ಷ್ಣವಾದ. ರಿಷ್ಟ (ನ)=ಕ್ಷೇಮ, ಅಶುಭ, ವಿನಾಶ. ಅರಿಷ್ಟ (ನ)=ಶುಭ, ಅಶುಭ.

೧೨೩೮. ಕೂಟ (ಪು.ನ)=ಇಂದ್ರಜಾಲ ಮುಂತಾದ ಮಾಯಾವಿದ್ಯೆ. ನಿಶ್ಚಲವಸ್ತು, ಬೋನು ಮುಂತಾದ ಕಪಟಯಂತ್ರ, ವಂಚನೆ, ಸುಳ್ಳು, ಸಮೂಹ, ಸುತ್ತಿಗೆ, ಬೆಟ್ಟದ ಶಿಖರ, ಗುಳ.

೧೨೩೯. ತ್ರುಟಿ (ಸ್ತ್ರೀ)=ಸಣ್ಣ ಯಾಲಕ್ಕಿ, ಕಾಲದ ಒಂದು ಅಲ್ಪವಾದ ಪರಿಮಾಣ, ಸಂಶಯ. ಕೋಟೀ (ಸ್ತ್ರೀ)=ಹೆಚ್ಚುಗಾರಿಕೆ, ಧನುಸ್ಸಿನ ತುದಿ. ಜಟಾ (ಸ್ತ್ರೀ)=ಮರದ ಬಿಳಲು, ಜಡೆ.

೧೨೪೦—೧೨೪೧. ವ್ಯುಷ್ಟಿ (ಸ್ತ್ರೀ)=ಪ್ರಯೋಜನ, ಸಮೃದ್ಧಿ. ದೃಷ್ಟಿ (ಸ್ತ್ರೀ)=ಜ್ಞಾನ, ಕಣ್ಣು, ನೋಟ. ಇಷ್ಟಿ (ಸ್ತ್ರೀ)=ಯಾಗ, ಇಚ್ಛೆ. ಸೃಷ್ಟ (ಪು.ಸ್ತ್ರೀ.ನ)= ನಿಶ್ಚಿತ, ಬಹಳವಾದ. ಕಷ್ಟ (ಪು. ಸ್ತ್ರೀ.ನ)=ಕ್ಲೇಶಕರ, ಪ್ರವೇಶಿಸಲು ಅಶಕ್ಯ. ಪಟು (ಪು. ಸ್ತ್ರೀ. ನ) (—ಸ್ತ್ರೀ. ಪಟ್ವೀ—ಪಟು)=ದಕ್ಷ, ಚುರುಕು ಬುದ್ಧಿಯವನು, ಆರೋಗ್ಯವುಳ್ಳವನು.

ಪುಂಸಿ ಕೋಷ್ಠೋಽನ್ತರ್ಜಠರಂ ಕುಸೂಲೋಽನ್ತರ್ಗೃಹಂ ತಥಾ ।
ನಿಷ್ಠಾ ನಿಷ್ಪತ್ತಿನಾಶಾನ್ತಾಃ ಕಾಷ್ಠೋತ್ಕರ್ಷೇ ಸ್ಥಿತೌ ದಿಶಿ ॥ ೧೨೪೨
ತ್ರಿಷು ಜ್ಯೇಷ್ಠೋಽತಿಶಸ್ತೇಽಪಿ ಕನಿಷ್ಠೋಽತಿಯುವಾಲ್ಪಯೋಃ ।

ಇತಿ ಠಾನ್ತಾಃ

ದಂಡೋಽಸ್ತ್ರೀ ಲಗುಡೇಽಪಿ ಸ್ಯಾದ್ಗುಡೋ ಗೋಲೇಕ್ಷು ಪಾಕಯೋಃ ॥೧೨೪೩
ಸರ್ಪಮಾಂಸಾತ್ಪಶೂ ವ್ಯಾಡೌ ಗೋಭೂವಾಚಸ್ತ್ವಿಡಾ ಇಲಾ ।
ಕ್ಷ್ವೇಡಾ ವಂಶಶಲಾಕಾಪಿ ನಾಡೀ ಕಾಲೇಽಪಿ ಷಟ್ಕ್ಷಣೇ ॥ ೧೨೪೪
ಕಾಂಡೋಽಸ್ತ್ರೀ ದಂಡಬಾಣಾರ್ವವರ್ಗಾವಸರವಾರಿಷು ।
ಸ್ಯಾದ್ಭಾಂಡಮಶ್ವಾಭರಣೇಽಮತ್ರೇ ಮೂಲವಣಿಗ್ಧನೇ ॥ ೧೨೪೫

ಇತಿ ಡಾನ್ತಃ

---

## ಠಾಂತಗಳು

೧೨೪೧–೧೨೪೨–೧೨೪೩. ನೀಲಕಂಠ (ಪು)=ಶಿವ, (ನವಿಲು), ಕೋಷ್ಠ (ಪು)=ಹೊಟ್ಟೆಯ ಒಳಭಾಗ, (ಧಾನ್ಯದ ಕಣಜ, ಒಳಮನೆ). ನಿಷ್ಠಾ (ಸ್ತ್ರೀ)=ಕಾರ್ಯಸಿದ್ಧಿ, ನಾಶ, ಕೊನೆ. ಕಾಷ್ಠಾ (ಸ್ತ್ರೀ)=ಅತಿಶಯ, ಸ್ಥಾನ, ದಿಕ್ಕು. ಜ್ಯೇಷ್ಠ (ಪು. ಸ್ತ್ರೀ.ನ)=ಶ್ರೇಷ್ಠ, (ಹಿರಿಯ). ಕನಿಷ್ಠ (ಪು.ಸ್ತ್ರೀ.ನ)=ಬಹಳ ಚಿಕ್ಕವನು, ಅಲ್ಪ.

## ಡಾಂತಗಳು

೧೨೪೩–೧೨೪೪. ದಂಡ (ಪು.ನ)=ದೊಣ್ಣೆ, (ದಂಡನೆ), ಗುಡ (ಪು)=ಉಂಡೆ, ಬೆಲ್ಲ. ವ್ಯಾಡ (ಪು)=ಸರ್ಪ, ಮಾಂಸಾಹಾರಿಯಾದ ಪ್ರಾಣಿ. ಇಡಾ—ಇಲಾ (ಸ್ತ್ರೀ)=ಹಸು, ಭೂಮಿ, ಮಾತು. ಕ್ಷ್ವೇಡಾ (ಸ್ತ್ರೀ)=ಬಿದಿರಿನ ಸೀಳು, ಸಿಂಹನಾದ. ನಾಡೀ (ಸ್ತ್ರೀ)=ಆರು ಕ್ಷಣಗಳ ಕಾಲ, (ಸೊಪ್ಪಿನ ದಂಟು, ನರ).

೧೨೪೫. ಕಾಂಡ (ಪು.ನ)=ಕೋಲು, ಬಾಣ, ಕುದುರೆ, ಗ್ರಂಥದ ಒಂದು ವಿಭಾಗ, ಕಾಲ, ನೀರು. ಭಾಂಡ (ನ)=ಕುದುರೆಯ ಆಭರಣ, ಪಾತ್ರೆ, ವ್ಯಾಪಾರದ ಬಂಡವಾಳ.



ಭೃಶಪ್ರತಿಜ್ಞಯೋರ್ಬಾಢಂ ಪ್ರಗಾಢಂ ಭೃಶಕೃಚ್ಛ್ರಯೋಃ ।
ಶಕ್ತಸ್ಥೂಲೌ ತ್ರಿಷು ದೃಢೌ ವ್ಯೂಢೌ ವಿನ್ಯಸ್ತಸಂಹತೌ ॥ ೧೨೪೬

ಇತಿ ಢಾನ್ತಾಃ

ಭ್ರೂಣೋಽರ್ಭಕೇ ಸ್ತ್ರೈಣಗರ್ಭೇ ಬಾಣೋ ಬಲಿಸುತೇ ಶರೇ ।
ಕಣೋಽತಿಸೂಕ್ಷ್ಮೇ ಧಾನ್ಯಾಂಶೇ ಸಂಘಾತೇ ಪ್ರಮಥೇ ಗಣಃ ॥ ೧೨೪೭
ಪಣೋ ದ್ಯೂತಾದಿಷೂತ್ಸೃಷ್ಟೇ ಭೃತೌ ಮೂಲ್ಯೇ ಧನೇಽಪಿ ಚ ।
ಮೌರ್ವ್ಯಾಂ ದ್ರವ್ಯಾಶ್ರಿತೇ ಸತ್ವಶುಕ್ಲಸಂಧ್ಯಾದಿಕೇ ಗುಣಃ ॥ ೧೨೪೮
ನಿರ್ವ್ಯಾಪಾರಸ್ಥಿತೌ ಕಾಲವಿಶೇಷೋತ್ಸವಯೋಃ ಕ್ಷಣಃ ।
ವರ್ಣೋ ದ್ವಿಜಾದೌ ಶುಕ್ಲಾದೌ ಸ್ತುತೌ ವರ್ಣಂ ತು ಚಾಕ್ಷರೇ ॥ ೧೨೪೯

---

## ಢಾಂತಗಳು

೧೨೪೬. ಬಾಢ[1] (ನ)=ಅತಿಶಯವಾಗಿ, ಅಂಗೀಕಾರಾರ್ಹವಾಗಿ. ಪ್ರಗಾಢ (ನ)=ಅತಿಶಯವಾದ, ದುಃಖಿ. ದೃಢ (ಪು. ಸ್ತ್ರೀ. ನ)=ಶಕ್ತ, ಸ್ಥೂಲ. ವ್ಯೂಢ (ಪು. ಸ್ತ್ರೀ. ನ)=ರಚನಾವಿಶೇಷದಿಂದ ಕೂಡಿದ, ಸಂಶ್ಲಿಷ್ಟವಾದ.

## ಣಾಂತಗಳು

೧೨೪೭. ಭ್ರೂಣ (ಪು)=ಬಾಲಕ, ಗರ್ಭ. ಬಾಣ (ಪು)=ಬಲಿಯ ಮಗ, ಅಂಬು. ಕಣ (ಪು)=ಅತಿಸೂಕ್ಷ್ಮವಾದ ವಸ್ತು, ಧಾನ್ಯದ ಒಡಕಲು. ಗಣ (ಪು)=ಸಮೂಹ, ಪ್ರಮಥಗಣ.

೧೨೪೮. ಪಣ (ಪು)=ಜೂಜಿನಲ್ಲಿ ಇಡುವ ದ್ರವ್ಯ, ಕೂಲಿ, ಬೆಲೆ, ಹಣ. ಗುಣ (ಪು)=ಬಿಲ್ಲಿನ ಹೆದೆ, ದ್ರವ್ಯದಲ್ಲಿರುವ ರೂಪರಸಾದಿ, ಸತ್ತ್ವರಜಸ್ತಮೋ ಗುಣಗಳು, ಶುಕ್ಲ ಕೃಷ್ಣ ಮುಂತಾದವು, ಸಂಧಿವಿಗ್ರಹಾದಿಗಳು.

---

[1] ಇದು ಕ್ರಿಯಾವಿಶೇಷಣವಾಗಿ ಮಾತ್ರವೇ ಪ್ರಯುಕ್ತವಾಗಿರುವುದು ಕಂಡುಬರುತ್ತದೆ. ಆಗ ನಪುಂಸಕಲಿಂಗದ ದ್ವಿತೀಯೈಕವಚನವೆಂದು ತಿಳಿಯಬೇಕು. ಈ ಶಬ್ದವು ತರಬರ್ಥದಲ್ಲಿ ಸಾಧೀಯಸ್ ಎಂದೂ ತಮಬರ್ಥದಲ್ಲಿ ಸಾಧಿಷ್ಠ ಎಂದೂ ರೂಪವನ್ನು ಪಡೆಯುತ್ತದೆ. ಹೀಗೆ ರೂಪಾಂತರವಾದಾಗ ಕ್ರಿಯಾವಿಶೇಷಣವೆಂಬ ನಿಯಮವಿಲ್ಲ.

ಅರುಣೋ ಭಾಸ್ಕರೇಽಪಿ ಸ್ಯಾದ್ವರ್ಣಭೇದೇಽಪಿ ಚ ತ್ರಿಷು ।
ಸ್ಥಾಣುಃ ಶರ್ವೇಽಪ್ಯಥ ದ್ರೋಣಃ ಕಾಕೇಽಪಿ ಚ ರವೇ ರಣಃ ॥ ೧೨೫೦
ಗ್ರಾಮಣೀರ್ನಾಪಿತೇ ಪುಂಸಿ ಶ್ರೇಷ್ಠೇ ಗ್ರಾಮಾಧಿಪೇ ತ್ರಿಷು ।
ಊರ್ಣಾ ಮೇಷಾದಿಲೋಮ್ನಿ ಸ್ಯಾದಾವರ್ತೇ ಚಾಂತರಾ ಭ್ರುವೌ ॥ ೧೨೫೧
ಹರಿಣೀ ಸ್ಯಾನ್ಮೃಗೀ ಹೇಮಪ್ರತಿಮಾ ಹರಿತಾ ಚ ಯಾ ।
ತ್ರಿಷು ಪಾಂಡೌ ಚ ಹರಿಣಃ ಸ್ಥೂಣಾ ಸ್ತಂಭೇಽಪಿ ವೇಶ್ಮನಃ ॥ ೧೨೫೨
ತೃಷ್ಣೇ ಸ್ಪೃಹಾಪಿಪಾಸೇ ದ್ವೇ ಜುಗುಪ್ಸಾಕರುಣೇ ಘೃಣೇ ।
ವಣಿಕ್ಪಥೇ ಚ ವಿಪಣಿಸ್ಸುರಾ ಪ್ರತ್ಯಕ್ಚ ವಾರುಣೀ ॥ ೧೨೫೩
ಕರೇಣುರಿಭ್ಯಾಂ ಸ್ತ್ರೀ ನೇಭೇ ದ್ರವಿಣಂ ತು ಬಲಂ ಧನಮ್ ।
ಶರಣಂ ಗೃಹರಕ್ಷಿತ್ರೋಃ ಶ್ರೀಪರ್ಣಂ ಕಮಲೇಽಪಿ ಚ ॥ ೧೨೫೪

---

೧೨೪೯. ಕ್ಷಣ (ಪು)=ವಿರಾಮ (Leisure), ಸೆಕೆಂಡಿಗಿಂತ ಕಡಿಮೆಯಾದ ಕಾಲವಿಶೇಷ, ಉತ್ಸವ. ವರ್ಣ (ಪು)=ಬ್ರಾಹ್ಮಣಾದಿ ವರ್ಣ, ಬಿಳುಪು ಮುಂತಾದ ಬಣ್ಣ, ಸ್ತೋತ್ರ. ವರ್ಣ (ನ)=ಅಕ್ಷರ. (ಅಕ್ಷರಾರ್ಥದಲ್ಲಿ ಪುಲ್ಲಿಂಗವೂ ಉಂಟು).

೧೨೫೦. ಅರುಣ (ಪು)=ಸೂರ್ಯ, (ಸೂರ್ಯನ ಸಾರಥಿ). ಅರುಣ (ತ್ರಿಲಿಂಗ)=ಎಳೆಗೆಂಪಾದ. ಸ್ಥಾಣು (ಪು)=ಶಿವ, (ಮೋಟುಮರ). ದ್ರೋಣ (ಪು)=ಕಾಗೆ, (ಒಂದು ಪರಿಮಾಣ, ತುಂಬೆಗಿಡ). ರಣ (ಪು)=ಶಬ್ದ, (ಯುದ್ಧ)

೧೨೫೧. ಗ್ರಾಮಣೀ (ಪು)=ಕ್ಷೌರಿಕ. ಗ್ರಾಮಣೀ (ತ್ರಿಲಿಂಗ.—ನ. ಗ್ರಾಮಣಿ)=ಶ್ರೇಷ್ಠ, ಗ್ರಾಮದ ಒಡೆಯ—ಪಟೇಲ. ಊರ್ಣಾ (ಸ್ತ್ರೀ)=ಕುರಿ ಮುಂತಾದವುಗಳ ಕೂದಲು — ಉಣ್ಣೆ, ಹುಬ್ಬುಗಳ ನಡುವಿನ ಸುರುಳಿ.

೧೨೫೨. ಹರಿಣೀ (ಸ್ತ್ರೀ)=ಹೆಣ್ಣುಜಿಂಕೆ. ಹರಿಣೀ (ಸ್ತ್ರೀ)=ಚಿನ್ನದ ಪ್ರತಿಮೆ, ಹಳದಿಯ ಬಣ್ಣ ಉಳ್ಳದ್ದು (ಹರಿತಾ). ಹರಿಣ (ಪು)=ಜಿಂಕೆ. ಹರಿಣ (ತ್ರಿಲಿಂಗ)=ಹಳದಿಮಿಶ್ರ ಬಿಳುಪಾದ. ಸ್ಥೂಣಾ (ಸ್ತ್ರೀ)=ಕಂಭ (ಕಬ್ಬಿಣದ ಪ್ರತಿಮೆ).

೧೨೫೩. ತೃಷ್ಣಾ (ಸ್ತ್ರೀ)=ಆಸೆ, ಬಾಯಾರಿಕೆ. ಘೃಣಾ (ಸ್ತ್ರೀ)=ಜುಗುಪ್ಸೆ, ಕರುಣೆ. ವಿಪಣಿ (ಸ್ತ್ರೀ)=ಅಂಗಡಿಬೀದಿ, (ಅಂಗಡಿ, ಮಾರಾಟದ ವಸ್ತು) ವಾರುಣೀ (ಸ್ತ್ರೀ)=ಹೆಂಡ, ಪಶ್ಚಿಮದಿಕ್ಕು.



ವಿಷಾಭಿಮರಲೋಹೇಷು ತೀಕ್ಷ್ಣಂ ಕ್ಲೀಬೇ ಖರೇ ತ್ರಿಷು ।
ಪ್ರಮಾಣಂ ಹೇತುಮರ್ಯಾದಾಶಾಸ್ತ್ರೇಯತ್ತಾಪ್ರಮಾತೃಷು ॥ ೧೨೫೫
ಕರಣಂ ಸಾಧಕತಮಂ ಕ್ಷೇತ್ರಗಾತ್ರೇಂದ್ರಿಯೇಷ್ವಪಿ ।
ಪ್ರಾಣ್ಯುತ್ಪಾದೇ ಸಂಸರಣಮಸಂಬಾಧಚಮೂಗತೌ ॥ ೧೨೫೬
ಘಂಟಾಪಥೇಽಥ ವಾಂತಾನ್ನೇ ಸಮುದ್ಧರಣಮುನ್ನಯೇ ।
ಅತಸ್ತ್ರಿಷು ವಿಷಾಣಂ ಸ್ಯಾತ್ಪಶುಶೃಂಗೇಭದಂತಯೋಃ ॥ ೧೨೫೭
ಪ್ರವಣಃ ಕ್ರಮನಿಮ್ನೋರ್ವ್ಯಾಂ ಪ್ರಹ್ವೇ ನಾ ತು ಚತುಷ್ಪಥೇ ।
ಸಂಕೀರ್ಣೌ ನಿಚಿತಾಶುದ್ಧಾವೀರಿಣಂ ಶೂನ್ಯಮೂಷರಮ್ ॥ ೧೨೫೮

ಇತಿ ಣಾಂತಾಃ

---

೧೨೫೪. ಕರೇಣು (ಸ್ತ್ರೀ)=ಹೆಣ್ಣಾನೆ. ಕರೇಣು (ಪು)=ಗಂಡಾನೆ. ದ್ರವಿಣ (ನ)=ಬಲ, ಹಣ. ಶರಣ (ನ)=ಮನೆ, ಪಾಲಕ. ಶ್ರೀಪರ್ಣ (ನ)=ಕಮಲ, ನೆಲ್ಲಿಗಿಡ.

೧೨೫೫. ತೀಕ್ಷ್ಣ (ನ)=ವಿಷ, ಯುದ್ಧ, ಕಬ್ಬಿಣ (ಅಭಿಮರಃ=ಯುದ್ಧ). ತೀಕ್ಷ್ಣ (ಪು.ಸ್ತ್ರೀ.ನ)=ಹರಿತವಾದ, ಕಠೋರವಾದ. ಪ್ರಮಾಣ (ನ)=ಯಥಾರ್ಥ ಜ್ಞಾನದ ಕಾರಣ, ಅವಧಿ, ಶಾಸ್ತ್ರ, ಅಳತೆ. ಸರಿಯಾಗಿ ತಿಳಿಯತಕ್ಕವನು.

೧೨೫೬. ಕರಣ (ನ)=ಮುಖ್ಯವಾದ ಸಾಧನ, ಹೊಲ, ದೇಹ, ಇಂದ್ರಿಯ. ಸಂಸರಣ (ನ)=ಪ್ರಾಣಿಗಳ ಉತ್ಪತ್ತಿರೂಪವಾದ ಸಂಸಾರ, ಇಕ್ಕಟ್ಟು ಆಗದಂತೆ ಸೈನ್ಯದ ನಡಿಗೆ, ದೊಡ್ಡ ಬೀದಿ.

೧೨೫೭. ಸಮುದ್ಧರಣ (ನ)=ಕಕ್ಕಿದ ಅನ್ನ, ಮೇಲಕ್ಕೆ ಎತ್ತುವುದು. ಮುಂದೆ ಣಾಂತವು ಮುಗಿಯುವವರೆಗಿನ ಶಬ್ದಗಳು ಮೂರು ಲಿಂಗಗಳಲ್ಲಿ ಇರುತ್ತವೆ. ವಿಷಾಣ (ತ್ರಿಲಿಂಗ, —ಸ್ತ್ರೀ. ವಿಷಾಣೀ. ಇದು ವಿ. ನಿಘ್ನವಲ್ಲ)=ಕೊಂಬು, ಆನೆಯ ದಂತ.

೧೨೫೮. ಪ್ರವಣ (ತ್ರಿಲಿಂಗ)=ಕ್ರಮವಾಗಿ ಇಳಿಜಾರಾದ ನೆಲ, ವಿನೀತ. ಪ್ರವಣ (ಪು)=ನಾಲ್ಕು ಬೀದಿಗಳು ಸೇರುವ ಚೌಕ. ಸಂಕೀರ್ಣ (ವಿ. ನಿಘ್ನ)=ಸಂಮಿಶ್ರವಾದ, ಅಶುದ್ಧವಾದ. ಈರಿಣ (ಇರಿಣ) (ತ್ರಿಲಿಂಗ)=ಪಾಳುಬಿದ್ದ ನೆಲ, ಚೌಳುಭೂಮಿ.

ದೇವಸೂರ್ಯೌ ವಿವಸ್ವಂತೌ ಸರಸ್ವಂತೌ ನದಾರ್ಣವೌ ।
ಪಕ್ಷಿತಾರ್ಕ್ಷ್ಯೌ ಗರುತ್ಮಂತೌ ಶಕುಂತೌ ಭಾಸಪಕ್ಷಿಣೌ ॥ ೧೨೫೯
ಅಗ್ನ್ಯುತ್ಪಾತೌ ಧೂಮಕೇತೂ ಜೀಮೂತೌ ಮೇಘಪರ್ವತೌ ।
ಹಸ್ತೌತು ಪಾಣಿನಕ್ಷತ್ರೇ ಮರುತೌ ಪವನಾಮರೌ ॥ ೧೨೬೦
ಯಂತಾ ಹಸ್ತಿಪಕೇ ಸೂತೇ ಭರ್ತಾ ಧಾತರಿ ಪೋಷ್ಟರಿ ।
ಯಾನಪಾತ್ರೇ ಶಿಶೌ ಪೋತಃ ಪ್ರೇತಃ ಪ್ರಾಣ್ಯಂತರೇ ಮೃತೇ ॥ ೧೨೬೧
ಗ್ರಹಭೇದೇ ಧ್ವಜೇ ಕೇತುಃ ಪಾರ್ಥಿವೇ ತನಯೇ ಸುತಃ ।
ಸ್ಥಪತಿಃ ಕಾರುಭೇದೇಽಪಿ ಭೂಭೃದ್ಭೂಮಿಧರೇ ನೃಪೇ ॥ ೧೨೬೨
ಮೂರ್ಧಾಭಿಷಿಕ್ತೋ ಭೂಪೇಽಪಿ ಋತುಃ ಸ್ತ್ರೀಕುಸುಮೇಽಪಿ ಚ ।
ವಿಷ್ಣಾವಪ್ಯಜಿತಾವ್ಯಕ್ತೌ ಸೂತಸ್ತ್ವಷ್ಟರಿ ಸಾರಥೌ ॥ ೧೨೬೩

---

## ತಾಂತಗಳು

೧೨೫೯. ವಿವಸ್ವತ್ (ಪು)=ದೇವತೆ, ಸೂರ್ಯ. ಸರಸ್ವತ್ (ಪು)=ಸರಸ್ವಾನ್ ಎಂಬ ಒಂದು ಹೊಳೆ, ಸಮುದ್ರ. ಗುರುತ್ಮತ್ (ಪು)=ಹಕ್ಕಿ, ಗರುಡ, ಶಕುಂತ (ಪು)=ಚಂಬಾರಕಾಗೆ (Raven), ಹಕ್ಕಿ

೧೨೬೦. ಧೂಮಕೇತು (ಪು)=ಅಗ್ನಿ, ಉತ್ಪಾತ. ಜೀಮೂತ (ಪು)=ಮೋಡ, ಬೆಟ್ಟ. ಹಸ್ತ (ಪು)=ಕೈ, ನಕ್ಷತ್ರವಿಶೇಷ. ಮರುತ್ (ಪು)=ವಾಯು, ದೇವತೆ.

೧೨೬೧. ಯಂತೃ (ಪು)=ಮಾವುತ, ಸಾರಥಿ. ಭರ್ತೃ (ಪು)=ಹೊರುವವನು, ಪೋಷಿಸುವವನು. ಪೋತ (ಪು)=ಹರಿಗೋಲು, ಮಗು. ಪ್ರೇತ (ಪು)=ನರಕದಲ್ಲಿರುವ ಜೀವಿ ಅಥವಾ ಒಂದು ಭೂತ, ಸತ್ತವನು (ಸಪಿಂಡೀಕರಣವಾಗುವುದಕ್ಕಿಂತ ಪೂರ್ವದಲ್ಲಿ).

೧೨೬೨. ಕೇತು (ಪು)=ಕೇತು ಎಂಬ ಗ್ರಹ, ಬಾವುಟ. ಸುತ (ಪು)=ಕ್ಷತ್ರಿಯ, ಮಗ. ಸ್ಥಪತಿ (ಪು)=ಶಿಲ್ಪಿ, (ಬೃಹಸ್ಪತಿಯಾಗಕರ್ತ, ಕಂಚುಕಿ). ಭೂಭೃತ್ (ಪು)=ಬೆಟ್ಟ, ರಾಜ.

೧೨೬೩. ಮೂರ್ಧಾಭಿಷಿಕ್ತ (ಪು)=ಪಟ್ಟಾಭಿಷಿಕ್ತನಾದ ರಾಜ, (ಮಂತ್ರಿ, ಕ್ಷತ್ರಿಯ). ಋತು (ಪು)=ಸ್ತ್ರೀಯರ ರಜಸ್ಸು, (ವಸಂತಾದಿ ಋತು). ಅಜಿತ (ಪು)=ವಿಷ್ಣು (ಶಿವ, ಜಯಿಸಲ್ಪಡದವನು). ಅವ್ಯಕ್ತ (ಪು)=ವಿಷ್ಣು, (ಶಿವ, ವ್ಯಕ್ತವಲ್ಲದ್ದು). ಸೂತ (ಪು)=ಬಡಗಿ, ಸಾರಥಿ.



ವ್ಯಕ್ತಃ ಪ್ರಾಜ್ಞೇಽಪಿ ದೃಷ್ಟಾಂತವುಭೇ ಶಾಸ್ತ್ರನಿದರ್ಶನೇ ।
ಕ್ಷತ್ತಾ ಸ್ಯಾತ್ಸಾರಥೌ ದ್ವಾಃಸ್ಥೇ ಕ್ಷತ್ರಿಯಾಯಾಂ ಚ ಶೂದ್ರಜೇ ॥ ೧೨೬೪
ವೃತ್ತಾಂತಸ್ಸ್ಯಾತ್ಪ್ರಕರಣೇ ಪ್ರಕಾರೇ ಕಾರ್ತ್ಸ್ನ್ಯವಾರ್ತಯೋಃ ।
ಆನರ್ತಸ್ಸಮರೇ ನೃತ್ಯಸ್ಥಾನನೀವೃದ್ವಿಶೇಷಯೋಃ ॥ ೧೨೬೫
ಕೃತಾಂತೋ ಯಮಸಿದ್ಧಾಂತದೈವಾಕುಶಲಕರ್ಮಸು ।
ಶ್ಲೇಷ್ಮಾದಿ ರಸರಕ್ತಾದಿ ಮಹಾಭೂತಾನಿ ತದ್ಗುಣಾಃ ॥ ೧೨೬೬
ಇಂದ್ರಿಯಾಣ್ಯಶ್ಮವಿಕೃತಿಃ ಶಬ್ದಯೋನಿಶ್ಚ ಧಾತವಃ ।
ಕಕ್ಷ್ಯಾಂತರೇಽಪಿ ಶುದ್ಧಾಂತೋ ನೃಪಸ್ಯಾಸರ್ವಗೋಚರೇ ॥ ೧೨೬೭
ಕಾಸೂಸಾಮರ್ಥ್ಯಯೋಃ ಶಕ್ತಿಃ ಮೂರ್ತಿಃ ಕಾಠಿನ್ಯಕಾಯಯೋಃ ।
ವಿಸ್ತಾರವಲ್ಲ್ಯೋರ್ವ್ರತತಿರ್ವಸತೀ ರಾತ್ರಿವೇಶ್ಮನೋಃ ॥ ೧೨೬೮
ಕ್ಷಯಾರ್ಚಯೋರಪಚಿತಿಃ ಸಾತಿರ್ದಾನಾವಸಾನಯೋಃ ।
ಅರ್ತಿಃಪೀಡಾಧನುಷ್ಕೋಟ್ಯೋರ್ಜಾತಿಸ್ಸಾಮಾನ್ಯ ಜನ್ಮನೋಃ ॥ ೧೨೬೯

---

೧೨೬೪. ವ್ಯಕ್ತ (ಪು)=ಬುದ್ಧಿಶಾಲಿ, (ಸ್ಪಷ್ಟವಾದ). ದೃಷ್ಟಾಂತ (ಪು)=ಶಾಸ್ತ್ರ, ಉದಾಹರಣೆ. ಕ್ಷತ್ತೃ (ಪು)=ಸಾರಥಿ, ದ್ವಾರಪಾಲಕ, ಶೂದ್ರನಿಂದ ಕ್ಷತ್ರಿಯ ಸ್ತ್ರೀಯಲ್ಲಿ ಹುಟ್ಟಿದವನು. (ವಿದುರನು ಕ್ಷತ್ತೃವೆನಿಸಿದ್ದು ಹೇಗೆ ?)

೧೨೬೫. ವೃತ್ತಾಂತ (ಪು)=ಪ್ರಕೃತ ಸಂದರ್ಭ, ರೀತಿ, ಸಮಗ್ರತೆ, ಸುದ್ದಿ. ಆನರ್ತ (ಪು)=ಯುದ್ಧ, ನೃತ್ಯಶಾಲೆ, ಒಂದು ದೇಶ.

೧೨೬೬—೧೨೬೭. ಕೃತಾಂತ (ಪು)=ಯಮ, ಸಿದ್ಧಾಂತ, ಅದೃಷ್ಟ, ಪಾಪಕರ್ಮ, ಧಾತು (ಪು)=ವಾತ ಪಿತ್ತ ಶ್ಲೇಷ್ಮಗಳು, ರಸ ರಕ್ತಮಾಂಸಾದಿಗಳು (ರಸ=ತಿಂದ ಆಹಾರದ ಪ್ರಥಮ ರೂಪಾಂತರ), ಭೂಮಿ ಜಲ ಮುಂತಾದ ಪಂಚಭೂತಗಳು, ಶಬ್ದಸ್ಪರ್ಶಾದಿ ಗುಣಗಳು, ಗುಣಗಳು, ಇಂದ್ರಿಯ, ಗೈರಿಕಲೋಹ, ಭೂ—ಏಧ್ ಮುಂತಾದ ಕ್ರಿಯಾಪದದ ಮೂಲ ರೂಪ. ಶುದ್ಧಾಂತ (ಪು)=ರಾಜನ ಏಕಾಂತಸ್ಥಳ, ಅಂತಃಪುರದ ಸ್ತ್ರೀಜನ.

೧೨೬೮. ಶಕ್ತಿ (ಸ್ತ್ರೀ)=ಆಯುಧ ವಿಶೇಷ, ಸಾಮರ್ಥ್ಯ. ಮೂರ್ತಿ (ಸ್ತ್ರೀ)=ಕಠಿನತ್ವ, ಶರೀರ. ವ್ರತತಿ (ಸ್ತ್ರೀ)=ವಿಸ್ತಾರ, ಬಳ್ಳಿ. ವಸತಿ (ಸ್ತ್ರೀ)=ರಾತ್ರಿ, ಮನೆ.

೧೨೬೯. ಅಪಚಿತಿ (ಪು)=ಕ್ಷೀಣಿಸುವಿಕೆ, ಪೂಜೆ. ಸಾತಿ (ಸ್ತ್ರೀ)=ದಾನ, ಅವಸಾನ. ಅರ್ತಿ[1]

[1] ಪೀಡೆ ಎಂಬ ಅರ್ಥದಲ್ಲಿ 'ಆರ್ತಿ' ಎಂಬ ಶಬ್ದವೂ ಇದೆ.

ಪ್ರಚಾರಸ್ಯಂದಯೋ ರೀತಿರೀತಿರ್ಡಿಂಬಪ್ರವಾಸಯೋಃ ।
ಉದಯೇಽಧಿಗಮೇ ಪ್ರಾಪ್ತಿಸ್ತ್ರೇತಾ ತ್ವಗ್ನಿತ್ರಯೇ ಯುಗೇ ॥ ೧೨೭೦
ವೀಣಾಭೇದೇಽಪಿ ಮಹತೀ ಭೂತಿರ್ಭಸ್ಮನಿ ಸಂಪದಿ ।
ನದೀನಗರ್ಯೋರ್ನಾಗಾನಾಂ ಭೋಗವತ್ಯಥ ಸಂಗರೇ ॥ ೧೨೭೧
ಸಂಗೇ ಸಭಾಯಾಂ ಸಮಿತಿಃ ಕ್ಷಯವಾಸಾವಪಿ ಕ್ಷಿತಿಃ ।
ರವೇರರ್ಚಿಶ್ಚ ಶಸ್ತ್ರಂ ಚ ವಹ್ನಿಜ್ವಾಲಾ ಚ ಹೇತಯಃ ॥ ೧೨೭೨
ಜಗತೀ ಜಗತಿ ಛಂದೋವಿಶೇಷೇಽಪಿ ಕ್ಷಿತಾವಪಿ ।
ಪಂಕ್ತಿಶ್ಛಂದೋಽಪಿ ದಶಮಂ ಸ್ಯಾತ್ಪ್ರಭಾವೇಽಪಿ ಚಾಯತಿಃ ॥ ೧೨೭೩
ಪತ್ತಿರ್ಗತೌ ಚ ಮೂಲೇ ತು ಪಕ್ಷತಿಃ ಪಕ್ಷಭೇದಯೋಃ ।
ಪ್ರಕೃತಿರ್ಯೋನಿಲಿಂಗೇ ಚ ಕೈಶಿಕ್ಯಾದ್ಯಾಶ್ಚ ವೃತ್ತಯಃ ॥ ೧೨೭೪

---

(ಸ್ತ್ರೀ)= ಪೀಡೆ, ಬಿಲ್ಲಿನ ತುದಿ. ಜಾತಿ (ಸ್ತ್ರೀ)=ದ್ರವ್ಯಗುಣ ಕರ್ಮಗಳಲ್ಲಿರುವ ಸಾಮಾನ್ಯಧರ್ಮ, ಜನನ.

೧೨೭೦. ರೀತಿ (ಸ್ತ್ರೀ)=ವ್ಯವಹಾರ, ಜಾರುವುದು, (ಹಿತ್ತಾಳೆ). ಈತಿ (ಸ್ತ್ರೀ)=ಅತಿವೃಷ್ಟಿ[1] ಮುಂತಾದ ಬಾಧೆ, ಪರಸ್ಥಳವಾಸ. ಪ್ರಾಪ್ತಿ (ಸ್ತ್ರೀ)=ಏಳಿಗೆ, ಪಡೆಯುವುದು. ತ್ರೇತಾ (ಸ್ತ್ರೀ)=ಗಾರ್ಹಪತ್ಯಾದಿ ಅಗ್ನಿತ್ರಯ, ಒಂದು ಯುಗ,

೧೨೭೧—೧೨೭೨. ಮಹತೀ (ಸ್ತ್ರೀ)=(ನಾರದರ) ವೀಣೆ, ಶ್ರೇಷ್ಠವಾದದ್ದು (ವಿ. ನಿಘ್ನ),. ಭೂತಿ (ಸ್ತ್ರೀ)=ಬೂದಿ, ಐಶ್ವರ್ಯ. ಭೋಗವತೀ (ಸ್ತ್ರೀ)=ನಾಗಲೋಕದ ನದಿ, ನಾಗ ಲೋಕದ ರಾಜಧಾನಿ. ಸಮಿತಿ (ಸ್ತ್ರೀ)=ಯುದ್ಧ, ಸೇರುವಿಕೆ, ಸಭೆ. ಕ್ಷಿತಿ (ಸ್ತ್ರೀ)=ಕ್ಷೀಣಿಸುವುದು, ಮನೆ, (ಭೂಮಿ). ಹೇತಿ (ಸ್ತ್ರೀ)=ಸೂರ್ಯಕಿರಣ, ಆಯುಧ, ಅಗ್ನಿಜ್ವಾಲೆ.

೧೨೭೩. ಜಗತೀ (ಸ್ತ್ರೀ)=ಜಗತ್ತು, ಜಗತೀ ಎಂಬ ಛಂದಸ್ಸು, ಭೂಮಿ. ಪಂಕ್ತಿ (ಸ್ತ್ರೀ)=ಪಂಕ್ತಿ ಎಂಬ ಛಂದಸ್ಸು,. ಹತ್ತು (Ten) (ಸಾಲು). ಆಯತಿ (ಸ್ತ್ರೀ)=ಪ್ರಭಾವ, (ಭವಿಷ್ಯತ್ಕಾಲ, ವಿಸ್ತಾರ).

೧೨೭೪. ಪತ್ತಿ (ಸ್ತ್ರೀ)=ನಡಿಗೆ, (ಪು=ಕಾಲಾಳು). ಪಕ್ಷತಿ (ಸ್ತ್ರೀ)=ಪಾಡ್ಯ, ರೆಕ್ಕೆಯ ಬುಡ. ಪ್ರಕೃತಿ (ಸ್ತ್ರೀ)=ಉಪಾದಾನ ಕಾರಣ (ಉದಾ : ಗಡಿಗೆಗೆ ಮಣ್ಣು), ಚಿಹ್ನೆ,

---

[1] ಅತಿವೃಷ್ಟಿರನಾವೃಷ್ಟಿರ್ಮೂಷಕಾಃ ಶಲಭಾಃ ಶುಕಾಃ । ಅತ್ಯಾಸನ್ನಾಶ್ಚ ರಾಜಾನಃ ಷಡೇತಾ ಈತಯಃ ಸ್ಮೃತಾಃ ॥



ಸಿಕತಾಸ್ಸ್ಯುರ್ವಾಲುಕಾಪಿ ವೇದೇ ಶ್ರವಸಿ ಚ ಶ್ರುತಿಃ ।
ವನಿತಾ ಜನಿತಾತ್ಯರ್ಥಾನುರಾಗಾಯಾಂ ಚ ಯೋಷಿತಿ ॥ ೧೨೭೫
ಗುಪ್ತಿಃ ಕ್ಷಿತಿವ್ಯುದಾಸೇಽಪಿ ಧೃತಿರ್ಧಾರಣಧೈರ್ಯಯೋಃ ।
ಬೃಹತೀ ಕ್ಷುದ್ರವಾರ್ತಾಕೀ ಛಂದೋಭೇದೇ ಮಹತ್ಯಪಿ ॥ ೧೨೭೬
ವಾಸಿತಾ ಸ್ತ್ರೀಕರಿಣ್ಯೋಶ್ಚ ವಾರ್ತಾ ವೃತ್ತೌ ಜನಶ್ರುತೌ ।
ವಾರ್ತಂ ಫಲ್ಗುನ್ಯರೋಗೇ ಚ ತ್ರಿಷ್ವಪ್ಸು ಚ ಘೃತಾಮೃತೇ ॥ ೧೨೭೭
ಕಲಧೌತಂ ರೂಪ್ಯಹೇಮ್ನೋರ್ನಿಮಿತ್ತಂ ಹೇತುಲಕ್ಷ್ಮಣೋಃ ।
ಶ್ರುತಂ ಶಾಸ್ತ್ರಾವಧೃತಯೋರ್ಯುಗಪರ್ಯಾಪ್ತಯೋಃ ಕೃತಮ್ ॥ ೧೨೭೮
ಅತ್ಯಾಹಿತಂ ಮಹಾಭೀತಿಃ ಕರ್ಮ ಜೀವಾನಪೇಕ್ಷಿ ಚ ।
ಯುಕ್ತೇ ಕ್ಷ್ಮಾದಾವೃತೇ ಭೂತಂ ಪ್ರಾಣ್ಯತೀತೇ ಸಮೇ ತ್ರಿಷು ॥ ೧೨೭೯

---

(ರಾಜ್ಯಾಂಗ, ಸ್ವಭಾವ). ವೃತ್ತಿ (ಸ್ತ್ರೀ)=ಕೈಶಿಕೀ[1] ಮುಂತಾದ ವೃತ್ತಿ, (ಜೀವನೋಪಾಯ, ವ್ಯಾಖ್ಯಾನ).

೧೨೭೫. ಸಿಕತಾ (ಸ್ತ್ರೀ. ನಿತ್ಯಬಹುವಚನ)=ಮರಳು, ಮರಳಿನ ನೆಲ. ಶ್ರುತಿ (ಸ್ತ್ರೀ)=ವೇದ, ಕಿವಿ, (ಕೇಳುವಿಕೆ). ವನಿತಾ (ಸ್ತ್ರೀ)=ಅನುರಕ್ತಳಾದ ಸ್ತ್ರೀ, ಹೆಂಗಸು.

೧೨೭೬. ಗುಪ್ತಿ (ಸ್ತ್ರೀ)=ನೆಲಮಾಳಿಗೆ (ಹಗೇವು), (ರಕ್ಷಣೆ, ಸೆರೆಮನೆ). ಧೃತಿ (ಸ್ತ್ರೀ)=ಧಾರಣೆ, ಧೈರ್ಯ, (ಸಂತೋಷ). ಬೃಹತೀ (ಸ್ತ್ರೀ)=ರಾಮಗುಳ್ಳ (ಒಂದು ಜಾತಿಯ ಬದನೆ), ಒಂದು ಛಂದಸ್ಸು, ದೊಡ್ಡದು (ವಿ. ನಿಘ್ನ. ಪು. ಬೃಹತ್).

೧೨೭೭. ವಾಸಿತಾ (ಸ್ತ್ರೀ)=ಹೆಂಗಸು, ಹೆಣ್ಣಾನೆ. ವಾರ್ತಾ (ಸ್ತ್ರೀ)=ಜೀವನೋಪಾಯ, ಸುದ್ದಿ. ವಾರ್ತ (ಪು. ಸ್ತ್ರೀ. ನ)=ನಿಸ್ಸಾರ, ಆರೋಗ್ಯವುಳ್ಳ (ಆರೋಗ್ಯ) (ನ). ಘೃತ, ಅಮೃತ (ನ)=ನೀರು (ತುಪ್ಪ).

೧೨೭೮. ಕಲಧೌತ (ನ)=ಬೆಳ್ಳಿ, ಚಿನ್ನ. ನಿಮಿತ್ತ (ನ)=ಕಾರಣ, ಚಿಹ್ನೆ. ಶ್ರುತ (ನ)=ಶಾಸ್ತ್ರ, ಕೇಳಲ್ಪಟ್ಟ (ವಿ. ನಿಘ್ನ). ಕೃತ (ನ)=ಒಂದು ಯುಗ, ಸಾಕು (Enough).

೧೨೭೯. ಅತ್ಯಾಹಿತ (ನ)=ಮಹಾಭಯ, ಜೀವದಮೇಲೆ ಆಸೆಯಿಲ್ಲದೆ ಮಾಡುವ ಕೆಲಸ. ಭೂತ (ನ)=ಯುಕ್ತ, ಭೂಮಿ ಮೊದಲಾದ ಪಂಚಮಹಾಭೂತಗಳು, ಸತ್ಯ, ಜೀವಿ, ಸದೃಶ (ಪಿತೃಭೂತಃ ಮಾತೃಭೂತಾ—ಇಲ್ಲಿ ಸದೃಶವಾಚಿ. ಇದು ವಿ. ನಿಘ್ನ).

---

[1] ಕೈಶಿಕೀ, ಸಾತ್ವಿಕೀ, ಆರಭಟೀ ಮತ್ತು ಭಾರತೀ ಎಂದು ವೃತ್ತಿಗಳು ನಾಲ್ಕು.

ವೃತ್ತಂ ಪದ್ಯೇ ಚರಿತ್ರೇ ತ್ರಿಷ್ವತೀತೇ ದೃಢನಿಸ್ತಲೇ ।
ಮಹದ್ರಾಜ್ಯಂ ಚಾವಗೀತಂ ಜನ್ಯೇ ಸ್ಯಾದ್ಗರ್ಹಿತೇ ತ್ರಿಷು ॥ ೧೨೮೦
ಶ್ವೇತಂ ರೂಪ್ಯೇಽಪಿ ರಜತಂ ಹೇಮ್ನಿ ರೂಪ್ಯೇ ಸಿತೇ ತ್ರಿಷು ।
ತ್ರಿಷ್ವಿತೋ ಜಗದಿಂಗೇಽಪಿ ರಕ್ತಂ ನೀಲ್ಯಾದಿರಾಗಿ ಚ ॥ ೧೨೮೧
ಅವದಾತಸ್ಸಿತೇ ಪೀತೇ ಶುದ್ಧೇ ಬದ್ಧಾರ್ಜುನೌ ಸಿತೌ ।
ಯುಕ್ತೇಽತಿಸಂಸ್ಕೃತೇ ಮರ್ಷಿಣ್ಯಭಿನೀತೋಽಥ ಸಂಸ್ಕೃತಮ್ ॥ ೧೨೮೨
ಕೃತ್ರಿಮೇ ಲಕ್ಷಣೋಪೇತೇಽಪ್ಯನಂತೋಽನವಧಾವಪಿ ।
ಖ್ಯಾತೇ ಹೃಷ್ಟೇ ಪ್ರತೀತೋಽಭಿಜಾತಸ್ತು ಕುಲಜೇ ಬುಧೇ ॥ ೧೨೮೩
ವಿವಿಕ್ತೌ ಪೂತವಿಜನೌ ಮೂರ್ಛಿತೌ ಮೂಢಸೋಚ್ಛ್ರಯೌ ।
ದ್ವೌ ಚಾಮ್ಲಪರುಷೌ ಶುಕ್ತೌ ಶಿತೀ ಧವಲಮೇಚಕೌ ॥ ೧೨೮೪

---

೧೨೮೦. ವೃತ್ತ (ನ)=ಪದ್ಯ, ಚರಿತೆ, ವೃತ್ತ (ವಿ. ನಿಘ್ನ.)=ದೃಢ, ದುಂಡಾದ. ಮಹತ್ (ನ)=ರಾಜ್ಯ, ದೊಡ್ಡದು (ವಿ. ನಿಘ್ನ—ಸ್ತ್ರೀ. ಮಹತೀ). ಅವಗೀತ (ನ)=ಅಪವಾದ, ನಿಂದ್ಯ (ವಿ. ನಿಘ್ನ).

೧೨೮೧. ಶ್ವೇತ (ನ)=ಬೆಳ್ಳಿ, (ಬಿಳುಪಾದ). ರಜತ (ನ)=ಚಿನ್ನ, ಬೆಳ್ಳಿ, ಬಿಳುಪಾದ (ವಿ. ನಿಘ್ನ). ಇಲ್ಲಿಂದ ಮುಂದೆ ತಕಾರಾಂತಗಳು ವಿಶೇಷ್ಯ ನಿಘ್ನಗಳಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ. ಜಗ[1]ತ್ (—ಸ್ತ್ರೀ. ಜಗತೀ)=ಜಂಗಮವಾದ, ಲೋಕ. ರಕ್ತ=ಬಣ್ಣದಿಂದ ಕೂಡಿದ, ಅನುರಕ್ತ, (ಕೆಂಪಾದ).

೧೨೮೨—೧೨೮೩. ಅವದಾತ=ಬಿಳುಪಾದ, ಹಳದಿಯ, ಶುದ್ಧವಾದ. ಸಿತ=ಕಟ್ಟಲ್ಪಟ್ಟ, ಬಿಳುಪಾದ. ಅಭಿನೀತ=ಯೋಗ್ಯ, ಪರಿಷ್ಕೃತ, ಕ್ಷಮಾಯುಕ್ತ. ಸಂಸ್ಕೃತ=ಚೆನ್ನಾಗಿ ಮಾಡಲ್ಪಟ್ಟ, ಲಕ್ಷಣಯುಕ್ತ, (ಪರಿಷ್ಕೃತ). ಅನಂತ=ಅಂತ್ಯವಿಲ್ಲದ (—ಪು. ವಿಷ್ಣು, ಆದಿಶೇಷ, —ನ. ಆಕಾಶ). ಪ್ರತೀತ=ಖ್ಯಾತ, ಸಂತುಷ್ಟ. ಅಭಿಜಾತ, ಸದ್ವಂಶದಲ್ಲಿ ಜನಿಸಿದ, ವಿದ್ವಾಂಸ.

೧೨೮೪. ವಿವಿಕ್ತ=ಪರಿಶುದ್ಧ, ಏಕಾಂತವಾದ. ಮೂರ್ಛಿತ=ಎಚ್ಚರದಪ್ಪಿದ, ವೃದ್ಧಿ ಹೊಂದಿದ. ಶುಕ್ತ=ಹುಳಿಯಾದ, ಕಠೋರ. ಶಿತಿ=ಬಿಳುಪಾದ, ಕಪ್ಪಾದ.

---

[1] ಇದಕ್ಕೆ ಲೋಕ ಎಂಬ ಅರ್ಥದಲ್ಲಿ ಪುಲ್ಲಿಂಗದ ಪ್ರಯೋಗ ದೊರೆಯುವುದಿಲ್ಲ.



ಸತ್ಯೇ ಸಾಧೌ ವಿದ್ಯಮಾನೇ ಪ್ರಶಸ್ತೇಽಭ್ಯರ್ಹಿತೇ ಚ ಸತ್ ।
ಪುರಸ್ಕೃತಃ ಪೂಜಿತೇಽರಾತ್ಯಭಿಯುಕ್ತೇಽಗ್ರತಃ ಕೃತೇ ॥ ೧೨೮೫
ನಿವಾತಾವಾಶ್ರಯಾವಾತೌ ಶಸ್ತ್ರಾಭೇದ್ಯಂ ಚ ವರ್ಮ ಯತ್ ।
ಜಾತೋನ್ನತಪ್ರವೃದ್ಧಾಸ್ಸ್ಯುರುಚ್ಛ್ರಿತಾ ಉತ್ಥಿತಾಸ್ತ್ವಮೀ ॥ ೧೨೮೬
ವೃದ್ಧಿಮತ್ಪ್ರೋದ್ಯತೋತ್ಪನ್ನಾ ಆದೃತೌ ಸಾದರಾರ್ಚಿತೌ ।

ಇತಿ ತಾಂತಾಃ

ಅರ್ಥೋಽಭಿಧೇಯರೈವಸ್ತು ಪ್ರಯೋಜನನಿವೃತ್ತಿಷು ॥ ೧೨೮೭
ನಿಪಾನಾಗಮಯೋಸ್ತೀರ್ಥಮೃಷಿಜುಷ್ಟಜಲೇ ಗುರೌ ।
ಸಮರ್ಥಸ್ತ್ರಿಷು ಶಕ್ತಿಸ್ಥೇ ಸಂಬದ್ಧಾರ್ಥೇ ಹಿತೇಽಪಿ ಚ ॥ ೧೨೮೮
ದಶಮೀಸ್ಥೌ ಕ್ಷೀಣರಾಗವೃದ್ಧೌ ವೀಥೀ ಪದವ್ಯಪಿ ।
ಆಸ್ಥಾನೀಯತ್ನಯೋರಾಸ್ಥಾ ಪ್ರಸ್ಥೋಽಸ್ತ್ರೀ ಸಾನುಮಾನಯೋಃ ॥ ೧೨೮೯

ಇತಿ ಥಾಂತಾಃ

---

೧೨೮೫. ಸತ್ (—ಸ್ತ್ರೀ. ಸತೀ)=ಸತ್ಯವಾದ, ಸಾಧುವಾದ, ಇರತಕ್ಕ, ಪ್ರಶಸ್ತ, ಪೂಜ್ಯ. ಪುರಸ್ಕೃತ=ಪೂಜಿತ, ಶತ್ರುವಿನಿಂದ ಎದುರಿಸಲ್ಪಟ್ಟ, ಮುಂದೆ ಮಾಡಲ್ಪಟ್ಟ.

೧೨೮೬—೧೨೮೭. ನಿವಾತ=ಆಶ್ರಯ, ಗಾಳಿ ಇಲ್ಲದ ಸ್ಥಳ, ಆಯುಧದಿಂದ ಅಭೇದ್ಯವಾದ ಕವಚ. ಉಚ್ಛ್ರಿತ=ಹುಟ್ಟಿದ, ಎತ್ತರವಾದ, ಬೆಳೆದ. ಉತ್ಥಿತ=ಏಳಿಗೆಯುಳ್ಳ, ಉದ್ಯೋಗದಲ್ಲಿ ತೊಡಗಿದ, ಉತ್ಪನ್ನವಾದ. ಆದೃತ=ಆದರಪಾತ್ರ, ಪೂಜಿತ.

## ಥಾಂತಗಳು

ಅರ್ಥ (ಪು)=ಶಬ್ದಬೋಧ್ಯವಾದ ಅರ್ಥ, ಧನ, ವಸ್ತು, ಪ್ರಯೋಜನ, ನಿವೃತ್ತಿ (ಉದಾ: ಮಶಕಾರ್ಥೋ ಧೂಮಃ=ಸೊಳ್ಳೆಗಳ ನಿವೃತ್ತಿಗಾಗಿ ಹೊಗೆ). ೧೨೮೮. ತೀರ್ಥ (ನ)=ನೀರಿನ ತೊಟ್ಟಿ, ಶಾಸ್ತ್ರ, ಋಷಿಗಳಿಂದ ಸೇವಿತವಾದ ಜಲಾಶಯ, ಗುರು. ಸಮರ್ಥ (ವಿ. ನಿಘ್ನ)=ಸಾಮರ್ಥ್ಯವುಳ್ಳವನು, ಅನ್ವಯ ಯೋಗ್ಯವಾದ ಅರ್ಥವುಳ್ಳ ಶಬ್ದ, ಹಿತಕರ.

೧೨೮೯. ದಶಮೀಸ್ಥ (ವಿ. ನಿಘ್ನ)=ನಷ್ಟವಾದ ಕಾಮವಾಸನೆಯುಳ್ಳ, ವೃದ್ಧ. ವೀಥೀ (ಸ್ತ್ರೀ)=ಬೀದಿ, (ಸಾಲು). ಆಸ್ಥಾ (ಸ್ತ್ರೀ)=ಆಸ್ಥಾನ, ಯತ್ನ. ಪ್ರಸ್ಥ (ಪು. ನ)=ಬೆಟ್ಟದ ತಪ್ಪಲು, ಕೊಳಗ.

ಅಭಿಪ್ರಾಯವಶೌ ಛಂದಾವಬ್ದೌ ಜೀಮೂತವತ್ಸರೌ ।
ಅಪವಾದೌ ತು ನಿಂದಾಜ್ಞೇ ದಾಯಾದೌ ಸುತಬಾಂಧವೌ ॥ ೧೨೯೦
ಪಾದಾ ರಶ್ಮ್ಯಂಘ್ರಿತುರ್ಯಾಂಶಾಶ್ಚಂದ್ರಾಗ್ನ್ಯರ್ಕಾಸ್ತಮೋನುದಃ ।
ನಿರ್ವಾದೋ ಜನವಾದೇಽಪಿ ಶಾದೋ ಜಂಬಾಲಶಷ್ಪಯೋಃ ॥ ೧೨೯೧
ಸಾರಾವೇ ರುದಿತೇ ತ್ರಾತರ್ಯಾಕ್ರಂದೋ ದಾರುಣೇ ರಣೇ ।
ಸ್ಯಾತ್ಪ್ರಸಾದೋಽನುರೋಧೇಽಪಿ ಸೂದಸ್ಸ್ಯಾದ್ವ್ಯಂಜನೇಽಪಿ ಚ ॥ ೧೨೯೨
ಗೋಷ್ಪಾಧ್ಯಕ್ಷೇಽಪಿ ಗೋವಿಂದೋ ಹರ್ಷೇಽಪ್ಯಾಮೋದವನ್ಮದಃ ।
ಪ್ರಾಧಾನ್ಯೇ ರಾಜಲಿಂಗೇ ಚ ವೃಷಾಂಗೇ ಕಕುದೋಽಸ್ತ್ರೀಯಾಮ್ ॥ ೧೨೯೩
ಸ್ತ್ರೀ ಸಂವಿಜ್ಞಾನಸಂಭಾಷಾಕ್ರಿಯಾಕಾರಾಜಿನಾಮಸು ।
ಧರ್ಮೇ ರಹಸ್ಯುಪನಿಷತ್ಸ್ಯಾದೃತೌ ವತ್ಸರೇ ಶರತ್ ॥ ೧೨೯೪
ಪದಂ ವ್ಯವಸಿತತ್ರಾಣಸ್ಥಾನಲಕ್ಷ್ಮಾಂಘ್ರಿವಸ್ತುಷು ।
ಗೋಷ್ಪದಂ ಸೇವಿತೇ ಮಾನೇ ಪ್ರತಿಷ್ಠಾಕೃತ್ಯಮಾಸ್ಪದಮ್ ॥ ೧೨೯೫

---

## ದಾಂತಗಳು

೧೨೯೦. ಛಂದ (ಪು)=ಅಭಿಪ್ರಾಯ, ಅಧೀನ. ಅಬ್ದ (ಪು)=ಮೋಡ, ವರ್ಷ. ಅಪವಾದ (ಪು)=ನಿಂದೆ, ಆಜ್ಞೆ. ದಾಯಾದ (ಪು)=ಮಗ, ಬಂಧು.

೧೨೯೧. ಪಾದ (ಪು)=ಕಿರಣ, ಕಾಲು, ನಾಲ್ಕನೆಯ ಒಂದು ಭಾಗ. ತಮೋನುದ್ (ಪು)=ಚಂದ್ರ, ಅಗ್ನಿ,ಸೂರ್ಯ. ನಿರ್ವಾದ (ಪು)=ಅಪವಾದ (ನಿಶ್ಚಿತವಾದ ವಾದ, ವಾದರಹಿತ). ಶಾದ (ಪು)=ಕೆಸರು, ಎಳೆಹುಲ್ಲು.

೧೨೯೨. ಆಕ್ರಂದ (ಪು)=ಆರ್ತಧ್ವನಿಯಿಂದ ಕೂಡಿದ ರೋದನ, ರಕ್ಷಕ ಭೀಕರಯುದ್ಧ. ಪ್ರಸಾದ (ಪು)=ಅನುಗ್ರಹ (ನೈರ್ಮಲ್ಯ, ಪ್ರೀತಿ). ಸೂದ (ಪು)=ತೊವ್ವೆ ಮುಂತಾದ ಊಟದ ಪರಿಕರ, (ಅಡಿಗೆಯವನು).

೧೨೯೩. ಗೋವಿಂದ (ಪು)=ದನದ ಕೊಟ್ಟಿಗೆಯ ಒಡೆಯ, (ಶ್ರೀ ಕೃಷ್ಣ). ಆಮೋದ, ಮದ (ಪು)=ಸಂತೋಷ, (ಗರ್ವ). ಕಕುದ (ಪು)=ಶ್ರೇಷ್ಠ, ರಾಜಚಿಹ್ನೆ, ಎತ್ತಿನ ಹಿಣಿಲು.

೧೨೯೪. ಸಂವಿದ್ (ಸ್ತ್ರೀ)=ಜ್ಞಾನ, ಸಂಭಾಷಣೆ, ಕ್ರಿಯಾನಿಶ್ಚಯ, ಯುದ್ಧ, ಹೆಸರು. ಉಪನಿಷದ್ (ಸ್ತ್ರೀ)=ಧರ್ಮ, ರಹಸ್ಯ, (ವೇದಾಂತ). ಶರದ್ (ಸ್ತ್ರೀ)=ಶರದೃತು, ವರ್ಷ.

೧೨೯೫. ಪದ (ನ)=ಉದ್ಯೋಗ, ರಕ್ಷಣೆ, ಸ್ಥಳ, ಚಿಹ್ನೆ, ಪಾದ, ವಸ್ತು. ಗೋಷ್ಪದ (ನ)=ಗೋವುಗಳು ತಿರುಗಾಡುವ ಸ್ಥಳ, ಗೋವುಗಳು ಹೆಜ್ಜೆಯಿಡುವಷ್ಟು ಸ್ಥಳ. ಆಸ್ಪದ (ನ)=ಸ್ಥಳ, ಕರ್ತವ್ಯ.

೧೨೯೬—೧೨೯೭. ಸ್ವಾದು (ವಿ. ನಿಘ್ನ—ಸ್ತ್ರೀ. ಸ್ವಾದ್ವೀ—ಸ್ವಾದು)=ಇಷ್ಟವಾದ, ಮಧುರವಾದ. ಮೃದು (ವಿ. ನಿಘ್ನ—ಸ್ತ್ರೀ. ಮೃದ್ವೀ—ಮೃದು)=ತೀಕ್ಷ್ಣವಲ್ಲದ, ಕೋಮಲವಾದ. ಮಂದ (ವಿ. ನಿಘ್ನ)=ಮೂಢ, ಅಲ್ಪ, ಅಸಮರ್ಥ, ಭಾಗ್ಯಹೀನ. ಶಾರದ (ವಿ. ನಿಘ್ನ)=ನೂತನ, ಪ್ರತಿಭೆಯಿಲ್ಲದ. ವಿಶಾರದ (ವಿ. ನಿಘ್ನ)=ಪಂಡಿತ, ಸಮರ್ಥ.



ಪ್ರಿಷ್ಟಿಷ್ಟಮಧುರೌ ಸ್ವಾದೂ ಮೃದೂ ಚಾತೀಕ್ಷ್ಣಕೋಮಲೌ ।
ಮೂಢಾಲ್ಪಾಪಟುನಿರ್ಭಾಗ್ಯಾ ಮಂದಾಸ್ಸ್ಯುರ್ದ್ವೌ ತು ಶಾರದೌ ॥ ೧೨೯೬
ಪ್ರತ್ಯಗ್ರಾಪ್ರತಿಭೌ ವಿದ್ವತ್ಸುಪ್ರಗಲ್ಭೌ ವಿಶಾರದೌ ।

ಇತಿ ದಾಂತಾಃ

ವ್ಯಾಮೋ ವಟಶ್ಚ ನ್ಯಗ್ರೋಧಾವುತ್ಸೇಧಃ ಕಾಯ ಉನ್ನತಿಃ ॥ ೧೨೯೭
ಪರ್ಯಾಹಾರಶ್ಚ ಮಾರ್ಗಶ್ಚ ವಿವಧೌ ವೀವಧೌ ಚ ತೌ ।
ಪರಿಧಿರ್ಯಜ್ಞಿಯತರೋಶ್ಶಾಖಾಯಾಮುಪಸೂರ್ಯಕೇ ॥ ೧೨೯೮
ಬಂಧಕಂ ವ್ಯಸನಂ ಚೇತಃಪೀಡಾಧಿಷ್ಠಾನಮಾಧಯಃ ।
ಸ್ಯುಸ್ಸಮರ್ಥನನೀವಾಕನಿಯಮಾಶ್ಚ ಸಮಾಧಯಃ ॥ ೧೨೯೯

---

## ಧಾಂತಗಳು

೧೨೯೭. ನ್ಯಗ್ರೋಧ (ಪು)=ಮಾರು ಅಳತೆ, ಆಲದಮರ. ಉತ್ಸೇಧ (ಪು)=ಶರೀರ, ಎತ್ತರ.

೧೨೯೮. ವಿವಧ, ವೀವಧ (ಪು)=ಎರಡು ತುದಿಗಳಲ್ಲಿಯೂ ಭಾರವನ್ನು ತೂಗುಹಾಕಿ ಹೆಗಲಿನ ಮೇಲೆ ಹೊರುವ ಕಟ್ಟಿಗೆ (ಕಾವಡಿ), ದಾರಿ. ಪರಿಧಿ (ಪು)=ಯಜ್ಞಕ್ಕೆ ಯೋಗ್ಯವಾದ ಅತ್ತಿಯಮರ ಮೊದಲಾದ ಮರದ ಕೊಂಬೆ, ಸೂರ್ಯ ಚಂದ್ರರ ಸುತ್ತಲೂ ಕಾಣಿಸುವ ವರ್ತುಲ.

೧೨೯೯. ಆಧಿ (ಪು)=ಅಡವು (Pledge), ಜೂಜು ಮುಂತಾದ ಚಟ, ಮನೋವ್ಯಥೆ, ಆಶ್ರಯ. ಸಮಾಧಿ (ಪು)= ಶಂಕಾಪರಿಹಾರ, ಮೌನ, ಉಪವಾಸಾದಿನಿಯಮ, (ಅಂಗೀಕಾರ, ಯೋಗದ ಒಂದು ಅಂಗ).

ದೋಷೋತ್ಪಾದೇಽನುಬಂಧಸ್ಸ್ಯಾತ್ ಪ್ರಕೃತ್ಯಾದಿಷು ನಶ್ವರೇ ।
ಮುಖ್ಯಾನುಯಾಯಿನಿ ಶಿಶೌ ಪ್ರಕೃತಸ್ಯಾನುವರ್ತನೇ ॥ ೧೩೦೦
ವಿಧುರ್ವಿಷ್ಣೌ ಚಂದ್ರಮಸಿ ಪರಿಚ್ಛೇದೇ ಬಿಲೇಽವಧಿಃ ।
ವಿಧಿರ್ವಿಧಾನೇ ದೈವೇಽಪಿ ಪ್ರಣಿಧಿಃ ಪ್ರಾರ್ಥನೇ ಚರೇ ॥ ೧೩೦೧
ಬುಧವೃದ್ಧೌ ಪಂಡಿತೇಽಪಿ ಸ್ಕಂಧಸ್ಸಮುದಯೇಽಪಿ ಚ ।
ದೇಶೇ ನದವಿಶೇಷೇಽಬ್ಧೌ ಸಿಂಧುರ್ನಾ ಸರಿತಿ ಸ್ತ್ರಿಯಾಮ್ ॥ ೧೩೦೨
ವಿಧಾ ವಿಧೌ ಪ್ರಕಾರೇ ಚ ಸಾಧೂ ರಮ್ಯೇಽಪಿ ಚ ತ್ರಿಷು ।
ವಧೂರ್ಜಾಯಾ ಸ್ನುಷಾ ಸ್ತ್ರೀ ಚ ಸುಧಾ ಲೇಪೋಽಮೃತಂ ಸ್ನುಹೀ ॥ ೧೩೦೩
ಸಂಧಾ ಪ್ರತಿಜ್ಞಾ ಮರ್ಯಾದಾ ಶ್ರದ್ಧಾ ಸಂಪ್ರತ್ಯಯಃ ಸ್ಪೃಹಾ ।
ಮಧು ಮದ್ಯೇ ಪುಷ್ಪರಸೇ ಕ್ಷೌದ್ರೇಽಪ್ಯಂಧಂ ತಮಸ್ಯಪಿ ॥ ೧೩೦೪

---

೧೩೦೦. ಅನುಬಂಧ (ಪು)=ದೋಷೋತ್ಪಾದನೆ, ಪ್ರಕೃತಿ ಪ್ರತ್ಯಯಾದಿಗಳಲ್ಲಿ ಲೋಪವನ್ನು ಹೊಂದುವ 'ಇತ್' ಸಂಜ್ಞಕವಾದ ಅಕ್ಷರ, ಮುಖ್ಯನನ್ನು ಹಿಂಬಾಲಿಸತಕ್ಕವನು, ಶಿಶು, ಆರಬ್ಧವಾದುದನ್ನು ಮುಂದುವರಿಸುವುದು.

೧೩೦೧. ವಿಧು (ಪು)=ವಿಷ್ಣು, ಚಂದ್ರ. ಅವಧಿ (ಪು) ಎಲ್ಲೆ, ಬಿಲ. ವಿಧಿ (ಪು)=ಮಾಡುವುದು, ದೈವ, (ಬ್ರಹ್ಮ, ವಿಧಿಸುವ ವಾಕ್ಯ). ಪ್ರಣಿಧಿ (ಪು)=ಪ್ರಾರ್ಥನೆ, ಗೂಢಚಾರ.

೧೩೦೨. ಬುಧ (ಬುದ್ಧ), ವೃದ್ಧ (ಪು)=ಪಂಡಿತ, (ಮುದುಕ, ಬುದ್ಧ). ಸ್ಕಂಧ (ಪು)=ಸಮೂಹ, (ಹೆಗಲು). ಸಿಂಧು (ಪು)=ಸಿಂಧು ಎಂಬ ದೇಶ, ಸಿಂಧು ಎಂಬ ನದಿ, ಸಮುದ್ರ. ಸಿಂಧು (ಸ್ತ್ರೀ)=ನದಿ.

೧೩೦೩. ವಿಧಾ (ಸ್ತ್ರೀ)=ಮಾಡುವಿಕೆ, ರೀತಿ. ಸಾಧು (ವಿ. ನಿಘ್ನ—ಸ್ತ್ರೀ. ಸಾಧು—ಸಾಧ್ವೀ)=ಸುಂದರ, ಒಳ್ಳೆಯವ. ವಧೂ (ಸ್ತ್ರೀ)=ಹೆಂಡತಿ, ಸೊಸೆ, ಹೆಂಗಸು. ಸುಧಾ (ಸ್ತ್ರೀ)=ಸುಣ್ಣ, ಅಮೃತ, ಮುಂಡಗಳ್ಳಿ.

೧೩೦೪. ಸಂಧಾ (ಸ್ತ್ರೀ)=ಪ್ರತಿಜ್ಞೆ, ಎಲ್ಲೆ. ಶ್ರದ್ಧಾ (ಸ್ತ್ರೀ)=ಆದರ, ಆಸೆ. ಮಧು (ನ)—ಮದ್ಯ, ಹೂವಿನ ಬಂಡು, ಜೇನು. (ಮಧು (ಪು)=ಚೈತ್ರಮಾಸ). ಅಂಧ (ನ)=ಕತ್ತಲೆ. (ಅಂಧ (ಪು)=ಕುರುಡ).



ಅತಸ್ತ್ರಿಷು ಸಮುನ್ನದ್ಧೌ ಪಂಡಿತಂಮನ್ಯಗರ್ವಿತೌ ।
ಬ್ರಹ್ಮಬಂಧುರಧಿಕ್ಷೇಪೇ ನಿರ್ದೇಶೇಽಥಾವಲಂಬಿತಃ ॥ ೧೩೦೫
ಅವಿದೂರೋಽಪ್ಯವಷ್ಟಬ್ಧಃ ಪ್ರಸಿದ್ಧೌ ಖ್ಯಾತಭೂಷಿತೌ ।

ಇತಿ ಧಾಂತಃ

ಸೂರ್ಯವಹ್ನೀ ಚಿತ್ರಭಾನೂ ಭಾನೂ ರಶ್ಮಿದಿವಾಕರೌ ॥ ೧೩೦೬
ಭೂತಾತ್ಮಾನೌ ಧಾತೃದೇಹೌ ಮೂರ್ಖನೀಚೌ ಪೃಥಗ್ಜನೌ ।
ಗ್ರಾವಾಣೌ ಶೈಲಪಾಷಾಣೌ ಪತ್ರಿಣೌ ಶರಪಕ್ಷಿಣೌ ॥ ೧೩೦೭
ತರುಶೈಲೌ ಶಿಖರಿಣೌ ಶಿಖಿನೌ ವಹ್ನಿಬರ್ಹಿಣೌ ।
ಪ್ರತಿಯತ್ನಾವುಭೌ ಲಿಪ್ಸೋಪಗ್ರಹಾವಥ ಸಾದಿನೌ ॥ ೧೩೦೮
ದ್ವೌ ಸಾರಥಿಹಯಾರೋಹಾ ವಾಜಿನೋಽಶ್ವೇಷು ಪಕ್ಷಿಣಃ ।
ಕುಲೇಽಪ್ಯಭಿಜನೋ ಜನ್ಮಭೂಮ್ಯಾಮಪ್ಯಥ ಹಾಯನಾಃ ॥ ೧೩೦೯

---

೧೩೦೫—೧೩೦೬. ಮುಂದೆ ಧಾಂತವು ಮುಗಿಯುವವರೆಗಿನ ಶಬ್ದಗಳು ವಿಶೇಷ್ಯನಿಘ್ನಗಳಾಗಿ ಮೂರುಲಿಂಗಗಳಲ್ಲಿಯೂ ಇರುತ್ತವೆ. ಸಮುನ್ನದ್ಧ=ತಾನು ಪಂಡಿತನೆಂದು ತಿಳಿದುಕೊಂಡವನು, ಗರ್ವಿ. ಬ್ರಹ್ಮಬಂಧು=ನಿಂದೆಗೆ ಗುರಿಯಾದ ಬ್ರಾಹ್ಮಣ (—ಇದು ಬಯ್ಯುವಾಗ ಬಳಸುವ ಶಬ್ದ), ಜಾತಿ ಮಾತ್ರದಿಂದ ಬ್ರಾಹ್ಮಣ. ಹೀಗೆಯೇ ಕ್ಷತ್ರಬಂಧು ಮುಂತಾದ ಶಬ್ದಗಳು. ಅವಷ್ಟಬ್ಧ=ಆಶ್ರಿತ, ಸಮೀಪದಲ್ಲಿರುವ. ಪ್ರಸಿದ್ಧ=ವಿಖ್ಯಾತ, ಅಲಂಕೃತ.

## ನಾಂತಗಳು

೧೩೦೬—೧೩೦೭. ಚಿತ್ರಭಾನು (ಪು)=ಸೂರ್ಯ, ಅಗ್ನಿ. ಭಾನು (ಪು)=ಕಿರಣ, ಸೂರ್ಯ. ಭೂತಾತ್ಮನ್ (ಪು)=ಬ್ರಹ್ಮ, ದೇಹ. ಪೃಥಗ್ಜನ (ಪು)=ಮೂರ್ಖ, ನೀಚ. ಗ್ರಾವನ್ (ಪು)=ಬೆಟ್ಟ, ಕಲ್ಲು. ಪತ್ರಿನ್ (ಪು)=ಬಾಣ, ಹಕ್ಕಿ.

೧೩೦೮. ಶಿಖರಿನ್ (ಪು)=ಮರ, ಬೆಟ್ಟ. ಶಿಖಿನ್ (ಪು)=ಅಗ್ನಿ, ನವಿಲು. ಪ್ರತಿಯತ್ನ (ಪು)=ಅಭಿಲಾಷೆ, ಸೆರೆಹಿಡಿಯುವುದು, (ಗುಣವಿಶೇಷವನ್ನುಂಟುಮಾಡುವುದು.)

೧೩೦೯. ಸಾದಿನ್ (ಪು)=ಸಾರಥಿ, ಕುದುರೆಸವಾರ. ವಾಜಿನ್ (ಪು)=ಕುದುರೆ, ಬಾಣ, ಹಕ್ಕಿ. ಅಭಿಜನ (ಪು)=ವಂಶ, ಹುಟ್ಟಿದ ಸ್ಥಳ.

ವರ್ಷಾರ್ಚಿರ್ವ್ರೀಹಿಭೇದಾಶ್ಚ ಚಂದ್ರಾಗ್ನ್ಯರ್ಕಾ ವಿರೋಚನಾಃ ।
ಕೇಶೇಽಪಿ ವೃಜಿನೋ ವಿಶ್ವಕರ್ಮಾರ್ಕಸುರಶಿಲ್ಪಿನೋಃ ॥ ೧೩೧೦
ಆತ್ಮಾ ಯತ್ನೋ ಧೃತಿರ್ಬುದ್ಧಿಃ ಸ್ವಭಾವೋ ಬ್ರಹ್ಮ ವರ್ಷ್ಮ ಚ ।
ಶಕ್ರೋ ಘಾತುಕಮತ್ತೇಭೋ ವರ್ಷುಕಾಬ್ದೋ ಘನಾಘನಃ ॥ ೧೩೧೧
ಅಭಿಮಾನೋಽರ್ಥಾದಿದರ್ಪೇ ಜ್ಞಾನೇ ಪ್ರಣಯಹಿಂಸಯೋಃ ।
ಘನೋ ಮೇಘೇ ಮೂರ್ತಿಗುಣೇ ತ್ರಿಷು ಮೂರ್ತೇ ನಿರಂತರೇ ॥ ೧೩೧೨
ಇನಸ್ಸೂರ್ಯೇ ಪ್ರಭೌ ರಾಜಾ ಮೃಗಾಂಕೇ ಕ್ಷತ್ರಿಯೇ ನೃಪೇ ।
ವಾಣಿನ್ಯೌ ನರ್ತಕೀದೂತ್ಯೌ ಸ್ರವಂತ್ಯಾಮಪಿ ವಾಹಿನೀ ॥ ೧೩೧೩
ಹ್ಲಾದಿನ್ಯೌ ವಜ್ರತಟಿತೌ ವಂದಾಯಾಮಪಿ ಕಾಮಿನೀ ।
ತ್ವಗ್ದೇಹಯೋರಪಿ ತನುಸ್ಸೂನಾಧೋಜಿಹ್ವಿಕಾಪಿ ಚ ॥ ೧೩೧೪

---

೧೩೧೦. ಹಾಯನ (ಪು)=ವರ್ಷ, ಕಿರಣ, ಒಂದು ಜಾತಿಯ ಬತ್ತ. ವಿರೋಚನ (ಪು)=ಚಂದ್ರ, ಅಗ್ನಿ, ಸೂರ್ಯ. ವೃಜಿನ (ಪು)=ಕೂದಲು. (ವೃಜಿನ (ನ)=ಪಾಪಕರ್ಮ). ವಿಶ್ವಕರ್ಮನ್ (ಪು)=ಸೂರ್ಯ, ದೇವಶಿಲ್ಪಿ.

೧೩೧೧. ಆತ್ಮನ್ (ಪು)=ಪ್ರಯತ್ನ, ಧೈರ್ಯ, ಬುದ್ಧಿ, ಸ್ವಭಾವ, ಬ್ರಹ್ಮವಸ್ತು, ದೇಹ. ಘನಾಘನ (ಪು)=ಇಂದ್ರ, ಕೊಲ್ಲುವುದಕ್ಕಾಗಿ ಹೊರಟ ಮದಿಸಿದ ಆನೆ, ಮಳೆಸುರಿಸುವ ಮೋಡ.

೧೩೧೨. ಅಭಿಮಾನ (ಪು)=ಧನಾದಿಗಳಿಂದ ಉಂಟಾದ ಅಹಂಕಾರ, ತಿಳಿವಳಿಕೆ, ಪ್ರೀತಿ, ಹಿಂಸೆ. ಘನ (ಪು)=ಮೋಡ, ಕಾಠಿಣ್ಯ (Hardness). ಘನ (ವಿ. ನಿಘ್ನ) ಆಕಾರವುಳ್ಳ, ಸಾಂದ್ರವಾದ.

೧೩೧೩. ಇನ (ಪು)=ಸೂರ್ಯ, ಒಡೆಯ. ರಾಜನ್ (ಪು)=ಚಂದ್ರ, ಕ್ಷತ್ರಿಯ, ದೊರೆ. ವಾಣಿನೀ (ಸ್ತ್ರೀ)=ನರ್ತಕೀ, ದೂತಿ. ವಾಹಿನೀ (ಸ್ತ್ರೀ)=ನದಿ, (ಸೈನ್ಯ).

೧೩೧೪. ಹ್ಲಾದಿನೀ (ಸ್ತ್ರೀ)=ಸಿಡಿಲು, ಮಿಂಚು. ಕಾಮಿನೀ (ಸ್ತ್ರೀ)=ಬದನಿಕೆ (ಬಂದಳಿಕೆ), ಕಾಮವುಳ್ಳ ಸ್ತ್ರೀ. ತನು (ಸ್ತ್ರೀ)=ಚರ್ಮ, ದೇಹ, (ತನು (ವಿ. ನಿಘ್ನ)=ಚಿಕ್ಕದು. ಸೂನಾ (ಸ್ತ್ರೀ)=ಕಿರುನಾಲಿಗೆ, (ವಧಸ್ಥಾನ).



ಕ್ರತುವಿಸ್ತಾರಯೋರಸ್ತ್ರೀ ವಿತಾನಂ ತ್ರಿಷು ತುಚ್ಛಕೇ ।
ಮಂದೇಽಥ ಕೇತನಂ ಕೃತ್ಯೇ ಕೇತಾವುಪನಿಮಂತ್ರಣೇ ॥ ೧೩೧೫
ವೇದಸ್ತತ್ತ್ವಂ ತಪೋ ಬ್ರಹ್ಮ ಬ್ರಹ್ಮಾ ವಿಪ್ರಃ ಪ್ರಜಾಪತಿಃ ।
ಉತ್ಸಾಹನೇ ಚ ಹಿಂಸಾಯಾಂ ಸೂಚನೇ ಚಾಪಿ ಗಂಧನಮ್ ॥ ೧೩೧೬
ಆತಂಚನಂ ಪ್ರತೀವಾಪಜವನಾಪ್ಯಾಯನಾರ್ಥಕಮ್ ।
ವ್ಯಂಜನಂ ಲಾಂಛನೇ ಶ್ಮಶ್ರುನಿಷ್ಠಾನಾವಯವೇಷ್ವಪಿ ॥ ೧೩೧೭
ಸ್ಯಾತ್ ಕೌಲೀನಂ ಲೋಕವಾದೇ ಯುದ್ಧೇ ಪಶ್ವಹಿಪಕ್ಷಿಣಾಮ್ ।
ಸ್ಯಾದುದ್ಯಾನಂ ನಿಸ್ಸರಣೇ ವನಭೇದೇ ಪ್ರಯೋಜನೇ ॥ ೧೩೧೮
ಅವಕಾಶೇ ಸ್ಥಿತೌ ಸ್ಥಾನಂ ಕ್ರೀಡಾದಾವಪಿ ದೇವನಮ್ ।
ಉತ್ಥಾನಂ ಪೌರುಷೇ ತಂತ್ರೇ ಸನ್ನಿವಿಷ್ಟೋದ್ಗಮೇಽಪಿ ಚ ॥ ೧೩೧೯
ವ್ಯುತ್ಥಾನಂ ಪ್ರತಿರೋಧೇ ಚ ವಿರೋಧಾಚರಣೇಽಪಿ ಚ ।
ಮಾರಣೇ ಮೃತಸಂಸ್ಕಾರೇ ಗತೌ ದ್ರವ್ಯೋಪಪಾದನೇ ॥ ೧೩೨೦

---

೧೩೧೫. ವಿತಾನ (ಪು.ನ)=ಯಜ್ಞ, ವಿಸ್ತಾರ. ವಿತಾನ (ವಿ. ನಿಘ್ನ)=ತುಚ್ಛವಾದ, ಮೂಢ. ಕೇತನ(ನ)=ಕೆಲಸ, ಧ್ವಜ, ಆಹ್ವಾನ.

೧೩೧೬. ಬ್ರಹ್ಮನ್ (ನ)=ವೇದ, ಪರಬ್ರಹ್ಮ, ತಪಸ್ಸು. ಬ್ರಹ್ಮನ್ (ಪು)=ಬ್ರಾಹ್ಮಣ, ಬ್ರಹ್ಮ. ಗಂಧನ (ನ)=ಉತ್ಸಾಹಪಡಿಸುವುದು, ಹಿಂಸೆ, ಸೂಚನೆ.

೧೩೧೭. ಆತಂಚನ (ನ)=ಹೆಪ್ಪುಹಾಕುವುದು, ವೇಗ, ತೃಪ್ತಿಪಡಿಸುವುದು. ವ್ಯಂಜನ (ನ)=ಚಿಹ್ನೆ, ಗಡ್ಡ ಅಥವಾ ಮೀಸೆ, ಪಳಿದ್ಯ ಮುಂತಾದ ಪದಾರ್ಥ, ಸ್ತ್ರೀಪುರುಷರ ಗುಹ್ಯಾವಯವ, (ಅಕ್ಷರವಿಶೇಷ (ಹಲ್)— (Consonant).

೧೩೧೮. ಕೌಲೀನ (ನ)=ಲೋಕಾಪವಾದ, ಮೃಗ ಹಾವು ಹಕ್ಕಿ ಮುಂತಾದವುಗಳ ಕಲಹ. ಉದ್ಯಾನ (ನ)=ಹೊರಡುವುದು, ಹೂದೋಟ, ಪ್ರಯೋಜನ.

೧೩೧೯. ಸ್ಥಾನ (ನ)=ಸ್ಥಳ, ಇರುವಿಕೆ. ದೇವನ (ನ)=ಕ್ರೀಡೆ, (ವ್ಯವಹಾರ, ಜೂಜು, ಸ್ತುತಿ, ಪ್ರಕಾಶ, ಮದ). ಉತ್ಥಾನ (ನ)=ಪುರುಷ ಪ್ರಮಾಣ, ಸಿದ್ಧಾಂತ, ಮೇಲಕ್ಕೆ ಏಳುವುದು.

೧೩೨೦—೧೩೨೧. ವ್ಯುತ್ಥಾನ (ನ)=ಅಡ್ಡಗಟ್ಟುವುದು, ವಿರೋಧವಾಗಿ ಆಚರಿಸುವುದು ಸಾಧನ (ನ)=ಕೊಲ್ಲುವುದು, ಮೃತನ ಸಂಸ್ಕಾರ, ಗಮನ, ಧನಸಂಪಾದನೆ, ನೆರವೇರಿಸುವುದು,

ನಿರ್ವರ್ತನೋಪಕರಣಾನುವ್ರಜ್ಯಾಸು ಚ ಸಾಧನಮ್ ।
ನಿರ್ಯಾತನಂ ವೈರಶುದ್ಧೌ ದಾನೇ ನ್ಯಾಸಾರ್ಪಣೇಽಪಿ ಚ ॥ ೧೩.೨೧
ವ್ಯಸನಂ ವಿಪದಿ ಭ್ರಂಶೇ ದೋಷೇ ಕಾಮಜಕೋಪಜೇ ।
ಪಕ್ಷ್ಮಾಕ್ಷಿಲೋಮ್ನಿ ಕಿಂಜಲ್ಕೇ ತಂತ್ವಾದ್ಯಂಶೇಽಪ್ಯಣೀಯಸಿ ॥ ೧೩.೨೨
ತಿಥಿಭೇದೇ ಕ್ಷಣೇ ಪರ್ವ ವರ್ತ್ಮ ನೇತ್ರಚ್ಛದೇಽಧ್ವನಿ ।
ಆಕಾರ್ಯಗುಹ್ಯೇ ಕೌಪೀನಂ ಮೈಥುನಂ ಸಂಗತೇ ರತೇ ॥ ೧೩.೨೩
ಪ್ರಧಾನಂ ಪರಮಾತ್ಮಾ ಧೀಃ ಪ್ರಜ್ಞಾನಂ ಬುದ್ಧಿ ಚಿಹ್ನಯೋಃ ।
ಪ್ರಸೂನಂ ಪುಷ್ಪಫಲಯೋರ್ನಿಧನಂ ಕುಲನಾಶಯೋಃ ॥ ೧೩.೨೪
ಕ್ರಂದನೇ ರೋದನಾಹ್ವಾನೇ ವರ್ಷ್ಮ ದೇಹಪ್ರಮಾಣಯೋಃ ।
ಗೃಹದೇಹತ್ವಿಟ್ಪ್ರಭಾವಾ ಧಾಮಾನ್ಯಥ ಚತುಷ್ಪಥೇ ॥ ೧೩.೨೫
ಸನ್ನಿವೇಶೇ ಚ ಸಂಸ್ಥಾನಂ ಲಕ್ಷ್ಮ ಚಿಹ್ನಪ್ರಧಾನಯೋಃ ।
ಆಚ್ಛಾದನಂ ಸಂಪಿಧಾನಮಪವಾರಣಮಿತ್ಯುಭೇ ॥ ೧೩.೨೬

---

ಸಾಮಗ್ರಿ, ಹಿಂಬಾಲಿಸಿಹೋಗುವುದು, (ಸೈನ್ಯ). ನಿರ್ಯಾತನ (ನ)=ಹಗೆತೀರಿಸಿಕೊಳ್ಳುವುದು, ಕೊಡುವುದು, ಒತ್ತೆಯನ್ನು ಹಿಂದಿರುಗಿಸುವುದು.

೧೩.೨೨. ವ್ಯಸನ (ನ)=ವಿಪತ್ತು, ಬೀಳುವುದು, ಕಾಮದಿಂದ ಅಥವಾ ಕೋಪದಿಂದ ಹುಟ್ಟಿದ ದೋಷ. ಪಕ್ಷ್ಮನ್ (ನ)=ರೆಪ್ಪೆಕೂದಲು, ಹೂವಿನ ಕೇಸರ, ದಾರ ಮುಂತಾದ್ದರ ಸೂಕ್ಷ್ಮಭಾಗ (ಎಳೆ).

೧೩.೨೩. ಪರ್ವನ್ (ನ)=ಪರ್ವತಿಥಿ (ಅಷ್ಟಮಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ), ಉತ್ಸವ, (ಬಿದಿರು ಮುಂತಾದ್ದರ ಗಿಣ್ಣು). ವರ್ತ್ಮನ್ (ನ)=ರೆಪ್ಪೆ, ದಾರಿ. ಕೌಪೀನ (ನ)=ಮಾಡಬಾರದ ಕೆಲಸ, ಗುಹ್ಯಾಂಗ (ಲಂಗೋಟಿ). ಮೈಥುನ (ನ)=ಸಂಬಂಧ, ಸುರತ.

೧೩.೨೪. ಪ್ರಧಾನ (ನ)=ಪರಮಾತ್ಮ, ಬುದ್ಧಿ, (ಮುಖ್ಯ, ಮೂಲ ಪ್ರಕೃತಿ). ಪ್ರಜ್ಞಾನ (ನ)=ಬುದ್ಧಿ, ಚಿಹ್ನೆ. ಪ್ರಸೂನ (ನ)=ಹೂ, ಹಣ್ಣು. ನಿಧನ (ನ)=ಕುಲ, ನಾಶ.

೧೩.೨೫. ಕ್ರಂದನ (ನ)=ಅಳುವುದು, ಕರೆಯುವುದು. ವರ್ಷ್ಮನ್ (ನ)=ದೇಹ, ಅಳತೆ. ಧಾಮನ್ (ನ)=ಮನೆ, ದೇಹ, ಕಾಂತಿ, ಪ್ರಭಾವ.

೧೩.೨೬. ಸಂಸ್ಥಾನ (ನ)=ಚೌಕ, ಸಂನಿವೇಶ. ಲಕ್ಷ್ಮನ್ (ನ)=ಚಿಹ್ನೆ, ಮುಖ್ಯ. ಆಚ್ಛಾದನ (ನ)= ಮುಚ್ಚಲು, ಮರೆಮಾಡುವುದು, (ವಸ್ತ್ರ).



ಆರಾಧನಂ ಸಾಧನೇ ಸ್ಯಾದವಾಪ್ತೌ ತೋಷಣೇಽಪಿ ಚ ।
ಅಧಿಷ್ಠಾನಂ ಚಕ್ರಪುರಪ್ರಭಾವಾಧ್ಯಾಸನೇಷ್ವಪಿ ॥ ೧೩.೨೭
ರತ್ನಂ ಸ್ವಜಾತಿಶ್ರೇಷ್ಠೇಽಪಿ ವನೇ ಸಲಿಲಕಾನನೇ ।
ತಲಿನಂ ವಿರಲೇ ಸ್ತೋಕೇ ವಾಚ್ಯಲಿಂಗಾಸ್ತಥೋತ್ತರೇ ॥ ೧೩.೨೮
ಸಮಾನಾಸ್ಸತ್ಸಮೈಕೇ ಸ್ಯುಃ ಪಿಶುನೌ ಖಲಸೂಚಕೌ ।
ಹೀನನ್ಯೂನಾವೂನಗರ್ಹ್ಯೌ ವೇಗಿಶೂರೌ ತರಸ್ವಿನೌ ॥ ೧೩.೨೯
ಅಭಿಪನ್ನೋಽಪರಾದ್ಧೋಽಭಿಗ್ರಸ್ತ ವ್ಯಾಪದ್ಗತಾವಪಿ ।

ಇತಿ ನಾಂತಾಃ

---

೧೩.೨೭. ಆರಾಧನ[1] (ನ)=ಸಾಧಿಸುವಿಕೆ, ಪಡೆಯುವಿಕೆ, ಸಂತೋಷ ಪಡಿಸುವುದು. ಅಧಿಷ್ಠಾನ (ನ)=ಗಾಲಿ, ನಗರ, ಪ್ರಭಾವ, ಆಧಾರ.

೧೩.೨೮. ರತ್ನ (ನ)=ಶ್ರೇಷ್ಠ, (ಮಣಿ). ವನ (ನ), ನೀರು, ಕಾಡು. ತಲಿನ (ವಿ. ನಿಘ್ನ)=ವಿರಳವಾದ, ಅಲ್ಪವಾದ. ಹೀಗೆಯೇ ಮುಂದಿನ ನಾಂತಗಳೆಲ್ಲವೂ ವಿಶೇಷ್ಯ ನಿಘ್ನಗಳು.

೧೩.೨೯—೧೩.೩೦. ಸಮಾನ=ಸಜ್ಜನ, ಸದೃಶ, ಒಂದೇ ಗುಂಪಿನ. ಪಿಶುನ=ದುಷ್ಟ, ಚಾಡಿಖೋರ. ಹೀನ, ನ್ಯೂನ=ಕೊರತೆಯುಳ್ಳ, ನಿಂದ್ಯವಾದ. ತರಸ್ವಿನಂ (—ಸ್ತ್ರೀ. ತಪಸ್ವಿನೀ)=ವೇಗಶಾಲಿ, ಶೂರ. ಅಭಿಪನ್ನ=ಅಪರಾಧಿ, ಆಕ್ರಮಣಕ್ಕೆ ಒಳಗಾದವ, ಆಪತ್ತಿಗೆ ಸಿಕ್ಕಿದ.

[1] ಆರಾಧನಾ ಎಂಬ ಸ್ತ್ರೀಲಿಂಗವೂ ಇದೆ.

ಕಲಾಪೋ ಭೂಷಣೇ ಬರ್ಹೇ ತೂಣೀರೇ ಸಂಹತಾವಪಿ ॥ ೧೩.೩೦
ಪರಿಚ್ಛದೇ ಪರೀವಾಪಃ ಪರ್ಯುಪ್ತೌ ಸಲಿಲಸ್ಥಿತೌ ।
ಗೋಧುಗ್ಗೋಷ್ಠಪತೀ ಗೋಪೌ ಹರವಿಷ್ಣೂ ವೃಷಾಕಪೀ ॥ ೧೩.೩೧
ಬಾಷ್ಪಮೂಷ್ಮಾಶ್ರು ಕಶಿಪುಸ್ತ್ವನ್ನಮಾಚ್ಛಾದನಂ ದ್ವಯಮ್ ।
ತಲ್ಪಂ ಶಯ್ಯಾಟ್ಟದಾರೇಷು ಸ್ತಂಬೇಽಪಿ ವಿಟಪೋಽಸ್ತ್ರಿಯಾಮ್ ॥ ೧೩.೩೨
ಪ್ರಾಪ್ತರೂಪಸ್ವರೂಪಾಭಿರೂಪಾ ಬುಧಮನೋಜ್ಞಯೋಃ ।
ಭೇದ್ಯಲಿಂಗಾ ಅಮೀ ಕೂರ್ಮೀ ವೀಣಾಭೇದಶ್ಚ ಕಚ್ಛಪೀ ॥ ೧೩.೩೩

ಇತಿ ಪಾಂತಾಃ

ರವರ್ಣೇ ಪುಂಸಿ ರೇಫಃ ಸ್ಯಾತ್ಕುತ್ಸಿತೇ ವಾಚ್ಯಲಿಂಗಕಃ ।

ಇತಿ ಫಾಂತಃ

---

## ಪಾಂತಗಳು

೧೩.೩೦—೧೩.೩೧. ಕಲಾಪ (ಪು)=ಒಡವೆ, ನವಿಲುಗರಿ, ಬತ್ತಳಿಕೆ, ಸಮೂಹ. ಪರೀವಾಪ (ಪು)=ಪರಿವಾರ, ಬಿತ್ತನೆ, ನೀರು ನಿಂತಿರುವಿಕೆ—ನೀರು ನಿಂತಿರುವ ಸ್ಥಳ. ಗೋಪ (ಪು)=ಹಾಲನ್ನು ಕರೆಯುವವನು, ಕೊಟ್ಟಿಗೆಯ ಮೇಲ್ವಿಚಾರಕ, (ದನಕಾಯುವವನು). ವೃಷಾಕಪಿ (ಪು)=ಶಿವ, ವಿಷ್ಣು.

೧೩.೩೨. ಬಾಷ್ಪ (ನ)=ಹಬೆ, ಕಣ್ಣೀರು. ಕಶಿಪು (ಪು)=ಅನ್ನ, ವಸ್ತ್ರ. ತಲ್ಪ (ನ)=ಹಾಸಿಗೆ, ಅಟ್ಟ, ಹೆಂಡತಿ. ವಿಟಪ (ಪು.ನ)=ಹುಲ್ಲುಜಡ್ಡು, (ಕೊಂಬೆ).

೧೩.೩೩. ಪ್ರಾಪ್ತರೂಪ, ಸ್ವರೂಪ, ಅಭಿರೂಪ (ವಿ. ನಿಘ್ನ)=ವಿದ್ವಾಂಸ, ಸುಂದರ. ಕಚ್ಛಪೀ (ಸ್ತ್ರೀ)=ಹೆಣ್ಣು ಆಮೆ, ಸರಸ್ವತಿಯ ವೀಣೆ.

## ಫಾಂತ

೧೩.೩೪. ರೇಫ (ಪು)= 'ರ' ಎಂಬ ವರ್ಣ. ರೇಫ (ವಿ. ನಿಘ್ನ) ನೀಚ.



ಅಂತರಾಭವಸತ್ತ್ವೇಽಶ್ವೇ ಗಂಧರ್ವೋ ದಿವ್ಯಗಾಯನೇ ॥ ೧೩.೩೪
ಕಂಬುರ್ನಾ ವಲಯೇ ಶಂಖೇ ದ್ವಿಜಿಹ್ವೌ ಸರ್ಪಸೂಚಕೌ ।
ಪೂರ್ವೋಽನ್ಯಲಿಂಗಃ ಪ್ರಾಗಾಹ ಪುಂಬಹುತ್ವೇಽಪಿ ಪೂರ್ವಜಾನ್ ॥ ೧೩.೩೫

ಇತಿ ಬಾಂತಾಃ

ಕುಂಭಾ ಘಟೇಭಮೂರ್ಧಾಂಶೌ ಡಿಂಭೌ ತು ಶಿಶುಬಾಲಿಶೌ ।
ಸ್ತಂಭೌ ಸ್ಥೂಣಾಜಡೀಭಾವೌ ಶಂಭೂ ಬ್ರಹ್ಮತ್ರಿಲೋಚನೌ ॥ ೧೩.೩೬
ಕುಕ್ಷಿಭ್ರೂಣಾರ್ಭಕಾ ಗರ್ಭಾ ವಿಸ್ರಂಭಃ ಪ್ರಣಯೇಽಪಿ ಚ ।
ಸ್ಯಾದ್ಭೇರ್ಯಾಂ ದುಂದುಭಿಃ ಪುಂಸಿ ಸ್ಯಾದಕ್ಷೇ ದುಂದುಭಿಃ ಸ್ತ್ರಿಯಾಮ್ ॥

---

## ಬಾಂತಗಳು

೧೩.೩೪. ಗಂಧರ್ವ (ಪು)=ಅಂತರಪಿಶಾಚ (ಮರಣಾನಂತರದ ಯಾತನಾ ಶರೀರ). ಕುದುರೆ, ದೇವಲೋಕದ ಸಂಗೀತಗಾರ.

೧೩.೩೫. ಕಂಬು (ಪು)=ಕಡಗ, ಶಂಖ. ದ್ವಿಜಿಹ್ವ (ಪು)=ಸರ್ಪ, ಚಾಡಿಖೋರ. ಪೂರ್ವ (ವಿ. ನಿಘ್ನ)=ಪೂರ್ವದಿಕ್ಕಿನಲ್ಲಿರುವ ವಸ್ತು. ಉದಾ:—ಪೂರ್ವೋಗ್ರಾಮಃ, ಪೂರ್ವಾನದೀ, ಪೂರ್ವಂ ವನಮ್. ಪೂರ್ವ (ಪು. ನಿತ್ಯಬಹು.)=ಪೂರ್ವಜರು (ಹಿಂದಿನವರು).

ವಿಶೇಷ :— 'ವಬಯೋರಭೇದಃ' ಎಂಬ ನ್ಯಾಯದಂತೆ ಗಂಧರ್ವಾದಿಶಬ್ದಗಳನ್ನು ಬಾಂತದಲ್ಲಿ ಸೇರಿಸಲಾಗಿದೆ.

## ಭಾಂತಗಳು

೧೩.೩೬. ಕುಂಭ (ಪು)=ಗಡಿಗೆ, ಆನೆಯ ಕುಂಭಸ್ಥಳ. ಡಿಂಭ (ಪು)=ಶಿಶು, ಮೂರ್ಖ. ಸ್ತಂಭ (ಪು)=ಕಂಭ, ಜಡತ್ವ. ಶಂಭು (ಪು)=ಬ್ರಹ್ಮ, ಶಿವ.

೧೩.೩೭. ಗರ್ಭ (ಪು)=ಹೊಟ್ಟೆ, ಭ್ರೂಣ (Foetus), ಮಗು. ವಿಸ್ರಂಭ (ಪು)=ಪ್ರೀತಿ, (ನಂಬಿಕೆ). ದುಂದುಭಿ (ಪು)=ಭೇರಿ. ದುಂದುಭಿ (ಸ್ತ್ರೀ)=ಪಗಡೆಯ ಲೆತ್ತ.

ಸ್ಯಾನ್ಮಹಾರಾಜನೇ ಕ್ಲೀಬಂ ಕುಸುಂಭಂ ಕರಕೇ ಪುಮಾನ್ ।
ಕ್ಷತ್ರಿಯೇಽಪಿ ಚ ನಾಭಿರ್ನಾ ಸುರಭಿರ್ಗವಿ ಚ ಸ್ತ್ರಿಯಾಮ್ ॥ ೧೩೩೮
ಸಭಾ ಸಂಸದಿ ಸಭ್ಯೇ ಚ ತ್ರಿಷ್ವಧ್ಯಕ್ಷೇಽಪಿ ವಲ್ಲಭಃ ।

ಇತಿ ಭಾಂತಾಃ

ಕಿರಣಪ್ರಗ್ರಹೌ ರಶ್ಮೀ ಕಪಿಭೇಕೌ ಪ್ಲವಂಗಮೌ ॥ ೧೩೩೯
ಇಚ್ಛಾಮನೋಭವೌ ಕಾಮೌ ಶೌರ್ಯೋದ್ಯೋಗೌ ಪರಾಕ್ರಮೌ ।
ಧರ್ಮಾಃ ಪುಣ್ಯಯಮನ್ಯಾಯಸ್ವಭಾವಾಚಾರಸೋಮಪಾಃ ॥ ೧೩೪೦
ಉಪಾಯಪೂರ್ವ ಆರಂಭ ಉಪಧಾ ಚಾಪ್ಯುಪಕ್ರಮಃ ।
ವಣಿಕ್ಪಥಃ ಪುರಂ ವೇದೋ ನಿಗಮೋ ನಾಗರೋ ವಣಿಕ್ ॥ ೧೩೪೧
ನೈಗಮೌ ದ್ವೌ ಬಲೇ ರಾಮೋ ನೀಲಚಾರುಸಿತೇ ತ್ರಿಷು ।
ಶಬ್ದಾದಿಪೂರ್ವೋ ವೃಂದೇಽಪಿ ಗ್ರಾಮಃ ಕ್ರಾಂತೌ ಚ ವಿಕ್ರಮಃ ॥ ೧೩೪೨

---

೧೩೩೮—೧೩೩೯. ಕುಸುಂಭ (ನ)= ಕುಸುಬೆಹೂ. ಕುಸುಂಭ (ಪು)=ಕಮಂಡಲು. ನಾಭಿ (ಪು)=ಕ್ಷತ್ರಿಯ, (ಗಾಲಿಯ ಮಧ್ಯಭಾಗ, ಹೊಕ್ಕಳು). ಸುರಭಿ (ಸ್ತ್ರೀ)=ಹಸು, ಕಾಮಧೇನು. (ಸುರಭಿ (ಪು)=ಸಂಪಗೆಮರ), ವಸಂತ. ಸುರಭಿ (ತ್ರಿಲಿಂಗ)=ಪರಿಮಳಯುಕ್ತ ವಾದ). ಸಭಾ (ಸ್ತ್ರೀ)=ಸಭೆ, (ಜೂಜು, ಮಂದಿರ). ವಲ್ಲಭ (ವಿ. ನಿಘ್ನ)=ಅಧ್ಯಕ್ಷ, (ಪ್ರಿಯ).

## ಮಾಂತಗಳು

೧೩೩೯—೧೩೪೦. ರಶ್ಮಿ (ಪು)=ಕಿರಣ, ಹಗ್ಗ. ಪ್ಲವಂಗಮ (ಪು)=ಕಪಿ, ಕಪ್ಪೆ. ಕಾಮ (ಪು)=ಇಚ್ಛೆ, ಮನ್ಮಥ. ಪರಾಕ್ರಮ (ಪು)=ಶೌರ್ಯ, ಉದ್ಯೋಗ. ಧರ್ಮ (ಪು)=ಪುಣ್ಯ, ಯಮ, ನ್ಯಾಯ, ಸ್ವಭಾವ, ಆಚಾರ, ಸೋಮಯಾಗಕರ್ತ.

೧೩೪೧—೧೩೪೨. ಉಪಕ್ರಮ (ಪು)=ಉಪಾಯವನ್ನರಿತು ಕಾರ್ಯದ ಆರಂಭ, ಮಂತ್ರಿಗಳ ಗುಣಪರೀಕ್ಷೆ, (ವಂಚನೆ). ನಿಗಮ (ಪು)=ಅಂಗಡಿಬೀದಿ, ಪಟ್ಟಣ, ವೇದ. ನೈಗಮ (ಪು)=ನಾಗರಿಕ, ವ್ಯಾಪಾರಿ. ರಾಮ (ಪು)=ಬಲರಾಮ (ದಾಶರಥಿರಾಮ, ಪರಶುರಾಮ). ರಾಮ (ವಿ. ನಿಘ್ನ. ತ್ರಿಲಿಂಗ)=ಕಪ್ಪಾದ, ಸುಂದರವಾದ, ಬಿಳಿಯದಾದ. ಗ್ರಾಮ (ಪು)=ಶಬ್ದಾದಿ

[1] ನಕಾರಾಂತ ನಪುಂಸಕವಾದ ಲಲಾಮನ್ ಎಂಬ ಶಬ್ದವೂ ಇದೆ.



ಗುಲ್ಮಾ ರುಕ್‌ಸ್ತಂಬಸೇನಾಶ್ಚ ಜಾಮಿಃ ಸ್ವಸೃಕುಲಸ್ತ್ರಿಯೋಃ ।
ಕ್ಷಿತಿಕ್ಷಾಂತ್ಯೋಃ ಕ್ಷಮಾ ಯುಕ್ತೇ ಕ್ಷಮಂ ಶಕ್ತೇ ಹಿತೇ ತ್ರಿಷು ॥ ೧೩೪೩
ತ್ರಿಷು ಶ್ಯಾಮೌ ಹರಿತ್ಕೃಷ್ಣೌ ಶ್ಯಾಮಾ ಸ್ಯಾಚ್ಛಾರಿವಾ ನಿಶಾ ।
ಲಲಾಮಂ ಪುಚ್ಛಪುಂಡ್ರಾಶ್ವಭೂಷಾಪ್ರಾಧಾನ್ಯಕೇತುಷು ॥ ೧೩೪೪
ಸೂಕ್ಷ್ಮಮಧ್ಯಾತ್ಮಮಪ್ಯಾದೌ ಪ್ರಧಾನೇ ಪ್ರಥಮಸ್ತ್ರಿಷು ।
ವಾಮೌ ವಲ್ಗುಪ್ರತೀಪೌ ದ್ವಾವಧಮೌ ನ್ಯೂನಕುತ್ಸಿತೌ ॥ ೧೩೪೫
ಜೀರ್ಣಂ ಚ ಪರಿಭುಕ್ತಂ ಚ ಯಾತಯಾಮಮಿದಂ ದ್ವಯಮ್ ।

ಇತಿ ಮಾಂತಾಃ

ತುರಂಗಗರುಡೌ ತಾರ್ಕ್ಷ್ಯೌ ನಿಲಯಾಪಚಯೌ ಕ್ಷಯೌ ॥ ೧೩೪೬
ಶ್ವಶುರ್ಯೌ ದೇವರಶ್ಯಾಲೌ ಭ್ರಾತೃವ್ಯೌ ಭ್ರಾತೃಜದ್ವಿಷೌ ।
ಪರ್ಜನ್ಯೌ ರಸದಬ್ದೇಂದ್ರೌ ಸ್ಯಾದರ್ಯಃ ಸ್ವಾಮಿವೈಶ್ಯಯೋಃ ॥ ೧೩೪೭

---

ಪೂರ್ವವಾದಾಗ ಸಮೂಹ. ಉದಾ:—ಶಬ್ದಗ್ರಾಮ, ಗುಣಗ್ರಾಮ, (ಊರು, ಸ್ವರ). ವಿಕ್ರಮ (ಪು)=ದಾಟುವುದು, ಪರಾಕ್ರಮ.

೧೩೪೩. ಗುಲ್ಮ (ಪು)=ಪ್ಲೀಹವೆಂಬ ರೋಗ, ಪೊದೆ, ಸೇನಾವಿಭಾಗ. ಜಾಮಿ (ಸ್ತ್ರೀ)=ಒಡಹುಟ್ಟಿದವಳು, ಕುಲಸ್ತ್ರೀ. ಕ್ಷಮಾ (ಸ್ತ್ರೀ)=ಭೂಮಿ, ಸೈರಣೆ. ಕ್ಷಮ (ನ)=ಯುಕ್ತವಾದದ್ದು. ಕ್ಷಮ (ವಿ. ನಿಘ್ನ)= ಶಕ್ತ, ಹಿತಕಾರಿ.

೧೩೪೪. ಶ್ಯಾಮ (ವಿ. ನಿಘ್ನ)=ಹಸಿರು, ಕಪ್ಪು. ಶ್ಯಾಮಾ (ಸ್ತ್ರೀ)=ಸೊಗದೆಬೇರು, ರಾತ್ರಿ, (ಯುವತಿ). ಲಲಾಮ[1] (ನ)=ಬಾಲ, ತಿಲಕ, ಕುದುರೆಯ ಅಲಂಕಾರ, ಪ್ರಧಾನ.

೧೩೪೫—೧೩೪೬. ಸೂಕ್ಷ್ಮ (ನ)=ಆಧ್ಯಾತ್ಮವಿಷಯ. ಸೂಕ್ಷ್ಮ (ವಿ. ನಿಘ್ನ)=ಚಿಕ್ಕದು. ಪ್ರಥಮ (ವಿ. ನಿಘ್ನ)=ಮೊದಲನೆಯ, ಪ್ರಧಾನವಾದ. ವಾಮ=ಸುಂದರ, ಪ್ರತಿಕೂಲ. ಅಧಮ (ವಿ. ನಿಘ್ನ)=ನ್ಯೂನ, ನಿಂದನೀಯ. ಯಾತಯಾಮ (ವಿ. ನಿಘ್ನ)=ಹಳಸಿದ, ಭೋಗಿಸಲ್ಪಟ್ಟ.

## ಯಾಂತಗಳು

೧೩೪೬—೧೩೪೭. ತಾರ್ಕ್ಷ್ಯ (ಪು)=ಕುದುರೆ, ಗರುಡ. ಕ್ಷಯ (ಪು)=ಮನೆ, ಕ್ಷೀಣತೆ. ಶ್ವಶುರ್ಯ (ಪು)=ಗಂಡನ ಸೋದರ, ಹೆಂಡತಿಯ ಸೋದರ. ಭ್ರಾತೃವ್ಯ (ಪು)=ಸೋದರನ ಮಗ, ಶತ್ರು. ಪರ್ಜನ್ಯ (ಪು)=ಗುಡುಗುವ ಮೋಡ, ಇಂದ್ರ. ಅರ್ಯ (ಪು)=ಒಡೆಯ, ವೈಶ್ಯ.

ತಿಷ್ಯಃ ಪುಷ್ಯೇ ಕಲಿಯುಗೇ ಪರ್ಯಾಯೋಽವಸರೇ ಕ್ರಮೇ ।
ಪ್ರತ್ಯಯೋಽಧೀನಶಪಥಜ್ಞಾನವಿಶ್ವಾಸಹೇತುಷು ॥ ೧೩೪೮

ರಂಧ್ರೇ ಶಬ್ದೇಽಥಾನುಶಯೋ ದೀರ್ಘದ್ವೇಷಾನುತಾಪಯೋಃ ।
ಸ್ಥೂಲೋಚ್ಚಯಸ್ತ್ವಸಾಕಲ್ಯೇ ಗಜಾನಾಂ ಮಧ್ಯಮೇ ಗತೇ ॥ ೧೩೪೯

ಸಮಯಾಶ್ಶಪಥಾಚಾರಕಾಲಸಿದ್ಧಾಂತಸಂವಿದಃ ।
ವ್ಯಸನಾನ್ಯಶುಭಂ ದೈವಂ ವಿಪದಿತ್ಯನಯಾಸ್ತ್ರಯಃ ॥ ೧೩೫೦

ಅತ್ಯಯೋಽತಿಕ್ರಮೇ ಕೃಚ್ಛ್ರೇ ದೋಷೇ ದಂಡೇಽಪ್ಯಥಾಪದಿ ।
ಯುದ್ಧಾಯತ್ಯೋಸ್ಸಂಪರಾಯಃ ಪೂಜ್ಯಸ್ತು ಶ್ವಶುರೇಽಪಿ ಚ ॥ ೧೩೫೧

ಪಶ್ಚಾದವಸ್ಥಾಯಿಬಲಂ ಸಮವಾಯಶ್ಚ ಸಂನಯೌ ।
ಸಂಘಾತೇ ಸನ್ನಿವೇಶೇ ಚ ಸಂಸ್ತ್ಯಾಯಃ ಪ್ರಣಯಾಸ್ತ್ವಮೀ ॥ ೧೩೫೨

ವಿಸ್ರಂಭಯಾಚ್ಞಾಪ್ರೇಮಾಣೋ ವಿರೋಧೇಽಪಿ ಸಮುಚ್ಛ್ರಯಃ ।
ವಿಷಯೋ ಯಸ್ಯ ಯೋ ಜ್ಞಾತಸ್ತತ್ರ ಶಬ್ದಾದಿಕೇಷ್ವಪಿ ॥ ೧೩೫೩

---

೧೩೪೮—೧೩೪೯. ತಿಷ್ಯ (ಪು)=ಪುಷ್ಯಮಾಸ, ಕಲಿಯುಗ. ಪರ್ಯಾಯ (ಪು)=ಸರದಿ, ಕ್ರಮ. ಪ್ರತ್ಯಯ (ಪು)=ಅಧೀನ (ಉದಾ:—ರಾಜಪ್ರತ್ಯಯಾಃ ಪ್ರಜಾಃ) ಶಪಥ, ಜ್ಞಾನ, ವಿಶ್ವಾಸ, ಕಾರಣ, ದೋಷಾವಕಾಶ (ಉದಾ :—ರಿಪೌ ಪ್ರತ್ಯಯಮಾಸಾದ್ಯ ಪ್ರಹರೇತ್) ಕೃತ್ತದ್ಧಿತಾದಿ ಪ್ರತ್ಯಯ. ಅನುಶಯ (ಪು)=ದೀರ್ಘಕಾಲದ ವೈರ, ಪಶ್ಚಾತ್ತಾಪ. ಸ್ಥೂಲೋಚ್ಚಯ (ಪು)=ಅಸಂಪೂರ್ಣತೆ, ಆನೆಗಳ ಸಾಮಾನ್ಯವಾದ ನಡಿಗೆ.

೧೩೫೦. ಸಮಯ (ಪು)=ಶಪಥ, ಆಚಾರ, ಕಾಲ, ಸಿದ್ಧಾಂತ, ಜ್ಞಾನ, (ಸಂಕೇತ). ಅನಯ (ಪು)=ದ್ಯೂತಾದಿ ವ್ಯಸನ, ದುರದೃಷ್ಟ, ವಿಪತ್ತು.

೧೩೫೧. ಅತ್ಯಯ(ಪು)=ಅತಿಕ್ರಮಣ, ಕಷ್ಟ, ದೋಷ, ದಂಡನೆ. ಸಂಪರಾಯ (ಪು)=ಆಪತ್ತು, ಯುದ್ಧ, ಭವಿಷ್ಯತ್ಕಾಲ. ಪೂಜ್ಯ (ಪು)=ಮಾವ, ಪೂಜಾರ್ಹ.

೧೩೫೨—೧೩೫೩. ಸಂನಯ (ಪು)=ಹಿಂದುಗಡೆ ಕಾದಿಟ್ಟಿರುವ ಸೇನೆ, ಸಮೂಹ. ಸಂಸ್ತ್ಯಾಯ (ಪು)=ಸಮೂಹ, ಸಂನಿವೇಶ. ಪ್ರಣಯ (ಪು)=ನಂಬಿಕೆ, ಯಾಚನೆ, ಪ್ರೇಮ. ಸಮುಚ್ಛ್ರಯ (ಪು)=ವಿರೋಧ, (ಔನ್ನತ್ಯ). ವಿಷಯ (ಪು)=ಜ್ಞಾನಕ್ಕೆ ಗೋಚರವಾದದ್ದು. ಶಬ್ದ=ಸ್ಪರ್ಶಾದಿ ವಿಷಯ.



ನಿರ್ಯಾಸೇಽಪಿ ಕಷಾಯೋಽಸ್ತ್ರೀ ಸಭಾಯಾಂ ಚ ಪ್ರತಿಶ್ರಯಃ ।
ಪ್ರಾಯೋ ಭೂಮ್ನ್ಯಂತಗಮನೇ ಮನ್ಯುರ್ದೈನ್ಯೇ ಕ್ರತೌ ಕ್ರುಧಿ ॥ ೧೩೫೪

ರಹಸ್ಯೋಪಸ್ಥಯೋರ್ಗುಹ್ಯಂ ಸತ್ಯಂ ಶಪಥತಥ್ಯಯೋಃ ।
ವೀರ್ಯಂ ಬಲೇ ಪ್ರಭಾವೇ ಚ ದ್ರವ್ಯಂ ಭವ್ಯೇ ಗುಣಾಶ್ರಯೇ ॥ ೧೩೫೫

ಧಿಷ್ಣ್ಯಂ ಸ್ಥಾನೇ ಗೃಹೇ ಭೇಽಗ್ನೌ ಭಾಗ್ಯಂ ಕರ್ಮ ಶುಭಾಶುಭಮ್ ।
ಕಶೇರುಹೇಮ್ನೋರ್ಗಾಂಗೇಯಂ ವಿಶಲ್ಯಾ ದಂತಿಕಾಽಪಿ ಚ ॥ ೧೩೫೬

ವೃಷಾಕಪಾಯೀ ಶ್ರೀಗೌರ್ಯೋರಭಿಖ್ಯಾ ನಾಮಶೋಭಯೋಃ ।
ಆರಂಭೋ ನಿಷ್ಕೃತಿಶ್ಶಿಕ್ಷಾ ಪೂಜನಂ ಸಂಪ್ರಧಾರಣಮ್ ॥ ೧೩೫೭

ಉಪಾಯಃ ಕರ್ಮ ಚೇಷ್ಟಾ ಚ ಚಿಕಿತ್ಸಾ ಚ ನವ ಕ್ರಿಯಾಃ ।
ಛಾಯಾ ಸೂರ್ಯಪ್ರಿಯಾ ಕಾಂತಿಃ ಪ್ರತಿಬಿಂಬಮನಾತಪಃ ॥ ೧೩೫೮

---

೧೩೫೪. ಕಷಾಯ (ಪು.ನ)=ವಸ್ತುವನ್ನು ಹಾಕಿ ಮರಳಿಸಿದ ನೀರು (Decotion), (ಒಗರು). ಪ್ರತಿಶ್ರಯ (ಪು)=ಸಭೆ, (ಆಶ್ರಯ, ಒಪ್ಪಿಗೆ).ಪ್ರಾಯ (ಪು)=ಬಾಹುಳ್ಯ, ಮರಣ. ಮನ್ಯು (ಪು)=ದೈನ್ಯ, ಯಾಗ, ಕೋಪ.

೧೩೫೫. ಗುಹ್ಯ (ನ)=ಗುಟ್ಟು, ಗುಹ್ಯೇಂದ್ರಿಯ. ಸತ್ಯ (ನ)=ಶಪಥ, ದಿಟ. ವೀರ್ಯ (ನ)=ಬಲ, ಪ್ರಭಾವ, (ರೇತಸ್ಸು). ದ್ರವ್ಯ (ನ)=ಒಳ್ಳೆಯ ಪದಾರ್ಥ, ಗುಣಾಶ್ರಯವಾದ ಪೃಥಿವ್ಯಾದಿ ದ್ರವ್ಯ.

೧೩೫೬. ಧಿಷ್ಣ್ಯ (ನ)=ಸ್ಥಳ, ಮನೆ, ನಕ್ಷತ್ರ, ಅಗ್ನಿ. ಭಾಗ್ಯ(ನ)=ಶುಭಾಶುಭ ರೂಪವಾದ ಕರ್ಮ. ಗಾಂಗೇಯ (ನ)=ತಾವರೆ ಮೊದಲಾದವುಗಳ ಗಡ್ಡೆ, ಚಿನ್ನ. ವಿಶಲ್ಯಾ (ಸ್ತ್ರೀ)=ಜಾಪಾಳದ ಗಿಡ. ಹಾವುಮೆಕ್ಕೆ ಗಿಡ.

೧೩೫೭—೧೩೫೮. ವೃಷಾಕಪಾಯೀ (ಸ್ತ್ರೀ)=ಲಕ್ಷ್ಮಿ, ಪಾರ್ವತಿ. ಅಭಿಖ್ಯಾ (ಸ್ತ್ರೀ)=ಹೆಸರು, ಕಾಂತಿ, ಕ್ರಿಯಾ (ಸ್ತ್ರೀ)=ಆರಂಭ, ಪ್ರಾಯಶ್ಚಿತ್ತ, ಕಲಿಸುವುದು, ಪೂಜೆ, ವ್ಯವಹಾರನಿರ್ಣಯ, ಉಪಾಯ, ಕೆಲಸ, ಚಲನೆ, ಚಿಕಿತ್ಸೆ. ಛಾಯಾ (ಸ್ತ್ರೀ)=ಸೂರ್ಯನ ಹೆಂಡತಿ, ಕಾಂತಿ, ಪ್ರತಿಬಿಂಬ, ನೆರಳು.

**ಕಕ್ಷ್ಯಾ ಪ್ರಕೋಷ್ಠೇ ಹರ್ಮ್ಯಾದೇಃ ಕಾಂಚ್ಯಾಂ ಮಧ್ಯೇಭಬಂಧನೇ ।**
**ಕೃತ್ಯಾ ಕ್ರಿಯಾದೇವತಯೋಸ್ತ್ರಿಷು ಭೇದ್ಯೇ ಧನಾದಿಭಿಃ ॥** ೧೩೬೯
**ಜನ್ಯಂ ಸ್ಯಾಜ್ಜನವಾದೇಽಪಿ ಜಘನ್ಯೋಂತ್ಯೇಽಧಮೇಽಪಿ ಚ ।**
**ಗರ್ಹ್ಯಾಧೀನೌ ಚ ವಕ್ತವ್ಯೌ ಕಲ್ಯೌ ಸಜ್ಜನಿರಾಮಯೌ ॥** ೧೩೭೦
**ಆತ್ಮವಾನನಪೇತೋಽರ್ಥಾತ್ ಅರ್ಥ್ಯೌ ಪುಣ್ಯಂ ತು ಚಾರ್ವಪಿ ।**
**ರೂಪ್ಯಂ ಪ್ರಶಸ್ತೇ ರೂಪೇಽಪಿ ವದಾನ್ಯೋ ವಲ್ಗುವಾಗಪಿ ॥** ೧೩೭೧
**ನ್ಯಾಯ್ಯೇಽಪಿ ಮಧ್ಯಂ ಸೌಮ್ಯಂ ತು ಸುಂದರೇ ಸೋಮದೈವತೇ ।**

ಇತಿ ಯಾಂತಾಃ

**ನಿವಹಾವಸರೌ ವಾರೌ ಸಂಸ್ತರೌ ಪ್ರಸ್ತರಾಽಧ್ವರೌ ॥** ೧೩೭೨
**ಗುರೂ ಗೀಷ್ಪತಿಪಿತ್ರಾದ್ಯೌ ದ್ವಾಪರೌ ಯುಗಸಂಶಯೌ ।**
**ಪ್ರಕಾರೌ ಭೇದಸಾದೃಶ್ಯೇ ಆಕಾರಾವಿಂಗಿತಾಕೃತೀ ॥** ೧೩೭೩

೧೩೬೯. ಕಕ್ಷ್ಯಾ ( ಸ್ತ್ರೀ)= ಮನೆಯ ಕೋಣೆ ಇತ್ಯಾದಿ ವಿಭಾಗ, ಡಾಬು, ಆನೆಯ ಸೊಂಟಕ್ಕೆ ಕಟ್ಟುವ ಹಗ್ಗ. ಕೃತ್ಯಾ(ಸ್ತ್ರೀ)=ಕೆಲಸ, ಆಭಿಚಾರಿಕ ದೇವತೆ. ಕೃತ್ಯ (ವಿ. ನಿಘ್ನ. ತ್ರಿಲಿಂಗ)=ಧನಾದಿಗಳಿಂದ ವಶಪಡಿಸಿಕೊಳ್ಳಬಹುದಾದ.

೧೩೭೦. ಜನ್ಯ (ನ)=ಜನರ ಹೇಳಿಕೆ (Rumour), ಯುದ್ಧ, (ಜನ್ಯಾ (ಸ್ತ್ರೀ)=ವಧುವಿನ ಗೆಳತಿ, ದಾದಿ). ಜಘನ್ಯ (ವಿ. ನಿಘ್ನ)=ಕಡೆಯವನು, ಅಧಮ. ವಕ್ತವ್ಯ (ವಿ. ನಿಘ್ನ)=ನಿಂದಿತ, ಅಧೀನ. ಕಲ್ಯ (ವಿ. ನಿಘ್ನ)ಸಿದ್ಧವಾದ, ಆರೋಗ್ಯವುಳ್ಳ.

೧೩೭೧—೧೩೭೨. ಅರ್ಥ್ಯ (ವಿ. ನಿಘ್ನ)=ತಿಳಿವಳಿಕೆಯುಳ್ಳ, ಅರ್ಥವುಳ್ಳ. ಪುಣ್ಯ (ನ)=ಸುಂದರ, ಪುಣ್ಯಕರ. ರೂಪ್ಯ (ನ)=ಪ್ರಶಸ್ತವಾದ ರೂಪವುಳ್ಳ, ಚಿನ್ನಬೆಳ್ಳಿಗಳ ನಾಣ್ಯ. ವದಾನ್ಯ (ಪು)=ವಾಗ್ಮಿ, ದಾನಿ. ಮಧ್ಯ (ನ)=ನ್ಯಾಯವಾದದ್ದು, ನಡು. ಸೌಮ್ಯ (ನ)=ಸುಂದರ, ಸೋಮದೇವತಾಕವಾದ.

## ರಾಂತಗಳು

೧೩೭೨—೧೩೭೩. ವಾರ (ಪು)=ಸಮೂಹ, ಸರದಿ. ಸಂಸ್ತರ (ಪು)=ಹಾಸಿಗೆ, ಯಜ್ಞ. ಗುರು (ಪು)=ಬೃಹಸ್ಪತಿ, ತಂದೆ, (ಉಪದೇಶಕರ್ತ, ಭಾರವಾದ, ದೊಡ್ಡ). ದ್ವಾಪರ (ಪು)= ಒಂದು ಯುಗ, ಸಂದೇಹ. ಪ್ರಕಾರ (ಪು)=ಭೇದ, ಹೋಲಿಕೆ. ಆಕಾರ (ಪು)= ಅಭಿಪ್ರಾಯವನ್ನು ಸೂಚಿಸುವ ಚೇಷ್ಟೆ, ಆಕೃತಿ.



**ಕಿಂಶಾರೂ ಧಾನ್ಯಶೂಕೇಷೂ ಮರೂ ಧನ್ವಧರಾಧರೌ ।**
**ಅದ್ರಯೋ ದ್ರುಮಶೈಲಾರ್ಕಾಃ ಸ್ತ್ರೀಸ್ತನಾಬ್ದೌ ಪಯೋಧರೌ ॥** ೧೩೭೪
**ಧ್ವಾಂತಾರಿದಾನವಾ ವೃತ್ರಾಃ ಬಲಿಹಸ್ತಾಂಶವಃ ಕರಾಃ ।**
**ಪ್ರದರಾ ಭಂಗನಾರೀರುಗ್ಬಾಣಾ ಅಸ್ರಾಃ ಕಚಾ ಅಪಿ ॥** ೧೩೭೫
**ಅಜಾತಶೃಂಗೋ ಗೌಃ ಕಾಲೇಽಪ್ಯಶ್ಮಶ್ರುರ್ನಾ ಚ ತೂಬರೌ ।**
**ಸ್ವರ್ಣೇ ऽಪಿ ರಾಃ ಪರಿಕರಃ ಪರ್ಯಂಕಪರಿವಾರಯೋಃ ॥** ೧೩೭೬
**ಮುಕ್ತಾಶುದ್ಧೌ ಚ ತಾರಸ್ಸ್ಯಾ ಚ್ಛಾರೋ ವಾಯೌ ಸ ತು ತ್ರಿಷು ।**
**ಕರ್ಬುರೇಽಥ ಪ್ರತಿಜ್ಞಾಜಿಸಂವಿದಾಪತ್ಸು ಸಂಗರಃ ॥** ೧೩೭೭
**ವೇದಭೇದೇ ಗುಪ್ತವಾದೇ ಮಂತ್ರೋ ಮಿತ್ರೋ ರವಾವಪಿ ।**
**ಮುಖೇಷು ಯೂಪಖಂಡೇಽಪಿ ಸ್ವರುರ್ಗುಹ್ಯೇಽಪ್ಯವಸ್ಕರಃ ॥** ೧೩೭೮
**ಆಡಂಬರಸ್ತೂರ್ಯರವೇ ಗಜೇಂದ್ರಾಣಾಂ ಚ ಗರ್ಜಿತೇ ।**
**ಅಭಿಹಾರೋಽಭಿಯೋಗೇ ಚ ಚೌರ್ಯೇ ಸನ್ನಹನೇಽಪಿ ಚ ॥** ೧೩೭೯

೧೩೭೪. ಕಿಂಶಾರು (ಪು)=ಧಾನ್ಯದ ಮುಳ್ಳು, ಬಾಣ. ಮರು (ಪು)=ನಿರ್ಜಲವಾದ ನೆಲ, ಬೆಟ್ಟ. ಅದ್ರಿ (ಪು)=ಮರ, ಬೆಟ್ಟ, ಸೂರ್ಯ. ಪಯೋಧರ (ಪು)=ಮೊಲೆ, ಮೋಡ.

೧೩೭೫. ವೃತ್ರ (ಪು)=ಕತ್ತಲೆ, ಶತ್ರು, ವೃತ್ರನೆಂಬ ಅಸುರ. ಕರ (ಪು)=ಕಪ್ಪ, ಕೈ, ಕಿರಣ. ಪ್ರದರ (ಪು)=ಸೀಳುವಿಕೆ, ಹೆಂಗಸರ ಒಂದು ರೋಗ, ಬಾಣ. ಅಸ್ರ (ಪು)=ತಲೆಗೂದಲು, (ಅಸ್ರ (ನ)=ರಕ್ತ, ಕಣ್ಣೀರು).

೧೩೭೬. ತೂಬರ (ಪು)=ವಯಸ್ಸಾದರೂ ಕೊಂಬು ಹುಟ್ಟದಿರುವ ಎತ್ತು, ವಯಸ್ಸಾದರೂ ಗಡ್ಡ ಮೀಸೆಗಳು ಹುಟ್ಟದಿರುವವನು. ರೈ (ಪು)=ಚಿನ್ನ, (ಹಣ).ಪರಿಕರ (ಪು)=ಮಂಚ, ಪರಿವಾರ.

೧೩೭೭. ತಾರ (ಪು)=ಮುತ್ತಿನ ಶುದ್ಧತೆ, (ಶುದ್ಧವಾದ ಮುತ್ತು). ಶಾರ (ಪು)=ವಾಯು. ಶಾರ (ವಿ.ನಿಘ್ನ)= ಚಿತ್ರವರ್ಣವಾದ. ಸಂಗರ (ಪು)=ಪ್ರತಿಜ್ಞೆ, ಯುದ್ಧ, ನಿಶ್ಚಯ, ಆಪತ್ತು.

೧೩೭೮. ಮಂತ್ರ (ಪು)=ವೇದದ ಒಂದು ಭಾಗ, ರಹಸ್ಯವಾದ ಮಾತು. ಮಿತ್ರ (ಪು)=ಸೂರ್ಯ. ಮಿತ್ರ (ನ)=ಸ್ನೇಹಿತ. ಸ್ವರು (ಪು)=ಯಜ್ಞ, ಬಾಣ, ಯೂಪಸ್ತಂಭದ ತುಂಡು. ಅವಸ್ಕರ (ಪು)=ಸ್ತ್ರೀಪುರುಷರ ಗುಹ್ಯಾಂಗ, ಮಲ.

೧೩೭೯. ಆಡಂಬರ (ಪು)=ವಾದ್ಯಧ್ವನಿ, ಆನೆಗಳ ಗರ್ಜನೆ. ಅಭಿಹಾರ (ಪು)=ಮೇಲೆ ಬೀಳುವುದು (ಆಕ್ರಮಣ), ಕಳ್ಳತನ, ಕವಚಾದಿಗಳನ್ನು ಧರಿಸುವುದು.

ಸ್ಯಾಜ್ಜಂಗಮೇ ಪರೀವಾರಃ ಖಡ್ಗಕೋಶೇ ಪರಿಚ್ಛದೇ ।
ವಿಷ್ಟರೋ ವಿಟಪೀ ದರ್ಭಮುಷ್ಟಿಃ ಪೀಠಾದ್ಯಮಾಸನಮ್ ॥ ೧೩.೭೦
ದ್ವಾರಿ ದ್ವಾಃಸ್ಥೇ ಪ್ರತೀಹಾರಃ ಪ್ರತೀಹಾರ್ಯಪ್ಯನಂತರೇ ।
ವಿಪುಲೇ ನಕುಲೇ ವಿಷ್ಣೌ ಬಭ್ರುಸ್ಸ್ಯಾತ್ ಪಿಂಗಲೇ ತ್ರಿಷು ॥ ೧೩.೭೧
ಸಾರೋ ಬಲೇ ಸ್ಥಿರಾಂಶೇ ಚ ನ್ಯಾಯ್ಯೇ ಕ್ಲೀಬಂ ವರೇ ತ್ರಿಷು ।
ದುರೋದರೋ ದ್ಯೂತಕಾರೇ ಪಣೇ ದ್ಯೂತೇ ದುರೋದರಮ್ ॥ ೧೩.೭೨
ಮಹಾರಣ್ಯೇ ದುರ್ಗಪಥೇ ಕಾಂತಾರಂ ಪುನ್ನಪುಂಸಕಮ್ ।
ಮತ್ಸರೋಽನ್ಯಶುಭದ್ವೇಷೇ ತದ್ವತ್ಕೃಪಣಯೋಸ್ತ್ರಿಷು ॥ ೧೩.೭೩
ದೇವಾದ್ವೃತೇ ವರಃ ಶ್ರೇಷ್ಠೇ ತ್ರಿಷು ಕ್ಲೀಬಂ ಮನಾಕ್ಪ್ರಿಯೇ ।
ವಂಶಾಂಕುರೇ ಕರೀರೋಽಸ್ತ್ರೀ ತರುಭೇದೇ ಘಟೇ ಚ ನಾ ॥ ೧೩.೭೪
ನಾ ಚಮೂಜಘನೇ ಹಸ್ತಸೂತ್ರೇ ಪ್ರತಿಸರೋಽಸ್ತ್ರಿಯಾಮ್ ।
ಯಮಾನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಂಶುವಾಜಿಷು ॥ ೧೩.೭೫

೧೩.೭೦. ಪರೀವಾರ (ಪು)=ಪರಿಜನ, ಕತ್ತಿಯ ಒರೆ, ಉಪಕರಣ. ವಿಷ್ಟರ (ಪು)=ಮರ, ಒಂದು ಹಿಡಿ ದರ್ಭೆ, ಪೀಠ.

೧೩.೭೧. ಪ್ರತೀಹಾರ (ಪು)=ಬಾಗಿಲು, ಬಾಗಿಲುಕಾಯುವವನು. ಪ್ರತೀಹಾರೀ (ಸ್ತ್ರೀ)= ಬಾಗಿಲು ಕಾಯುವವನು, ಬಾಗಿಲು ಕಾಯುವವಳು. ಬಭ್ರು (ಪು)=ವಿಶಾಲ, ಮುಂಗುಸಿ, ವಿಷ್ಣು. ಬಭ್ರು (ವಿ. ನಿಘ್ನ)=ಪಿಂಗಳ ವರ್ಣವಾದ, (ವಿಶಾಲ ಎಂಬ ಅರ್ಥದಲ್ಲಿಯೂ ಈ ಶಬ್ದವು ವಿ. ನಿಘ್ನವಾಗುತ್ತದೆ).

೧೩.೭೨. ಸಾರ (ಪು)=ಬಲ, ಸ್ಥಿರಾಂಶ (Essence), ಯುಕ್ತ. ಸಾರ (ವಿ. ನಿಘ್ನ)=ಶ್ರೇಷ್ಠ. ದುರೋದರ (ಪು)=ಜೂಜಾಡುವವನು, ಪಣ. ದುರೋದರ (ನ)=ಜೂಜು.

೧೩.೭೩. ಕಾಂತಾರ (ಪು.ನ)= ದೊಡ್ಡಕಾಡು, ಕಷ್ಟವಾದ ದಾರಿ. ಮತ್ಸರ (ಪು)=ಹೊಟ್ಟೆ ಕಿಚ್ಚು. ಮತ್ಸರ (ವಿ. ನಿಘ್ನ)=ಹೊಟ್ಟೆ ಕಿಚ್ಚುಳ್ಳವನು, ಕೃಪಣ.

೧೩.೭೪. ವರ (ಪು)=ದೇವತೆಯಿಂದ ಪಡೆದ ಇಷ್ಟಾರ್ಥ, ವರ (ವಿ. ನಿಘ್ನ)=ಶ್ರೇಷ್ಠ, ವರ (ನ)=ಸ್ವಲ್ಪ ಇಷ್ಟವಾದದ್ದು. ಕರೀರ (ಪು.ನ)=ಬಿದಿರು ಮೊಳಕೆ (ಕಳಲೆ). ಕರೀರ (ಪು)=ಒಂದು ಮುಳ್ಳುಗಿಡ, ಗಡಿಗೆ.

೧೩.೭೫–೧೩.೭೬. ಪ್ರತಿಸರ (ಪು)=ಸೈನ್ಯದ ಹಿಂಭಾಗ. ಪ್ರತಿಸರ (ಪು.ನ)=ಕೈಗೆ



ಶುಕಾಹಿಕಪಿಭೇಕೇಷು ಹರಿರ್ನಾ ಕಪಿಲೇ ತ್ರಿಷು ।
ಶರ್ಕರಾ ಕರ್ಪರಾಂಶೇಽಪಿ ಯಾತ್ರಾ ಸ್ಯಾದ್ಯಾಪನೇ ಗತೌ ॥ ೧೩.೭೬
[1]ಇರಾ ಭೂವಾಕ್ಸುರಾಪ್ಸು ಸ್ಯಾತ್ ತಂದ್ರೀ ನಿದ್ರಾಪ್ರಮೀಲಯೋಃ ।
ಧಾತ್ರೀ ಸ್ಯಾದುಪಮಾತಾಪಿ ಕ್ಷಿತಿರಪ್ಯಾಮಲಕ್ಯಪಿ ॥ ೧೩.೭೭
ಕ್ಷುದ್ರಾ ವ್ಯಂಗಾ ನಟೀ ವೇಶ್ಯಾ ಸರಘಾ ಕಂಟಕಾರಿಕಾ ।
ತ್ರಿಷು ಕ್ರೂರೇಽಧಮೇಽಲ್ಪೇಽಪಿ ಕ್ಷುದ್ರಂ ಮಾತ್ರಾ ಪರಿಚ್ಛದೇ ॥ ೧೩.೭೮
ಅಲ್ಪೇ ಚ ಪರಿಮಾಣೇ ಸ್ಯಾನ್ಮಾತ್ರಂ ಕಾರ್ತ್ಸ್ನ್ಯೇಽವಧಾರಣೇ ।
ಆಲೇಖ್ಯಾಶ್ಚರ್ಯಯೋಶ್ಚಿತ್ರಂ ಕಲತ್ರಂ ಶ್ರೋಣಿಭಾರ್ಯಯೋಃ ॥ ೧೩.೭೯
ಯೋಗ್ಯಭಾಜನಯೋಃ ಪಾತ್ರಂ ಪತ್ರಂ ವಾಹನಪಕ್ಷಯೋಃ ।
ನಿದೇಶಗ್ರಂಥಯೋಃ ಶಾಸ್ತ್ರಂ ಶಸ್ತ್ರಮಾಯುಧಲೋಹಯೋಃ ॥ ೧೩.೮೦
ಸ್ಯಾಜ್ಜಟಾಂಶುಕಯೋರ್ನೇತ್ರಂ ಕ್ಷೇತ್ರಂ ಪತ್ನೀಶರೀರಯೋಃ ।
ಮುಖಾಗ್ರೇ ಕ್ರೋಡಹಲಯೋಃ ಪೋತ್ರಂ ಗೋತ್ರಂ ತು ನಾಮ್ನಿ ಚ ॥ ೧೩.೮೧

ಕಟ್ಟಿಕೊಳ್ಳುವ ದಾರ (ಕಂಕಣ). ಹರಿ (ಪು)=ಯಮ, ವಾಯು, ಇಂದ್ರ, ಚಂದ್ರ, ಸೂರ್ಯ, ವಿಷ್ಣು, ಸಿಂಹ,ಕಿರಣ, ಕುದುರೆ, ಗಿಳಿ, ಹಾವು, ಕಪಿ, ಕಪ್ಪೆ. ಹರಿ (ವಿ. ನಿಘ್ನ)=ಹೊಂಬಣ್ಣವುಳ್ಳ. ಶರ್ಕರಾ(ಸ್ತ್ರೀ)=ಗಡಿಗೆಯ ಚೂರು, (ಸಕ್ಕರೆ, ಕಲ್ಲುಹರಳು). ಯಾತ್ರಾ (ಸ್ತ್ರೀ)=ನಡೆಸುವುದು, ನಡೆಯುವುದು.

೧೩.೭೭. ಇರಾ (ಸ್ತ್ರೀ)=ಭೂಮಿ, ವಾಕ್ಕು, ಹೆಂಡ, ನೀರು. ತಂದ್ರೀ (ಸ್ತ್ರೀ)=ನಿದ್ರೆ, ಬಳಲಿಕೆ. ಧಾತ್ರೀ (ಸ್ತ್ರೀ)=ಸಾಕಿದ ತಾಯಿ, ಭೂಮಿ, ನೆಲ್ಲಿಗಿಡ.

೧೩.೭೮—೧೩.೭೯. ಕ್ಷುದ್ರಾ (ಸ್ತ್ರೀ)=ಅಂಗಹೀನಳು, ನಟಿ, ಸೂಳೆ, ಜೇನುಹುಳು, ಹೆಗ್ಗುಳ್ಳದ ಗಿಡ. ಕ್ಷುದ್ರ (ವಿ. ನಿಘ್ನ)= ಕ್ರೂರ, ಅಧಮ, ಅಲ್ಪ. ಮಾತ್ರಾ (ಸ್ತ್ರೀ)=ಪರಿವಾರ, ಸ್ವಲ್ಪ, ಪರಿಮಾಣ. ಮಾತ್ರ (ನ) (ಇದು ಯಾವುದಾದರೊಂದು ಶಬ್ದದ ಮುಂದೆ ಮಾತ್ರ ಇರುತ್ತದೆ)=ಸಕಲ. ಉದಾ:—ಮನುಷ್ಯಮಾತ್ರಂ ; ಅವಧಾರಣೆ. ಉದಾ:—ವಾಙ್ಮಾತ್ರೇಣ ಉಪಕುರು. ಚಿತ್ರ (ನ)=ಚಿತ್ರ, ಆಶ್ಚರ್ಯ. ಕಲತ್ರ (ನ)=ನಿತಂಬ, ಹೆಂಡತಿ.

೧೩.೮೦. ಪಾತ್ರ (ನ)=ಯೋಗ್ಯ, ಪಾತ್ರೆ. ಪತ್ರ (ನ)=ವಾಹನ, ರೆಕ್ಕೆ, ಎಲೆ. ಶಾಸ್ತ್ರ (ನ)=ಆಜ್ಞೆ, ಗ್ರಂಥ. ಶಸ್ತ್ರ (ನ)=ಆಯುಧ, ಕಬ್ಬಿಣ.

1 ಚಿನ್ನ ಎಂಬ ಅರ್ಥದಲ್ಲಿ ಇದು ನಪುಂಸಕವೆಂದು ಮೇದಿನೀ ಕೋಶಾದಿಗಳಿಂದ ತಿಳಿದುಬರುತ್ತದೆ.

ಸತ್ರಮಾಚ್ಛಾದನೇ ಯಜ್ಞೇ ಸದಾದಾನೇ ವನೇಽಪಿ ಚ ।
ಅಜಿರಂ ವಿಷಯೇ ಕಾಯೇಽಪ್ಯಂಬರಂ ವ್ಯೋಮ್ನಿ ವಾಸಸಿ ॥ ೧೩೮೨
ಚಕ್ರಂ ರಾಷ್ಟ್ರೇಽಪ್ಯಕ್ಷರಂ ತು ಮೋಕ್ಷೇಽಪಿ ಕ್ಷೀರಮಪ್ಸು ಚ ।
ಸ್ವರ್ಣೇಽಪಿ ಭೂರಿಚಂದ್ರೌ ದ್ವೌ ದ್ವಾರಮಾತ್ರೇಽಪಿ ಗೋಪುರಮ್ ॥ ೧೩೮೩
ಗುಹಾದಂಭೌ ಗಹ್ವರೇ ದ್ವೇ ರಹೋಂಽತಿಕಮುಪಹ್ವರೇ ।
ಪುರೋಽಧಿಕಮುಪರ್ಯಗ್ರಾಣ್ಯಗಾರೇ ನಗರೇ ಪುರಮ್ ॥ ೧೩೮೪
ಮಂದಿರಂ ಚಾಥ ರಾಷ್ಟ್ರೋಽಸ್ತ್ರೀ ವಿಷಯೇ ಸ್ಯಾದುಪದ್ರವೇ ।
ದರೋಽಸ್ತ್ರಿಯಾಂ ಭಯೇ ಶ್ವಭ್ರೇ ವಜ್ರೋಽಸ್ತ್ರೀ ಹೀರಕೇ ಪವೌ ॥ ೧೩೮೫
ತಂತ್ರಂ ಪ್ರಧಾನೇ ಸಿದ್ಧಾಂತೇ ಸೂತ್ರವಾಯೇ ಪರಿಚ್ಛದೇ ।
ಔಶೀರಂ ಚಾಮರೇ ದಂಡೇಽಪ್ಯೌಶೀರಂ ಶಯನಾಸನೇ ॥ ೧೩೮೬
ಪುಷ್ಕರಂ ಕರಿಹಸ್ತಾಗ್ರೇ ವಾದ್ಯಭಾಂಡಮುಖೇ ಜಲೇ ।
ವ್ಯೋಮ್ನಿ ಖಡ್ಗಫಲೇ ಪದ್ಮೇ ತೀರ್ಥೌಷಧಿವಿಶೇಷಯೋಃ ॥ ೧೩೮೭

---

೧೩೮೧. ನೇತ್ರ (ನ)=ಬಿಳಲು, ಬಟ್ಟೆ, (ಕಣ್ಣು). ಕ್ಷೇತ್ರ (ನ)=ಹೆಂಡತಿ, ಶರೀರ. ಪೋತ್ರ (ನ)=ಹಂದಿಯ ಮೂಗು, ನೇಗಿಲಿನ ಮೂಗು. ಗೋತ್ರ (ನ)=ಹೆಸರು, (ಕುಲ, (ಪು) ಬೆಟ್ಟ).

೧೩೮೨. ಸತ್ರ (ನ)=ಆಚ್ಛಾದನ, ಯಜ್ಞ, ಸದಾ ದಾನಮಾಡುವುದು, ಕಾಡು. ಅಜಿರ (ನ)=ಶಬ್ದಾದಿ ವಿಷಯ, ದೇಹ, (ಗಾಳಿ). ಅಂಬರ (ನ)=ಆಕಾಶ, ವಸ್ತ್ರ.

೧೩೮೩. ಚಕ್ರ (ನ)=ರಾಷ್ಟ್ರ, (ಗಾಲಿ). ಅಕ್ಷರ (ನ)=ಮೋಕ್ಷ, (ಅಕಾರ ಮುಂತಾದ ವರ್ಣ). ಕ್ಷೀರ (ನ)=ನೀರು, (ಹಾಲು). ಭೂರಿ[1] (ಪು)=ಚಿನ್ನ, (ಬ್ರಹ್ಮ, ವಿಷ್ಣು, ಶಿವ). ಭೂರಿ (ವಿ. ನಿಘ್ನ)=ಬಹಳ. ಚಂದ್ರ (ಪು)=ಚಿನ್ನ, (ಚಂದ್ರ, ಕರ್ಪೂರ). ಗೋಪುರ (ನ)=ಬಾಗಿಲು, ನಗರದ ದಿಡ್ಡಿಬಾಗಿಲು.

೧೩೮೪. ಗಹ್ವರ[1] (ನ)=ಗುಹೆ, ದಂಭ. ಉಪಹ್ವರ (ನ)=ಏಕಾಂತ, ಸಮೀಪ. ಅಗ್ರ (ನ)=ಎದುರು, ಅಧಿಕ, ಮೇಲ್ಗಡೆ. ಪುರ (ನ)=ಮನೆ, ಪಟ್ಟಣ.

೧೩೮೫. ಮಂದಿರ (ನ)=ಮನೆ, ಪಟ್ಟಣ. ರಾಷ್ಟ್ರ (ಪು.ನ)=ರಾಜ್ಯ, ಉಪದ್ರವ. ದರ (ಪು.ನ)=ಹೆದರಿಕೆ, ಬಿಲ. ವಜ್ರ (ಪು.ನ)=ವಜ್ರ, ವಜ್ರಾಯುಧ.

1 ಇದು ಪುಲ್ಲಿಂಗದಲ್ಲಿಯೂ ಉಂಟು.



ಅಂತರಮವಕಾಶಾವಧಿಪರಿಧಾನಾಂ ತರ್ಧಿಭೇದತಾದರ್ಥ್ಯೇ ।
ಛಿದ್ರಾತ್ಮೀಯವಿನಾಬಹಿರವಸರಮಧ್ಯೇಂಽತರಾತ್ಮನಿ ಚ ॥ ೧೩೮೮
ಘುಸ್ತೇಽಪಿ ಪಿಠರಂ ರಾಜಕಶೇರುಣ್ಯಪಿ ನಾಗರಮ್ ।
ಶಾರ್ವರಂತ್ವಂಧತಮಸೇ ಘಾತುಕೇ ಭೇದ್ಯಲಿಂಗಕಮ್ ॥ ೧೩೮೯
ಗೌರೋಽರುಣೇ ಸಿತೇ ಪೀತೇ ವ್ರಣಕಾರ್ಯಪ್ಯರುಷ್ಕರಃ ।
ಜಠರಃ ಕಠಿನೇಽಪಿ ಸ್ಯಾದಧಸ್ತಾದಪಿ ಚಾಧರಃ ॥ ೧೩೯೦
ಅನಾಕುಲೇಽಪಿ ಚೈಕಾಗ್ರೋ ವ್ಯಗ್ರೋ ವ್ಯಾಸಕ್ತ ಆಕುಲೇ ।
ಉಪರ್ಯುದೀಚ್ಯಶ್ರೇಷ್ಠೇಷ್ವಪ್ಯುತ್ತರಸ್ಸ್ಯಾದನುತ್ತರಃ ॥ ೧೩೯೧

---

೧೩೮೬. ತಂತ್ರ (ನ)=ಪ್ರಧಾನ, ಸಿದ್ಧಾಂತ, ನೆಯಿಗೆ—ನೇಯುವ ಮಗ್ಗ, ಪರಿವಾರ. ಔಶೀರ (ನ)=ಚಾಮರ, ಕೋಲು. ಔಶೀರ (ನ)=ಮಲಗುವುದು, ಪೀಠ—ಮಂಚ.

೧೩೮೭. ಪುಷ್ಕರ (ನ)=ಆನೆಸೊಂಡಿಲಿನ ತುದಿ, ಬಾರಿಸುವ ವಾದ್ಯಗಳ ಬಾಯಿ, ನೀರು, ಆಕಾಶ, ಕತ್ತಿಯ ಅಲಗು—ಕತ್ತಿಯ ಒರೆ, ಕಮಲ, ತೀರ್ಥ, ಮೂಲಿಕಾವಿಶೇಷ.

೧೩೮೮. ಅಂತರ (ನ)=ಅವಕಾಶ, ಅವಧಿ, ಉಡುವ ಬಟ್ಟೆ, ವ್ಯವಧಾನ, ಭೇದ, ತಾದರ್ಥ್ಯ (on account of) ; (ಉದಾ:— 'ಅವ್ಯೆಮಿಕಾರ್ಯಾಂತರ ಮಾನುಷ್ಯಸ್ಯ' —ರಘು.) ರಂಧ್ರ, ತನ್ನದು (ಉದಾ:—'ನ ಚೈತದಿಷ್ಟಂ ಮಾತಾ ಮೇ ಯದವೋಚನ್ಮದಂತರಮ್' ರಾಮಾ.), ಹೊರತು (—ಅಂತರೇಣ, ಉದಾ:—ಕೃಷ್ಣಮಂತರೇಣ ನ ಸುಖಮ್), ಹೊರಗಡೆ, ಉದಾ:—ಅಂತರೇ ಗೃಹಾಃ, ಸಮಯ (ಉದಾ : ಅತ್ರಾಂತರೇ), ನಡುವೆ, ಪರಮಾತ್ಮ.

೧೩೮೯. ಪಿಠರ (ನ)=ತುಂಗೆಗೆಡ್ಡೆ, (ಮಡಕೆ). ನಾಗರ (ನ)=ಒಂದು ಜಾತಿಯ ಗೆಡ್ಡೆ, (ಶುಂಠಿ). ಶಾರ್ವರ (ನ)=ಕಗ್ಗತ್ತಲೆ. ಶಾರ್ವರ (ವಿ. ನಿಘ್ನ)=ಘಾತುಕ.

೧೩೯೦. ಗೌರ[1] (ವಿ. ನಿಘ್ನ—ಸ್ತ್ರೀ. ಗೌರೀ)= ಕೆಂಪಾದ, ಬಿಳುಪಾದ, ಹಳದಿಯಾದ. ಆರುಷ್ಕರ (ಪು)=ಗಾಯವನ್ನು ಮಾಡುವ, ಗೇರು (Marking Nut). ಜಠರ (ಪು)=ಕಠಿಣವಾದ, (ಹೊಟ್ಟೆ). ಅಧರ (ಪು)=ಕೆಳಗಿರುವ, (ಕೆಳದುಟಿ).

೧೩೯೧—೧೩೯೨. ಏಕಾಗ್ರ (ಪು)=ಕದಲದಿರುವ, (ಸಾವಧಾನ). ವ್ಯಗ್ರ (ಪು)=ವ್ಯಾಕುಲ,

1 ಮೂಲದಲ್ಲಿ ಪುಲ್ಲಿಂಗವಾಗಿ ಪ್ರಯೋಗಿಸಿದ್ದರೂ ಇದು ವಿ. ನಿಘ್ನವೇ. ಅರುಷ್ಕರ ಎಂಬುದೂ ಹಾಗೆಯೇ :— ಸ್ತ್ರೀ. ಅರುಷ್ಕರೀ. (ಗೇರು ಎಂಬ ಅರ್ಥದಲ್ಲಿ ಪುಲ್ಲಿಂಗ). ಇದೇ ರೀತಿಯಲ್ಲಿ ವಿಶೇಷಣ ರೂಪವಾದ ಶಬ್ದಗಳು ವಿ. ನಿಘ್ನಗಳಾಗಿ ತ್ರಿಲಿಂಗಗಳಾಗುತ್ತವೆ.

ವಿಷಾಂ ವಿಪರ್ಯಯೇ ಶ್ರೇಷ್ಠೇ ದೂರಾನಾತ್ಮೋತ್ತಮಾಃ ಪರಾಃ ।
ಸ್ವಾದುಪ್ರಿಯೌ ಚ ಮಧುರೌ ಕ್ರೂರೌ ಕಠಿನನಿರ್ದಯೌ ॥ ೧೩೯೨

ಉದಾರೋ ದಾತೃಮಹತೋರಿತರಸ್ತ್ವನ್ಯನೀಚಯೋಃ ।
ಮಂದಸ್ವಚ್ಛಂದಯೋಃ ಸ್ವೈರಶ್ಶುಭ್ರಮುದ್ದೀಪ್ತಶುಕ್ಲಯೋಃ ॥ ೧೩೯೩

ಇತಿ ರಾಂತಾಃ

ಚೂಡಾ ಕಿರೀಟಂ ಕೇಶಾಶ್ಚ ಸಂಯತಾ ಮೌಲಯಸ್ತ್ರಯಃ ।
ದ್ರುಮಪ್ರಭೇದಮಾತಂಗಕಾಂಡ ಪುಷ್ಪಾಣಿ ಪೀಲವಃ ॥ ೧೩೯೪

ಕೃತಾಂತಾನೇಹಸೋಃ ಕಾಲಶ್ಚತುರ್ಥೇಽಪಿ ಯುಗೇ ಕಲಿಃ ।
ಸ್ಯಾತ್ಕುರಂಗೇಽಪಿ ಕಮಲಃ ಪ್ರಾವಾರೇಽಪಿ ಚ ಕಂಬಲಃ ॥ ೧೩೯೫

ಕರೋಪಹಾರಯೋಃ ಪುಂಸಿ ಬಲಿಃ ಪ್ರಾಣ್ಯಂಗಜೇ ಸ್ತ್ರಿಯಾಮ್ ।
ಸ್ಥೌಲ್ಯಸಾಮರ್ಥ್ಯಸೈನ್ಯೇಷು ಬಲಂ ನಾ ಕಾಕಸೀರಿಣೋಃ ॥ ೧೩೯೬

(ತ್ವರೆಪಡುವ). ಉತ್ತರ (ಪು)=ಮೇಲಿರುವ, ಉತ್ತರದಿಕ್ಕಿನ, ಶ್ರೇಷ್ಠ. ಅನುತ್ತರ (ಪು)=ಕೆಳಗಿರುವ, ಉತ್ತರದಿಕ್ಕಿಗೆ ಸೇರದ, ಶ್ರೇಷ್ಠವಲ್ಲದ. ಪರ (ಪು)=ದೂರ, ಅನ್ಯ, ಉತ್ತಮ. ಮಧುರ (ಪು)=ರುಚಿಕರ, ಪ್ರಿಯ. ಕ್ರೂರ (ಪು)=ಕಠಿನ, ದಯಾಹೀನ.

೧೩೯೩. ಉದಾರ (ಪು)=ದಾನಿ, ದೊಡ್ಡದು. ಇತರ (ಪು)=ಅನ್ಯ, ನೀಚ. ಸ್ವೈರ (ಪು)=ಸೋಮಾರಿ, ಸ್ವೇಚ್ಛೆಯಿಂದ ನಡೆಯುವ. ಶುಭ್ರ (ಪು)=ಬೆಳಗುವ, ಬಿಳುಪಾದ.

## ಲಾಂತಗಳು

೧೩೯೪. ಮೌಲಿ (ಪು)=ಜುಟ್ಟು, ಲಾಂತಗಳು ಕಿರೀಟ, ಜಟೆ. ಪೀಲು (ಪು)=ಒಂದು ಜಾತಿಯ ಗಿಡ, ಆನೆ, ಬಾಣ, ಹೂ (ಪರಮಾಣು).

೧೩೯೫. ಕಾಲ (ಪು)=ಯಮ, ಸಮಯ, ಕಲಿ (ಪು)=ನಾಲ್ಕನೆಯ ಯುಗ, (ಜಗಳ) ಕಮಲ, (ಪು)=ಜಿಂಕೆ. (ಕಮಲ (ನ)=ನೀರು, ತಾವರೆ). ಕಂಬಲ (ಪು)=ಕಂಬಳಿ, (ಅಂಗವಸ್ತ್ರ).

೧೩೯೬. ಬಲಿ (ಪು)=ಕಪ್ಪ (ಕಂದಾಯ), ಪೂಜಾಸಾಮಗ್ರಿ. ಬಲಿ (ವಲಿ) (ಸ್ತ್ರೀ)=ಚರ್ಮದ ಸುಕ್ಕು. ಬಲ (ನ)=ದಪ್ಪವಾಗಿರುವಿಕೆ, ಶೌರ್ಯ, ಸೈನ್ಯ. ಬಲ (ಪು)=ಕಾಗೆ, ಬಲರಾಮ.

[1] ಇದು ಸ್ತ್ರೀಲಿಂಗದಲ್ಲಿ ವ್ಯಾಲೀ ಎಂದು ಈಕಾರಾಂತವಾಗಿರುತ್ತದೆ.



ವಾತೂಲಃ ಪುಂಸಿ ವಾತ್ಯಾಯಾಮಪಿ ವಾತಾಸಹೇ ತ್ರಿಷು ।
ಭೇದ್ಯಲಿಂಗಶ್ಶಠೇ ವ್ಯಾಲಃ ಪುಂಸಿ ಶ್ವಾಪದಸರ್ಪಯೋಃ ॥ ೧೩೯೭

ಮಲೋಽಸ್ತ್ರೀ ಪಾಪವಿಟ್ಕಿಟ್ಟಾನ್ಯಸ್ತ್ರೀ ಶೂಲಂ ರುಗಾಯುಧಮ್ ।
ಶಂಕಾವಪಿ ದ್ವಯೋಃ ಕೀಲಃ ಪಾಲಿಃ ಸ್ತ್ರ್ಯಶ್ರ್ಯಂಕಪಂಕ್ತಿಷು ॥ ೧೩೯೮

ಕಲಾ ಶಿಲ್ಪೇ ಕಾಲಭೇದೇಽಪ್ಯಾಲೀ ಸಖ್ಯಾವಲೀ ಅಪಿ ।
ಅಬ್ಧ್ಯಂಬುವಿಕೃತೌ ವೇಲಾ ಕಾಲಮರ್ಯಾದಯೋರಪಿ ॥ ೧೩೯೯

ಬಹುಲಾಃ ಕೃತ್ತಿಕಾ ಗಾವೋ ಬಹುಲೋಽಗ್ನೌ ಶಿತೌ ತ್ರಿಷು ।
ಲೀಲಾ ವಿಲಾಸಕ್ರಿಯಯೋರುಪಲಾ ಶರ್ಕರಾಪಿ ಚ ॥ ೧೪೦೦

ಶೋಣಿತೇಽಂಭಸಿ ಕೀಲಾಲಂ ಮೂಲಮಾದ್ಯೇ ಶಿಫಾಭಯೋಃ ।
ಜಾಲಂ ಸಮೂಹ ಆನಾಯೋ ಗವಾಕ್ಷಕ್ಷಾರಕಾವಪಿ ॥ ೧೪೦೧

ಶೀಲಂ ಸ್ವಭಾವೇ ಸದ್ವೃತ್ತೇ ಸಸ್ಯೇ ಹೇತುಕೃತೇ ಫಲಮ್ ।
ಛದಿರ್ನೇತ್ರರುಜೋಃ ಕ್ಲೀಬಂ ಸಮೂಹೇ ಪಟಲಂ ನ ನಾ ॥ ೧೪೦೨

೧೩೯೭. ವಾತೂಲ (ಪು)=ಬಿರುಗಾಳಿ. ವಾತೂಲ (ವಿ. ನಿಘ್ನ)=ಗಾಳಿಯನ್ನು ಸಹಿಸಲಾರದ. ವ್ಯಾಲ (ವಿ. ನಿಘ್ನ)=ದುಷ್ಟ. ವ್ಯಾಲ[1] (ಪು)=ಕ್ರೂರಮೃಗ, ಸರ್ಪ, (ದುಷ್ಟಗಜ).

೧೩೯೮. ಮಲ (ಪು.ನ)=ಪಾಪ, ಅಮೇಧ್ಯ, ಕಿಟ್ಟ (ಗಸಿ). ಶೂಲ (ಪು. ನ)=ಒಂದು ರೋಗ, ಒಂದು ಆಯುಧ. ಕೀಲ (ಪು. ಸ್ತ್ರೀ)=ಗೂಟ, (ಜ್ವಾಲೆ). ಪಾಲಿ (ಸ್ತ್ರೀ)=ಅಂಚು, ಚಿಹ್ನೆ, ಸಾಲು.

೧೩೯೯. ಕಲಾ (ಸ್ತ್ರೀ)=ಶಿಲ್ಪ (ಕೈಗೆಲಸ), ಕಾಲವಿಶೇಷ, (ಒಂದು ವಸ್ತುವಿನ ಹದಿನಾರನೆ ಒಂದು ಭಾಗ.) ಆಲೀ (ಸ್ತ್ರೀ)=ಸಖಿ, ಸಾಲು, (ರೇಖೆ, ಸೇತುವೆ). ವೇಲಾ (ಸ್ತ್ರೀ)=ಸಮುದ್ರದ ನೀರು ಉಕ್ಕುವುದು, ಕಾಲ, ಎಲ್ಲೆ.

೧೪೦೦. ಬಹುಲಾ (ಸ್ತ್ರೀ)=ಕೃತ್ತಿಕಾನಕ್ಷತ್ರ, ಹಸು. ಬಹುಲ (ಪು)=ಅಗ್ನಿ. ಬಹುಲ (ವಿ. ನಿಘ್ನ)=ಕಪ್ಪಾದ. ಲೀಲಾ (ಸ್ತ್ರೀ)=ವಿಲಾಸ, ಕ್ರಿಯೆ. ಉಪಲಾ (ಸ್ತ್ರೀ)=ಕಲ್ಲುಹರಳು, (ಕಲ್ಲುಸಕ್ಕರೆ).

೧೪೦೧. ಕೀಲಾಲ (ನ)=ರಕ್ತ, ನೀರು. ಮೂಲ (ನ)=ಮೊದಲನೆಯದು, ಬಿಳಿಲು, ಒಂದು ನಕ್ಷತ್ರ, (ಬೇರು). ಜಾಲ (ನ)=ಸಮೂಹ, ಬಲೆ, ಕಿಟಕಿ, ಮೊಗ್ಗು.

೧೪೦೨. ಶೀಲ (ನ)=ಸ್ವಭಾವ, ಒಳ್ಳೆಯ ನಡತೆ. ಫಲ (ನ)=ಹಣ್ಣು ಅಥವಾ ಧಾನ್ಯಾದಿ

ಅಧಸ್ಸ್ವರೂಪಯೋರಸ್ತ್ರೀ ತಲಂ ಸ್ಯಾಚ್ಚಾಮಿಷೇ ಪಲಮ್ ।
ಔರ್ವಾನಲೇಽಪಿ ಪಾತಾಲಂ ಚೇಲಂ ವಸ್ತ್ರೇಽಧಮೇ ತ್ರಿಷು ॥ ೧೪೦೩
ಕುಕೂಲಂ ಶಂಕುಭಿಃ ಕೀರ್ಣೇ ಶ್ವಭ್ರೇ ನಾ ತು ತುಷಾನಲೇ ।
ನಿರ್ಣೀತೇ ಕೇವಲಮಿತಿ ತ್ರಿಲಿಂಗಂ ತ್ವೇಕಕೃತ್ಸ್ನಯೋಃ ॥ ೧೪೦೪
ಪರ್ಯಾಪ್ತಿಕ್ಷೇಮಪುಣ್ಯೇಷು ಕುಶಲಂ ಶಿಕ್ಷಿತೇ ತ್ರಿಷು ।
ಪ್ರವಾಲಮಂಕುರೇಽಪ್ಯಸ್ತ್ರೀ ತ್ರಿಷು ಸ್ಥೂಲಂ ಜಡೇಽಪಿ ಚ ॥ ೧೪೦೫
ಕರಾಲೋ ದಂತುರೇ ತುಂಗೇ ಚಾರೌ ದಕ್ಷೇ ಚ ಪೇಶಲಃ ।
ಮೂರ್ಖೇಽರ್ಭಕೇಽಪಿ ಬಾಲಸ್ಸ್ಯಾಲ್ಲೋಲಶ್ಚಲಸತೃಷ್ಣಯೋಃ ॥ ೧೪೦೬

ಇತಿ ಲಾಂತಾಃ

(A Produce), ಕಾರಣದಿಂದ ಜನಿಸಿದ್ದು. ಪಟಲ (ನ)=ಮನೆಹೊದಿಕೆ (ಚಾವಣಿ), ಕಣ್ಣುಪರೆಯೆಂಬ ರೋಗ. ಪಟಲ, (ನ. ಸ್ತ್ರೀ—ಪಟಲೀ)=ಸಮೂಹ.

೧೪೦೩. ತಲ (ನ)=ಕೆಳಭಾಗ, ಸ್ವರೂಪ (ಮೇಲ್ಮೈ). ಉದಾ— 'ಪರಿತಃ ಪರಿಪ್ಲುತತಲಾಂ ತರುಭಿಃ' ಕಿರಾ. ೬—೧೭. ಪಲ (ನ)=ಮಾಂಸ, (ಒಂದು ತೂಕ). ಪಾತಾಲ (ನ)=ಬಡಬಾಗ್ನಿ, (ಪಾತಾಳ). ಚೇಲ (ನ)=ಬಟ್ಟೆ. ಚೇಲ (ವಿ. ನಿಘ್ನ)=ಕೀಳಾದ.

೧೪೦೪. ಕುಕೂಲ (ನ)=ಸುತ್ತಲೂ ಗೂಟಗಳನ್ನು ನೆಟ್ಟಿರುವ ಗುಳಿ. ಕುಕೂಲ (ಪು)=ಹೊಟ್ಟಿನಲ್ಲಿ ಹಾಕಿದ ಬೆಂಕಿ. ಕೇವಲ (ನ)=ನಿರ್ಣಯ (ಅವಧಾರಣೆ.) ಉದಾ:— 'ಕ್ರಿಯಾ ಕೇವಲಮುತ್ತರಮ್' ಮಾಘ. ೨—೨೨. ಕೇವಲ (ವಿ. ನಿಘ್ನ)=ಒಂದು (ಒಂಟಿ), ಸಮಸ್ತ, ಉದಾ— 'ಕೇನ ಕೇವಲಃ ಪುರಾಣಮೂರ್ತೇರ್ಮಹಿಮಾವಗಮ್ಯತೇ' —ಮಾಘ. ೧—೩೫.

೧೪೦೫. ಕುಶಲ (ನ)=ಸಾಮರ್ಥ್ಯ, ಕ್ಷೇಮ, ಪುಣ್ಯ. ಕುಶಲ (ವಿ. ನಿಘ್ನ)=ಜಾಣ. ಪ್ರವಾಲ (ಪು.ನ)=ಮೊಳಕೆ, (ಚಿಗುರು, ಹವಳ),ಪ್ರವಾಲ (ವಿ. ನಿಘ್ನ)=ದಪ್ಪವಾದ, ಬುದ್ಧಿಯಿಲ್ಲದ.

೧೪೦೬. ಕರಾಲ (ಪು)=ಹಲ್ಲುಬ್ಬಿದ, ಎತ್ತರವಾದ, (ಭೀಕರವಾದ). ಪೇಶಲ (ಪು)= ಸುಂದರ, ದಕ್ಷ. ಬಾಲ (ಪು)=ಮೂರ್ಖ, ಹುಡುಗ. ಲೋಲ (ಪು)=ಚಂಚಲ, ಆಸೆಯುಳ್ಳವ.



ದವದಾವೌ ವನಾರಣ್ಯವಹ್ನೀ ಜನ್ಮಹರೌ ಭವೌ ।
ಮಂತ್ರೀ ಸಹಾಯಸ್ಸಚಿವೌ ಪತಿಶಾಖಿನರಾ ಧವಾಃ ॥ ೧೪೦೭
ಅವಯಶ್ಶೈಲಮೇಷಾರ್ಕಾ ಆಜ್ಞಾಹ್ವಾನಾಧ್ವರಾ ಹವಾಃ ।
ಭಾವಸ್ಸತ್ತಾಸ್ವಭಾವಾಭಿಪ್ರಾಯಚೇಷ್ಟಾತ್ಮಜನ್ಮಸು ॥ ೧೪೦೮
ಸ್ಯಾದುತ್ಪಾದೇ ಫಲೇ ಪುಷ್ಪೇ ಪ್ರಸವೋ ಗರ್ಭಮೋಚನೇ ।
ಅವಿಶ್ವಾಸೇಽಪಹ್ನವೇಽಪಿ ನಿಕೃತಾವಪಿ ನಿಹ್ನವಃ ॥ ೧೪೦೯
ಉತ್ಸೇಕಾಮರ್ಷಯೋರಿಚ್ಛಾಪ್ರಸವೇ ಮಹ ಉತ್ಸವಃ ।
ಅನುಭಾವಃ ಪ್ರಭಾವೇ ಚ ಸತಾಂ ಚ ಮತಿನಿಶ್ಚಯೇ ॥ ೧೪೧೦
ಸ್ಯಾಜ್ಜನ್ಮಹೇತುಃ ಪ್ರಭವಃ ಸ್ಥಾನಂ ಚಾದ್ಯೋಪಲಬ್ಧಯೇ ।
ಶೂದ್ರಾಯಾಂ ವಿಪ್ರತನಯೇ ಶಸ್ತ್ರೇ ಪಾರಶವೋ ಮತಃ ॥ ೧೪೧೧
ಧ್ರುವೋ ಭಭೇದೇ ಕ್ಲೀಬಂ ತು ನಿಶ್ಚಿತೇ ಶಾಶ್ವತೇ ತ್ರಿಷು ।
ಸ್ವೋ ಜ್ಞಾತಾವಾತ್ಮನಿ ಸ್ವಂತ್ರಿಸ್ತ್ವಾತ್ಮೀಯೇ ಸ್ವೋಽಸ್ತ್ರಿಯಾಂ ಧನೇ ॥ ೧೪೧೨

## ವಾಂತಗಳು

೧೪೦೭. ದವ, ದಾವ (ಪು)=ಅಡವಿ, ಕಾಳ್ಗಿಚ್ಚು. ಭವ (ನ)=ಹುಟ್ಟು, ಶಿವ. ಸಚಿವ (ಪು)=ಮಂತ್ರಿ, ಸಹಾಯಕ, ಧವ (ಪು)=ಗಂಡ, ಒಂದು ಮರ, ಗಂಡಸು.

೧೪೦೮. ಅವಿ (ಪು)=ಬೆಟ್ಟ, ಕುರಿ, ಸೂರ್ಯ. ಹವ (ಪು)=ಆಜ್ಞೆ, ಆಹ್ವಾನ, ಯಾಗ. ಭಾವ (ಪು)=ಇರುವಿಕೆ, ಸ್ವಭಾವ, ಅಭಿಪ್ರಾಯ, ಚೇಷ್ಟೆ, ಆತ್ಮ, ಉತ್ಪತ್ತಿ.

೧೪೦೯. ಪ್ರಸವ (ಪು)=ಉತ್ಪತ್ತಿ, ಹಣ್ಣು, ಹೂ, ಹಡೆಯುವುದು. ನಿಹ್ನವ (ಪು)= ಅವಿಶ್ವಾಸ, ಅಲ್ಲಗಳೆಯುವುದು, ತಿರಸ್ಕಾರ.

೧೪೧೦. ಉತ್ಸವ (ಪು)=ಉದ್ರೇಕ, ಕೋಪ, ಇಚ್ಛೆಯ ಉದಯ, ಹಬ್ಬ. ಅನುಭಾವ (ಪು)=ಪ್ರಭಾವ, ಸಜ್ಜನರ ನಿಶ್ಚಯ.

೧೪೧೧. ಪ್ರಭವ (ಪು)=ಜನನಕಾರಣ, ಮೊದಲು ಉಪಲಬ್ಧವಾಗುವ ಸ್ಥಳ. ಉದಾ:— ಹಿಮವಾನ್ ಗಂಗಾಯಾಃ ಪ್ರಭವಃ. ಪಾರಶವ (ಪು)=ಶೂದ್ರಸ್ತ್ರೀಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವನು, ಕೊಡಲಿ.

೧೪೧೨. ಧ್ರುವ (ಪು)=ಒಂದು ನಕ್ಷತ್ರ. ಧ್ರುವ (ನ)=ನಿಶ್ಚಯವಾದದ್ದು. ಧ್ರುವ (ವಿ. ನಿಘ್ನ)=ಶಾಶ್ವತ. ಸ್ವ (ಪು)=ಬಂಧು, ತಾನು. ಸ್ವ(ವಿ. ನಿಘ್ನ)=ತನ್ನದು. ಸ್ವ (ಪು.ನ)=ಹಣ.

ಸ್ತ್ರೀಕಟೀವಸ್ತ್ರಬಂಧೇಽಪಿ ನೀವೀ ಪರಿಪಣೇಽಪಿ ಚ ।
ಶಿವಾ ಗೌರೀಫೇರವಯೋರ್ದ್ವಂದ್ವಂ ಕಲಹಯುಗ್ಮಯೋಃ ॥ ೧೪೧೩
ದ್ರವ್ಯಾಸುವ್ಯವಸಾಯೇಷು ಸತ್ತ್ವಮಸ್ತ್ರೀ ತು ಜಂತುಷು ।
ಕ್ಲೀಬಂ ನಪುಂಸಕೇ ಷಂಡೇ ವಾಚ್ಯಲಿಂಗಮವಿಕ್ರಮೇ ॥ ೧೪೧೪

ಇತಿ ವಾಂತಾಃ

ದ್ವೌ ವಿಶೌ ವೈಶ್ಯಮನುಜೌ ದ್ವೌ ಚಾರಾಭಿಮರೌ ಸ್ಪಶೌ ।
ದ್ವೌರಾಶೀ ಪುಂಜಮೇಷಾದ್ಯೌ ದ್ವೌ ವಂಶೌ ಕುಲಮಸ್ಕರೌ ॥ ೧೪೧೫
ರಹಃಪ್ರಕಾಶೌ ವೀಕಾಶೌ ನಿರ್ವೇಶೋ ಭೃತಿಭೋಗಯೋಃ ।
ಕೃತಾಂತೇ ಪುಂಸಿ ಕೀನಾಶಃ ಕ್ಷುದ್ರಕರ್ಷಕಯೋಸ್ತ್ರಿಷು ॥ ೧೪೧೬
ಪದೇ ಲಕ್ಷ್ಯೇ ನಿಮಿತ್ತೇಽಪದೇಶಸ್ಸ್ಯಾತ್ ಕುಶಮಪ್ಸು ಚ ।
ದಶಾವಸ್ಥಾನೇಕವಿಧಾಪ್ಯಾಶಾ ತೃಷ್ಣಾಪಿ ಚಾಯತಾ ॥ ೧೪೧೭

---

೧೪೧೩. ನೀವೀ (ಸ್ತ್ರೀ)=ಹೆಂಗಸರು ಉಟ್ಟಿರುವ ಸೀರೆಯ ಗಂಟು. ಜೂಜಿನಲ್ಲಿ ಪಂದ್ಯವಾಗಿಟ್ಟಿರುವ ವಸ್ತು. ಶಿವಾ (ಸ್ತ್ರೀ)=ಪಾರ್ವತಿ, ನರಿ. ದ್ವಂದ್ವ (ನ)=ಜಗಳ, ಜೊತೆ.

೧೪೧೪. ಸತ್ತ್ವ (ನ)=ದ್ರವ್ಯ, ಪ್ರಾಣ, ಉದ್ಯೋಗ. ಸತ್ತ್ವ (ಪು.ನ)=ಪ್ರಾಣಿ. ಕ್ಲೀಬ (ಕ್ಲೀವ) (ನ)=ನಪುಂಸಕ, ಕ್ಲೀಬ (ವಿ. ನಿಘ್ನ)=ಹೇಡಿ.

## ಶಾಂತಗಳು

೧೪೧೫. ವಿಶ್ (ಪು)=ವೈಶ್ಯ, ಮನುಷ್ಯ. ಸ್ಪಶ (ಪು)=ಗೂಢಚಾರ, ಯುದ್ಧ. ರಾಶಿ (ಪು)=ಸಮೂಹ, ಮೇಷಾದಿ ರಾಶಿ. ವಂಶ (ಪು)=ಕುಲ, ಬಿದಿರು.

೧೪೧೬. ವೀಕಾಶ (ಪು)=ಏಕಾಂತಸ್ಥಳ, ಪ್ರಕಾಶವಾದ. ನಿರ್ವೇಶ (ಪು)=ಸಂಬಳ, ಭೋಗ. ಕೀನಾಶ (ಪು)=ಯಮ. ಕೀನಾಶ (ವಿ. ನಿಘ್ನ)=ನೀಚ, ಕೃಷೀವಲ.

೧೪೧೭. ಅಪದೇಶ (ಪು)=ಸ್ಥಾನ, ಗುರಿ, ನಿಮಿತ್ತ (ನೆವ). ಕುಶ (ನ)=ನೀರು, ( ಕುಶ (ಪು)=ದರ್ಭೆ). ದಶಾ (ಸ್ತ್ರೀ)=ನಾನಾಬಗೆಯ ಪರಿಸ್ಥಿತಿ, (ಬತ್ತಿ, ಬಟ್ಟೆಯ ಅಂಚು). ಆಶಾ (ಸ್ತ್ರೀ)=ಆಸೆ, (ದಿಕ್ಕು).



ವಶಾ ಸ್ತ್ರೀ ಕರಿಣೀ ಚ ಸ್ಯಾದ್ದೃಗ್ಜ್ಞಾನೇ ಜ್ಞಾತರಿ ತ್ರಿಷು ।
ಸ್ಯಾತ್ ಕರ್ಕಶಸ್ಸಾಹಸಿಕಃ ಕಠೋರಮಸೃಣಾವಪಿ ॥ ೧೪೧೮
ಪ್ರಕಾಶೋಽತಿಪ್ರಸಿದ್ಧೇಽಪಿ ಶಿಶಾವಜ್ಞೇ ಚ ಬಾಲಿಶಃ ।
ಕೋಶೋಽಸ್ತ್ರೀ ಕುಡ್ಮಲೇ ಖಡ್ಗಪಿಧಾನೇಽರ್ಥೌಘದಿವ್ಯಯೋಃ ॥ ೧೪೧೯

ಇತಿ ಶಾಂತಾಃ

ಸುರಮತ್ಸ್ಯಾವನಿಮಿಷೌ ಪುರುಷಾವಾತ್ಮಮಾನವೌ ।
ಕಾಕಮತ್ಸ್ಯಾತ್ಪಗೌ ಧ್ವಾಂಕ್ಷೌ ಕಕ್ಷೌ ತು ತೃಣವೀರುಧೌ ॥ ೧೪೨೦
ಅಭೀಷುಃ ಪ್ರಗ್ರಹೇ ರಶ್ಮೌ ಪ್ರೈಷಃ ಪ್ರೇಷಣಮರ್ದನೇ ।
ಪಕ್ಷಸ್ಸಹಾಯೇಽಪ್ಯುಷ್ಣೀಷಂ ಶಿರೋವೇಷ್ಟಕಿರೀಟಯೋಃ ॥ ೧೪೨೧
ಶುಕ್ರಲೇ ಮೂಷಿಕೇ ಶ್ರೇಷ್ಠೇ ಸುಕೃತೇ ವೃಷಭೇ ವೃಷಃ ।
ದ್ಯೂತೇಽಕ್ಷೇ ಶಾರಿಫಲಕೇಽಪ್ಯಾಕರ್ಷೋಽಥಾಕ್ಷಮಿಂದ್ರಿಯೇ ॥ ೧೪೨೨
ನಾ ದ್ಯೂತಾಂಗೇ ಕರ್ಷೇ ಚಕ್ರೇ ವ್ಯವಹಾರೇ ಕಲಿದ್ರುಮೇ ।

---

೧೪೧೮. ವಶಾ (ಸ್ತ್ರೀ)=ಹೆಂಗಸು, ಹೆಣ್ಣಾನೆ, (ಹಸು, ಬಂಜೆ). ದೃಶ್ (ಸ್ತ್ರೀ)=ಜ್ಞಾನ. ದೃಶ್ (ವಿ. ನಿಘ್ನ)=ತಿಳಿಯುವವನು, (ನೋಡುವವನು). ಕರ್ಕಶ (ಪು)=ಸಾಹಸಿ, ಕ್ರೂರ, ಒರಟು.

೧೪೧೯. ಪ್ರಕಾಶ (ಪು)=ವಿಖ್ಯಾತ, (ಬಿಸಿಲು). ಬಾಲಿಶ (ಪು)=ಶಿಶು, ಮೂಢ. ಕೋಶ (ಪು.ನ)=ಮೊಗ್ಗು, ಒರೆ, ಬೊಕ್ಕಸ, ದಿವ್ಯವಾದ ಆನಂದಮಯಾದಿ ಕೋಶ.

## ಷಾಂತಗಳು

೧೪೨೦. ಅನಿಮಿಷ (ಪು)=ದೇವತೆ, ಮೀನು. ಪುರುಷ (ಪು)=ಆತ್ಮ, ಮನುಷ್ಯ. ಧ್ವಾಂಕ್ಷ (ಪು)=ಕಾಗೆ, ಮೀನನ್ನು ತಿನ್ನುವ ಪಕ್ಷಿ (ಬಕಪಕ್ಷಿ), ಕಕ್ಷ (ಪು)=ಒಣಹುಲ್ಲು, ಬಳ್ಳಿ, (ಪೊದೆ).

೧೪೨೧. ಅಭೀಷು (ಪು)=ಹಗ್ಗ, ಕಿರಣ. ಪ್ರೈಷ (ಪು)=ಕಳಿಸುವುದು, ಮರ್ದನ. ಪಕ್ಷ (ಪು)=ಸಹಾಯಕ, (ರೆಕ್ಕೆ). ಉಷ್ಣೀಷ (ನ)=ರುಮಾಲು, ಕಿರೀಟ.

೧೪೨೨—೧೪೨೩. ವೃಷ (ಪು)=ವೀರ್ಯವರ್ಧಕ, ಇಲಿ, ಶ್ರೇಷ್ಠ, ಪುಣ್ಯ, ಎತ್ತು. ಆಕರ್ಷ (ಪು)=ಜೂಜು, ಪಗಡೆದಾಳ, ಜೂಜಾಡುವ ಹಲಗೆ. ಅಕ್ಷ (ನ)=ಇಂದ್ರಿಯ. ಅಕ್ಷ (ಪು)=ಪಗಡೆದಾಳ, ಒಂದು ತೂಕ, ರಥದ ಗಾಲಿ, ಆಯವ್ಯಯಗಳ ವ್ಯವಹಾರ, ತಾರೆಮರ, (ರಥಧ ಅಚ್ಚು). ಕರ್ಷೂ (ಸ್ತ್ರೀ)=ಜೀವಿಕೆ, ಬೆರಣಿಯ ಬೆಂಕಿ, ಹೊಳೆ (ಕಾಲುವೆ).

ಕರ್ಷೂರ್ವಾರ್ತಾ ಕರೀಷಾಗ್ನಿಃ ಕರ್ಷೂಃ ಕುಲ್ಯಾಭಿಧಾಯಿನೀ ॥ ೧೪೨೩
ಪುಂಭಾವೇ ತತ್ಕ್ರಿಯಾಯಾಂ ಚ ಪೌರುಷಂ ವಿಷಮಪ್ಸು ಚ ।
ಉಪಾದಾನೇಽಪ್ಯಾಮಿಷಂ ಸ್ಯಾದಪರಾಧೇಽಪಿ ಕಿಲ್ಬಿಷಮ್ ॥ ೧೪೨೪
ಸ್ಯಾದ್ವೃಷ್ಟೌ ಲೋಕಧಾತ್ವಂಶೇ ವತ್ಸರೇ ವರ್ಷಮಸ್ತ್ರಿಯಾಮ್ ।
ಪ್ರೇಕ್ಷಾ ನೃತ್ಯೇಕ್ಷಣಂ ಪ್ರಜ್ಞಾ ಭಿಕ್ಷಾ ಸೇವಾರ್ಥನಾ ಭೃತಿಃ ॥ ೧೪೨೫
ತ್ವಿಟ್ಶೋಭಾಪಿ ತ್ರಿಷು ಪರೇ ನ್ಯಕ್ಷಂ ಕಾರ್ತ್ಸ್ನ್ಯನಿಕೃಷ್ಟಯೋಃ ।
ಪ್ರತ್ಯಕ್ಷೇಽಧಿಕೃತೇಽಧ್ಯಕ್ಷೋ ರೂಕ್ಷಸ್ತ್ವಪ್ರೇಮ್ಣ್ಯಚಿಕ್ಕಣೇ ॥ ೧೪೨೬

ಇತಿ ಷಾಂತಾಃ

ರವಿಶ್ವೇತಚ್ಛದೌ ಹಂಸೌ ಸೂರ್ಯವಹ್ನೀ ವಿಭಾವಸೂ ।
ವತ್ಸೌ ತರ್ಣಕವರ್ಷೌ ದ್ವೌ ಸಾರಂಗಾಶ್ಚ ದಿವೌಕಸಃ ॥ ೧೪೨೭
ಶೃಂಗಾರಾದೌ ವಿಷೇ ವೀರ್ಯೇ ಗುಣೇ ರಾಗೇ ದ್ರವೇ ರಸಃ ।

---

೧೪೨೪. ಪೌರುಷ (ನ)=ಗಂಡಸುತನ, ಪುರುಷನ ಕರ್ತವ್ಯ. ವಿಷ (ನ)=ನೀರು, (ವಿಷ). ಆಮಿಷ (ನ)=ಲಂಚ, (ಮಾಂಸ). ಕಿಲ್ಬಿಷ(ನ)=ಅಪರಾಧ, (ಪಾಪ, ಕೊಳೆ).

೧೪೨೫ ವರ್ಷ (ಪು. ನ)=ಮಳೆ, ಭೂಖಂಡ, ಸಂವತ್ಸರ. ಪ್ರೇಕ್ಷಾ (ಸ್ತ್ರೀ)=ನಾಟ್ಯ, ನೋಟ, ಬುದ್ಧಿ. ಭಿಕ್ಷಾ (ಸ್ತ್ರೀ)=ಸೇವೆ, ಬೇಡುವುದು, ಸಂಬಳ.

೧೪೨೬. ತ್ವಿಷ್ (ಸ್ತ್ರೀ)=ಕಾಂತಿ, (ವಾಣಿ). ನ್ಯಕ್ಷ (ನ)=ಸಮಗ್ರತೆ. ನ್ಯಕ್ಷ (ವಿ. ನಿಘ್ನ)=ಸಮಸ್ತ, ಕನಿಷ್ಠ. ಅಧ್ಯಕ್ಷ (ಪು)=ಪ್ರತ್ಯಕ್ಷ, ಅಧಿಪತಿ. ರೂಕ್ಷ (ವಿ. ನಿಘ್ನ)=ಪ್ರೇಮವಿಲ್ಲದ, ಮೃದುವಲ್ಲದ.

## ಸಾಂತಗಳು

೧೪೨೭. ಹಂಸ (ಪು)=ಸೂರ್ಯ, ಹಂಸಪಕ್ಷಿ. ವಿಭಾವಸು (ಪು)=ಸೂರ್ಯ, ಅಗ್ನಿ. ವತ್ಸ (ಪು)=ಕರು, ಸಂವತ್ಸರ. ಸಾರಂಗ (ಪು)=ದೇವತೆ, (ಜಿಂಕೆ, ಜಾತಕಪಕ್ಷಿ).

೧೪೨೮. ರಸ (ಪು)=ಶೃಂಗಾರಾದಿ ರಸ, ವಿಷ, ವೀರ್ಯ, ಸಿಹಿ ಮುಂತಾದ ಗುಣ, ಅನುರಾಗ, ದ್ರವ. ಉತ್ತಂಸ, ಅವತಂಸ (ಪು)=ಕಿವಿಯ ಆಭರಣ, ಶಿರೋಭೂಷಣ.



ಪುಂಸ್ಯುತ್ತಂಸಾವತಂಸೌ ದ್ವೌ ಕರ್ಣಪೂರೇಽಪಿ ಶೇಖರೇ ॥ ೧೪೨೮
ದೇವಭೇದೇಽನಲೇ ರಶ್ಮೌ ವಸೂ ರತ್ನೇ ಧನೇ ವಸು ।
ವಿಷ್ಣೌ ಚ ವೇಧಾಃ ಸ್ತ್ರೀ ತ್ವಾಶೀರ್ಹಿತಾಶಂಸಾಹಿದಂಷ್ಟ್ರಯೋಃ ॥ ೧೪೨೯
ಲಾಲಸೇ ಪ್ರಾರ್ಥನೌತ್ಸುಕ್ಯೇ ಹಿಂಸಾ ಚೌರ್ಯಾದಿಕರ್ಮ ಚ ।
ಪ್ರಸೂರಶ್ವಾಪಿ ಭೂದ್ಯಾವೌ ರೋದಸ್ಯೌ ರೋದಸೀ ಚ ತೇ ॥ ೧೪೩೦
ಜ್ವಾಲಾಭಾಸೋರ್ನಪುಂಸ್ಯರ್ಚಿರ್ಜ್ಯೋತಿರ್ಭದ್ಯೋತದೃಷ್ಟಿಷು ।
ಪಾಪಾಪರಾಧಯೋರಾಗಃ ಖಗಬಾಲ್ಯಾದಿನೋರ್ವಯಃ ॥ ೧೪೩೧
ತೇಜಃ ಪುರೀಷಯೋರ್ವರ್ಚೋ ಮಹಸ್ತೂತ್ಸವತೇಜಸೋಃ ।
ರಜೋ ಗುಣೇ ಚ ಸ್ತ್ರೀಪುಷ್ಪೇ ರಾಹೌ ಧ್ವಾಂತೇ ಗುಣೇ ತಮಃ ॥ ೧೪೩೨

---

೧೪೨೯. ವಸು(ಪು)=ವಸುವೆಂಬ ದೇವತಾಭೇದ, ಅಗ್ನಿ, ಕಿರಣ. ವಸು(ನ)=ರತ್ನ, ಧನ. ವೇಧಸ್ (ಪು)=ವಿಷ್ಣು, ಬ್ರಹ್ಮ. ಆಶಿಸ್ (ಸ್ತ್ರೀ)=ಆಶೀರ್ವಾದ, ಸರ್ಪದ ಹಲ್ಲು.

೧೪೩೦. ಲಾಲಸಾ (ಸ್ತ್ರೀ)=ಬಯಕೆ, ಉತ್ಸುಕತೆ. ಹಿಂಸಾ (ಸ್ತ್ರೀ)=ಕಳವು ಮುಂತಾದ ಕೆಲಸ, ಹಿಂಸೆ. ಪ್ರಸೂ (ಸ್ತ್ರೀ)=ಹೆಣ್ಣುಕುದುರೆ, ತಾಯಿ. ರೋದಸೀ (ಸ್ತ್ರೀ)=ಭೂಮಿ, ಆಕಾಶ. ರೋದಸ್ (ನ)=ಭೂಮಿ, ಆಕಾಶ.

೧೪೩೧. ಅರ್ಚಿಸ್ (ಸ್ತ್ರೀ. ನ)=ಜ್ವಾಲೆ, ಕಾಂತಿ. ಜ್ಯೋತಿಸ್ (ನ)=ನಕ್ಷತ್ರ, ಪ್ರಕಾಶ, ಕಣ್ಣು. (ಜ್ಯೋತಿಸ್ (ಪು)=ಸೂರ್ಯ, ಅಗ್ನಿ. 'ಜ್ಯೋತಿರಗ್ನೌ ದಿವಾಕರೇ । ಪುಮಾನ್, ನಪುಂಸಕಂ ದೃಷ್ಟೌ ಸ್ಯಾನ್ನಕ್ಷತ್ರಪ್ರಕಾಶಯೋಃ' —ಮೇದಿನೀಕೋಶ) ಆಗಸ್(ನ)=ಪಾಪ, ಅಪರಾಧ. ವಯಸ್ (ನ)=ಪಕ್ಷಿ, ಬಾಲ್ಯ ಮುಂತಾದ ಅವಸ್ಥೆ.

೧೪೩೨. ವರ್ಚಸ್ (ನ)=ತೇಜಸ್ಸು, ಅಮೇಧ್ಯ. ಮಹಸ್[1] (ನ)=ಉತ್ಸವ, ತೇಜಸ್ಸು. ರಜಸ್(ನ)=ರಜೋಗುಣ. ಸ್ತ್ರೀಯರ ಮುಟ್ಟು, (ಧೂಳಿ). ತಮಸ್ (ನ)=ರಾಹು, ಕತ್ತಲೆ, ತಮೋಗುಣ.

೧೪೩೩. ಛಂದಸ್ (ನ)=ಪದ್ಯ, ಅಭಿಲಾಷೆ, (ವೇದ). ತಪಸ್ (ನ)=ಕೃಚ್ಛ್ರ ಮುಂತಾದ ವ್ರತ. ತಪಸ್[2] (ಪು)=ಮಾಘಮಾಸ. ಸಹಸ್(ನ)=ಬಲ. ಸಹಸ್ (ಪು)=ಮಾರ್ಗಶೀರ್ಷ. ನಭಸ್ (ನ)=ಆಕಾಶ. ನಭಸ್ (ಪು)=ಶ್ರಾವಣ.

---

[1] ಮಹ ಎಂದು ಅಕಾರಾಂತ ಪುಲ್ಲಿಂಗವೂ ಇದೆ.
[2] ತಪ ಎಂದು ಅಕಾರಾಂತ ಪುಲ್ಲಿಂಗವೂ ಇದೆ.

**ಛಂದಃ ಪದ್ಯೇಽಭಿಲಾಷೇ ಚ ತಪಃ ಕೃಚ್ಛ್ರಾದಿಕರ್ಮ ಚ ।**
**ಸಹೋ ಬಲಂ ಸಹಾ ಮಾರ್ಗೋ ನಭಃ ಖಂ ಶ್ರಾವಣೋ ನಭಾಃ ॥ ೧೪೩೩**
**ಓಕಸ್ಸದ್ಮಾಶ್ರಯಶ್ಚೌಕಾಃ ಪಯಃ ಕ್ಷೀರಂ ಪಯೋಽಂಬು ಚ ।**
**ಓಜೋ ದೀಪ್ತೌ ಬಲೇ ಸ್ರೋತ ಇಂದ್ರಿಯೇ ನಿಮ್ನಗಾರಯೇ ॥ ೧೪೩೪**
**ತೇಜಃ ಪ್ರಭಾವೇ ದೀಪ್ತೌ ಚ ಬಲೇ ಶುಕ್ರೇಽಪ್ಯಥ ತ್ರಿಷು ।**
**ವಿದ್ವಾನ್ವಿದಂಶ್ಚ ಬೀಭತ್ಸೋ ಹಿಂಸ್ರೋಽಪ್ಯತಿಶಯೇ ತ್ವಮೀ ॥ ೧೪೩೫**

---

೧೪೩೪. ಓಕಸ್ (ನ)=ಮನೆ, (ಪು) ಆಶ್ರಯ. ಪಯಸ್ (ನ)=ಹಾಲು, ನೀರು. ಓಜಸ್ (ನ)=ಕಾಂತಿ, ಬಲ. ಸ್ರೋತಸ್ (ನ)=ಇಂದ್ರಿಯ, ನದೀವೇಗ.

೧೪೩೫. ತೇಜಸ್ (ನ)=ಪ್ರಭಾವ, ಕಾಂತಿ, ಬಲ, ರೇತಸ್ಸು. ಮುಂದಿನ ಶಬ್ದಗಳು ವಿ. ನಿಘ್ನಗಳಾಗಿ ಮೂರು ಲಿಂಗಗಳಲ್ಲಿಯೂ ಇರುತ್ತವೆ : ವಿದ್ವಸ್, ವಿದತ್ (ವಿ. ನಿಘ್ನ—ಸ್ತ್ರೀ. ವಿದುಷೀ, ವಿದತೀ)=ಪಂಡಿತ, ತಿಳಿದವ. ಬೀಭತ್ಸ, ಹಿಂಸ್ರ (ವಿ. ನಿಘ್ನ)=ಕ್ರೂರ, ಪಾಪಿ.

೧೪೩೬. ಅತಿಶಯಾರ್ಥವನ್ನು (Comparative Degree) ಬೋಧಿಸುವಾಗ ವೃದ್ಧ, ಪ್ರಶಸ್ಯಾದಿ ಶಬ್ದಗಳಿಗೆ ಮುಂದೆ ಹೇಳುವಂತೆ ರೂಪಾಂತರಗಳು ಬರುತ್ತವೆ. ಇವೆಲ್ಲವೂ ವಿಶೇಷ್ಯನಿಘ್ನಗಳು. ಇವು ತರಾರ್ಥದ ರೂಪಗಳು.

(ಸೌಕರ್ಯಕ್ಕಾಗಿ ತಮಾರ್ಥದ (Superlative Degree) ರೂಪಗಳನ್ನೂ ಇಲ್ಲಿ ಕೊಟ್ಟಿದೆ).

| ಶಬ್ದ | ತರಾರ್ಥದ ರೂಪ | ತಮಾಥದ ರೂಪ | ಅರ್ಥ |
|---|---|---|---|
| ವೃದ್ಧ | ಜ್ಯಾಯಸ್ | ಜ್ಯೇಷ್ಠಾ | ಹೆಚ್ಚು ಹಿರಿಯವನು, |
| ಪ್ರಶಸ್ಯ | —ಸ್ತ್ರೀ. ಜ್ಯಾಯಸೀ | ಜ್ಯೇಷ್ಠಾ | ಹೆಚ್ಚು ಉತ್ತಮ. |
| ಯುವನ್ | ಕನೀಯಸ್ | ಕನಿಷ್ಠ | ಹೆಚ್ಚು ಕಿರಿಯವನು, |
| ಅಲ್ಪ | —ಸ್ತ್ರೀ. ಕನೀಯಸೀ | ಕನಿಷ್ಠಾ | ಬಹಳ ಕಡಿಮೆಯ. |
| ಉರು | ವರೀಯಸ್ | ವರಿಷ್ಠ | ಹೆಚ್ಚು ದೊಡ್ಡವನು, |
| ವರ | —ಸ್ತ್ರೀ. ವರೀಯಸೀ | ವರಿಷ್ಠಾ | ಹೆಚ್ಚು ಉತ್ತಮನು. |
| ಸಾಧು | ಸಾಧೀಯಸ್ | ಸಾಧಿಷ್ಠ | ಹೆಚ್ಚು ಉತ್ತಮ, |
| ಬಾಢ | —ಸ್ತ್ರೀ. ಸಾಧೀಯಸೀ | ಸಾಧಿಷ್ಠಾ | ಹೆಚ್ಚು ದೃಢ. |





**ವೃದ್ಧಪ್ರಶಸ್ಯಯೋರ್ಜ್ಯಾಯಾನ್ ಕನೀಯಾಂಸ್ತು ಯುವಾಲ್ಪಯೋಃ ।**
**ವರೀಯಾಂಸ್ತೂರುವರಯೋಃ ಸಾಧೀಯಾನ್ ಸಾಧುಬಾಢಯೋಃ ॥ ೧೪೩೬**

ಇತಿ ಸಾಂತಾಃ

**ದಲೇಽಪಿ ಬರ್ಹಂ ನಿರ್ಬಂಧೋಪರಾಗಾರ್ಕಾದಯೋ ಗ್ರಹಾಃ ।**
**ದ್ವಾರ್ಯಾಪೀಡೇ ಕ್ವಾಥರಸೇ ನಿರ್ಯೂಹೋ ನಾಗದಂತಕೇ ॥ ೧೪೩೭**
**ತುಲಾಸೂತ್ರೇಽಶ್ವಾದಿರಶ್ಮೌ ಪ್ರಗ್ರಾಹಃ ಪ್ರಗ್ರಹೋಽಪಿ ಚ ।**
**ಪತ್ನೀ ಪರಿಜನಾದಾನಮೂಲಶಾಪಾಃ ಪರಿಗ್ರಹಾಃ ॥ ೧೪೩೮**

ಇತಿ ಹಾಂತಾಃ

ಇತಿ ನಾನಾರ್ಥವರ್ಗಃ

**ದಾರೇಷು ಚ ಗೃಹಾಃ ಶ್ರೋಣ್ಯಾಮಪ್ಯಾರೋಹೋ ವರಸ್ತ್ರಿಯಾಃ ।**
**ವ್ಯೂಹೋ ಬೃಂದೇಽಪ್ಯಹಿರ್ವೃತ್ರೇಽಪ್ಯಗ್ನೀಂದ್ವರ್ಕಾಸ್ತಮೋಽಪಹಾಃ ॥ ೧೪೩೯**
**ಪರಿಚ್ಛದೇ ನೃಪಾರ್ಹೇಽರ್ಥೇ ಪರಿಬರ್ಹೋಽವ್ಯಯಾಃ ಪರೇ ।**

---

## ಹಾಂತಗಳು

೧೪೩೭. ಬರ್ಹ (ನ)=ಎಲೆ, (ನವಿಲುಗರಿ). ಗ್ರಹ(ಪು)=ಒತ್ತಾಯ (ಹಠ), ಗ್ರಹಣ, ಸೂರ್ಯ ಮುಂತಾದ ಗ್ರಹ. ನಿರ್ಯೂಹ (ಪು)=ಬಾಗಿಲು, ಶಿರೋಭೂಷಣ, ಕಷಾಯ, ಬಟ್ಟೆಯನ್ನು ತಗಲುಹಾಕುವ ಗೂಟ.

೧೪೩೮. ಪ್ರಗ್ರಾಹ, ಪ್ರಗ್ರಹ (ಪು)=ತಕ್ಕಡಿಯ ದಾರ, ಕುದುರೆ ಮುಂತಾದ್ದನ್ನು ಕಟ್ಟುವ ಹಗ್ಗ. ಪರಿಗ್ರಹ (ಪು)=ಹೆಂಡತಿ, ಪರಿವಾರ, ಸ್ವೀಕಾರ, ಮೂಲ, ಶಾಪ.

೧೪೩೯—೧೪೪೦. ಗೃಹ (ಪು. ನಿತ್ಯ ಬಹುವಚನ)=ಹೆಂಡತಿ, ಮನೆ. ಆರೋಹ (ಪು)=ಸ್ತ್ರೀಯರ ನಿತಂಬ, (ಹತ್ತುವುದು, ಮಾವಟಿಗ). ವ್ಯೂಹ (ಪು)=ಸಮೂಹ, (ಸೇನಾವ್ಯೂಹ). ಅಹಿ (ಪು)=ವೃತ್ರಾಸುರ, (ಸರ್ಪ). ತಮೋಪಹ (ಪು)=ಅಗ್ನಿ, ಚಂದ್ರ, ಸೂರ್ಯ. ಪರಿಬರ್ಹ (ಪು)=ಪರಿವಾರ, ರಾಜಯೋಗ್ಯ ವಸ್ತು. ಮುಂದೆ ಹೇಳತಕ್ಕವು ನಾನಾರ್ಥಕಗಳಾದ ಅವ್ಯಯಗಳು.

## ೪. ನಾನಾರ್ಥಾವ್ಯಯ ವರ್ಗಃ

ಆಙೀಷದರ್ಥೇಽಭಿವ್ಯಾಪ್ತೌ ಸೀಮಾರ್ಥೇ ಧಾತುಯೋಗಜೇ ॥ ೧೪೪೦
ಆ ಪ್ರಗೃಹ್ಯಃ ಸ್ಮೃತೌ ವಾಕ್ಯೇಽಪ್ಯಾಸ್ತು ಸ್ಯಾತ್ಕೋಪಪೀಡಯೋಃ ।
ಪಾಪಕುತ್ಸೇಷದರ್ಥೇ ಕು ಧಿಙ್ ನಿರ್ಭರ್ತ್ಸನನಿಂದಯೋಃ ॥ ೧೪೪೧
ಚಾನ್ವಾಚಯಸಮಾಹಾರೇತರೇತರಸಮುಚ್ಚಯೇ ।
ಸ್ವಸ್ತ್ಯಾಶೀಃಕ್ಷೇಮಪುಣ್ಯಾದೌ ಪ್ರಕರ್ಷೇ ಲಂಘನೇಽಪ್ಯತಿ ॥ ೧೪೪೨

---

### ನಾನಾರ್ಥಕಾವ್ಯಯಗಳು

ಸೂಚನೆ—ಈ ಅವ್ಯಯಗಳಲ್ಲಿ ಕೆಲವಕ್ಕೆ ಸ್ವತಂತ್ರವಾದ ವಾಚ್ಯಾರ್ಥವಿಲ್ಲ. ಅವು ದ್ಯೋತಕಗಳು. ಇತರ ಶಬ್ದಗಳೊಡನೆ ಪ್ರಯುಕ್ತವಾದಾಗ ಅರ್ಥವಿಶೇಷವನ್ನು ಸೂಚಿಸುತ್ತವೆ. ಇನ್ನು ಕೆಲವಕ್ಕೆ ವಾಚ್ಯಾರ್ಥವಿದೆ.

೧೪೪೦—೧೪೪೧. ಆ=ಸ್ವಲ್ಪ—'ಆಪಾಂಡುರ' ಅವಧಿ. (—Inclusive)— 'ಆಬಾಲಂ ಹರಿ ಭಕ್ತಿಃ', ಅವಧಿ (—Exclusive)— 'ಆಮರಣಂ ಕರೋತಿ', ಧಾತುವಿನ ಯೋಗವಿದ್ದಾಗ ವಿವಿಧಾರ್ಥಕ— 'ಆಗಚ್ಛತಿ, ಆಹರತಿ' ಇತ್ಯಾದಿ, ಸ್ಮರಣೆ— 'ಆ ಏವಂ ಕಿಲ ತತ್', ವಾಕ್ಯಾರ್ಥ ಸೂಚನೆ — 'ಆ ಏವಂ ನು ಮನ್ಯಸೇ.' 'ಹಿಂದೆ ಈ ರೀತಿಯಲ್ಲಿ ನೀನು ಭಾವಿಸಿರಲಿಲ್ಲ' ಎಂಬ ವಾಕ್ಯಾರ್ಥವನ್ನು ಆ ಎಂಬುದು ಸೂಚಿಸುತ್ತದೆ. ಸ್ಮರಣೆ ಮತ್ತು ವಾಕ್ಯಾರ್ಥ ಸೂಚನೆಗಳಲ್ಲಿ ಆ ಎಂಬುದಕ್ಕೆ ಪ್ರಗೃಹ್ಯವೆಂಬ ಸಂಜ್ಞೆ ಇದೆ. ಆದ್ದರಿಂದ ಪ್ರಕೃತಿಭಾವ ಬಂದಿದೆ. ಆಃ=ಕೋಪ ಮತ್ತು ಯಾತನೆಗಳ ಸೂಚಕ. ಕು=ಪಾಪ, ನಿಂದೆ, ಸ್ವಲ್ಪ. ಧಿಕ್=ಗದರಿಸುವುದು, ನಿಂದೆ.

೧೪೪೨. ಚ=ಅನ್ವಾಚಯ—ಪ್ರಧಾನದೊಡನೆ ಅಪ್ರಧಾನವನ್ನು ಸೇರಿಸುವುದು—'ಓದನಂ ಭುಂಕ್ಷ್ವ ಹಸ್ತಂ ಚ ಕ್ಷಾಲಯ', ಸಮಾಹಾರ (ಸಮುದಾಯ)— 'ಪಾಣೀ ಚ ಪಾದೌ ಚ ಏಷಾಂ ಸಮಾಹಾರಃ ಪಾಣಿ ಪಾದಮ್', ಇತರೇತರ ಯೋಗ —ಸಾಹಚರ್ಯದಿಂದ ಸಾಪೇಕ್ಷವಾದವುಗಳಿಗೆ ಒಂದೇ ಪದಾರ್ಥದಲ್ಲಿ ಅನ್ವಯ—'ರಾಮೋ ಲಕ್ಷ್ಮಣಶ್ಚ ವನಂ ಗತೌ', ಸಮುಚ್ಚಯ—ಅನ್ಯೋನ್ಯ ನಿರಪೇಕ್ಷವಾದವುಗಳಿಗೆ ಒಂದೇ ಅರ್ಥದಲ್ಲಿ ಅನ್ವಯ —'ವ್ಯಾಕರಣಂ ಜ್ಯಾತಿಷಂ ಚ ಅಧೀಷ್ವ'.

ಸ್ವಸ್ತಿ=ಆಶೀರ್ವಾದ, ಕ್ಷೇಮ, ಪುಣ್ಯ (ಒಳ್ಳೆಯದು ಎಂದು ಸಾಮಾನ್ಯಾರ್ಥ). ಅತಿ=ಪ್ರಕರ್ಷ 'ಅತಿನಿದ್ರಾ', ಉಲ್ಲಂಘನೆ— 'ಅತಿಮಾನುಷ.'



ಸ್ವಿತ್ ಪ್ರಶ್ನೇ ಚ ವಿತರ್ಕೇ ಚ ತು ಸ್ಯಾದ್ಭೇದೇಽವಧಾರಣೇ ।
ಸಕೃತ್ಸಹೈಕವಾರೇ ಚಾಪ್ಯಾರಾದ್ದೂರಸಮೀಪಯೋಃ ॥ ೧೪೪೩
ಪ್ರತೀಚ್ಯಾಂ ಚರಮೇ ಪಶ್ಚಾದುತಾಪ್ಯರ್ಥವಿಕಲ್ಪಯೋಃ ।
ಪುನಸ್ಸಹಾರ್ಥಯೋಶ್ಶಶ್ವತ್ ಸಾಕ್ಷಾತ್ ಪ್ರತ್ಯಕ್ಷತುಲ್ಯಯೋಃ ॥ ೧೪೪೪
ಖೇದಾನುಕಂಪಾಸಂತೋಷವಿಸ್ಮಯಾಮಂತ್ರಣೇ ಬತ ।
ಹಂತ ಹರ್ಷೇಽನುಕಂಪಾಯಾಂ ವಾಕ್ಯಾರಂಭವಿಷಾದಯೋಃ ॥ ೧೪೪೫
ಪ್ರತಿ ಪ್ರತಿನಿಧೌ ವೀಪ್ಸಾಲಕ್ಷಣಾದೌ ಪ್ರಯೋಗತಃ ।
ಇತಿ ಹೇತುಪ್ರಕರಣಪ್ರಕಾಶಾದಿಸಮಾಪ್ತಿಷು ॥ ೧೪೪೬
ಪ್ರಾಚ್ಯಾಂ ಪುರಸ್ತಾತ್ ಪ್ರಥಮೇ ಪುರಾರ್ಥೇಽಗ್ರತ ಇತ್ಯಪಿ ।
ಯಾವತ್ತಾವಚ್ಚ ಸಾಕಲ್ಯೇಽವಧೌ ಮಾನೇಽವಧಾರಣೇ ॥ ೧೪೪೭

---

೧೪೪೩. ಸ್ವಿತ್=ಪ್ರಶ್ನೆ—'ಕಿಂಸ್ವಿತ್?' ಊಹೆ—'ಕಾಸ್ವಿದವಗುಂಠನವತೀ'. ತು=ಭೇದ—'ಜಲಂ ಶೀತಲಂ, ಅಗ್ನಿಸ್ತು ಉಷ್ಣಃ', ಅವಧಾರಣೆ—'ಭೀಮಸ್ತು ಪಾಂಡವಾನಾಂ ರೌದ್ರಃ.' ಸಕೃತ್=ಜೊತೆಯಲ್ಲಿ, ಒಂದು ಸಲ. ಆರಾತ್=ದೂರ, ಸಮೀಪ.

೧೪೪೪. ಪಶ್ಚಾತ್=ಪಶ್ಚಿಮ ದಿಕ್ಕಿನಲ್ಲಿ, ಕಡೆಯಲ್ಲಿ. ಉತ=ಮತ್ತು (ಕೂಡ), ಅಥವಾ ಶಶ್ವತ್=ಮತ್ತೆ, ಜೊತೆಯಲ್ಲಿ, (ಶಾಶ್ವತವಾಗಿ). ಸಾಕ್ಷಾತ್=ಪ್ರತ್ಯಕ್ಷ, ಸದೃಶ.

೧೪೪೫. ಬತ=ವಿಷಾದ, ದಯೆ, ಸಂತೋಷ, ಆಶ್ಚರ್ಯ, ಆಹ್ವಾನ—ಇವುಗಳ ದ್ಯೋತಕ. ಹಂತ=ಹರ್ಷ, ದಯೆ, ವಾಕ್ಯಾರಂಭ, ವಿಷಾದಗಳ ದ್ಯೋತಕ.

೧೪೪೬. ಪ್ರತಿ=ಪ್ರತಿನಿಧಿ, ವೀಪ್ಸೆ, ಲಕ್ಷಣ—ಮುಂತಾದ ಅರ್ಥಗಳ ಸೂಚಕ. (ವಿಶೇಷವನ್ನು ಸಿದ್ಧಾಂತಕೌಮುದಿಯ ವಿಭಕ್ತ್ಯರ್ಥಪ್ರಕರಣದಲ್ಲಿ ನೋಡಬಹುದು). ಇತಿ=ಕಾರಣ, ಪ್ರಕರಣ, ಪ್ರಕಾಶ, ಸಮಾಪ್ತಿ ಮುಂತಾದ ಅರ್ಥಗಳ ಸೂಚಕ.

೧೪೪೭. ಪುರಸ್ತಾತ್=ಪೂರ್ವದಿಕ್ಕಿನಲ್ಲಿ, ಮೊದಲು, ಪೂರ್ವ ಕಾಲದಲ್ಲಿ, ಮುಂದೆ. ಯಾವತ್—ತಾವತ್= (ಯತ್—ತತ್ ಶಬ್ದಗಳಂತೆ ಇವೆರಡು ಸಾಮಾನ್ಯವಾಗಿ ಸಾಪೇಕ್ಷ ಶಬ್ದಗಳು) ಸಾಕಲ್ಯ, ಅವಧಿ, ಪ್ರಮಾಣ, ಅವಧಾರಣಗಳ ಬೋಧಕಗಳು.

೧೪೪೮. ಅಥೋ, ಅಥ=ಮಂಗಳ, ಅನಂತರ, ಆರಂಭ, ಪ್ರಶ್ನೆ, ಸಾಕಲ್ಯಗಳ ಬೋಧಕಗಳು. ವೃಥಾ=ನಿರರ್ಥಕ, ವಿಧಿವರ್ಜಿತ. ನಾನಾ=ಅನೇಕ, ಉಭಯವೂ, (ಹೊರತು— 'ನಾನಾ ನಾರೀಂ ನಿಷ್ಫಲಾ ಲೋಕಯಾತ್ರಾ').

ಮಂಗಲಾನಂತರಾರಂಭಪ್ರಶ್ನಕಾರ್ತ್ಸ್ನ್ಯೇಷ್ವಥೋ ಅಥ ।
ವೃಥಾ ನಿರರ್ಥಕಾವಿಧ್ಯೋರ್ನಾನಾನೇಕೋಭಯಾರ್ಥಯೋಃ ॥ ೧೪೪೮
ನು ಪೃಚ್ಛಾಯಾಂ ವಿಕಲ್ಪೇ ಚ ಪಶ್ಚಾತ್ಸಾದೃಶ್ಯಯೋರನು ।
ಪ್ರಶ್ನಾವಧಾರಣಾನುಜ್ಞಾನುನಯಾಮಂತ್ರಣೇ ನನು ॥ ೧೪೪೯
ಗರ್ಹಾಸಮುಚ್ಚಯಪ್ರಶ್ನಶಂಕಾಸಂಭಾವನಾಸ್ವಪಿ ।
ಉಪಮಾಯಾಂ ವಿಕಲ್ಪೇ ವಾ ಸಾಮಿ ತ್ವರ್ಧೇ ಜುಗುಪ್ಸಿತೇ ॥ ೧೪೫೦
ಅಮಾ ಸಹ ಸಮೀಪೇ ಚ ಕಂ ವಾರಿಣಿ ಚ ಮೂರ್ಧನಿ ।
ಇವೇತ್ಥಮರ್ಥಯೋರೇವಂ ನೂನಂ ತರ್ಕೇಽರ್ಥನಿಶ್ಚಯೇ ॥ ೧೪೫೧
ತೂಷ್ಣೀಮರ್ಥೇ ಸುಖೇ ಜೋಷಂ ಕಿಂ ಪೃಚ್ಛಾಯಾಂ ಜುಗುಪ್ಸನೇ ।
ನಾಮ ಪ್ರಾಕಾಶ್ಯಸಂಭಾವ್ಯಕ್ರೋಧೋಪಗಮಕುತ್ಸನೇ ॥ ೧೪೫೨
ಅಲಂ ಭೂಷಣಪರ್ಯಾಪ್ತಿ ಶಕ್ತಿವಾರಣವಾಚಕಮ್ ।
ಹುಂ ವಿತರ್ಕೇ ಪರಿಪ್ರಶ್ನೇ ಸಮಯಾಂತಿಕಮಧ್ಯಯೋಃ ॥ ೧೪೫೩

---

೧೪೪೯. ನು=ಪ್ರಶ್ನೆ, ವಿಕಲ್ಪಗಳ ದ್ಯೋತಕ. ಅನು=ಹಿಂದಿನಿಂದ ಅನುಸರಿಸಿ, ಸಾದೃಶ್ಯ. ನನು=ಪ್ರಶ್ನೆ, ಅವಧಾರಣೆ, ಅನುಜ್ಞೆ, ಸಾಂತ್ವನ, ಆಹ್ವಾನಗಳ ದ್ಯೋತಕ.

೧೪೫೦. ಅಪಿ=ನಿಂದೆ, ಸಮುಚ್ಚಯ, ಪ್ರಶ್ನೆ, ಶಂಕೆ, ಪದಾರ್ಥ ಸಂಭಾವನೆಗಳ ದ್ಯೋತಕ. ವಾ=ಸಾದೃಶ್ಯಮ— 'ಜಾತಾಂ ಮನ್ಯೇ ತುಹಿನ ಮಥಿತಾಂ ಪದ್ಮಿನೀಂ ವಾನ್ಯರೂಪಾಂ' ಮೇಘ—೮೩, ಅಥವಾ, (ಚ ಶಬ್ದದ ಅರ್ಥ, ಅವಧಾರಣೆ). ಸಾಮಿ=ಅರ್ಧ, ನಿಂದ್ಯ.

೧೪೫೧. ಅಮಾ =ಜೊತೆಯಲ್ಲಿ, ಸಮೀಪದಲ್ಲಿ. ಕಮ್=ನೀರು— 'ಕಂಜಂ', ಶಿರಸ್ಸು 'ಕಂಧರಾ', ಏವಮ್=ಸಾದೃಶ್ಯ, ಈ ರೀತಿಯಲ್ಲಿ. ನೂನಮ್=ಊಹೆ, ನಿಶ್ಚಯಗಳ ಬೋಧಕ.

೧೪೫೨. ಜೋಷಮ್=ಸುಮ್ಮನೆ, ಸುಖವಾಗಿ. ಕಿಮ್=ಏನು ಏಕೆ—ಎಂಬ ಪ್ರಶ್ನಬೋಧಕ, ನಿಂದೆ ('ಕಿಂಪಚಾನಃ'). ನಾಮ=ಪ್ರಸಿದ್ಧಿ, ಸಂಭಾವನಾ, ಕೋಪ, ಅಂಗೀಕಾರ, ನಿಂದೆಗಳ ಬೋಧಕ.

೧೪೫೩. ಅಲಮ್=ಭೂಷಣ ಸಾಕಾದಷ್ಟು, ಸಾಮರ್ಥ್ಯ, ನಿಷೇಧ—ಇವುಗಳ ಬೋಧಕ. ಹುಮ್=ಊಹೆ, ಪ್ರಶ್ನೆಗಳ ಬೋಧಕ. ಸಮಯಾ=ಸಮೀಪದಲ್ಲಿ, ನಡುವೆ.



ಪುನರಪ್ರಥಮೇ ಭೇದೇ ನಿರ್ನಿಶ್ಚಯನಿಷೇಧಯೋಃ ।
ಸ್ಯಾತ್ಪ್ರಬಂಧೇ ಚಿರಾತೀತೇ ನಿಕಟಾಗಾಮಿಕೇ ಪುರಾ ॥ ೧೪೫೪
ಊರರ್ಯ್ಯುರೀ ಚೋರರೀ ಚ ವಿಸ್ತಾರೇಽಂಗೀಕೃತೌ ತ್ರಯಮ್ ।
ಸ್ವರ್ಗೇ ಪರೇ ಚ ಲೋಕೇ ಸ್ವರ್ವಾರ್ತಾಸಂಭಾವ್ಯಯೋಃ ಕಿಲ ॥ ೧೪೫೫
ನಿಷೇಧವಾಕ್ಯಾಲಂಕಾರಜಿಜ್ಞಾಸಾನುನಯೇ ಖಲು ।
ಸಮೀಪೋಭಯತಃ ಶೀಘ್ರ ಸಾಕಲ್ಯಾಭಿಮುಖೇಽಭಿತಃ ॥ ೧೪೫೬
ಜನ್ಮಪ್ರಾಕಾಶ್ಯಯೋಃ ಪ್ರಾದುರ್ಮಿಥೋಽನ್ಯೋನ್ಯಂ ರಹಸ್ಯಪಿ ।
ತಿರೋಽಂತರ್ಧೌ ತಿರ್ಯಗರ್ಥೇ ಹಾ ವಿಷಾದಶುಗರ್ತಿಷು ॥ ೧೪೫೮
ಅಹಹೇತ್ಯದ್ಭುತೇ ಖೇದೇ ಹಿ ಹೇತಾವವಧಾರಣೇ ।

ಇತಿ ನಾನಾರ್ಥಾವ್ಯಯವರ್ಗಃ

---

೧೪೫೪. ಪುನರ್=ಮತ್ತೊಂದು—ಮತ್ತೊಂದು ಸಲ, ಭೇದ—'ಯುಧಿಷ್ಠಿರಃ ಶಾಂತಃ, ಭೀಮಃ ಪುನಃ ರೌದ್ರಃ.' ನಿರ್=ನಿಶ್ಚಯ, ನಿಷೇಧಗಳ ಬೋಧಕ. ಪುರಾ=ಸಂತತವಾದ ಕ್ರಿಯೆ, ಬಹಳ ಹಿಂದಿನ ಕಾಲ, ಸಮೀಪದ ಭವಿಷ್ಯತ್ಕಾಲ—ಇವುಗಳ ಬೋಧಕ.

೧೪೫೫. ಊರರೀ, ಊರೀ, ಉರರೀ=ವಿಸ್ತಾರ ಮತ್ತು ಅಂಗೀಕಾರಗಳ ಬೋಧಕ : ಊರರೀಕರೋತಿ, ಉರರೀಕರೋತಿ. ಸ್ವರ್=ಸ್ವರ್ಗ, ಪರಲೋಕ. ಕಿಲ=ಸುದ್ದಿ ಮತ್ತು ಸಂಭಾವನೆಗಳ ದ್ಯೋತಕ.

೧೪೫೬. ಖಲು=ನಿಷೇಧ—'ಉಕ್ತ್ವಾಖಲು', ವಾಕ್ಯಾಲಂಕಾರ—'ಅಹಂ ಖಲು ಗಮಿಷ್ಯಾಮಿ,' ಜಿಜ್ಞಾಸೆ— 'ಅದ್ಯ ತ್ವಯಾ ಖಲು ಉಪನ್ಯಸ್ಯತೇ ?', ಸಾಂತ್ವನೆ—'ನ ಖಲು ನ ಖಲು ಮುಗ್ಧೇ ಸಾಹಸಂ ಕಾರ್ಯಮೇತತ್'. ಅಭಿತಃ=ಸಮೀಪ, ಎರಡು ಪಾರ್ಶ್ವಗಳು, ಶೀಘ್ರತೆ, ಸಮಗ್ರತೆ, ಆಭಿಮುಖ್ಯ—ಇವುಗಳ ಬೋಧಕ.

೧೪೫೭—೧೪೫೮. ಪ್ರಾದುಸ್=ಉತ್ಪತ್ತಿ—'ವಪುಃಪ್ರಾದುರ್ಭಾವಾತ್,' ಪ್ರಕಾಶ — 'ಪ್ರಾದುರಾಸೀದ್ವಿಭಾಕರಃ.' (ಈ ಅವ್ಯಯವು ಕೃ, ಭೂ, ಅಸ್—ಧಾತುಗಳೊಡನೆ ಮಾತ್ರ ಪ್ರಯುಕ್ತವಾಗುತ್ತದೆ). ಮಿಥಸ್=ಅನ್ಯೋನ್ಯವಾಗಿ, ರಹಸ್ಯವಾಗಿ. ತಿರಸ್=ಅಂತರ್ಧಾನ— 'ತಿರೋಭವತಿ,' ಅಡ್ಡಲಾಗಿ—'ತಿರೋಗಚ್ಛತಿ'. ಹಾ=ವಿಷಾದ, ದುಃಖ, ಪೀಡೆ—ಇವುಗಳ ದ್ಯೋತಕ. ಅಹಹ=ವಿಸ್ಮಯ, ದುಃಖಗಳ ದ್ಯೋತಕ. ಹಿ=ಹೇತು, ಅವಧಾರಣೆಗಳ ಬೋಧಕ.

## ೫. ಅವ್ಯಯವರ್ಗಃ

ಚಿರಾಯಚಿರರಾತ್ರಾಯಚಿರಸ್ಯಾದ್ಯಾಶ್ಚಿರಾರ್ಥಕಾಃ ॥ ೧೪೫೮

ಮುಹುಃ ಪುನಃ ಪುನಶ್ಶಶ್ವದಭೀಕ್ಷ್ಣ ಮಸಕೃತ್ ಸಮಾಃ ।

ಸ್ರಾಗ್ಝಟಿತ್ಯಂಜಸಾಹ್ನಾಯದ್ರಾಙ್ಮಂಕ್ಷುಸಪದಿ ದ್ರುತೇ ॥ ೧೪೫೯

ಬಲವತ್ಸುಷ್ಠು ಕಿಮುತ ಸ್ವತ್ಯತೀವ ಚ ನಿರ್ಭರೇ ।

ಪೃಥಗ್ವಿನಾಂತರೇಣರ್ತೇ ಹಿರಙ್ನಾನಾ ಚ ವರ್ಜನೇ ॥ ೧೪೬೦

ಯತ್ತದ್ಯತಸ್ತತೋ ಹೇತಾವಸಾಕಲ್ಯೇ ತು ಚಿಚ್ಚನ ।

ಕದಾಚಿಜ್ಜಾತು ಸಾರ್ಧಂ ತು ಸಾಕಂ ಸತ್ರಾ ಸಮಂ ಸಹ ॥ ೧೪೬೧

ಆನುಕೂಲ್ಯಾರ್ಥಕಂ ಪ್ರಾಧ್ವಂ ವ್ಯರ್ಥಕೇ ತು ವೃಥಾ ಮುಧಾ ।

ಆಹೋ ಉತಾಹೋ ಕಿಮುತ ವಿಕಲ್ಪೇ ಕಿಂ ಕಿಮೂತ ಚ ॥ ೧೪೬೨

---

### ಅವ್ಯಯ ವರ್ಗ

೧೪೫೮—೧೪೫೯. ಚಿರಾಯ,[1] ಚಿರರಾತ್ರಾಯ, ಚಿರಸ್ಯ, (ಚಿರಮ್, ಚಿರೇಣ, ಚಿರಾತ್, ಚಿರೇ)=ಬಹುಕಾಲದಿಂದ—ಬಹುಕಾಲದವರೆಗೆ. ಮುಹುಸ್, ಪುನಃಪುನರ್, ಶಶ್ವತ್, ಅಭೀಕ್ಷ್ಣಮ್, ಅಸಕೃತ್=ಮತ್ತೆಮತ್ತೆ—ಬಾರಿಬಾರಿಗೆ. ಸ್ರಾಕ್, ಝಟಿತಿ, ಅಂಜಸಾ, ಅಹ್ನಾಯ, ದ್ರಾಕ್, ಮಂಕ್ಷು, ಸಪದಿ=ಕೂಡಲೆ—ತತ್‌ಕ್ಷಣದಲ್ಲಿ.

೧೪೬೦. ಬಲವತ್, ಸುಷ್ಠು, ಕಿಮುತ, ಸು, ಅತಿ, ಅತೀವ=ಅತಿಶಯವಾಗಿ—ಬಹಳ. ಪೃಥಕ್ (ಪೃಥಙ್), ವಿನಾ, ಅಂತರೇಣ, ಋತೇ, ಹಿರುಕ್, ನಾನಾ=ಹೊರತು, ವರ್ಜಿಸಿ.

೧೪೬೧. ಯತ್, ತತ್, ಯತಸ್, ತತಸ್= ಆ ಕಾರಣದಿಂದ—ಅನಿಮಿತ್ತವಾಗಿ. ಚಿತ್, ಚನ=ಸ್ವಲ್ಪ—ಕಿಂಚಿತ್, ಕಿಂಚನ. ಕದಾಚಿತ್, ಜಾತು=ಒಮ್ಮೆ, ಒಂದಾನೊಂದು ವೇಳೆ. ಸಾರ್ಧಮ್, ಸಾಕಮ್, ಸತ್ರಾ, ಸಮಮ್, ಸಹ=ಜೊತೆಗೆ—ಒಡನೆ—ಕೂಡೆ.

೧೪೬೨. ಪ್ರಾಧ್ವಮ್=ಅನುಕೂಲವಾಗಿ : ಸವ್ಯೇತರಂ ಪ್ರಾಧ್ವಮಿತಃ ಪ್ರಯುಂಕ್ತೇ—ರಘು. ೧೩—೪೩. ವೃಥಾ, ಮುಧಾ=ವ್ಯರ್ಥವಾಗಿ. ಆಹೋ, ಉತಾಹೋ, ಕಿಮುತ, ಕಿಮ್, ಕಿಮು, ಊತ, (ಉತ)=ವಿಕಲ್ಪ ದ್ಯೋತಕ.

---

[1] ಚಿರಾಯ ಮುಂತಾದವು ವಿಭಕ್ತಿಪ್ರತಿರೂಪಕ ಅವ್ಯಯಗಳು. ಅವ್ಯಯವಲ್ಲದ ವಿಶೇಷ್ಯನಿಷ್ಪನ್ನವಾದ ಚಿರಶಬ್ದವೂ ಉಂಟು : ಚಿರಾರ್ಥಕ, ಚಿರಕಾಲ, ಚಿರವಿರಹ.



ತು ಹಿ ಚ ಸ್ಮ ಹ ವೈ ಪಾದಪೂರಣೇ ಪೂಜನೇ ಸ್ವತೀ ।

ದಿವಾಽಹ್ನೀತ್ಯಥದೋಷಾ ಚ ನಕ್ತಂ ಚ ರಜನಾವಿತಿ ॥ ೧೪೬೩

ತಿರ್ಯಗರ್ಥೇ ಸಾಚಿ ತಿರೋಽಪ್ಯಥ ಸಂಬೋಧನಾರ್ಥಕಾಃ ।

ಸ್ಯುಃ ಪ್ಯಾಟ್ಪಾಡಂಗ ಹೇ ಹೈಭೋಸ್ಸಮಯಾ ನಿಕಷಾ ಹಿರುಕ್ ॥ ೧೪೬೪

ಅತರ್ಕಿತೇ ತು ಸಹಸಾ ಸ್ಯಾತ್ಪುರಃ ಪುರತೋಽಗ್ರತಃ ।

ಸ್ವಾಹಾ ದೇವಹವಿರ್ದಾನೇ ಶ್ರೌಷಡ್ವೌಷಡ್ವಷಟ್ಸ್ವಧಾ ॥ ೧೪೬೫

ಕಿಂಚಿದೀಷನ್ಮನಾಗಲ್ಪೇ ಪ್ರೇತ್ಯಾಮುತ್ರ ಭವಾಂತರೇ ।

ವ ವಾ ಯಥಾ ತಥೇವೈವಂ ಸಾಮ್ಯೇಽಹೋ ಹೀ ಚ ವಿಸ್ಮಯೇ ॥ ೧೪೬೬

ಮೌನೇ ತು ತೂಷ್ಣೀಂ ತೂಷ್ಣೀಕಾಂ ಸದ್ಯಸ್ಸಪದಿ ತತ್‌ಕ್ಷಣೇ ।

ದಿಷ್ಟ್ಯಾ ಸಮುಪಜೋಷಂ ಚೇತ್ಯಾನಂದೇಽಥಾಂತರೇಽಂತರಾ ॥ ೧೪೬೭

ಅಂತರೇಣ ಚ ಮಧ್ಯೇ ಸ್ಯುಃ ಪ್ರಸಹ್ಯ ತು ಹಠಾರ್ಥಕಮ್ ।

ಯುಕ್ತೇ ದ್ವೇ ಸಾಂಪ್ರತಂ ಸ್ಥಾನೇಽಭೀಕ್ಷ್ಣಂ ಶಶ್ವದನಾರತೇ ॥ ೧೪೬೮

---

೧೪೬೩. ತು. ಹಿ. ಚ, ಸ್ಮ, ಹ, ವೈ=ಪಾದಪೂರಣಾರ್ಥ—ಅರ್ಥವಿಶೇಷವಿಲ್ಲ. ಸು, ಅತಿ=ಶ್ರೇಷ್ಠತೆಯ ಸೂಚಕ. ದಿವಾ=ಹಗಲು. ದೋಷಾ, ನಕ್ತಮ್=ರಾತ್ರಿ.

೧೪೬೪. ಸಾಚಿ, ತಿರಸ್=ಅಡ್ಡವಾಗಿ. ಪ್ಯಾಟ್, ಪಾಟ್, ಅಂಗ, ಹೇ, ಹೈ, ಭೋಸ್=ಎಲೈ (ಸಂಬೋಧನ ಸೂಚಕ). ಸಮಯಾ, ನಿಕಷಾ, ಹಿರುಕ್=ಸಮೀಪದಲ್ಲಿ.

೧೪೬೫. ಸಹಸಾ=ವಿಚಾರಮಾಡದೆ, ಆಕಸ್ಮಿಕವಾಗಿ. ಪುರಸ್, ಪುರತಸ್, ಅಗ್ರತಸ್=ಎದುರಿಗೆ. ಸ್ವಾಹಾ, ಶ್ರೌಷಟ್, ವೌಷಟ್, ವಷಟ್, ಸ್ವಧಾ= ದೇವತೆಗಳಿಗೆ ಹವಿರ್ಭಾಗವನ್ನು ಸಮರ್ಪಿಸುವಾಗ ಉಪಯೋಗಿಸತಕ್ಕವು (ಸ್ವಧಾಶಬ್ದವು ಪಿತೃದೇವತೆಗಳಿಗೆ).

೧೪೬೬. ಕಿಂಚಿತ್, ಈಷತ್, ಮನಾಕ್=ಸ್ವಲ್ಪ. ಪ್ರೇತ್ಯ, ಅಮುತ್ರ=ಜನ್ಮಾಂತರದಲ್ಲಿ. ವ, ವಾ, ಯಥಾ, ತಥಾ, ಏವ, ಏವಮ್, (ಇವ)=ಸಾದೃಶ್ಯಬೋಧಕ. ಅಹೋ, ಹೀ= ಆಶ್ಚರ್ಯದ್ಯೋತಕ—'ಹತವಿಧಿಲಸಿತಾನಾಂ ಹೀ ವಿಚಿತ್ರೋ ವಿಪಾಕಃ'–ಮಾಘ. ೧೧–೬೪.

೧೪೬೭–೧೪೬೮. ತೂಷ್ಣೀಮ್, ತೂಷ್ಣೀಕಾಮ್=ಸುಮ್ಮನೆ (ಮೌನವಾಗಿ). ಸದ್ಯಸ್, ಸಪದಿ=ಕೂಡಲೆ (ತತ್‌ಕ್ಷಣದಲ್ಲಿ). ದಿಷ್ಟ್ಯಾ, ಸಮುಪಜೋಷಮ್=ಆನಂದದ್ಯೋತಕ. ಅಂತರೇ, ಅಂತರಾ, ಅಂತರೇಣ=ಮಧ್ಯದಲ್ಲಿ. ಪ್ರಸಹ್ಯ=ಬಲಾತ್ಕಾರವಾಗಿ. ಸಾಂಪ್ರತಮ್, ಸ್ಥಾನೇ=ಯುಕ್ತ. ಅಭೀಕ್ಷ್ಣಮ್, ಶಶ್ವತ್=ಸದಾ.

ಅಭಾವೇ ನಹ್ಯನೋ ನಾಪಿ ಮಾಸ್ಮ ಮಾಲಂ ಚ ವಾರಣೇ ।
ಪಕ್ಷಾಂತರೇ ಚೇದ್ಯದಿ ಚ ತತ್ತ್ವೇ ತ್ವದ್ಧಾಂಜಸಾ ದ್ವಯಮ್ ॥ ೧೪೭೯
ಪ್ರಕಾಶೇ ಪ್ರಾದುರಾವಿಸ್ಸ್ಯಾದೋಮೇವಂ ಪರಮಂ ಮತೇ ।
ಸಮಂತತಸ್ತು ಪರಿತಃ ಸರ್ವತೋ ವಿಷ್ವಗಿತ್ಯಪಿ ॥ ೧೪೮೦
ಅಕಾಮಾನುಮತೌ ಕಾಮಮಸೂಯೋಪಗಮೇಽಸ್ತು ಚ ।
ನನು ಚ ಸ್ಯಾದ್ವಿರೋಧೋಕ್ತೌ ಕಚ್ಚಿತ್ಕಾಮಪ್ರವೇದನೇ ॥ ೧೪೮೧
ನಿಃಷಮಂ ದುಃಷಮಂ ಗರ್ಹ್ಯೇ ಯಥಾಸ್ವಂ ತು ಯಥಾಯಥಮ್ ।
ಮೃಷಾ ಮಿಥ್ಯಾ ಚ ವಿತಥೇ ಯಥಾರ್ಥಂ ತು ಯಥಾತಥಮ್ ॥ ೧೪೮೨
ಸ್ಯುರೇವಂ ತು ಪುನರ್ವೈ ವೇತ್ಯವಧಾರಣವಾಚಕಾಃ ।
ಪ್ರಾಗತೀತಾರ್ಥಕಂ ನೂನಮವಶ್ಯಂ ನಿಶ್ಚಯೇ ದ್ವಯಮ್ ॥ ೧೪೮೩

---

೧೪೭೯. ನಹಿ, ಅ, ನೋ, ನ =ನಿಷೇಧಾರ್ಥಕ. ಅ— 'ಅ ವಿಪ್ರ ಇವ ಭಾಷಸೇ' — ವಿಪ್ರವನ್ನ ಭಾಷಸೇ ಇತ್ಯರ್ಥಃ. ಮಾಸ್ಮ, ಮಾ, ಅಲಮ್=ನಿಷೇಧಾರ್ಥಕ (ಬೇಡವೆಂದು ತಡೆಯುವಾಗ). ಚೇತ್, ಯದಿ=ಪಕ್ಷಾಂತರ ದ್ಯೋತಕ. ಅದ್ಧಾ, ಅಂಜಸಾ=ಸತ್ಯವಾಗಿ—ತಾತ್ತ್ವಿಕವಾಗಿ.

೧೪೮೦. ಪ್ರಾದುಸ್, ಆವಿಸ್=ಸ್ಫುಟತ್ವಬೋಧಕ:— ಪ್ರಾದುರ್ಭವತಿ, ಆವಿಷ್ಕರೋತಿ.' ಓಮ್, ಏವಮ್=ಅಂಗೀಕಾರ ಸೂಚಕ. ಸಮಂತತಸ್, ಪರಿತಸ್, ಸರ್ವತಸ್, ವಿಷ್ವಚ್, (ಅಭಿತಸ್, ಸಮಂತಾತ್)=ಸುತ್ತಲೂ.

೧೪೮೧. ಕಾಮಮ್=ಇಚ್ಛೆಯಿಲ್ಲದ ಒಪ್ಪಿಗೆಯ ಸೂಚಕ : 'ಕಾಮಂ ಕ್ಷಾಮ್ಯತು ಯಃ ಕ್ಷಮೀ' —ಮಾಘ. ೨-೪೩. ಅಸ್ತು, (ನಾಮ)=ಅಸೂಯಾಪೂರ್ವಕವಾದ ಒಪ್ಪಿಗೆಯ ಸೂಚಕ : 'ಅಸ್ತು ರಾಮೋ ಗುಣಜ್ಯೇಷ್ಠಃ ಕಿಂ ಮಮಾದ್ಯ ಕರಿಷ್ಯತಿ.' ನನು, ಚ=ವಿರೋಧಸೂಚಕ. ಕಚ್ಚಿತ್=ಇಷ್ಟವಾದದ್ದನ್ನು ಪ್ರಶ್ನರೂಪದಲ್ಲಿ ತಿಳಿಯಪಡಿಸುವ ಶಬ್ದ ; 'ಕಚ್ಚಿತ್ ಸೌಮ್ಯ ವ್ಯವಸಿತಮಿದಂ ಬಂಧು ಕೃತ್ಯಂ ತ್ವಯಾ ಮೇ' —ಮೇಘ ೨-೫೧.

೧೪೮೨. ನಿಃಷಮಮ್, ದುಃಷಮಮ್=ನಿಂದಾಸೂಚಕ. ಯಥಾ ಸ್ವಮ್, ಯಥಾ ಯಥಮ್=ಯಥಾಯೋಗ್ಯವಾಗಿ. ಮೃಷಾ, ಮಿಥ್ಯಾ=ಅಸತ್ಯ. ಯಥಾತಥಮ್=ಸತ್ಯ.

೧೪೮೩. ಏವಮ್, ತು, ಪುನರ್, ವಾ, ಏವ=ಅವಧಾರಣಬೋಧಕ. ಪ್ರಾಚ್=ಹಿಂದೆ. ನೂನಮ್, ಅವಶ್ಯಮ್=ನಿಶ್ಚಯವಾಗಿ.



ಸಂವದ್ವರ್ಷೇಽವರೇ ತ್ವರ್ವಾಗಾಮೇವಂ ಸ್ವಯಮಾತ್ಮನಾ ।
ಅಲ್ಪೇ ನೀಚೈರ್ಮಹತ್ಯುಚ್ಚೈಃ ಪ್ರಾಯೋ ಭೂಮ್ನ್ಯದ್ರುತೇ ಶನೈಃ ॥ ೧೪೮೪
ಸನಾ ನಿತ್ಯೇ ಬಹಿರ್ಬಾಹ್ಯೇ ಸ್ಮಾತೀತೇಽಸ್ತಮದರ್ಶನೇ ।
ಅಸ್ತಿ ಸತ್ತ್ವೇ ರುಷೋಕ್ತಾವು ಊಂ ಪ್ರಶ್ನೇಽನುನಯೇ ತ್ವಯಿ ॥ ೧೪೮೫
ಹುಂ ತರ್ಕೇ ಸ್ಯಾದುಷಾ ರಾತ್ರೇರವಸಾನೇ ನಮೋ ನತೌ ।
ಪುನರರ್ಥೇಽಂಗ ನಿಂದಾಯಾಂ ದುಷ್ಠು ಸುಷ್ಠು ಪ್ರಶಂಸನೇ ॥ ೧೪೮೬
ಆಮಾನುಗುಣ್ಯೇ ಸ್ಮರಣೇಽಯೇ ಫಡ್ವಿಘ್ನನಿರಾಕೃತೌ ।
ಅಂಗೀಕೃತೌ ಸ್ಯಾದಥಕಿಂ ಹೀನಸಂಬೋಧನೇ ತು ರೇ ॥ ೧೪೮೭
ಸಾಯಂ ಸಾಯೇ ಪ್ರಗೇ ಪ್ರಾತಃ ಪ್ರಭಾತೇ ನಿಕಷಾಂತಿಕೇ ।
ಪರುತ್ಪರಾರ್ಯೈಷಮೋಽಬ್ದೇ ಪೂರ್ವೇ ಪೂರ್ವತರೇ ಯತಿ ॥ ೧೪೮೮

---

೧೪೮೪. ಸಂವತ್=ಸಂವತ್ಸರ. ಅರ್ವಾಚ್=ಈಚೆಗೆ (ಈ ಕಾಲದಲ್ಲಿ). ಆಮ್, ಏವಮ್=ನಿಶ್ಚಯ ಸೂಚಕ. ಸ್ವಯಮ್=ತಾನಾಗಿ. ನೀಚೈಸ್=ಅಲ್ಪವಾದ. ಉಚ್ಚೈಸ್=ದೊಡ್ಡದಾದ. ಪ್ರಾಯಸ್=ವಿಶೇಷವಾಗಿ. ಶನೈಸ್=ಮೆಲ್ಲಗೆ.

೧೪೮೫. ಸನಾ=ನಿತ್ಯವಾದ— 'ಸನಾತನ.' ಬಹಿಸ್=ಹೊರಗೆ, ಸ್ಮ=ಭೂತಕಾಲಸೂಚಕ : 'ಭವತಿಸ್ಮ.' ಅಸ್ತಮ್=ಅದರ್ಶನಬೋಧಕ : 'ಅಸ್ತಂಗತಃ.' ಅಸ್ತಿ=ಉಂಟು (ಇದೆ) ಉ=ಕೋಪಸೂಚಕ. ಊಮ್(ಉಮ್)ಪ್ರಶ್ನಾರ್ಥಕ. ಅಯಿ=ಸಾಂತ್ವನ ಬೋಧಕ.

೧೪೮೬. ಹುಮ್=ಊಹಬೋಧಕ. ಉಷಾ=ಬೆಳಗಿನ ಜಾವ. ನಮಸ್=ನಮಸ್ಕಾರ. ಅಂಗ=ಪುನಃ. ದುಷ್ಠು=ಕೆಟ್ಟದು. ಸುಷ್ಠು=ಒಳ್ಳೆಯದು.

೧೪೮೭. ಆಮ=ಸರಿಯಾಗಿದೆ. ಅಯೇ=ಸ್ಮರಣದ್ಯೋತಕ. ಫಟ್=ವಿಘ್ನವು ಪರಿಹೃತವಾಗಲಿ ಎಂಬ ಅರ್ಥದ ದ್ಯೋತಕ. ಅಥಕಿಮ್=ಹೌದು. ರೇ=ಕೆಳಮಟ್ಟದವರ ಸಂಬೋಧನೆಯ ಸೂಚಕ.

೧೪೮೮. ಸಾಯಮ್=ಸಾಯಂಕಾಲ. ಪ್ರಗೇ, ಪ್ರಾತರ್=ಪ್ರಾತಃಕಾಲ. ನಿಕಷಾ=ಸಮೀಪದಲ್ಲಿ. ಪರುತ್=ಕಳೆದ ವರ್ಷ. ಪರಾರಿ=ಕಳೆದ ವರ್ಷಕ್ಕೂ ಹಿಂದಿನ ವರ್ಷ. ಐಷಮಸ್=ಈ ವರ್ಷ.

೧೪೮೯. ಅದ್ಯ=ಈ ದಿನದಲ್ಲಿ. ಪೂರ್ವಾದಿಶಬ್ದಗಳಿಂದ ಪೂರ್ವದಿನದಲ್ಲಿ' ಇತ್ಯಾದ್ಯರ್ಥಗಳಲ್ಲಿ 'ಪೂರ್ವೇದ್ಯುಃ' ಮುಂತಾದ ರೂಪಗಳು ನಿಷ್ಪನ್ನಗಳಾಗುತ್ತವೆ.

ಅದ್ಯಾತ್ರಾಹ್ನ್ಯಥ ಪೂರ್ವೇಽಹ್ನೀತ್ಯಾದೌ ಪೂರ್ವೋತ್ತರಾಪರಾತ್ ।
ತಥಾಧರಾನ್ಯಾನ್ಯತರೇತರಾತ್ಪೂರ್ವೇದ್ಯುರಾದಯಃ ॥ ೧೪೭೯
ಉಭಯದ್ಯುಶ್ಚೋಭಯೇದ್ಯುಃ ಪರೇ ತ್ವಹ್ನಿ ಪರೇದ್ಯವಿ ।
ಹ್ಯೋ ಗತೇಽನಾಗತೇಽಹ್ನಿ ಶ್ವಃ ಪರಶ್ವಸ್ತತ್ಪರೇಽಹನಿ ॥ ೧೪೮೦
ತದಾ ತದಾನೀಂ ಯುಗಪದೇಕದಾ ಸರ್ವದಾ ಸದಾ ।
ಏತರ್ಹಿ ಸಂಪ್ರತೀದಾನೀ ಮಧುನಾ ಸಾಂಪ್ರತಂ ತಥಾ ॥ ೧೪೮೧
ದಿಗ್ದೇಶಕಾಲೇ ಪೂರ್ವಾದೌ ಪ್ರಾಗುದಕ್ಪ್ರತ್ಯಗಾದಯಃ ।

ಇತ್ಯವ್ಯಯವರ್ಗಃ

---

ಹೇಗೆಂದರೆ :—ಪೂರ್ವೇದ್ಯುಸ್=ನಿನ್ನೆ, ಉತ್ತರೇದ್ಯುಸ್=ಮಾರನೆಯ ದಿನ, ಅಪರೇದ್ಯುಸ್=ಇನ್ನೊಂದು ದಿನ, ಅಧರೇದ್ಯುಸ್=ಹಿಂದಿನ ದಿನ, ಅನ್ಯೇದ್ಯುಸ್=ಇನ್ನೊಂದು ದಿನ, ಅನ್ಯತರೇದ್ಯುಸ್=ಯಾವುದಾದರೊಂದು ದಿನ, ಇತರೇದ್ಯುಸ್=ಇನ್ನೊಂದು ದಿನ.

೧೪೮೦. ಉಭಯದ್ಯುಸ್, ಉಭಯೇದ್ಯುಸ್=ಎರಡು ದಿನಗಳಲ್ಲಿಯೂ. ಪರೇದ್ಯವಿ=ಮಾರನೆಯ ದಿನ. ಹ್ಯಸ್=ನಿನ್ನೆ. ಶ್ವಸ್=ನಾಳೆ. ಪರಶ್ವಸ್=ನಾಡಿದ್ದು.

೧೪೮೧. ತದಾ, ತದಾನೀಮ್=ಆಗ. ಯುಗಪತ್, ಏಕದಾ=ಒಂದೇ ಕಾಲದಲ್ಲಿ (ಒಟ್ಟಿಗೆ). ಸರ್ವದಾ, ಸದಾ=ಯಾವಾಗಲೂ. ಏತರ್ಹಿ, ಸಂಪ್ರತಿ. ಇದಾನೀಮ್, ಅಧುನಾ, ಸಾಂಪ್ರತಮ್=ಈಗ.

೧೪೮೨. ಪ್ರಾಚ್ (ಕ್) ಮುಂತಾದ ಶಬ್ದಗಳು ಪೂರ್ವ ಮುಂತಾದ ಶಬ್ದಗಳಿಂದ ನಿಷ್ಪನ್ನವಾಗಿ ಆಯಾ ದಿಕ್ಕು ದೇಶ ಕಾಲ—ಎಂಬ ಅರ್ಥಗಳನ್ನು ಬೋಧಿಸುತ್ತವೆ. ಇವುಗಳಿಗೆ ಪ್ರಥಮಾ ಪಂಚಮೀ ಸಪ್ತಮೀ ವಿಭಕ್ತ್ಯರ್ಥಗಳುಂಟು. ಹೇಗೆಂದರೆ : ಪ್ರಾಚ್=ಪೂರ್ವದಿಕ್ಕು, ಪೂರ್ವದಿಕ್ಕಿನ ದೆಸೆಯಿಂದ, ಪೂರ್ವದಿಕ್ಕಿನಲ್ಲಿ. ಹೀಗೆಯೇ ಮುಂದಿನ ಶಬ್ದಾರ್ಥಗಳನ್ನೂ ಊಹಿಸಿಕೊಳ್ಳಬೇಕು. ಪ್ರಾಚ್(ಕ್)=ಪೂರ್ವದಿಕ್ಕು, ಪೂರ್ವದೇಶ, ಪೂರ್ವಕಾಲ. ಉದಚ್(ಕ್)=ಉತ್ತರದಿಕ್ಕು, ಉತ್ತರದೇಶ. (ದಿಕ್ಕು, ದೇಶ, ಕಾಲ— ಇವುಗಳಲ್ಲಿ ಯಾವ ಅರ್ಥಕ್ಕೆ ಹೊಂದಾಣಿಕೆಯುಂಟೋ ಅದನ್ನು ಮಾತ್ರ ಗ್ರಹಿಸಬೇಕು.) ಪ್ರತ್ಯಚ್ (ಕ್)=ಪಶ್ಚಿಮ ದಿಕ್ಕು. ಅವಾಚ್ (ಕ್)=ದಕ್ಷಿಣ ದಿಕ್ಕು. ದಕ್ಷಿಣತಸ್, ದಕ್ಷಿಣಾತ್, ದಕ್ಷಿಣಾ, ದಕ್ಷಿಣಾಹಿ, ದಕ್ಷಿಣೇನ=ದಕ್ಷಿಣದಿಕ್ಕಿನಲ್ಲಿ. ಉತ್ತರತಸ್, ಉತ್ತರಾತ್, ಉತ್ತರಾ, ಉತ್ತರಾಹಿ, ಉತ್ತರೇಣ=ಉತ್ತರ ದಿಕ್ಕಿನಲ್ಲಿ.

## ೬. ಲಿಂಗಾದಿ ಸಂಗ್ರಹವರ್ಗಃ

ಸಲಿಂಗಶಾಸ್ತ್ರೈಃ ಸನ್ನಾದಿಕೃತ್ತದ್ಧಿತಸಮಾಸಜೈಃ ॥ ೧೪೮೨
ಅನುಕ್ತಂ ಸಂಗ್ರಹೇ ಲಿಂಗಂ ಸಂಕೀರ್ಣವದಿಹೋನ್ನಯೇತ್ ।
ಲಿಂಗಶೇಷವಿಧಿರ್ವ್ಯಾಪೀ ವಿಶೇಷೈರ್ಯದ್ಯಬಾಧಿತಃ ॥ ೧೪೮೩
ಸ್ತ್ರಿಯಾಮೀದೂದ್ವಿರಾಮೈಕಾಚ್ ಸಯೋನಿಪ್ರಾಣಿನಾಮ ಚ ।
ನಾಮವಿದ್ಯುನ್ನಿಶಾವಲ್ಲೀವಾಣೀದಿಗ್ಭೂನದೀಧಿಯಾಮ್ ॥ ೧೪೮೪

---

### ಲಿಂಗಾದಿ ಸಂಗ್ರಹವರ್ಗ ಸೂಚನೆ

೧೪೮೨—೧೪೮೩. ಈ ಸಂಗ್ರಹ ವರ್ಗದಲ್ಲಿ ಹೇಳದಿರುವ ಲಿಂಗವನ್ನು ಸನ್ ಮುಂತಾದ ಪ್ರತ್ಯಯಗಳು, ಕೃತ್ ತದ್ಧಿತಗಳು, ಸಮಾಸ—ಮುಂತಾದ ವಿಧಾನ ಸಂದರ್ಭಗಳಲ್ಲಿ ವ್ಯಾಕರಣ ಶಾಸ್ತ್ರದಲ್ಲಿ ಹೇಳಿದ ಲಿಂಗವಿಧಾಯಕ ಸೂತ್ರಗಳಿಂದ, ಸಂಕೀರ್ಣ ವರ್ಗದಲ್ಲಿ ಹೇಗೋ ಹಾಗೆ ಊಹಿಸಿಕೊಳ್ಳಬೇಕು. ಅಲ್ಲಲ್ಲಿ ಹೇಳಿದ ವಿಶೇಷ ವಿಧಾನಗಳಿಂದ ಬಾಧೆ ಇಲ್ಲದಿದ್ದಾಗ, ಈ ವರ್ಗದಲ್ಲಿ ಹೇಳಿದ ಲಿಂಗವಿಧಾನವು ಅಮರಕೋಶದ ಮೂರು ಕಾಂಡಗಳಿಗೂ ಅನ್ವಯಿಸುತ್ತದೆ.

ವಿವರಣೆ :— ಈ ವರ್ಗದಲ್ಲಿ ಶಬ್ದಗಳ ಲಿಂಗವನ್ನು ನಾನಾ ಬಗೆಯಲ್ಲಿ ತಿಳಿಸಲಾಗುತ್ತದೆ. ಆದರೂ ಕೆಲವು ಶಬ್ದಗಳ ಲಿಂಗವನ್ನು ಹೇಳದೆ ಇರಬಹುದು. ಅವುಗಳ ಲಿಂಗವನ್ನು 'ಸ್ತ್ರಿಯಾಂ ಕ್ತಿನ್' (೩–೩–೯೪), ಣಚಃ ಸ್ತ್ರಿಯಾಮಞ್ (೫–೪–೧೪), ಸ ನಪುಂಸಕಮ್ (೨–೪–೧೭) ಮುಂತಾದ ವ್ಯಾಕರಣ ಸೂತ್ರಗಳಿಂದ ತಿಳಿದುಕೊಳ್ಳಬೇಕು.

ಇಲ್ಲಿ ಹೇಳಿರುವುದು ಸಾಮಾನ್ಯವಾಗಿ ಉತ್ಸರ್ಗ. ಇದಕ್ಕೆ ವಿಶೇಷ ವಿಧಿಯಿಂದ ಎಂದರೆ ಅಪವಾದ ವಿಧಿಯಿಂದ ಬಾಧೆ ಇರಬಹುದು. ಎಲ್ಲಿ ಬಾಧೆ ಇಲ್ಲವೋ ಅಲ್ಲಿ ಮಾತ್ರ ಈ ಉತ್ಸರ್ಗವು ಪ್ರವರ್ತಿಸುತ್ತದೆ. ಹೇಗೆಂದರೆ, ೧೪೮೪ನೆಯ ಶ್ಲೋಕದಲ್ಲಿ ಹೆಣ್ಣುಜಾತಿಯನ್ನು ಬೋಧಿಸುವ ಶಬ್ದಗಳು ಸ್ತ್ರೀಲಿಂಗಗಳೆಂದು ಹೇಳಿದೆ. ಇದು ಉತ್ಸರ್ಗ. ಹಿಂದೆ ಮನುಷ್ಯವರ್ಗದಲ್ಲಿ 'ಪುಂಭೂಮ್ನಿ ದಾರಾಃ' (೫೭೫) ಎಂದು ಹೇಳಿದೆ. ಇದು ಅಪವಾದ. ಆದ್ದರಿಂದ ದಾರಶಬ್ದವು ಹೆಣ್ಣುಜಾತಿಯನ್ನು ಬೋಧಿಸಿದರೂ ಪುಲ್ಲಿಂಗವೆಂದು ತಿಳಿಯಬೇಕು.

ಟಿಪ್ಪಣಿ :—ಮೇಲೆ ಮೂಲದಲ್ಲಿ 'ಸನ್ನಂತ' ಎಂದು ಹೇಳಿದ್ದಕ್ಕೆ ಚಿಕೀರ್ಷಾ, ಪುತ್ರಕಾಮ್ಯಾ ಮೊದಲಾದದ್ದು ಉದಾಹರಣೆ. ಈ ವರ್ಗದಲ್ಲಿ ಗ್ರಂಥಕಾರನು ಶಬ್ದಗಳ ಅರ್ಥವನ್ನು ಹೇಳದಿದ್ದರೂ ಉಪಯುಕ್ತವಾಗಲೆಂದು ಕನ್ನಡ ಟೀಕೆಯಲ್ಲಿ ಕಠಿನ ಶಬ್ದಗಳಿಗೆ ಅರ್ಥವನ್ನು ಬರೆಯಲಾಗಿದೆ.

**ಅದಂತೈರ್ದ್ವಿಗುರೇಕಾರ್ಥೋ ನ ಸ ಪಾತ್ರಯುಗಾದಿಭಿಃ ।**
**ತಲ್ವೃಂದೇ ಯೇನಿಕಟ್ಯತ್ರಾ ವೈರಮೈಥುನಿಕಾದಿವುನ್ ॥ ೧೪೮೫**
**ಸ್ತ್ರೀ ಭಾವಾದಾವನಿಕ್ತಿಣ್ಣ್ವುಲ್ಣಚ್ಣ್ವುಚ್ಯ್ಯಬ್ಯುಜಿಞಿಜ್ನಿಶಾಃ ।**
**ಉಣಾದಿಷು ನಿರೂರೀಶ್ಚಙ್ಯಾಬೂಜಂತಂ ಚಲಂ ಸ್ಥಿರಮ್ ॥ ೧೪೮೬**

---

## ಸ್ತ್ರೀಲಿಂಗ ಶೇಷ

೧೪೮೪. ಮುಂದೆ ಹೇಳುವ ಶಬ್ದಗಳು ಸ್ತ್ರೀಲಿಂಗದಲ್ಲಿರುತ್ತವೆ :

ಒಂದೇ ಸ್ವರವಿರುವ ಈಕಾರಾಂತ ಮತ್ತು ಊಕಾರಾಂತಗಳು—ಶ್ರೀ, ಹ್ರೀ, ಧೀ, ಭ್ರೂ, ಭೂ (ಇರುವಿಕೆ). ಯೋನಿವಿಶಿಷ್ಟವಾದ ಎಂದರೆ ಹೆಣ್ಣು ಜಾತಿಯ ಬೋಧಕಗಳು—ಮಾತೃ, ದುಹಿತೃ, ಸ್ವಸೃ. ಮಿಂಚಿನ ಪರ್ಯಾಯ—ವಿದ್ಯುತ್, ತಟಿತ್. ರಾತ್ರಿಯ ಪರ್ಯಾಯ—ರಜನಿ, ರಾತ್ರಿ. ಬಳ್ಳಿಯ ಪರ್ಯಾಯ—ವಲ್ಲಿ, ವೀರುಧ್. ಮಾತಿನ ಪರ್ಯಾಯ—ವಾಚ್, ಗೋ. ದಿಕ್ಕಿನ ಪರ್ಯಾಯ—ಹರಿತ್, ಕಕುಭ್. ಭೂಮಿಪರ್ಯಾಯ—ಭೂ, ಭೂಮಿ, ಕು. ನದೀಪರ್ಯಾಯ—ಸರಿತ್, ತ್ರಿಸ್ರೋತಸ್. ಬುದ್ಧಿ ಪರ್ಯಾಯ—ಸಂವಿದ್, ಚಿತ್.

೧೪೮೫. ಅಕಾರಾಂತವಾದ ಸಮಾಹಾರ ದ್ವಿಗುಸಮಾಸ—ತ್ರಿಲೋಕೀ (ತ್ರಿಲೋಕ), ಪಂಚಾಕ್ಷರೀ (ಪಂಚಾಕ್ಷರ). ಆದರೆ ಪಾತ್ರ, ಯುಗ ಮುಂತಾದವು ಉತ್ತರ ಪದವಾಗಿರುವ ಕೆಲವು ಶಬ್ದಗಳು ಸ್ತ್ರೀಲಿಂಗದಲ್ಲಿರುವುದಿಲ್ಲ ; ನಪುಂಸಕದಲ್ಲಿರುತ್ತವೆ :—ಪಂಚಪಾತ್ರ, ಚತುರ್ಯುಗ, ತ್ರಿಭುವನ.

ತಲ್ ಪ್ರತ್ಯಯಾಂತಗಳು—ಜನತಾ, ಬಂಧುತಾ ; ಮನುಷ್ಯತಾ, ರಾಗಿತಾ. ಸಮೂಹಾರ್ಥವನ್ನು ಕೊಡುವ ಯ, ಇನಿ, ಕಟ್ಯಚ್, ತ್ರ ಪ್ರತ್ಯಯಾಂತಗಳು—ಪಾಶ್ಯಾ, ವಾತ್ಯಾ, ಶಾಕಿನೀ, ಡಾಕಿನೀ, ರಥಕಟ್ಯಾ, ಗೋತ್ರಾ. ವೈರ ಮತ್ತು ಪರಸ್ಪರ ವಿವಾಹ ಸಂಬಂಧ ಮುಂತಾದ್ದನ್ನು ಬೋಧಿಸುವ ವುನ್ ಪ್ರತ್ಯಯಾಂತಗಳು—ಕಾಕೋಲೂಕಿಕಾ, ಅಹಿನಕುಲಿಕಾ; ಅತ್ರಿಭರದ್ವಾಜಿಕಾ, ಕುತ್ಸಕುಶಿಕಿಕಾ (ಕುತ್ಸ ಮತ್ತು ಕುಶಿಕರ ವಿವಾಹ ಸಂಬಂಧ). ಹೀಗೆಯೇ ದ್ವಿಶತಿಕಾ (ಎರಡು ನೂರುಗಳು), ದ್ವಿಮೋದಕಿಕಾ (ಎರಡೆರಡು ಮೋದಕಗಳು) ಇತ್ಯಾದಿ. ಇವು ಸ್ತ್ರೀಲಿಂಗಗಳು.

೧೪೮೬. ಸ್ತ್ರಿಯಾಮ್ (ಪಾ. ಸೂ. ೩—೩—೯೪) ಎಂಬ ಅಧಿಕಾರದಲ್ಲಿ ಹೇಳಲ್ಪಟ್ಟಿರುವ ಭಾವಾದ್ಯರ್ಥಕಗಳಾದ ಅನಿ, ಕ್ತಿನ್, ಣ್ವುಲ್, ಣಚ್, ಣ್ವುಚ್, ಕ್ಯಪ್, ಯುಚ್, ಇಞ್, ಅಙ್, ನಿ, ಶ, ಪ್ರತ್ಯಯಾಂತಗಳು—ಅಜನನಿ (ಹುಟ್ಟದಿರುವುದು), ಅಕರಣಿ (ಮಾಡದಿರುವುದು) ; ಗತಿ, ರತಿ ; ಪ್ರವಾಹಿಕಾ (ಒಂದು ರೋಗ), ಶಾಯಿಕಾ (ಮಲಗುವುದು) ; ವ್ಯಾವಕ್ರೋಶೀ (ಪರಸ್ಪರ ಕೂಗಿಕೊಳ್ಳುವುದು), ವ್ಯಾತ್ಯುಕ್ಷೀ (ಪರಸ್ಪರ ನೀರೆರುಚುವುದು); ಆಸಿಕಾ (ಕುಳಿತುಕೊಳ್ಳುವ ರೀತಿ), ಅಗ್ರಗಾಮಿಕಾ (ಮುಂದೆ ಹೋಗುವ ಅರ್ಹತೆ) ; ಇಜ್ಯಾ, ವ್ರಜ್ಯಾ (ಗಮನ) ; ಭಾವನಾ, ಕಾಮನಾ ; ಕಾರಿ (ಕ್ರಿಯೆ), ಗಣಿ (ಗಣನೆ) ; ತ್ರಪಾ, ಭಿದಾ ; ಹಾನಿ, ಗ್ಲಾನಿ ; ಕ್ರಿಯಾ, ಇಚ್ಛಾ. ಇವು ಸ್ತ್ರೀಲಿಂಗಗಳು.

ಉಣಾದಿ ಸೂತ್ರಗಳಿಂದ ಸಿದ್ಧವಾಗುವ ನಿ, ಊಕಾರ, ಈಕಾರಾಂತ ಶಬ್ದಗಳು— ಧಮನಿ, ಸರಣಿ ; ಚಮೂ, ತನೂ ; ತರೀ (ದೋಣಿ), ತಂತ್ರೀ (ತಂತಿ). ವಿಶೇಷ್ಯನಿಘ್ನಗಳಾಗಲಿ ನಿಯತಲಿಂಗಗಳಾಗಲಿ ಙೀ (ಙೀಪ್, ಙೀಷ್, ಙೀನ್), ಆಪ್ (ಚಾಪ್, ಟಾಪ್, ಡಾಪ್) ಪ್ರತ್ಯಯಾಂತಗಳು—ಕುಮಾರೀ, ಮಹತೀ ; ಗೌರೀ, ಗೋಪೀ ; ಬ್ರಾಹ್ಮಣೀ, ಗೌತಮೀ ; ಕಾರೀಷಗಂಧ್ಯಾ; ಅಜಾ, ಖಟ್ವಾ (ಮಂಚ) ; ದಾಮಾ, ಸೀಮಾ—ಇವು ಸ್ತ್ರೀಲಿಂಗಗಳು.



**ತತ್ಕ್ರೀಡಾಯಾಂ ಪ್ರಹರಣಂ ಚೇನ್ಮೌಷ್ಟಾ ಪಾಲ್ಲವಾ ಣದಿಕ್ ।**
**ಘಞೋಞಸ್ಸಾಸ್ಕ್ರಿಯಾಽಸ್ಯಾಂ ಚೇದ್ದಾಂಡಪಾತಾ ಹಿ ಫಾಲ್ಗುನೀ ॥ ೧೪೮೭**
**ಶ್ಯೈನಂಪಾತಾ ಚ ಮೃಗಯಾ ತೈಲಂಪಾತಾ ಸ್ವಧೇತಿ ದಿಕ್ ।**
**ಸ್ತ್ರೀ ಸ್ಯಾತ್ಕಾಚಿನ್ಮೃಣಾಲ್ಯಾದಿರ್ವಿವಕ್ಷಾಪಚಯೇ ಯದಿ ॥ ೧೪೮೮**

---

೧೪೮೭—೧೪೮೮. 'ಅದು ಈ ಆಟದಲ್ಲಿ ಹೊಡೆಯುವ ಸಾಧನ' ಎಂಬ ಅರ್ಥದಲ್ಲಿ ಬರುವ ಣ ಪ್ರತ್ಯಯಾಂತ —ಮೌಷ್ಟಾ (ಮುಷ್ಟಿಯಿಂದ ಹೊಡೆದು ಆಡುವ ಒಂದು ಕ್ರೀಡೆ), ಪಾಲ್ಲವಾ (ಸಣ್ಣ ಕೊಂಬೆಯಿಂದ ಹೊಡೆದು ಆಡುವ ಒಂದು ಕ್ರೀಡೆ). ಇದು ದಿಕ್= ಉದಾಹರಣಮಾತ್ರ. ಹೀಗೆಯೇ ದಾಂಡಾ ಇತ್ಯಾದಿ.

'ಘಞಃ ಸಾಸ್ಯಾಂ ಕ್ರಿಯೇತಿ ಞಃ' (೪—೨—೫೮) ಎಂಬ ಸೂತ್ರದಿಂದ ಸಿದ್ಧವಾಗುವ ಶಬ್ದ—ದಾಂಡಪಾತಾ (ದಂಡಪಾತವುಳ್ಳ ತಿಥಿ. ಹೋಳಿಹುಣ್ಣಿಮೆ) ಶ್ಯೈನಂಪಾತಾ (ಗಿಡಗವನ್ನು ಎರಗಿಸಿ ಆಡುವ ಬೇಟೆ). ತೈಲಂಪಾತಾ (ಎಳ್ಳನ್ನು ಹಾಕಿ ಮಾಡುವ ಹೋಮ). ಇದು ದಿಕ್= ಉದಾಹರಣಮಾತ್ರ. ಹೀಗೆಯೇ ಮೌಸಲಪಾತಾ ಇತ್ಯಾದಿ. ಇವು ಸ್ತ್ರೀಲಿಂಗಗಳು.

೧೪೮೮—೧೪೮೯. ಅಲ್ಪಾರ್ಥದಲ್ಲಿ ಕೆಲವು ಶಬ್ದಗಳು—ಅಲ್ಪಂ ಮೃಣಾಲಂ ಮೃಣಾಲೀ. ಹೀಗೆಯೇ ಘಟೀ, ಪಟೀ, ಮಠೀ ಇತ್ಯಾದಿ. ಲಂಕಾ, ಶೇಫಾಲಿಕಾ, ಟೀಕಾ, ಧಾತಕೀ (ಮರಾಟ ಮೊಗ್ಗು), ಪಂಜಿಕಾ (ಪಂಜು,) ಆಢಕೀ (ತೊಗರಿ), ಸಿಧ್ರಕಾ (ಒಂದು ಮರ), ಶಾರಿಕಾ (ಒಂದು ಪಕ್ಷಿ), ಹಿಕ್ಕಾ (ಬಿಕ್ಕಳಿಕೆ), ಪ್ರಾಚಿಕಾ (ಕಾಡುನೊಣ), ಉಲ್ಕಾ, ಪಿಪೀಲಿಕಾ.

**ಲಂಕಾ ಶೇಫಾಲಿಕಾ ಟೀಕಾ ಧಾತಕೀ ಪಂಜಿಕಾಢಕೀ ।**
**ಸಿಧ್ರಕಾ ಶಾರಿಕಾ ಹಿಕ್ಕಾ ಪ್ರಾಚಿಕೋಲ್ಕಾ ಪಿಪೀಲಿಕಾ ॥** ೧೪೮೯
**ತಿಂದುಕೀ ಕಣಿಕಾ ಭಂಗೀ ಸುರಂಗಾಸೂಚಿಮಾಢಯಃ ।**
**ಪಿಚ್ಛಾವಿತಂಡಾಕಾಕಿಣ್ಯಶ್ಚೂರ್ಣಿಶ್ಶಾಣೀ ದ್ರುಣೀ ದರತ್ ॥** ೧೪೯೦
**ಸಾತಿಃ ಕಂಥಾ ತಥಾಸಂದೀ ನಾಭೀ ರಾಜಸಭಾಪಿ ಚ ।**
**ಝುಲ್ಲರೀ ಚರ್ಚರೀ ಪಾರೀ ಹೋರಾ ಲಟ್ವಾಚ ಸಿಧ್ಮಲಾ ॥** ೧೪೯೧
**ಲಾಕ್ಷಾ ಲಿಕ್ಷಾ ಚ ಗಂಡೂಷಾ ಗೃಧ್ರಸೀ ಚಮಸೀ ಮಸೀ ।**

ಇತಿ ಸ್ತ್ರೀಲಿಂಗಶೇಷಃ

**ಪುಂಸ್ತ್ವೇ ಸಭೇದಾನುಚರಾಸ್ಸಪರ್ಯಾಯಾಸ್ಸುರಾಸ್ಸುರಾಃ ॥** ೧೪೯೨

೧೪೯೦. ತಿಂದುಕೀ (ತೂಬರೆ ಗಿಡ), ಕಣಿಕಾ, ಭಂಗೀ, ಸುರಂಗಾ (ಸುರಂಗ), ಸೂಚಿ, ಮಾಢಿ (ಚಿಗುರು ಎಲೆ, ಬಟ್ಟೆಯ ಅಂಚು), ಪಿಚ್ಛಾ (ರಸಿಗೆ, ಗಂಜಿ), ವಿತಂಡಾ, ಕಾಕಿಣೀ (ಕಾಸು, ಪೈಸೆ), ಚೂರ್ಣಿ (ಪುಡಿ ಮಾಡುವುದು), ಶಾಣೀ (ಸೆಣಬಿನ ಚೀಲ), ದ್ರುಣೀ (ನೀರಿನ ತೊಟ್ಟಿ), ದರದ್ (ಪ್ರಪಾತ, ಕಂದಕ). ಇವು ಸ್ತ್ರೀಲಿಂಗಗಳು.

೧೪೯೧. ಸಾತಿ (ದಾನ, ಅವಸಾನ), ಕಂಥಾ (ಹರಕುಬಟ್ಟೆ, ಜೋಳಿಗೆ), ಆಸಂದೀ (ಪೀಠ), ನಾಭಿ, ರಾಜಸಭಾ, ಝುಲ್ಲರೀ (ಜಾಲರಿ, ಮುಂಗುರುಳು), ಚರ್ಚರೀ (ಚಪ್ಪಾಳೆ, ಒಂದು ಗೀತ) ಪಾರೀ (ಹೂಜಿ, ಆನೆಯನ್ನು ಕಟ್ಟುವ ಹಗ್ಗ), ಹೋರಾ (ಮೇಷಾದಿ ಲಗ್ನ, ರಾಶಿಯ ಅರ್ಧ), ಲಟ್ವಾ (ಒಂದು ಹಕ್ಕಿ), ಸಿಧ್ಮಲಾ (ಮೀನಿನ ಅಡಿಗೆ).

೧೪೯೨. ಲಾಕ್ಷಾ, ಲಿಕ್ಷಾ (ಹೇನಿನ ಮೊಟ್ಟೆ—ಶೀರೆ). ಗಂಡೂಷಾ (ಬಾಯಿಮುಕ್ಕಳಿಸುವುದು) ಗೃಧ್ರಸೀ (ವಾತರೋಗ), ಚಮಸೀ (ಯಜ್ಞಪಾತ್ರೆ, ಚಮಚ), ಮಸೀ (ಮಸಿ, ಕಪ್ಪುನೀರು). ಇವು ಸ್ತ್ರೀಲಿಂಗಗಳು.

## ಪುಲ್ಲಿಂಗ ಶೇಷ

೧೪೯೨. ಮುಂದೆ ಹೇಳುವ ಶಬ್ದಗಳು ಪುಲ್ಲಿಂಗದಲ್ಲಿರುತ್ತವೆ :—ದೇವತೆಗಳ ಪರ್ಯಾಯ—ಅಮರ, ನಿರ್ಜರ, ಸುರ, ದೇವ ಇತ್ಯಾದಿ. ಆದರೆ 'ದೈವತಾನಿ ಪುಂಸಿ ವಾ' 'ದೇವತಾ ಸ್ತ್ರಿಯಾಮ್' ಎಂಬುದು ಅಪವಾದ. ದೇವತೆಗಳ ಅಂತರ್ಭೇದಗಳು—ತುಷಿತ,



**ಸ್ವರ್ಗಯಾಗಾದ್ರಿಮೇಘಾಬ್ಧಿದ್ರುಕಾಲಾಸಿಶರಾರಯಃ ।**
**ಕರಗಂಡೌಷ್ಠದೋರ್ದಂತಕಂಠಕೇಶನಖಸ್ತನಾಃ ॥** ೧೪೯೩

ಸಾಧ್ಯ ಇತ್ಯಾದಿ. ದೇವತೆಗಳ ಅನುಚರರು—ಹಾಹಾ, ಹೂಹೂ, ಮಾತಲಿ ಇತ್ಯಾದಿ. ಅಸುರರ ಪರ್ಯಾಯ—ದೈತ್ಯ, ದೈತೇಯ, ದಾನವ ಇತ್ಯಾದಿ. ರಕ್ಷಸ್ (ನ) ಎಂಬುದು ಅಪವಾದ. ಅಸುರರ ಅಂತರ್ಭೇದಗಳು—ಬಲಿ, ನಮುಚಿ, ಜಂಭ ಇತ್ಯಾದಿ. ಅಸುರರ ಅನುಚರರು—ಮುಂಡ, ಕೂಷ್ಮಾಂಡ, ಕುಂಭ ಇತ್ಯಾದಿ. ಇವು ಪುಲ್ಲಿಂಗಗಳು.

೧೪೯೩. ಸ್ವರ್ಗಪರ್ಯಾಯ—ನಾಕ, ತ್ರಿದಿವ, ಸ್ವರ್ಗ. ಆದರೆ 'ದ್ಯೋದಿವೌ ದ್ವೇಸ್ತ್ರಿಯಾಂ, ಕ್ಲೀಬೇ ತ್ರಿವಿಷ್ಟಪಮ್' ಎಂಬುದು ಅಪವಾದ. ಯಾಗಪರ್ಯಾಯ—ಯಜ್ಞ, ಮಖ, ಕ್ರತು. ಯಾಗಭೇದ—ಅಶ್ವಮೇಧ, ಉಕ್ಥ. ಪರ್ವತಪರ್ಯಾಯ—ಅದ್ರಿ, ಗಿರಿ, ಪರ್ವತ. ಪರ್ವತ ಭೇದ—ಮೇರು, ಸಹ್ಯ. ಮೇಘಪರ್ಯಾಯ—ಘನ, ಜಲದ. ಅಭ್ರ ಎಂಬುದು ಅಪವಾದ. ಮೇಘಭೇದ—ಪುಷ್ಕರ, ಆವರ್ತಕ. ಸಮುದ್ರ ಪರ್ಯಾಯ — ಅಬ್ಧಿ, ಸಾಗರ. ಸಮುದ್ರಭೇದ—ಕ್ಷೀರೋದ, ಲವಣೋದ. ವೃಕ್ಷಪರ್ಯಾಯ—ದ್ರು, ವೃಕ್ಷ, ಶಾಖಿನ್. ವೃಕ್ಷಭೇದ—ಪ್ಲಕ್ಷ, ವಟ, ಆಮ್ರ. ಪಾಟಲಾ, ಶಿಂಶಪಾ ಮೊದಲಾದ್ದು ಅಪವಾದ. ಕಾಲಪರ್ಯಾಯ—ಕಾಲ, ಸಮಯ, ದಿಷ್ಟ. ಕಾಲಭೇದ—ಪಕ್ಷ, ಮಾಸ, ಋತು. ದಿನ, ತಿಥಿ, ಅಹನ್, ರಾತ್ರಿ ಇತ್ಯಾದಿಗಳು ಅಪವಾದ. ಖಡ್ಗಪರ್ಯಾಯ—ಅಸಿ, ಖಡ್ಗ, ಮಂಡಲಾಗ್ರ. ಖಡ್ಗಭೇದ—ನಂದಕ, ಚಂದ್ರಹಾಸ. ಬಾಣಪರ್ಯಾಯ—ಶರ, ಬಾಣ, ವಿಶಿಖ. ಬಾಣಭೇದ—ನಾರಾಚ, ಭಲ್ಲ, ಕಾಂಡ. 'ಇಷುದ್ವಯೋಃ' ಎಂಬುದು ಅಪವಾದ. ವೈರಿಪರ್ಯಾಯ—ಅರಿ, ಶತ್ರು, ಅರಾತಿ. ವೈರಿಭೇದ—ಆತತಾಯಿನ್. ಇವು ಪುಲ್ಲಿಂಗಗಳು.

ಕರ=ಹಸ್ತ ಮತ್ತು ಕಿರಣ. ಇವುಗಳ ಪರ್ಯಾಯ—ಕರ, ಹಸ್ತ, ಪಾಣಿ; ಕಿರಣ, ಉಸ್ರ, ಮಯೂಖ ಇತ್ಯಾದಿ. ಮರೀಚಿ ಮುಂತಾದವು ಅಪವಾದ. ಕೆನ್ನೆಯ ಪರ್ಯಾಯ—ಗಂಡ, ಕಪೋಲ. ತುಟಿಯ ಪರ್ಯಾಯ—ಓಷ್ಠ, ದಂತಚ್ಛದ. ತೋಳಿನ ಪರ್ಯಾಯ—ಭುಜ, ಬಾಹು, ಪ್ರವೇಷ್ಟ. ಹಲ್ಲಿನ ಪರ್ಯಾಯ—ದಂತ, ದಶನ, ರದ. ಕತ್ತಿನ ಪರ್ಯಾಯ—ಗಲ, ಕಂಠ. ತಲೆಕೂದಲಿನ ಪರ್ಯಾಯ—ಕೇಶ, ಕಚ, ಉಗುರಿನ ಪರ್ಯಾಯ—ನಖ, ಪುನರ್ಭವ. 'ನಖರೋಽಸ್ತ್ರಿಯಾಮ್' ಎಂಬುದು ಅಪವಾದ. ಸ್ತನದ ಪರ್ಯಾಯ—ಸ್ತನ, ಕುಚ.

**ಅಹ್ನಾಹಾಂತಾಃ ಕ್ಷ್ವೇಡಭೇದಾ ರಾತ್ರಾಂತಾಃ ಪ್ರಾಗಸಂಖ್ಯಕಾಃ ।**
**ಶ್ರೀವೇಷ್ಟಾದ್ಯಾಶ್ಚ ನಿರ್ಯಾಸಾ ಅಸನ್ನಂತಾ ಅಬಾಧಿತಾಃ ॥ ೧೪೯೪**
**ಕಶೇರುಜತುವಸ್ತೂನಿ ಹಿತ್ವಾ ತುರುವಿರಾಮಕಾಃ ।**
**ಕಷಣಭಮರೋಪಾಂತಾ ಯದ್ಯದಂತಾ ಅಮೀ ಅಥ ॥ ೧೪೯೫**

---

೧೪೯೪. ಅಹ್ನ, ಅಹ=ಎಂಬಿವು ಅಂತ್ಯದಲ್ಲಿರುವ ಶಬ್ದ —ಪೂರ್ವಾಹ್ನ, ಅಪರಾಹ್ನ ; ದ್ವ್ಯಹ, ತ್ರ್ಯಹ. ವಿಷಭೇದಗಳು—ಸೌರಾಷ್ಟ್ರಿಕ, ಶೌಕ್ಲಿಕೇಯ, ಬ್ರಹ್ಮಪುತ್ರ. ರಾತ್ರ — ಎಂಬುದು ಅಂತ್ಯದಲ್ಲಿರುವ ಶಬ್ದ, ಆದರೆ ಇದರ ಹಿಂದೆ ಸಂಖ್ಯಾವಾಚಕ ಶಬ್ದವು ಇರಬಾರದು—ಸರ್ವರಾತ್ರ, ಪೂರ್ವರಾತ್ರ, ಅಹೋರಾತ್ರ. ಆದರೆ ಪಂಚರಾತ್ರ, ತ್ರಿರಾತ್ರ ಮುಂತಾದವು ನಪುಂಸಕ.

ವೃಕ್ಷದಿಂದ ಹೊರಡುವ ದ್ರವ ವಿಶೇಷಗಳು—ಶ್ರೀವೇಷ್ಟ, ಗುಗ್ಗುಲು, ಸಿಹ್ಲಕ. ಅಸ್, ಅನ್, —ಇವು ಕೊನೆಯಲ್ಲಿರುವ ಶಬ್ದಗಳು— ವೇಧಸ್, ಚಂದ್ರಮಸ್ ; ರಾಜನ್, ಮಘವನ್, ಆದರೆ ಅಪ್ಸರಸ್, ಸುಮನಸ್, ಸಾಮನ್, ಲೋಮನ್ ಮುಂತಾದ ಅಪವಾದ.

೧೪೯೫. ತು, ರು—ಎಂಬಿವು ಅಂತ್ಯದಲ್ಲಿರುವ ಶಬ್ದಗಳು—ಹೇತು, ಸೇತು, ಧಾತು ; ಕುರು, ಮೇರು, ತ್ಸರು. ಆದರೆ ಕಶೇರು (ಬೆನ್ನುಮೂಳೆ), ಜತು, ವಸ್ತು, ದಾರು ಮುಂತಾದವು ಅಪವಾದ.

ಕ, ಷ, ಣ, ಭ, ಮ, ರ,—ಎಂಬ ವ್ಯಂಜನಗಳು ಉಪಾಂತ್ಯಗಳಾಗಿಯೂ ಅಕಾರಾಂತವಾಗಿಯೂ ಇರುವ ಶಬ್ದಗಳು—ಅಂಕ, ಲೋಕ ; ಮಾಷ, ತುಷ ; ಪಾಷಾಣ, ಗುಣ ; ದರ್ಭ, ಗರ್ದಭ, ಹೋಮ, ಧೂಮ ; ಶೀಕರ, ಸಮೀರ.

೧೪೯೬. ಪ, ಥ, ನ, ಯ, ಸ, ಟ—ಎಂಬ ವ್ಯಂಜನಗಳು ಉಪಾಂತ್ಯಗಳಾಗಿಯೂ ಅಕಾರಾಂತವಾಗಿಯೂ ಇರುವ ಶಬ್ದಗಳು—ಸೂಪ, ಕೂಪ; ನಾಥ, ಶಪಥ ; ಇನ, ಜನ; ಅಪನಯ, ಪ್ರಣಯ ; ರಸ, ಹಾಸ ; ಪಟ, ಘಟ. ಗೋತ್ರಪ್ರವರ್ತಕರ ಹೆಸರು—ವಸಿಷ್ಠ, ವಿಶ್ವಾಮಿತ್ರ, ಅತ್ರಿ. ವೇದಶಾಖೆಯ ಅಧ್ಯೇತೃವಾಚಕಗಳು—ಕಠ, ಬಹ್ವೃಚ, ಕಲಾಪ. ಇವು ಪುಲ್ಲಿಂಗಗಳು.

ಸಂಜ್ಞೆ, ಕರ್ತೃವ್ಯತಿರಿಕ್ತವಾದ ಕಾರಕ, ಭಾವ (ಕ್ರಿಯೆ)—ಈ ಅರ್ಥದಲ್ಲಿ ವಿಹಿತವಾದ ಘಞ್, ಅಚ್, ಅಪ್, ನಜ್, ಣ, ಘ, ಅಥುಚ್—ಎಂಬ ಪ್ರತ್ಯಯಗಳು ಅಂತದಲ್ಲಿರುವ ಶಬ್ದಗಳು—ಪ್ರಾಸಾದ, ವೇದ, ಪಾಕ, ತ್ಯಾಗ, ಚಯ, ಜಯ ; ಲವ, ಸ್ತವ ; ಪ್ರಶ್ನ, ಯತ್ನ ; ನ್ಯಾದ (ಭಕ್ಷಣ) ; ಉರಶ್ಛದ, ಪ್ರಚ್ಛದ ; ಶ್ವಯಥು, ವೇಪಥು. ಇವು ಪುಲ್ಲಿಂಗಗಳು.



**ಪಥನಯಸಟೋಪಾಂತಾ ಗೋತ್ರಾಖ್ಯಾಶ್ಚರಣಾಹ್ವಯಾಃ ।**
**ನಾಮ್ನ್ಯಕರ್ತರಿ ಭಾವೇ ಚ ಘಞಜಬ್ನಙ್ಣಘಾಥುಚಃ ॥ ೧೪೯೬**
**ಲ್ಯುಃ ಕರ್ತರೀಮನಿಜ್ಭಾವೇ ಕೋ ಘೋಃ ಕಿಃ ಪ್ರಾದಿತೋಽನ್ಯತಃ ।**
**ದ್ವಂದ್ವೇಽಶ್ವವಡವಾವಶ್ವವಡವಾ ನ ಸಮಾಹೃತೇ ॥ ೧೪೯೭**
**ಕಾಂತಸ್ಸೂರ್ಯೇಂದುಪರ್ಯಾಯಪೂರ್ವೋಽಯಃ ಪೂರ್ವಕೋಽಪಿ ಚ ।**
**ವಟಕಶ್ಚಾನುವಾಕಶ್ಚ ರಲ್ಲಕಶ್ಚ ಕುಡಂಗಕಃ ॥ ೧೪೯೮**
**ಪುಂಖೋ ನ್ಯೂಂಖಸ್ಸಮುದ್ಗಶ್ಚ ವಿಟಪಟ್ಟಧಟಾಃ ಖಟಃ ।**
**ಕೋಟ್ಟಾರಘಟ್ಟಹಟ್ಟಾಶ್ಚ ಪಿಂಡಗೋಂಡಪಿಚಂಡವತ್ ॥ ೧೪೯೯**

---

೧೪೯೭. ಕರ್ತ್ರರ್ಥದಲ್ಲಿ ವಿಹಿತವಾದ ಲ್ಯು, (ಭಾವಕರ್ಮಾರ್ಥಕದ) ಇಮನಿಚ್, ಭಾವಾರ್ಥಕವಾದ ಕ, ಘು, ಎಂಬ ಸಂಜ್ಞೆಯಿರುವ ದಾ, ಧಾ ಎಂಬ ರೂಪದ ಧಾತುಗಳ ಮೇಲೆ ವಿಹಿತವಾದ ಕಿ—ಕಿ ಪ್ರತ್ಯಯವು ಧಾತುವಿನ ಹಿಂದೆ ಉಪಸರ್ಗವಿರಲಿ ಅಥವಾ ಸುಬಂತವಿರಲಿ ವಿಹಿತವಾಗಿರಬಹುದು—ಈ ಮೇಲ್ಕಂಡ ಪ್ರತ್ಯಯಾಂತ ಶಬ್ದಗಳು—ನಂದನ, ರಮಣ ; ಪ್ರಥಿಮನ್, ಮಹಿಮನ್, ಅಖೂತ್ಥ (ಇಲಿಗಳ ಹಾವಳಿ), ಪ್ರಸ್ಥ ; ನಿಧಿ, ಆಧಿ, ಉದಧಿ, ಜಲಧಿ.

ಸಮಾಹಾರ ವ್ಯತಿರಿಕ್ತವಾದ ದ್ವಂದ್ವಸಮಾಸದಲ್ಲಿ —ಅಶ್ವವಡವೌ (ಒಂದು ಗಂಡು ಕುದುರೆ ಮತ್ತು ಒಂದು ಹೆಣ್ಣುಕುದುರೆ), ಅಶ್ವಾಶ್ಚ ವಡವಾಶ್ಚ=ಅಶ್ವವಡವಾಃ ಈ ಎರಡು ಶಬ್ದಗಳು ಪುಲ್ಲಿಂಗ. ಸಮಾಹಾರದಲ್ಲಿ ಅಶ್ವವಡವಮ್ ಎಂಬುದು ನಪುಂಸಕ. (ವಡವಾ ಶಬ್ದವು ಸ್ತ್ರೀಲಿಂಗ. ಇದು ಕಡೆಯಲ್ಲಿದ್ದರೂ ಮೇಲ್ಕಂಡಂತೆ ಲಿಂಗಭೇದವಾಗುತ್ತದೆ).

೧೪೯೮. ಸೂರ್ಯ, ಚಂದ್ರ—ಇವರ ಪರ್ಯಾಯಪದಗಳೂ ಅಯಸ್ ಶಬ್ದವೂ ಪೂರ್ವದಲ್ಲಿರುವ ಕಾಂತ ಶಬ್ದ —ಸೂರ್ಯಕಾಂತ, ರವಿಕಾಂತ, ಚಂದ್ರಕಾಂತ, ಇಂದುಕಾಂತ ; ಅಯಸ್ಕಾಂತ (ಸೂಜಿಗಲ್ಲು) ವಟಕ (ವಡೆ), ಅನುವಾಕ, ರಲ್ಲಕ (ಕಂಬಳಿ, ರೆಪ್ಪೆ, ಜಿಂಕೆ), ಕುಡಂಗಕ—ಕುಟಂಗಕ (ಹುಲ್ಲು ಹೊದಿಸಿದ ಗುಡಿಸಲು). ಇವೆಲ್ಲವೂ ಪುಲ್ಲಿಂಗಗಳು.

೧೪೯೯. ಪುಂಖ (ಬಾಣದ ಬುಡ), ನ್ಯೂಂಖ (ಸಾಮಯುಕ್ತವಾದ ಓಂಕಾರ), ಸಮುದ್ಗ (ಸಂಪುಟ), ವಿಟ (ಇಲಿ, ಬೆಟ್ಟ), ಪಟ್ಟ (ಅರೆಯುವ ಕಲ್ಲು, ಪಟ್ಟಿ), ಧಟ (ತಕ್ಕಡಿ), ಖಟ (ಹಾಳುಬಾವಿ, ಕಲ್ಲನ್ನು ಕೆತ್ತುವ ಉಳಿ, ನೇಗಿಲು), ಕೋಟ್ಟಾರ (ಬಾವಿ, ಪುಷ್ಕರಿಣಿಯ ತೀರ), ಘಟ್ಟ (ಸ್ನಾನದ ಘಟ್ಟ, ಸುಂಕದ ಕಟ್ಟೆ) ಹಟ್ಟ (ಅಂಗಡಿ), ಪಿಂಡ (ಉಂಡೆ, ದೇಹ),

ಗಡುಃ ಕರಂಡೋ ಲಗುಡೋ ವರಂಡಶ್ಚ ಕಿಣೋ ಘುಣಃ ।
ದೃತಿಸೀಮಂತಹರಿತಾ ರೋಮಂಥೋದ್ಗೀಥಬುದ್ಬುದಾಃ ॥ ೧೫೦೦
ಕಾಸಮರ್ದೋಽರ್ಬುದಃ ಕುಂದಃ ಫೇನಸ್ತೂಪೌ ಸಯೂಪಕೌ ।
ಆತಪಃ ಕ್ಷತ್ರಿಯೇ ನಾಭಿಃ ಕುಣಪಕ್ಷುರಕೇದರಾಃ ॥ ೧೫೦೧
ಪೂರಕ್ಷುರಪ್ರಚುಕ್ರಾಶ್ಚ ಗೋಲಹಿಂಗುಲಪುದ್ಗಲಾಃ ।
ವೇತಾಲಭಲ್ಲಮಲ್ಲಾಶ್ಚ ಪುರೋಡಾಶೋಽಪಿ ಪಟ್ಟಿಶಃ ॥ ೧೫೦೨
ಕುಲ್ಮಾಷೋ ರಭಸಶ್ಚೈವ ಸಕಟಾಹಃ ಪತದ್ಗ್ರಹಃ ।

ಇತಿ ಪುಲ್ಲಿಂಗಶೇಷಃ

---

ಗೋಂಡ (ಒಂದು ಪಾಮರಜಾತಿಯವನು, ಉಬ್ಬಿದ ಹೊಕ್ಕಳು), ಪಿಚಂಡ (ಹೊಟ್ಟೆ). ಇವೆಲ್ಲವೂ ಪುಲ್ಲಿಂಗಗಳು.

೧೫೦೦. ಗಡು (ಹೆಕ್ಕತ್ತಿನ ಮೇಲೆ ಬೆಳೆಯುವ ಮಾಂಸ ಗ್ರಂಥಿ, ಕೆಸರು ಹುಳು), ಕರಂಡ (ಬುಟ್ಟಿ, ಕತ್ತಿ, ಜೇನುಗೂಡು), ಲಗುಡ (ದೊಣ್ಣೆ), ವರಂಡ (ಮನೆಯ ಒಂದು ಭಾಗ (varanda), ಬಾಯಿಹುಣ್ಣು), ಕಿಣ (ಗಾಯದ ಕಲೆ), ಘುಣ (ಮರವನ್ನು ಕೊರೆಯುವ ಹುಳು), ದೃತಿ (ಚರ್ಮದ ಚೀಲ), ಸೀಮಂತ (ಬೈತಲೆ), ಹರಿತ (ಕುದುರೆ), ರೋಮಂಥ (ಮೆಲುಕು), ಉದ್ಗೀಥ (ಓಂಕಾರ, ಸಾಮ), ಬುದ್ಬುದ (ನೀರಿನ ಗುಳ್ಳೆ).

೧೫೦೧. ಕಾಸಮರ್ದ (ಕೆಮ್ಮಿನ ಔಷಧ), ಅರ್ಬುದ (ಮಾಂಸಗ್ರಂಥಿಯು ಬೆಳೆಯುವ ಒಂದು ರೋಗ), ಕುಂದ (ಮಾಗಿ ಮಲ್ಲಿಗೆ), ಫೇನ, ಸ್ತೂಪ (ರಾಶಿ, ಬೌದ್ಧರ ಸ್ತೂಪ), ಯೂಪ (ಯೂಪಸ್ತಂಭ), (ಪೂಪ ಎಂದು ಪಾಠಾಂತರವಿದೆ. ಪೂಪ (ಅಪೂಪ). ಆತಪ, ನಾಭಿ (ಕ್ಷತ್ರಿಯ ಎಂಬ ಅರ್ಥದಲ್ಲಿ), ಕುಣಪ (ಹೆಣ), ಕ್ಷುರ (ಕ್ಷೌರದ ಕತ್ತಿ), ಕೇದರ (ಕೇಕರ —ವಿಕಾರ ದೃಷ್ಟಿ).

೧೫೦೨. ಪೂರ, ಕ್ಷುರಪ್ರ (ಒಂದು ಬಗೆಯ ಬಾಣ), ಚುಕ್ರ (ಹುಳಿ, ಹುಣಿಸೆಮರ), ಗೋಲ (ದುಂಡಾದ ವಸ್ತು), ಹಿಂಗುಲ (ಹಿಂಗಿನ ಮರ), ಪುದ್ಗಲ (ದೇಹ, ಆತ್ಮ, ಪರಮಾಣು) ವೇತಾಲ (ಭೇತಾಳ), ಭಲ್ಲ (ಒಂದು ಶಸ್ತ್ರ), ಮಲ್ಲ (ಜಟ್ಟಿ, ಪುರೋಡಾಶ, ಪಟ್ಟಿಶ (ಒಂದು ಆಯುಧ).



ದ್ವಿಹೀನೇಽನ್ಯಚ್ಚ ಖಾರಣ್ಯಪರ್ಣಶ್ವಭ್ರ ಹಿಮೋದಕಮ್ ॥ ೧೫೦೩
ಶೀತೋಷ್ಣಮಾಂಸರುಧಿರಮುಖಾಕ್ಷಿದ್ರವಿಣಂ ಬಲಮ್ ।
ಫಲಹೇಮಶುಲ್ಬಲೋಹಸುಖದುಃಖಶುಭಾಶುಭಮ್ ॥ ೧೫೦೪
ಜಲಪುಷ್ಪಾಣಿ ಲವಣಂ ವ್ಯಂಜನಾನ್ಯನುಲೇಪನಮ್ ।
ಭಯಾಮೃತಶಕೃದ್ವಸ್ತ್ರಚಾಪಾಭರಣಲಾಂಛನಮ್ ॥ ೧೫೦೫
ಧ್ವಾಂತಂ ಚಾವ್ಯಕ್ತಲಿಂಗಸ್ಯ ಭಣಿತೌ ಯತ್ಪ್ರಯುಜ್ಯತೇ ।
ಕೋಟ್ಯಾಶ್ಶತಾದಿಃ ಸಂಖ್ಯಾನ್ಯಾ ವಾ ಲಕ್ಷಾ ನಿಯುತಂ ಚ ತತ್ ॥ ೧೫೦೬

---

೧೫೦೩. ಕುಲ್ಮಾಷ (ಅಲಸಂದಿ, ಅರ್ಧ ಬೆಂದ ಧಾನ್ಯ, ಖಿಚಡಿ). ರಭಸ (ವೇಗ), ಕಟಾಹ (ಕಡಾಯಿ), ಪತದ್ಗ್ರಹ (ಪೀಕದಾನಿ). ಇವೆಲ್ಲವೂ ಪುಲ್ಲಿಂಗಗಳು.

**ನಪುಂಸಕಲಿಂಗ ಶೇಷ**

೧೫೦೩—೧೫೦೪. ಹಿಂದೆ ಹೇಳಿದ ಪುಲ್ಲಿಂಗ ಸ್ತ್ರೀಲಿಂಗಗಳಲ್ಲದ ಶಬ್ದಗಳು ನಪುಂಸಕ ಲಿಂಗಗಳು. ಸ್ಪಷ್ಟಾರ್ಥವಾಗಿ ಅವುಗಳ ವಿವರಣೆಯನ್ನು ಇಲ್ಲಿ ಹೇಳಲಾಗುವುದು.

ಆಕಾಶ, ಅರಣ್ಯ, ಎಲೆ, ಬಿಲ, ಮಂಜು, ನೀರು, ಶೀತ, ಉಷ್ಣ, ಮಾಂಸ, ರಕ್ತ, ಮುಖ, ಕಣ್ಣು, ಹಣ, ಬಲ—ಇವುಗಳ ಪರ್ಯಾಯ ಶಬ್ದಗಳು ನಪುಂಸಕ. (ಇಲ್ಲಿಯೂ ಅಪವಾದ ಉಂಟು : ಅರಣ್ಯಾನೀ (ಸ್ತ್ರೀ), ಛದ (ಪು), ಅಪ್ (ಸ್ತ್ರೀ)—ಇತ್ಯಾದಿ). ಹಣ್ಣು, ಚಿನ್ನ, ತಾಮ್ರ, ಕಬ್ಬಿಣ, ಸುಖ, ದುಃಖ, ಶುಭ, ಅಶುಭ—ಇವುಗಳ ಬೋಧಕ ಶಬ್ದಗಳು. (ಇಲ್ಲಿಯೂ ಅಪವಾದ ಉಂಟು : ಆಮಲಕೀ, ಹರ್ಷ, ವಿಷಾದ—ಇತ್ಯಾದಿ).

೧೫೦೫. ನೀರು ಹೂ, ಉಪ್ಪು, ನಂಜಿಕೊಳ್ಳುವ ದ್ರವ್ಯ, ಅನುಲೇಪನ ಸಾಮಗ್ರಿ, ಭಯ, ಅಮೃತ, ಪಾಯಖಾನೆ, ಬಟ್ಟೆ, ಬಿಲ್ಲು, ಒಡವೆ, ಚಿಹ್ನೆ—ಇವುಗಳ ವಾಚಕಗಳು. (ಇಲ್ಲಿಯೂ ಅಪವಾದ ಉಂಟು : ಗಂಧ, ಅವಸ್ಕರ, ಪಟೀ, ಚಾಪ—ಇತ್ಯಾದಿ).

೧೫೦೬. ಧ್ವಾಂತ (ಕತ್ತಲೆ). ಸ್ತ್ರೀಲಿಂಗವೆಂದಾಗಲೀ ಪುಲ್ಲಿಂಗವೆಂದಾಗಲೀ, ನಿರ್ಣಯವಿಲ್ಲದಾಗ ಪ್ರಯೋಗಿಸುವ ಸರ್ವನಾಮಗಳು — 'ಕಿಮಿದಮ್' ಯತ್ ತ್ವಯಾ ದೃಷ್ಟಂ ತದುಚ್ಯತಾಮ್.' ಕೋಟಿ ಎಂಬ ಶಬ್ದವನ್ನು ಬಿಟ್ಟು ನೂರರ ಮೇಲಿರುವ ಸಂಖ್ಯಾವಾಚಕಗಳು ನಪುಂಸಕಲಿಂಗಗಳು—ಶತ, ಸಹಸ್ರ, ಪಂಚಾಧಿಕಶತ. ಆದರೆ ಲಕ್ಷಶಬ್ದವು ಸ್ತ್ರೀಲಿಂಗ ನಪುಂಸಕಲಿಂಗಗಳೆರಡರಲ್ಲೂ ಇದೆ—ಲಕ್ಷ, ಲಕ್ಷಾ (ಸ್ತ್ರೀ). ಕೋಟಿಶಬ್ದವು ಸ್ತ್ರೀಲಿಂಗ. ನಿಯುತಶಬ್ದವು ನಪುಂಸಕಲಿಂಗ.

**ದ್ವ್ಯಚ್ಕಮಸಿಸುಸನ್ನಂತಂ ಯದನಾಂತಮಕರ್ತರಿ ।**
**ತ್ರಾಂತಂ ಸಲೋಪಧಂ ಶಿಷ್ಟಂ ರಾತ್ರಂ ಪ್ರಾಕ್ಸಂಖ್ಯಯಾನ್ವಿತಮ್ ॥ ೧೫೦೭**
**ಪಾತ್ರಾದ್ಯದಂತ್ಯೈರೇಕಾರ್ಥೋ ದ್ವಿಗುರ್ಲಕ್ಷ್ಯಾನುಸಾರತಃ ।**
**ದ್ವಂದ್ವೈ ಕತ್ವಾವ್ಯಯೀಭಾವೌ ಪಥಃ ಸಂಖ್ಯಾವ್ಯಯಾತ್ಪರಃ ॥ ೧೫೦೮**
**ಷಷ್ಠ್ಯಾಶ್ಛಾಯಾ ಬಹೂನಾಂ ಚೇದ್ವಿಚ್ಛಾಯಂ ಸಂಹತೌ ಸಭಾ ।**
**ಶಾಲಾರ್ಥಾಪಿ ಪರಾ ರಾಜಾಮನುಷ್ಯಾರ್ಥಾದರಾಜಕಾತ್ ॥ ೧೫೦೯**

---

೧೫೦೭. ಎರಡು ಸ್ವರಗಳಿದ್ದು ಅಸ್, ಇಸ್, ಉಸ್, ಅನ್—ಇವು ಅಂತದಲ್ಲಿರುವ ಶಬ್ದ—ಯಶಸ್, ಪಯಸ್ ; ಸರ್ಪಿಸ್, ಹವಿಸ್ ; ಧನುಸ್, ವಪುಸ್ ; ಚರ್ಮನ್, ವರ್ಮನ್ (ಕವಚ). ಕರ್ತೃಕಾರಕವನ್ನು ಬಿಟ್ಟು ಉಳಿದ ಅರ್ಥದಲ್ಲಿರುವ 'ಅನ' ಅಂತವಾದ ಶಬ್ದ—ದಮನ, ದಾನ ('ಅಣ' ಎಂಬುದನ್ನು ಅನ ಎಂದು ತಿಳಿಯತಕ್ಕದ್ದು—ಹರಣ, ಕರಣ, ತರಣ). (ಕರ್ತ್ರರ್ಥದಲ್ಲಿ ವಿ. ನಿಘ್ನ—ನಂದನಃ, ನಂದನಾ, ನಂದನಮ್).

'ತ್ರ' ಎಂಬುದು ಅಂತ್ಯದಲ್ಲಿರುವ ಶಬ್ದ—ಗಾತ್ರ, ಪತ್ರ, ಕಳತ್ರ, ಸಕಾರಲಕಾರಗಳು ಉಪಾಂತ್ಯದಲ್ಲಿರುವ ಶಬ್ದ —ಬಿಸ, ಬುಸ (ತೌಡು) ; ಕುಲ, ಮೂಲ, ಶೂಲ— ಇದೆಲ್ಲವೂ ಶಿಷ್ಟಂ=ಅಬಾಧಿತವಾದಾಗ ನಪುಂಸಕ. ಎಂದರೆ ಈ ನಿಯಮಕ್ಕೆ ಅಪವಾದವಿದೆ—ಪುತ್ರ, ಮಂತ್ರ ; ಹಂಸ, ಕಂಸ ; ಕಾಲ, ಶ್ಯಾಲ—ಇವು ಪುಲ್ಲಿಂಗಗಳು. ಸಂಖ್ಯಾಪೂರ್ವಪದವಾದ ರಾತ್ರಶಬ್ದವು ನಪುಂಸಕ—ತ್ರಿರಾತ್ರ, ಪಂಚರಾತ್ರ.

೧೫೦೮. ಪಾತ್ರ ಮುಂತಾದ ಅಕಾರಾಂತವು ಉತ್ತರಪದದಲ್ಲಿರುವ ಸಮಾಹಾರದ್ವಿಗು—ಪಂಚಪಾತ್ರ, ತ್ರಿಭುವನ ; ಚತುರ್ಯುಗ. ಇದಕ್ಕೆ ಅಪವಾದವಿದೆ — ತ್ರಿಪದೀ, ಪಂಚಮೂಲೀ.

ಸಮಾಹಾರದ್ವಂದ್ವವು ನಪುಂಸಕ—ಪಾಣಿಪಾದ, ಹಸ್ತ್ಯಶ್ವರಥಪಾದಾತ. ಅವ್ಯಯೀಭಾವ—ಅಧಿಗೋಪಮ್, ಯಥಾವಿಧಿ. ಸಂಖ್ಯೆ ಮತ್ತು ಅವ್ಯಯಗಳಿಗೆ ಪರದಲ್ಲಿರುವ ಪಥ—ದ್ವಿಪಥ, ವಿಪಥ (ಮತ್ತು ಕಾಪಥ).

೧೫೦೯. ವಿಗ್ರಹದಲ್ಲಿ ಷಷ್ಠೀ ವಿಭಕ್ತ್ಯಂತವಾಗಿರುವ ಬಹುವಸ್ತುಗಳ ಸಂಬಂಧಿಯಾದ ಛಾಯಾ—ವೃಕ್ಷಾಣಾಂ ಛಾಯಾ ವೃಕ್ಷಚ್ಛಾಯಮ್, ಗೃಹಚ್ಛಾಯಮ್, ವೀನಾಂ ಪಕ್ಷಿಣಾಂ ಛಾಯಾ ವಿಚ್ಛಾಯಮ್. ಆದರೆ ವೃಕ್ಷಸ್ಯ ಛಾಯಾ ವೃಕ್ಷಚ್ಛಾಯಾ (ಸ್ತ್ರೀ).



**ದಾಸೀಸಭಂ ನೃಪಸಭಂ ರಕ್ಷಸ್ಸಭಮಿಮಾ ದಿಶಃ ।**
**ಉಪಜ್ಞೋಪಕ್ರಮಾಂತಶ್ಚ ತದಾದಿತ್ವಪ್ರಕಾಶನೇ ॥ ೧೫೧೦**
**ಕೋಪಜ್ಞಕೋಪಕ್ರಮಾದಿ ಕಂಥೋಶೀನರನಾಮಸು ।**
**ಭಾವೇ ನಣಕಚಿದ್ಭ್ಯೋಽನ್ಯೇ ಸಮೂಹೇ ಭಾವಕರ್ಮಣೋಃ ॥ ೧೫೧೧**
**ಅದಂತಪ್ರತ್ಯಯಾಃ ಪುಣ್ಯಸುದಿನಾಭ್ಯಾಂ ತ್ವಹಃ ಪರಃ ।**
**ಕ್ರಿಯಾವ್ಯಯಾನಾಂ ಭೇದಕಾನ್ಯೇಕತ್ವೇಽಪ್ಯುಕ್ಕ ತೋಟಕೇ ॥ ೧೫೧೨**

---

೧೫೧೦. ಸಮೂಹಾರ್ಥಕವಾದ ಸಭಾಶಬ್ದವು ಉತ್ತರಪದವಾಗಿರುವ ಷಷ್ಠೀತತ್ಪುರುಷ—ದಾಸೀಸಭಮ್, ಸ್ತ್ರೀಸಭಮ್. ಶಾಲಾ (Hall) ಎಂಬ ಅರ್ಥವನ್ನು ಕೊಡುವ ಶಾಲಾ ಶಬ್ದವು ಉತ್ತರ ಪದವಾಗಿರುವ ಷಷ್ಠೀತತ್ಪುರುಷ (ಇದರಲ್ಲಿ ರಾಜಶಬ್ದವನ್ನು ಬಿಟ್ಟು ಉಳಿದ ರಾಜಪರ್ಯಾಯವೂ ರಕ್ಷಃಪಿಶಾಚಾದಿ ಶಬ್ದವೂ ಪೂರ್ವಪದವಾಗಿರಬೇಕು— ನೃಪಸಭಮ್, ರಕ್ಷಃ ಸಭಮ್, ಪಿಶಾಚಸಭಮ್. ಆದರೆ ರಾಜಸಭಾ (ಸ್ತ್ರೀ).

೧೫೧೦—೧೫೧೧. ಉಪಜ್ಞ, ಉಪಕ್ರಮ ಎಂಬ ಶಬ್ದಗಳು ಅಂತ್ಯದಲ್ಲಿದ್ದು 'ಅದೇ ಮೊದಲು' ಎಂಬ ಅಂಶವನ್ನು ತಿಳಿಸುವ ಶಬ್ದಗಳು—ಕೋಪಜ್ಞ=ಬ್ರಹ್ಮನಿಂದ ಮೊದಲು ತಿಳಿಯಲ್ಪಟ್ಟಿದ್ದು. ಕೋಪಕ್ರಮ=ಬ್ರಹ್ಮನಿಂದ ಮೊದಲು ಆರಂಭಿಸಲ್ಪಟ್ಟಿದ್ದು. ಹೀಗೆಯೇ ಪಾಣಿನ್ಯುಪಜ್ಞಂ ವ್ಯಾಕರಣಂ, ನಂದೋಪಕ್ರಮಂ ದ್ರೋಣಃ ಇತ್ಯಾದಿ. (ಇವು ಬಹುವ್ರೀಹಿಯಾದಾಗ ವಿ. ನಿಘ್ನ).

ಕಂಥಾಶಬ್ದವು ಉತ್ತರಪದವಾಗಿರುವ ತತ್ಪುರುಷ ಸಮಾಸವಾಗಿದ್ದು ಉಶೀನರ ದೇಶೋತ್ಪನ್ನವಾದ ಕಂಥೆಯ (ಒಂದು ಜಾತಿಯ ಪಟ್ಟೆ) ಸಂಜ್ಞೆಯಾದರೆ ನಪುಂಸಕ—ಸೌಶಮಿಕಂಥ, ಬಾಹ್ಲಿಕಂಥ.

೧೫೧೧—೧೫೧೨. ನ, ಣ, ಕ ಮತ್ತು ಚಕಾರವೇ ಇತ್ಸಂಜ್ಞಕವಾದದ್ದು—ಈ ಪ್ರತ್ಯಯಗಳನ್ನು ಬಿಟ್ಟು ಉಳಿದ ಭಾವಾರ್ಥಕವಾದ ಕೃತ್ ಪ್ರತ್ಯಯ ಮತ್ತು ಸಮೂಹ, ಭಾವ, ಕರ್ಮ— ಈ ಅರ್ಥಗಳಲ್ಲಿ ವಿಹಿತವಾದ ತದ್ಧಿತ ಪ್ರತ್ಯಯ—ಇವು ಅಂತ್ಯವಾಗಿರುವ ಅಕಾರಾಂತಶಬ್ದವು ನಪುಂಸಕ.

ಭಾವಾರ್ಥಕಕೃತ್‌ಪ್ರತ್ಯಯ :—ಭೂತ, ಭವಿತವ್ಯ, ಭವನೀಯ, ಬ್ರಹ್ಮ ಭೂಯ (ನ). ಆದರೆ ಇವು ನಪುಂಸಕಗಳಲ್ಲ :—ನ=ಯತ್ನಃ, ಣ=ನ್ಯಾದಃ, ಕ=ವಿಘ್ನಃ, ಚ=ಜಯಃ. ಸಮೂಹಾರ್ಥಕ ತದ್ಧಿತ :—ಭೈಕ್ಷ, ಕೈದಾರ್ಯ, ಯೌವತ (ನ). ಭಾವಾರ್ಥಕತದ್ಧಿತ:—ಗೋತ್ವ,

